# ಹೇತುವಾದ ಪ್ರತಿವಾದ

## ಮಿತ ವಾದ
## ನಾಸ್ತಿ ವಾದ
## ಅತಿ ವಾದ
## ತೀವ್ರ ವಾದ
## ಉಗ್ರ ವಾದ




ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org





# ಹೇತುವಾದ ಪ್ರತಿವಾದ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 280/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಿಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
ಓಉಖ ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

**www.thraithashakam.org**

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಹೇತುವಾದ – ಪ್ರತಿವಾದ



ವಾದ ಎಂಬ ಪದ ವಾಕ್ಯ ಎನ್ನುವ ಶಬ್ಧದಿಂದ ಹುಟ್ಟಿದೆ. ವಾದ ಎನ್ನುವುದು ಅನೇಕ ವಿಧಗಳಾಗಿ ಇದೆ. ಭಾಷೆಯಿಂದ ಭಾವ ಹುಟ್ಟಿದಂತೆ, ವಾಕ್ಯದಿಂದ ವಾದ ಹುಟ್ಟಿಬಂದಿದೆ. ಮನುಷ್ಯನಿಗೂ ಮನುಷ್ಯನಿಗೂ ಮಧ್ಯದಲ್ಲಿ ಭಾವನೆಯನ್ನು ತಿಳಿಸುವುದು ವಾದನೆ ಅಥವಾ ವಾದ ಆಗುತ್ತದೆ. ಒಂದು ವಿಷಯವನ್ನು ತಿಳಿದುಕೊಳ್ಳುವುದಕ್ಕೋಸ್ಕರ ಪ್ರಶ್ನಿಸಿ ಕೇಳುವುದನ್ನು ಹೇತುವಾದ ಎನ್ನುತ್ತೇವೆ. ಕೇಳಿದ ಪ್ರಶ್ನೆಗೆ ಉತ್ತರವನ್ನು ಮತ್ತೊಬ್ಬ ಮನುಷ್ಯ ಹೇಳುವುದನ್ನು ಪ್ರತಿವಾದ ಎನ್ನುತ್ತೇವೆ. ಪ್ರಶ್ನಿಸುವುದು ಹೇತುವಾದವಾಗಿದ್ದು, ಅದಕ್ಕೆ ಉತ್ತರ ಹೇಳುವುದು ಪ್ರತಿವಾದವಾಗಿದ್ದು, ಉತ್ತರ ಸರಿಯಾದುದಾದರೂ ಅದನ್ನು ಒಪ್ಪಿಕೊಳ್ಳದೆ ಅಲ್ಲಗಳೆದು ಮೊಂಡರಂತೆ ವಾದಿಸುವುದನ್ನು ಅತಿವಾದ ಎನ್ನುತ್ತೇವೆ. ಪ್ರಶ್ನೆಗೆ ಹೇಳಲಾದ ಉತ್ತರ ಸರಿಯಾದುದಾದರೂ, ಸರಿಯಾದುದು ಅಲ್ಲದಿದ್ದರೂ ಅದನ್ನು ಎದುರು ಮಾತನಾಡದೆ ಒಪ್ಪಿಕೊಳ್ಳದೆಹೋಗುವುದನ್ನು ಮಿತವಾದ ಎನ್ನುತ್ತೇವೆ. ಇನ್ನೂ ಕೆಲವರು ಹೇಗಿದ್ದಾರೆಂದರೆ! ಹೇಳಿದ ಉತ್ತರ ಸರಿಯಾದುದಾ ಅಲ್ಲವಾ ಎಂದು ಸ್ವಲ್ಪವೂ ಆಲೋಸದೆ, ವಿಚಕ್ಷಣಾ ಜ್ಞಾನ ಇಲ್ಲದಂತೆ ತನಗೆ ತಿಳಿದಿರುವುದೇ ಸರಿಯಾದುದೆಂದು, ಇತರರು ಹೇಳಿರುವುದು ಸರಿಯಾದುದಲ್ಲ ವೆಂದು, ತನ್ನ ಭಾವನೆಗೆ ಬೇರೆಯಾಗಿರುವವರೆಲ್ಲರನ್ನು ಹಿಂಸೆಯಿಂದ ಅಡಗಿಸಬೇ ಕೆಂದು ನೋಡುವವನು ತೀವ್ರವಾದಿ ಎನ್ನಲ್ಪಡುತ್ತಿದ್ದಾನೆ. ತೀವ್ರವಾದಿ ಗಳನ್ನೇ ಉಗ್ರವಾದಿಗಳೆಂದೂ ಸಹ ಕರೆಯುತ್ತಿದ್ದೇವೆ. ಹಿಂಸೆಯಿಂದ ಅಡಗಿಸಬೇ ಕೆಂದು ಹಿಂಸಿಸುವವನನ್ನು ತೀವ್ರವಾದಿ ಎಂದು ಅನ್ನಬಹುದು. ಅಷ್ಟೇಯಲ್ಲದೆ ಇನ್ನು ಮೂರ್ಖದಿಂದ  ಮತ್ತೊಬ್ಬನನ್ನು ಹತಮಾಡುವವನನ್ನು ಉಗ್ರವಾದ ಎನ್ನುತ್ತಿದ್ದೇವೆ. ತೀವ್ರವಾದಿಗು ಉಗ್ರವಾದಿಗು ಸ್ವಲ್ಪಮಟ್ಟಿನ ವ್ಯತ್ಯಾಸ ಇದೆ, ತೀವ್ರವಾದ ಸುಲಭವಾಗಿ ಉಗ್ರವಾದವಾಗಿ  ಬದಲಾಗಬಲ್ಲದು.

ಈ ವಿಧವಾಗಿ ಒಂದು ವಿಷಯ ಹೇತುವಾದದಿಂದ ಶುರುವಾಗಿ ಕೊನೆಗದು ಮಿತವಾದದವರೆಗೂ ಹೋಗಿ ನಿಂತುಹೋಗಬಹುದು ಅಥವಾ ಅತಿವಾದದವರೆಗಾದರೂ ನಿಂತುಹೋಗಬಹುದು. ಹಾಗಲ್ಲದೆ ತೀವ್ರವಾದ

ಉಗ್ರವಾದದವರೆಗಾದರೂ ಹೋಗಬಹುದು. ಪ್ರಪಂಚ ವಿಷಯಗಳು ಯಾವಾದರೂ ಅತಿವಾದದವರೆಗೇ ಹೋಗಿ ನಿಂತುಹೋಗುತ್ತವೆ. ಅದಕ್ಕಿಂತ ಮುಂದಕ್ಕೆ ಹೋಗುವುದಕ್ಕೆ ಅವಕಾಶಗಳು ಕಡಿಮೆ ಇವೆ. ಒಂದೇವೊಂದು ದೇವರ ವಿಷಯದಲ್ಲಿ ಮಾತ್ರವೇ ಮನುಷ್ಯ ಉಗ್ರವಾದದವರೆಗೂ ಹೋಗುತ್ತಿದ್ದಾನೆ. ದೇವರ ವಿಷಯದಲ್ಲಿ ಧರ್ಮಗಳು ಅಧರ್ಮಗಳಾಗಿ ಬದಲಾಗಿರುವುದರಿಂದ, ದೈವವಿಷಯ ಮತ ಎಂಬ ಮುಸುಗಿನೊಳಗೆ ಹೊರಟುಹೋಗಿದೆ. ಈದಿನ ಪ್ರಪಂಚದಲ್ಲಿ ದೈವ ವಿಷಯವೆಲ್ಲಾ ಎಲ್ಲಿ ನೋಡಿದರೂ ಯಾವುದೋ ಒಂದು ಮತದಲ್ಲಿ ಸಿಲುಕಿಕೊಂಡುಹೋಗಿದೆ. ಆದ್ದರಿಂದ ಎಲ್ಲಾ ಮತಗಳಲ್ಲಿ ಉಗ್ರವಾದ ಬೇರುಗಳು ಹರಡಿವೆ. ಈದಿನ ಶಾಂತಿವಾದಿಗಳೆಂದು ಹೇಳಿಕೊಳ್ಳುವ ಮತ ಯಾವುದಿದ್ದರೂ, ಅದರಲ್ಲಿಯೂ ಸಹ ಉಗ್ರವಾದ ಇದೆಯೆಂದೇ ಅರ್ಥ.

ಈದಿನ ಎಷ್ಟೋ ಮತಗಳಿರುವುದರಿಂದ ಒಂದು ಮತದ ಮೇಲೆ ಮತ್ತೊಂದು ಮತದ ಉಗ್ರವಾದ ಕಾಣಿಸುತ್ತಿರಬಹುದು. ಭಾರತದೇಶದಲ್ಲಿ ಇತರ ಯಾವ ಮತ ಇಲ್ಲದದಿನ, ಒಂದೇ ಒಂದು ಹಿಂದೂಮತ ಮಾತ್ರವೇ ಇರುವ ದಿನಗಳಲ್ಲಿ ಸಹ ಉಗ್ರವಾದ ಇದೆಯೆಂಬುವುದಕ್ಕೆ ಅನೇಕ ಆಧಾರಗಳು ಇವೆ. ಒಂದೇ ಹಿಂದೂಮತದೊಳಗಿನ ಅದ್ವೈತ ಸಿದ್ಧಾಂತವನ್ನು ಅನುಸರಿಸುವ ವರು, ನಂತರ ಬಂದಿರುವ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಅನುಸರಿಸುವವರು, ಒಬ್ಬರ ಮೇಲೆ ಮತ್ತೊಬ್ಬರು ಉಗ್ರವಾದ ಚರ್ಯಗಳು ಕೈಹಿಡಿದು ಅನೇಕ ನೂರಾರು ಜನರು, ಸಾವಿರಾರು ಜನರು ಮರಣಿಸಿದ ಸಂಘಟನೆಗಳು ಇವೆ. ಈದಿನ ಹಿಂದೂತ್ವದಲ್ಲಿ ತ್ರೈತ ಸಿದ್ಧಾಂತ ಧರ್ಮವನ್ನು ಪ್ರತಿಪಾದಿಸಿದ ನಾವೂ ಸಹ ಹಿಂದೂಗಳಲ್ಲಿಯೇ ನಮ್ಮ ಮೇಲಕ್ಕೆ ಬಂದಿರುವ ತೀವ್ರವಾದಿಗಳನ್ನು ನೋಡಬೇಕಾಗಿ ಬಂದಿದೆ. ಪ್ರಸ್ತುತ ಭಾರತದೇಶದಲ್ಲಿ ಪ್ರತ್ಯೇಕಿಸಿ ಇವರು ತೀವ್ರವಾದಿಗಳು, ಉಗ್ರವಾದಿಗಳು ಎಂದು ಹೇಳಲಾರೆವು. ಪ್ರತಿಯೊಂದು ಮತ ಮತ್ತೊಂದು ಮತದ ಮೇಲೆ ತೀವ್ರವಾದವಾಗಿಯೋ, ಉಗ್ರವಾದವಾಗಿಯೋ ಕಾಣಿಸುತ್ತಿದೆ. ಪ್ರತ್ಯೇಕಿಸಿ ನಮ್ಮ ಅನುಭವದಲ್ಲಿ ನಾವು ಇಂದೂಗಳೇ

(ಹಿಂದೂಗಳೇ) ಆದರೂ ನಾವು ಹೇಳುವ ಬೋಧನೆಗಳು ಅರ್ಥ ಮಾಡಿಕೊಳ್ಳದ ಹಿಂದೂಗಳು ನಮಗೆ ತೀವ್ರವಾದಿಗಳಾಗಿ ಕಾಣಿಸುತ್ತಿದ್ದಾರೆ, ಹಿಂದೂಮತದಲ್ಲಿ ಈ ರೋಗ ಈಗಲೇ ಅಲ್ಲದೆ ಪೂರ್ವದಲ್ಲಿ ಸಹ ಶೈವರ ವೈಷ್ಣವರ ಮಧ್ಯೆ ಉಗ್ರವಾದವನ್ನು ಹೆಚ್ಚಿಸಿದೆ. ಹೀಗೆ ಮತ್ತೆಕೆಲವು ಮತಗಳಲ್ಲಿ ಸಹ ಅಂತರ್ಗತವಾಗಿ ತೀವ್ರವಾದ ಇದ್ದೇಯಿದೆ. ಇದಕ್ಕೆಲ್ಲಾ ಕಾರಣ ದೇವರ ಜ್ಞಾನವನ್ನು ಅರ್ಥಮಾಡಿಕೊಳ್ಳುವ ಗ್ರಾಹಿತ ಶಕ್ತಿ ಮನುಷ್ಯರಲ್ಲಿ ಇಲ್ಲದಿರುವುದೇ ಕಾರಣವೆಂದು ಹೇಳಬಹುದು. ಪ್ರಪಂಚ ವಿಷಯಗಳಲ್ಲಿ ಎಲ್ಲಿಯೂ ಕಾಣಿಸದ ಉಗ್ರವಾದ ಪ್ರತ್ಯೇಕಿಸಿ ದೇವರ ವಿಷಯಗಳಲ್ಲಿ ಮಾತ್ರವೇ ಕಾಣಿಸುತ್ತಿದೆ.

ಮನುಷ್ಯ ಯಾವ ವಿಷಯದಲ್ಲಾದರೂ ಮುಂದಕ್ಕೆ ಹೋಗಬೇಕೆಂದರೆ ತಪ್ಪದೆ ಹೇತುವಾದ ಅಗತ್ಯ. ಹೇತುವಾದ ಇಲ್ಲದೆ ಮನುಷ್ಯ ಪ್ರಗತಿಯನ್ನು ಸಾಧಿಸಲಾರನು. ಹೇತು ಎಂದರೆ ಕಾರಣ ಎಂದು ಹೇಳಬಹುದು. ಪ್ರತಿ ಮನುಷ್ಯನಿಗೂ ಚಿಕ್ಕಂದಿನಿಂದ ಪ್ರತಿಯೊಂದನ್ನು ತಿಳಿದುಕೊಳ್ಳಬೇಕೆಂದು ಪ್ರಶ್ನೆ ಬರುವುದರಿಂದ ಹೇತುವು ಪ್ರಾರಂಭವಾಗಿದೆ ಎಂದು ಹೇಳಬಹುದು. ಶಿಶುದಶೆಯಲ್ಲಿಯೇ ತಾನು ಮಲಗಿರುವ ಉಯ್ಯಾಲೆ ಏಕೆ ಕದಲುತ್ತಿದೆ ಎಂದು ಪ್ರಶ್ನೆ ಬರುತ್ತದೆ. ಏಕೆ ಕದಲುತ್ತಿದೆಯೋ ತಿಳಿದುಕೊಳ್ಳಬೇಕೆಂಬುದೇ ಹೇತುವನ್ನು ಹುಡುಕುವುದೆನಿಸಿಕೊಳ್ಳುತ್ತದೆ. ಉಯ್ಯಾಲೆ ಕದಲುವುದಕ್ಕೆ ಇರುವ ಕಾರಣವನ್ನು ಹೇತು ಎನ್ನುತ್ತೇವೆ. ಶಿಶುವು ತನ್ನ ಅನುಭವಗಳಿಂದ ಕೆಲವುಗಳಿಗಿರುವ ಕಾರಣಗಳನ್ನು ತಿಳಿದುಕೊಳ್ಳುತ್ತಾನೆ. ಭಾಷೆ ಮಾತನಾಡಲು ಬಂದ ನಂತರ ತನ್ನಲ್ಲಿನ ಭಾವನೆಯನ್ನು ಪ್ರಶ್ನೆರೂಪವಾಗಿ ಪ್ರಶ್ನಿಸಿ ತಿಳಿದುಕೊಳ್ಳಬೇಕೆಂದು ಕೊಳ್ಳುತ್ತಾನೆ. ಹಾಗೆ ಪ್ರಶ್ನಿಸಿರುವ ಪ್ರತಿಯೊಂದು ಹೇತುವಾದವೇ ಆಗುತ್ತದೆ. ಅದಕ್ಕೆ ದೊರೆತ ಉತ್ತರ ಪ್ರತಿಯೊಂದು ಪ್ರತಿವಾದವಾಗುತ್ತದೆ. ಪ್ರಶ್ನೆಗೆ ಉತ್ತರವೇ ಸರಿಯಾದ ಸಮಾಧಾನ ಎನ್ನುವಂತೆ, ಹೇತುವಾದಕ್ಕೆ ಪ್ರತಿವಾದವೇ ಸರಿಯಾದ ಸಮಾಧಾನವೆಂದು ಹೇಳಬಹುದು. ಉಯ್ಯಾಲೆ ಏಕೆ ತೂಗುತ್ತಿದೆಯೋ ತಿಳಿಯದ ಶಿಶುವಿಗೆ ಅಮ್ಮ ತೂಗುತ್ತಿದ್ದಾಳೆಂಬ ಅನುಭವ ಉತ್ತರವಾಗುತ್ತದೆ. ಹಸಿವಿಗೆ

ಆಹಾರ ಸಂತೃಪ್ತಿಯನ್ನು ಕೊಟ್ಟಂತೆ, ಹೇತುವಾದಕ್ಕೆ (ಪ್ರಶ್ನೆಗೆ) ಪ್ರತಿವಾದ (ಉತ್ತರ) ಸಂತೃಪ್ತಿ ಕೊಡುತ್ತಿದೆ. ಶಿಶುದಶೆಯಲ್ಲಿ ಪ್ರಾರಂಭವಾದ ಹೇತುವನ್ನು ಹುಡುಕುವುದು ಪ್ರತಿ ಮನುಷ್ಯನ ಜೀವನದಲ್ಲಿ ಮುಂದುವರೆಯುತ್ತದೆ. ಮನುಷ್ಯನ ಬುದ್ಧಿಯನ್ನನುಸರಿಸಿ ಅವರಲ್ಲಿ ಹೇತುವಾದ ಸ್ವಲ್ಪ ಹೆಚ್ಚು ಕಡಿಮೆಯಾಗಿ ಇರಬಹುದು. ಚುರುಕಾದ ಬುದ್ಧಿ ಇರುವವನಲ್ಲಿ ಹೇತುವಾದ ಹೆಚ್ಚಾಗಿ ಕಾಣಿಸುತ್ತಿರುತ್ತದೆ. ಪ್ರಪಂಚ ವಿಷಯಗಳಲ್ಲಿನ ಪ್ರಶ್ನೆಗಳಿಗೆ ಉತ್ತರಗಳಿಂದಲೇ ಎಲ್ಲರೂ ಸರಿಮಾಡಿಕೊಳ್ಳುತ್ತಿರುತ್ತಾರೆ. ಆದರೆ ಒಂದೇ ಒಂದು ಆಧ್ಯಾತ್ಮಿಕ ವಿಷಯದಲ್ಲಿಯೇ ಅತಿವಾದ ತೀವ್ರವಾದ ಉಗ್ರವಾದ ಕಾಣಿಸುತ್ತಿದೆ. ಅದಕ್ಕಿರುವ ಕಾರಣವೇನೆಂದು ನೋಡಿದರೆ ಪ್ರಪಂಚದಲ್ಲಿನ ಪ್ರತಿ ವಿಷಯಕ್ಕೆ ಕೊನೆಗೆ ಶಾಸ್ತ್ರ ಎನ್ನುವ ಸಮಾಧಾನ ಇದೆ. ಪ್ರತಿ ವಿಷಯಕ್ಕು ಶಾಸ್ತ್ರ ಸಮಾಧಾನ ಕೊಡುತ್ತಿದೆ. ಆದ್ದರಿಂದ ಪ್ರಪಂಚ ವಿಷಯಗಳಲ್ಲಿ ಪ್ರತಿವಾದದಿಂದಲೇ ಸರಿಹೋಗುತ್ತಿದೆ. ಕೊನೆಗೆ ಮಿತವಾದದವರೆಗೇ ನಿಂತುಹೋಗುತ್ತಿದೆ.

ಆಧ್ಯಾತ್ಮಿಕ ವಿಷಯಗಳಲ್ಲಿ ಶಾಸ್ತ್ರವಿದೆಯೆಂದು, ಅದು ಇಂತಹ ಶಾಸ್ತ್ರವೆಂದು ಯಾರಿಗೂ ತಿಳಿದಿಲ್ಲ. ದೇವರ ವಿಷಯಗಳಲ್ಲಿ (ಆಧ್ಯಾತ್ಮಿಕ ವಿಷಯಗಳಲ್ಲಿ) ಯಾವುದು ಶಾಸ್ತ್ರವೋ ತಿಳಿಯದಿರುವುದರಿಂದ, ಅದಕ್ಕೆ ಒಂದು ಹದ್ದೂ ಪದ್ದೂ ಇಲ್ಲದಂತೆ ಹೋಗಿದೆ. ಯಾರಿಗೆ ಇಷ್ಟಬಂದಿರುವುದನ್ನು ಅವರು ತಮಗೆ ಉತ್ತರವಾಗಿ ಲೆಕ್ಕಿಸಿಕೊಂಡು ಉಳಿದವುಗಳನ್ನು ಅಲ್ಲವೆಂದುಕೊಳ್ಳುತ್ತಿದ್ದಾರೆ. ಆದ್ದರಿಂದ ದೇವರ ವಿಷಯಗಳು ಅಥವಾ ಮತ ವಿಷಯಗಳು ಉಗ್ರವಾದದವರೆಗು ಹೋಗುತ್ತಿವೆ. ಪ್ರಪಂಚದಲ್ಲಿ ಎಲ್ಲಾ ಶಾಸ್ತ್ರಗಳಿಗಿಂತ ಮೊದಲು ಹುಟ್ಟಿದ ಶಾಸ್ತ್ರ ಬ್ರಹ್ಮವಿದ್ಯಾಶಾಸ್ತ್ರ. ಬ್ರಹ್ಮವಿದ್ಯಾಶಾಸ್ತ್ರ ಎಂದರೆ ದೈವವಿಷಯಗಳಿಗೆ (ಆಧ್ಯಾತ್ಮಿಕ ವಿಷಯಗಳಿಗೆ) ಸಂಬಂಧಿಸಿರುವುದು. ನಂತರ ಪ್ರಪಂಚ ಸಂಬಂಧವಾದ ಉಳಿದ ಐದು ಶಾಸ್ತ್ರಗಳು ಹುಟ್ಟಿವೆ. ಆದರೆ ನಂತರ ಹುಟ್ಟಿದ ಶಾಸ್ತ್ರಗಳನ್ನು ಮನುಷ್ಯ ತಿಳಿಯಲ್ಪಟ್ಟಿದ್ದಾನೆ. ಎಲ್ಲದಕ್ಕಿಂತ ಮೊದಲು ಹುಟ್ಟಿದ ಬ್ರಹ್ಮವಿದ್ಯಾ(ದೊಡ್ಡವಿದ್ಯಾ) ಶಾಸ್ತ್ರವನ್ನು ತಿಳಿದುಕೊಳ್ಳಲಾರದೆ ಹೋಗಿದ್ದಾನೆ. ಕೆಲವರು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸಿದರೂ ಅವರಲ್ಲಿ ತಕ್ಕ ಗ್ರಾಹಿತಶಕ್ತಿ ಇಲ್ಲದಿರುವುದರಿಂದ ಅದು ಸರಿಯಾಗಿ

ತಿಳಿಯದಂತೆ ಹೋಗಿದೆ. ಶಾಸ್ತ್ರಗಳು ಎಷ್ಟು ಎಂದು ಪಶ್ನಿಸಿಕೊಂಡರೆ ಷಟ್‌ಶಾಸ್ತ್ರಗಳೆಂದು (ಆರುಶಾಸ್ತ್ರಗಳೆಂದು) ಹೇಳಬಹುದು. ಗ ಖ ರ ಭೌ ಜ್ಯೋ ಬ್ರ ಎಂಬ ಆರು ಅಕ್ಷರಗಳ ಮಂತ್ರ ಷಟ್ ಶಾಸ್ತ್ರಗಳಿಗೆ ಸೂತ್ರವಾಗಿದೆ. ಗಖರಭೌ ಜ್ಯೋಬ್ರ ಎನ್ನುವ ಅಕ್ಷರ ಮಾಲೆಯಲ್ಲಿನ ಅಕ್ಷರಗಳನ್ನು ಬಿಡಿಬಿಡಿಯಾಗಿ ತೆಗೆದುಕೊಂಡು ನೋಡಿದರೆ ಆರು ಶಾಸ್ತ್ರಗಳು ಹೊರಬೀಳುತ್ತವೆ. 'ಗ' ಎನ್ನುವ ಅಕ್ಷರಕ್ಕೆ ಗಣಿತಶಾಸ್ತ್ರವನ್ನು, ಖ ಎನ್ನುವ ಅಕ್ಷರಕ್ಕೆ ಖಗೋಳ ಶಾಸ್ತ್ರವನ್ನು, 'ರ' ಎನ್ನುವ ಅಕ್ಷರಕ್ಕೆ ರಸಾಯನ ಶಾಸ್ತ್ರವನ್ನು, 'ಭೌ' ಎನ್ನುವ ಅಕ್ಷರಕ್ಕೆ ಭೌತಿಕ ಶಾಸ್ತ್ರವನ್ನು, 'ಜ್ಯೋ' ಎನ್ನುವ ಅಕ್ಷರಕ್ಕೆ ಜ್ಯೋತಿಷ್ಯ ಶಾಸ್ತ್ರವನ್ನು, 'ಬ್ರ' ಎನ್ನುವ ಅಕ್ಷರಕ್ಕೆ ಬ್ರಹ್ಮವಿದ್ಯಾ ಶಾಸ್ತ್ರವನ್ನು ಜೋಡಿಸಿ ಹೇಳಬಹುದು. ಹಾಗೆ ಹೇಳುವುದರಿಂದ ಗಖರಭೌಜ್ಯೋಬ್ರ ಎನ್ನುವ ಮಂತ್ರ ಸೂತ್ರಕ್ಕೆ ಆರು ಶಾಸ್ತ್ರಗಳು ಹೊರಬೀಳುತ್ತವೆ.

ಪ್ರಪಂಚಕ್ಕೆ ಸಂಬಂಧಿಸಿರುವವು ಮೊದಲಿನ ಐದು ಶಾಸ್ತ್ರಗಳೆಂದು, ಪರಮಾತ್ಮನಿಗೆ (ದೇವರಿಗೆ) ಸಂಬಂಧಿಸಿರುವುದು ಕೊನೆಯ ಬ್ರಹ್ಮವಿದ್ಯಾ ಶಾಸ್ತ್ರವೆಂದು ಯಾರಿಗೂ ತಿಳಿಯದೆಹೋಗುವುದರಿಂದ ವ್ಯಕ್ತಿಗಳ ಮಧ್ಯೆ ಮಿತವಾದ ಇಲ್ಲದಂತೆ ಹೋಗಿದೆ. ಈದಿನ ವಿದ್ಯಾಸಂಸ್ಥೆಗಳಲ್ಲಿ ಒಂದು ಜ್ಯೋತಿಷ್ಯ ಶಾಸ್ತ್ರವನ್ನು ಬಿಟ್ಟು ಉಳಿದ ನಾಲ್ಕು ಶಾಸ್ತ್ರಗಳನ್ನು ಬೋಧಿಸುವುದು ನಡೆಯುತ್ತಿದೆ. ಆದ್ದರಿಂದ ಪ್ರಪಂಚ ಸಂಬಂಧ ನಾಲ್ಕು ಶಾಸ್ತ್ರಗಳಲ್ಲಿ ಮನುಷ್ಯ ಎಷ್ಟೋ ಪ್ರಗತಿಯನ್ನು ಸಾಧಿಸಿದ್ದಾನೆ. ಈ ನಾಲ್ಕು ಶಾಸ್ತ್ರಗಳಿಗೆ ಸಂಬಂಧಿಸಿದ ಪ್ರಪಂಚ ವಿಷಯಗಳಲ್ಲಿ ಮನುಷ್ಯರು ಒಬ್ಬರಿಗೊಬ್ಬರು ಪ್ರತಿವಾದಿಗಳಾಗಿ, ನಂತರ ಮಿತವಾದಿಗಳಾಗಿ ಅನುಸರಿಸಿಕೊಂಡು ಹೋಗುತ್ತಿದ್ದಾರೆ. ಜ್ಯೋತಿಷ್ಯವನ್ನು ಕುರಿತು ಯಾರೂ ತಲೆಕೆಡಿಸಿಕೊಳ್ಳುತ್ತಿಲ್ಲ. ಇನ್ನು ಬಂದಿರುವ ಸಿಕ್ಕೆಲ್ಲಾ ಒಂದೇ ಒಂದು ದೈವ ವಿಷಯಗಳಲ್ಲಿಯೇ. ದೇವರಶಾಸ್ತ್ರವೊಂದಿದೆ ಎಂದು ತಿಳಿಯದೆ ಇರುವುದೂ, ತಿಳಿದರೂ ಅದನ್ನು ಅರ್ಥ ಮಾಡಿಕೊಳ್ಳದಿರುವುದರಿಂದ ಕೊನೆಗೆ ಮತದ್ವೇಷಗಳು, ಉಗ್ರವಾದಗಳು ತಯಾರಾಗಿವೆ. ಪ್ರಪಂಚ ವಿಷಯಗಳಲ್ಲಿ ತೀವ್ರವಾದ, ಉಗ್ರವಾದ ಇರುವುದಿಲ್ಲವೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಒಂದು ಮತ ವಿಷಯಗಳಲ್ಲಿಯೇ

ತೀವ್ರವಾದ ಉಗ್ರವಾದವಿದೆಯೆಂದು ಹೇಳುತ್ತಿದ್ದೇವೆ. ಇಲ್ಲಿ ಇನ್ನೊಂದು ವಿಷಯವನ್ನು ಸಹ ಹೇಳಬೇಕಾಗಿದೆ. ಅದೇನೆಂದರೆ! ದೇವರ ವಿಷಯಗಳಲ್ಲಿ ಮಾತ್ರವೇ 1) ಹೇತುವಾದ 2) ಪ್ರತಿವಾದ 3) ಅತಿವಾದ 4) ಮಿತವಾದ 5) ತೀವ್ರವಾದ 6) ಉಗ್ರವಾದ ಇದೆಯೆಂದು ಒಟ್ಟು ಆರುವಾದಗಳನ್ನು ಹೇಳಿಕೊಂಡಿದ್ದೇವೆ. ಇವೆಲ್ಲವೂ ಅಲ್ಲದೆ ಪ್ರತ್ಯೇಕಿಸಿ ಒಂದು ವಾದ ಇದೆ. ಅದೇ ನಾಸ್ತಿಕವಾದ. ನಾಸ್ತಿಕವಾದ ಒಂದು ಆಧ್ಯಾತ್ಮಿಕದಲ್ಲಿಯೇ ಇದೆ. ದೇವರ ವಿಷಯಗಳಲ್ಲಿ ಮಾತ್ರವೇ ಕೆಲವರು ಆರು ವಾದಗಳನ್ನು ಬಿಟ್ಟು ನಾಸ್ತಿಕವಾದವನ್ನೇ ಮಾತನಾಡುತ್ತಿದ್ದಾರೆ. ಅಸಲಿಗೆ ದೇವರು ಇಲ್ಲಎಂಬುದೇ ನಾಸ್ತಿಕರ ಕೆಲಸವಾಗಿದೆ. ಆದ್ದರಿಂದ ನಾಸ್ತಿಕವಾದದಲ್ಲಿ ಹೇತುವಾದವಾಗಲಿ, ಪ್ರತಿವಾದವಾಗಲಿ ಇರುವುದಿಲ್ಲ. ಆಧ್ಯಾತ್ಮಿಕವೆಲ್ಲಾ ಅಸತ್ಯವೆನ್ನುವುದರಿಂದ ನಂತರ ಯಾವ ವಾದ ಇರುವುದಿಲ್ಲ. ದೇವರು ಇದ್ದಾನೆಂಬುವವರಲ್ಲಿ ಹೇತುವಾದ ಮೊದಲಗೊಂಡು ಆರು ವಾದಗಳಿರಬಹುದಾಗಲಿ, ದೇವರೇ ಇಲ್ಲವೆಂಬ ನಾಸ್ತಿಕವಾದದ ನಂತರ ಯಾವ ವಾದ ಇರುವುದಿಲ್ಲ. ಆದ್ದರಿಂದ ನಾಸ್ತಿಕವಾದವನ್ನು ಪ್ರತ್ಯೇಕವಾದುದಾಗಿ ಹೇಳಬಹುದು.

ದೇವರಿದ್ದಾನೆಂಬುವವನಿರುವಾಗ, ಹೇಗೆ ಇದ್ದಾನೆಂದು ಪ್ರಶ್ನಿಸುವ ಹೇತುವಾದ ಇರಬಹುದು. ಮೊದಲಿಗೇ ಇಲ್ಲಾ ಎಂಬುವವನಿರುವಾಗ ಹೇಗೆ ಇದ್ದಾನೆನ್ನುವ ಕಾರಣ ಕೇಳುವುದಕ್ಕೆ ಅವಕಾಶವೇ ಇಲ್ಲ ಅಲ್ಲವೆ? ಆದ್ದರಿಂದ ಹೇತುವಾದ ಇರುವ ಕಡೆ ನಾಸ್ತಿಕವಾದ ಇರುವುದಿಲ್ಲ. ನಾಸ್ತಿಕವಾದ ಇರುವಕಡೆ ಹೇತುವಾದ ಇರುವುದಿಲ್ಲ. ಇದ್ದರೂ ಅದರ ಉದ್ದೇಶವನ್ನು ಕುರಿತು ಪ್ರಶ್ನಿಸುವುದನ್ನು ಹೇತುವಾದ ಅಂದಾಗ, ಹಾಗೇ ಇಲ್ಲದಿರುವುದನ್ನು ಕುರಿತು ಪ್ರಶ್ನಿಸುವುದು ಅಗತ್ಯವಿಲ್ಲ ಎಂಬುದು ನಾಸ್ತಿಕವಾದವಾದಾಗ ಹೇತುವಾದ ಬೇರೆಯೆಂದು, ನಾಸ್ತಿಕವಾದ ಬೇರೆಯೆಂದು ಹೇಳಬಹುದು. ಹೇತುವಾದ ನಾಸ್ತಿಕವಾದ ಪೂರ್ವ ಪಶ್ಚಿಮದಂತಹವು. ಆದರೆ ಪ್ರಸ್ತುತ ಕಾಲದಲ್ಲಿ ಕೆಲವರು ನಾಸ್ತಿಕವಾದ ಹೇತುವಾದ ಒಂದೇಯೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೆ ಅಂದುಕೊಳ್ಳುವುದು ತಪ್ಪು. ಹೇತುವಾದ ನಾಸ್ತಿಕವಾದ ಒಂದೇ ನಾಣ್ಯಕ್ಕಿರುವ

ರಾಜ ರಾಣಿಯಂತಹವು. ಅವು ಎಂದಿಗೂ ಒಂದಕ್ಕೊಂದು ಬೆರೆಯುವುದಿಲ್ಲ. ಎರಡು ವಾದಗಳ ಉದ್ದೇಶಗಳೇ ಬೇರೆಬೇರೆಯಾಗಿರುವಾಗ, ಎರಡೂ ಒಂದೇ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ.

ಒಬ್ಬ ಮನುಷ್ಯ ಹುಟ್ಟಿದ್ದಾನೆಂದರೆ ಆತನು ಕೆಲವು ಸಿದ್ಧಾಂತ ಸೂತ್ರಗಳ ಮೇಲೆ ಆಧಾರಪಟ್ಟು ಹುಟ್ಟಿರುತ್ತಾನೆ. ಹಾಗೆಯೇ ಒಂದು ವಸ್ತು ತಯಾರು ಮಾಡಲಾಗಿದೆ ಎಂದರೆ ಅದೂ ಸಹ ಕೆಲವು ಸೂತ್ರಗಳ ಮೇಲೆ ಆಧಾರಪಟ್ಟು ತಯಾರು ಮಾಡಲಾಗಿರುತ್ತದೆ. ಸಿದ್ಧಾಂತ ಸೂತ್ರಗಳನ್ನೇ ಶಾಸ್ತ್ರ ಎನ್ನುತ್ತೇವೆ. ಕಾಣಿಸುವ ಪ್ರಪಂಚವೆಲ್ಲಾ ಗಣಿತ, ಖಗೋಳ, ರಸಾಯನ, ಭೌತಿಕ ಶಾಸ್ತ್ರಗಳ ಮೇಲೆ ಆಧಾರಪಟ್ಟು ಸೃಷ್ಟಿಸಲ್ಪಟ್ಟಿದೆ. ಕಾಣಿಸದ ಮನಸ್ಸು ಮೊದಲುಗೊಂಡು ಜೀವಾತ್ಮ ಪರಮಾತ್ಮ ವರೆಗೂ ಬ್ರಹ್ಮವಿದ್ಯಾಶಾಸ್ತ್ರವನ್ನು ತಿಳಿಸಿದ ಜ್ಞಾನ ಧರ್ಮಗಳ ಮೇಲೆ ಆಧಾರಪಟ್ಟಿವೆ. ಒಟ್ಟಾರೆ ವಿಶ್ವವೆಲ್ಲಾ ಶಾಸ್ತಬದ್ಧತೆ ಹೊಂದಿದೆ. ಒಂದನ್ನು ಕುರಿತು ಇದೆಯೆಂದು ಹೇಳುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಇಲ್ಲವೆಂದು ಹೇಳುವುದಕ್ಕೂ ಕೂಡಾ ಶಾಸ್ತ್ರ ಅಷ್ಟೇ ಅಗತ್ಯ. ಒಂದು ಸತ್ಯವೆಂದು ಹೇಳುವುದಕ್ಕೆ ಶಾಸ್ತ್ರ ಅಗತ್ಯ. ಹಾಗೆ ಒಂದು ಅಸತ್ಯವೆಂದು ಹೇಳುವುದಕ್ಕು ಸಹ ಶಾಸ್ತ್ರ ತಪ್ಪದೆ ಅಗತ್ಯ. ಶಾಸ್ತ್ರಬದ್ಧತೆ ಇಲ್ಲದ ಯಾವುದನ್ನಾದರೂ ಮೂಢ ನಂಬಿಕೆ ಎನ್ನಬಹುದು. **ದೇವರಿದ್ದಾನೆಂಬುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ ಹಾಗೆ ದೇವರು ಇಲ್ಲ ಎನ್ನುವುದಕ್ಕು ಸಹ ಶಾಸ್ತ್ರ ಅಷ್ಟೇ ಅಗತ್ಯವೆಂದು** ಹೇಳುತ್ತಿದ್ದೇವೆ. ಶಾಸ್ತ್ರಾಧಾರ ತೋರಿಸದಂತೆ ದೇವರು ಇಲ್ಲ ಎನ್ನುವುದು ಮೂಢನಂಬಿಕೆಯಾಗುತ್ತದೆ. ಒಂದು ಹೇತುವಾದ ಆದ ಪ್ರಶ್ನೆ ಶಾಸ್ತ್ರವನ್ನು ಅನುಸರಿಸಿರಬೇಕು. ಹಾಗೆ ಅದಕ್ಕೆ ಉತ್ತರ ಸಹ ಶಾಸ್ತ್ರವನ್ನು ಅನುಸರಿಸಿ ಇರಬೇಕು. ಹಾಗಲ್ಲದೆ ಪ್ರಶ್ನೆ ಶಾಸ್ತ್ರಬದ್ಧತೆ ಇಲ್ಲದಿರುವುದಾದರೂ, ಉತ್ತರ ಶಾಸ್ತ್ರಬದ್ಧತೆ ಇಲ್ಲದಿರುವುದಾದರೂ ಎರಡೂ ದಾರಿ ತಪ್ಪಿದಂತಾಗುತ್ತವೆ. ದೇವರ ವಿಷಯವನ್ನು ಬೋಧಿಸುವುದಕ್ಕೆ ಬ್ರಹ್ಮವಿದ್ಯಾ ಶಾಸ್ತ್ರವಿದ್ದರೂ ಅದರ ಅವಗಾಹನೆ ಇಲ್ಲದಿರುವುದರಿಂದ ಪ್ರಶ್ನೆ ಉತ್ತರಗಳು ದಾರಿ ತಪ್ಪಿಹೋಗುತ್ತಿವೆ. ಆದ್ದರಿಂದ ಒಂದು ದೈವ ವಿಷಯದಲ್ಲಿಯೇ ಮನುಷ್ಯ

ತನ್ನ ವಿಚಕ್ಷಣೆಯನ್ನು ಕಳೆದುಕೊಂಡು ತೀವ್ರವಾದಿಯಾಗಿ ಉಗ್ರವಾದಿಯಾಗಿ ಬದಲಾಗುತ್ತಿದ್ದಾನೆ.

ಭೂಮಿ ಮೇಲೆ ತೀವ್ರವಾದವಾಗಲಿ, ಉಗ್ರವಾದವಾಗಲಿ ಇಲ್ಲದಂತೆ ಹೋಗಬೇಕೆಂದರೆ ಒಂದೇ ಮಾರ್ಗ ಇದೆ. ಅದೇ ಬ್ರಹ್ಮವಿದ್ಯಾ ಶಾಸ್ತ್ರವನ್ನು ಕುರಿತು ಪೂರ್ತಿಯಾಗಿ ತಿಳಿದು ನಡೆದುಕೊಳ್ಳುವುದು. ಹಾಗೆ ಬ್ರಹ್ಮವಿದ್ಯಾ ಶಾಸ್ತ್ರವನ್ನು ತಿಳಿದ ದಿನ ಮತ ಭೇದಗಳಾಗಲಿ, ಮತ ದ್ವೇಷಗಳಾಗಲಿ ಬರುವುದಿಲ್ಲ. ಅಂತಹದರಲ್ಲಿ ಉಗ್ರವಾದ ಬರುವುದಕ್ಕೆ ಅವಕಾಶವೇ ಇರುವುದಿಲ್ಲ. ದೇವರ ವಿಷಯಗಳನ್ನು ಶಾಸ್ತ್ರಬದ್ದವಾಗಿ ತಿಳಿದುಕೊಳ್ಳದಿರುವುದರಿಂದ ಒಂದೇ ಮತದಲ್ಲಿಯೇ ಸೀಳಿಕೆಗಳು ಏರ್ಪಟ್ಟು, ಒಂದೇ ಮತದವರೇ ಒಬ್ಬರನ್ನೊಬ್ಬರು ಸಾಯಿಸಿಕೊಳ್ಳುತ್ತಿದ್ದಾರೆ. ಹಿಂದೂಮತದಲ್ಲಿ ಶೈವರು, ವೈಷ್ಣವರು ದ್ವೇಷಗಳು ಬೆಳೆಸಿಕೊಂಡು, ಈಗಲೂ ಕೂಡಾ ಎಲ್ಲಾ ಮತಗಳಲ್ಲಿಯೂ ಅದೇ ಜಾಢ್ಯವು ಪೂರ್ತಿಯಾಗಿ ತುಂಬಿಕೊಂಡಿದೆ. ಶಾಸ್ತ್ರಬದ್ಧತೆ ಇಲ್ಲದ ವಿಷಯಗಳು ಒಂದೇ ಮತದಲ್ಲಿಯೇ ಹಿಂಸೆಯನ್ನು ಪ್ರೋತ್ಸಾಹಿಸಿದಾಗ, ಅದು ಇತರರ ಮೇಲೆ ಎಷ್ಟು ಉಗ್ರವಾದವನ್ನು ತೋರಿಸುತ್ತದೋ ನೀವೆ ಆಲೋಚಿಸಿರಿ. ಆದ್ದರಿಂದ ಉಗ್ರವಾದ ಜಾಡುಗಳು ಇಲ್ಲದಂತೆ ಹೋಗಬೇಕೆಂದರೆ ಶಾಸ್ತ್ರಬದ್ಧವಾದ ಜ್ಞಾನ ತಿಳಿಯಬೇಕು. ಹಾಗೆ ತಿಳಿಯುವುದರಿಂದ ಜಗತ್ತೆಲ್ಲವೂ ಏಕ ಕುಟುಂಬವಾಗುತ್ತದೆ. ಏಕ ಕುಟುಂಬವಾಗಿರುವ ಪ್ರಪಂಚದಲ್ಲಿನ ಪ್ರಜೆಗಳೆಲ್ಲರೂ ಒಬ್ಬರ ಮೇಲೆ ಒಬ್ಬರಿಗೆ ಪ್ರೇಮ ಉಂಟಾಗಿ, ಎಂತಹ ದ್ವೇಷ ಭಾವನೆಗಳು ಇಲ್ಲದಂತೆ ಬದುಕುತ್ತಾರೆ. ಶಾಸ್ತ್ರಬದ್ಧತೆ ಇರುವ ಜ್ಞಾನ ಮನುಷ್ಯರಿಗೆ ತಿಳಿಯದವರೆಗೂ ಯಾವ ದೇಶದಲ್ಲಾದರೂ, ಯಾವ ಕಾಲದಲ್ಲಾದರೂ ಉಗ್ರವಾದ ಸಜೀವವಾಗಿ ನಿಲ್ಲುತ್ತದೆ. ಉಗ್ರವಾದವನ್ನು ಯಾವ ದೇಶದಲ್ಲಿನ ಯಾವ ಸರ್ಕಾರವಾಗಲಿ ಇಲ್ಲದಂತೆ ಮಾಡಲಾರದು. ಯಾವ ಶಾಸನಗಳು, ಯಾವ ಕಾನೂನುಗಳು ಉಗ್ರವಾದವನ್ನು ಇಲ್ಲದಂತೆ ಮಾಡಲಾರವು. ಉಗ್ರವಾದವನ್ನು ಇಲ್ಲದಂತೆ ಮಾಡಬೇಕೆಂದರೆ, ಶಾಸ್ತ್ರಬದ್ಧವಾದ ಜ್ಞಾನ ಒಂದೇ ಆಯುಧವೆಂದು ತಿಳಿಯಬೇಕು. ಶಾಸ್ತ್ರಬದ್ಧವಾದ ಜ್ಞಾನವೆಂಬ ಖಡ್ಗ ಇಲ್ಲದೆ ಯಾರಾಗಲಿ ಉಗ್ರವಾದವನ್ನು

ಇಲ್ಲದಂತೆ ಮಾಡಲಾರರು. ಈದಿನ ಎಲ್ಲಾ ಮತಗಳಲ್ಲಿ ದೇವರು ಹೇಳಿದ ಬ್ರಹ್ಮವಿದ್ಯೆ ಶಾಸ್ತ್ರಬದ್ಧವಾದ ಜ್ಞಾನ ಗೀತೆ, ಬೈಬಲ್, ಖುರಾನ್ ಎಂಬ ಮೂಲ ಗ್ರಂಥಗಳ ರೂಪದಲ್ಲಿದ್ದರೂ, ಆಯಾ ಮತಸ್ಥರು ಅವರ ಗ್ರಂಥಗಳಲ್ಲಿರುವ ಜ್ಞಾನವನ್ನು ಶಾಸ್ತ್ರಬದ್ಧವಾಗಿ ಅರ್ಥ ಮಾಡಿಕೊಳ್ಳದೆ ಹೋಗುವುದರಿಂದ, ಎಲ್ಲಾ ಮತಗಳಲ್ಲಿಯೂ ಉಗ್ರವಾದ ಎಷ್ಟೋ ಸ್ವಲ್ಪ ಇದ್ದೇ ಇದೆ. ಭೂಮಿ ಮೇಲಿರುವ ಪ್ರತಿ ದೇಶವು ಯಾವುದೋ  ಒಂದು ಮತದ ಮುಸುಗಿನಲ್ಲಿ ಸಿಲುಕಿಕೊಂಡು ಇರುವುದರಿಂದ, ಆಯಾ ದೇಶಗಳಲ್ಲಿ ಉಗ್ರವಾದ ಜೊತೆಯಾಗಿದ್ದು ಇತರ ಮತಗಳ ದೇಶಗಳನ್ನು ಹತಮಾಡುವುದಕ್ಕೆ ಮಾರಣಾಯುಧಗಳನ್ನು ತಯಾರು ಮಾಡಿಕೊಳ್ಳುತ್ತಿವೆ. ಅಂತಹ ಹಿಂಸಾ ಪ್ರವೃತ್ತಿ ಹೋಗಬೇಕೆಂದರೆ ಪ್ರಪಂಚವೆಲ್ಲಾ ಒಂದೇ ಕುಟುಂಬವಾಗಿ ಬದಲಾಗಿ ಒಬ್ಬರ ಮೇಲೆ ಒಬ್ಬರು ಪ್ರೇಮದಿಂದ ಇರಬೇಕೆಂದರೆ, ದೇವರು ಒದಗಿಸಿ ಕೊಟ್ಟ ಮೂಲಗ್ರಂಥಗಳಲ್ಲಿ ಒಂದೇ ಶಾಸ್ತ್ರಬದ್ಧವಾದ ಜ್ಞಾನವಿದೆಯೆಂದು ತಿಳಿಯಬೇಕು. ಹಾಗೆ ತಿಳಿದ ದಿನವೇ ಮತ ಇರುವುದಿಲ್ಲ, ಮತದ್ವೇಷವೂ ಇರುವುದಿಲ್ಲ. ಆ ದಿನ ಎಲ್ಲರೂ ಮತರಹಿತ ಮನುಷ್ಯರೇ ಇರುತ್ತಾರೆ.

ಈದಿನ ಭೂಮಿಮೇಲಿರುವ ಪ್ರಜೆಗಳಿಗೆ ದೇವರು ತನ್ನ ಜ್ಞಾನವನ್ನು ಬೇರೆಬೇರೆ ಸಂದರ್ಭಗಳಲ್ಲಿ, ಬೇರೆಬೇರೆ ದೇಶಗಳಲ್ಲಿ, ಬೇರೆಬೇರೆ ಕಾಲಗಳಲ್ಲಿ ಹೇಳಿದ್ದಾನೆ. ಯಾವಾಗ ಹೇಳಿದರೂ, ಹೇಗೆ ಹೇಳಿದರೂ ಹೇಳಿರುವುದು ಒಂದೇ ದೇವರ ಜ್ಞಾನವೇ. ಆದರೂ ಮನುಷ್ಯರು ಬೇರೆಬೇರೆ ಕಾಲಗಳಲ್ಲಿ ಹೇಳಿದ ಜ್ಞಾನವನ್ನು ಬೇರೆಬೇರೆ ಮತಗಳಾಗಿ ಹೋಲಿಸಿಕೊಂಡು, ಅವುಗಳಿಗೆ ಹೆಸರುಗಳು ಇಟ್ಟುಕೊಂಡು ನಮ್ಮ ಜ್ಞಾನ ಬೇರೆ, ನಿಮ್ಮ ಜ್ಞಾನ ಬೇರೆಯೆಂಬ ಅಭಿಪ್ರಾಯದಲ್ಲಿದ್ದಾರೆ. ಹೇಳಲಾದ ಜ್ಞಾನ ಗೀತೆ, ಬೈಬಲ್, ಖುರಾನ್ ಗ್ರಂಥಗಳ ರೂಪದಲ್ಲಿದ್ದರೂ, ಅದರಲ್ಲಿರುವುದು ಒಂದೇ ದೇವರ ಜ್ಞಾನವೆಂದು, ಒಂದೇ ಶಾಸ್ತ್ರಕ್ಕೆ ಸಂಬಂಧಿಸಿರುವುದೆಂದು, ತಿಳಿದುಕೊಳ್ಳದೆಹೋಗುವುದರಿಂದ ಮತಗಳು ಮತದ್ವೇಷಗಳು ಏರ್ಪಟ್ಟಿವೆ. ಅವುಗಳೊಂದಿಗೆ ತೀವ್ರವಾದ ಉಗ್ರವಾದಗಳು

ಹೊರಟಿವೆ. ಉಗ್ರವಾದದಿಂದ ಬಾಂಬುದಾಳಿಗಳು, ಆತ್ಮಾಹುತಿ ದಾಳಿಗಳು ಹೆಚ್ಚಾಗಿವೆ. ಆದ್ದರಿಂದ ಪ್ರಪಂಚವೆಲ್ಲಾ ಹಿಂಸೆಯಿಂದ ಕೂಡಿಕೊಂಡಿರುವುದಾಗಿ ಒಬ್ಬರನ್ನು ನೋಡಿದರೆ ಒಬ್ಬರು ಭಯಪಡಬೇಕಾಗಿ ಬರುತ್ತಿದೆ. ಅಂತಹ ಪರಿಸ್ಥಿತಿಯಿಂದ ಹೊರಬೀಳಬೇಕೆಂದರೆ, ಶಾಸ್ತ್ರಬದ್ಧವಾದ ಜ್ಞಾನ ತಿಳಿಯುವುದು ಒಂದೇ ಮಾರ್ಗ. ಶಾಸ್ತ್ರಬದ್ಧವಾದ ಜ್ಞಾನ ಎಲ್ಲಾ ಮತ ಗ್ರಂಥಗಳಲ್ಲಿಯೂ ಇದೆ. ಆದರೂ ದೇವರು ಹೇಳಿದ ಆ ಗ್ರಂಥಗಳನ್ನು ಮನುಷ್ಯರು ಮತಗಳಿಗೆ ಸಂಬಂಧಿಸಿರುವವೆಂದುಕೊಳ್ಳುವುದರಿಂದ ಅವುಗಳಲ್ಲಿನ ಶಾಸ್ತ್ರಬದ್ಧತೆ ಯಾರಿಗೂ ತಿಳಿಯದಂತೆ ಹೋಗಿದೆ. ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಶಾಸ್ತ್ರೀಯತೆ ಹೇಗಿ ಇದೆಯೋ ತಿಳಿಯುವುದಕ್ಕೆ ಈಗ ನಾವು ಅನೇಕ ಪ್ರಶ್ನೆಗಳನ್ನು ಹೇತುವಾದ ಪದ್ಧತಿಯಲ್ಲಿ ಕೇಳಿ, ಶಾಸ್ತ್ರಬದ್ಧವಾದ ಪ್ರತಿವಾದ ಪದ್ಧತಿಯಲ್ಲಿ ತಿಳಿದುಕೊಳ್ಳೋಣ. ಭೂಮಿಮೇಲೆ ಉಗ್ರವಾದವನ್ನು ಇಲ್ಲದಂತೆ ಮಾಡುವುದಕ್ಕೆ ಹೇತುಬದ್ಧವಾದ ಪ್ರಶ್ನೆಯನ್ನು, ಶಾಸ್ತ್ರಬದ್ಧವಾದ ಉತ್ತರವನ್ನು ಹೇಳಿಕೊಳ್ಳಬೇಕಾದ ಅಗತ್ಯವಿದೆ. ಅಂತಹ ಪ್ರಯತ್ನದಲ್ಲಿಯೇ **"ಹೇತುವಾದ – ಪ್ರತಿವಾದ"** ಎನ್ನುವ ಈ ಗ್ರಂಥವನ್ನು ಬರೆಯಲಾಗಿದೆ.

ಒಂದು ವಿಷಯುವನ್ನು ನೋಡಿ ಅದು ಯಾವುದಕ್ಕೆ ಸಂಬಂಧಿಸಿರುವುದೋ ಖಚಿತವಾಗಿ ತಿಳಿಯಲಾರದೆಹೋದರೆ, ಒಬ್ಬೊಬ್ಬರು ಒಂದೊಂದು ಅಭಿಪ್ರಾಯವನ್ನು ಆ ವಿಷಯವನ್ನು ಕುರಿತು ತಿಳಿಸಿದರೆ, ಅಲ್ಲಿಯೇ ಮನುಷ್ಯರ ಮಧ್ಯದಲ್ಲಿ ಭಾವ ಭೇದಗಳು ಬರುವುದೇ ಅಲ್ಲದೆ ವಾದ ಭೇದಗಳು ಸಹ ಬರುತ್ತವೆ. ಮನುಷ್ಯರ ಮಧ್ಯದಲ್ಲಿ ಭಾವ ಭೇದಗಳು ಕೊನೆಗೆ ಉಗ್ರವಾದ ದವರೆಗಾದರೂ ಹೋಗಬಹುದು. ಅದೂ ಸಹ ದೇವರ ವಿಷಯದಲ್ಲಾದರೆ ಮತ್ತಷ್ಟು ವೇಗವಾಗಿ ಘರ್ಷಣೆಗೆ ದಾರಿ ಮಾಡುತ್ತವೆ. ಒಂದು ವಿಷಯ ಮನುಷ್ಯರ ಮಧ್ಯದಲ್ಲಿ ಅಭಿಪ್ರಾಯಭೇದಕ್ಕೆ ಹೇಗೆ ದಾರಿ ಮಾಡುತ್ತಿದೆಯೋ ಇಲ್ಲಿ ಗಮನಿಸೋಣ. ಉದಾಹರಣೆಗೆ ವೇಮನಯೋಗಿ ತನಗೆ ತಿಳಿದ ವಿಷಯವನ್ನು ಪದ್ಯಗಳ ರೂಪಗಳಲ್ಲಿ ಬರೆದಿಟ್ಟಿದ್ದಾನೆ. ವೇಮನ ಚರಿತ್ರೆಯನ್ನು ಓದಿದವರು ಆತನು ಹೇಳಿದ ವಿಷಯವೆಲ್ಲವನ್ನು ನೋಡಿದ ನಂತರ ಮನುಷ್ಯರೆಲ್ಲರೂ

ಆತನು ಹೇಳಿದ ವಿಷಯವನ್ನು ಒಂದೇ ವಿಧವಾಗಿ ಅರ್ಥ ಮಾಡಿಕೊಳ್ಳದೆ, ಅನೇಕ ವಿಧಗಳಲ್ಲಿ ಅರ್ಥ ಮಾಡಿಕೊಳ್ಳುವುದರಿಂದ ಆತನನ್ನು ಕೆಲವರು ಯೋಗಿ ಎಂದಿದ್ದಾರೆ, ಕೆಲವರು ಒಳ್ಳೆಯ ಜ್ಞಾನಿ ಎಂದು ಹೇಳಿದ್ದಾರೆ. ಮತ್ತೆ ಕೆಲವರು ಪ್ರಜಾಕವಿ ಎಂದಿದ್ದಾರೆ. ಇನ್ನೂ ಕೆಲವರು ಸಮಾಜವಾದಿ ಎಂದಿದ್ದಾರೆ. ಕೆಲವರು ನಾಸ್ತಿಕವಾದಿ ಎಂದಿದ್ದಾರೆ. ಮತ್ತೆ ಕೆಲವು ಜನರು ಆತನನ್ನು ಸತ್ಯವಾದಿ ಎಂದಿದ್ದಾರೆ. ಕೆಲವರು ಸ್ವಾಮೀಜಿಗಳು ವೇಮನಯೋಗಿಯನ್ನು ಸರ್ವಸಂಗ ಪರಿತ್ಯಾಗಿಯಾಗಿ ಲೆಕ್ಕಿಸಿ ಆತನ ಪ್ರತಿಮೆಯನ್ನು ಅವರ ಆಶ್ರಮಗಳಲ್ಲಿ ಇಟ್ಟುಕೊಂಡರೆ, ಕೆಲವರು ನಾಸ್ತಿಕವಾದಿಗಳು ಆತನನ್ನು ಮುಖ್ಯವಾದ ನಾಸ್ತಿಕವಾದಿಯಾಗಿ ಲೆಕ್ಕಿಸಿ ಅವರು ಬರೆದ ನಾಸ್ತಿಕ ಗ್ರಂಥಗಳಲ್ಲಿ ಮೊದಲ ಪೇಜಿನಲ್ಲಿಯೇ ವೇಮನ ಚಿತ್ರವನ್ನು ಮುದ್ರಿಸಿಕೊಂಡಿದ್ದಾರೆ. ಈ ವಿಧವಾಗಿ ಒಬ್ಬ ವೇಮನ ಬಗ್ಗೆ ಇಷ್ಟು ಜನ ಇಷ್ಟು ಅಭಿಪ್ರಾಯಗಳು ಹೊಂದಿರುವಾಗ ಅವರೆಲ್ಲರನ್ನು ಒಂದು ಅಭಿಪ್ರಾಯಕ್ಕೆ ತರುವುದು ಬಹಳ ಕಷ್ಟ ಅಲ್ಲವೆ!

ವೇಮನ ಒಂದುಬಾರಿ ತಾನು ಧರಿಸಿದ ವಸ್ತ್ರಗಳನ್ನು ಸಹ ಬಿಟ್ಟು ಮೌನವಾಗಿ ಬದಲಾಗುವುದರಿಂದ ಆತನನ್ನು ಹುಚ್ಚನೆಂದು ಹೇಳಿದವರಿದ್ದಾರೆ. (ಅಷ್ಟೇಯಲ್ಲದೆ ಆತನು ಹೇಳಿದ ಸಾಹಿತ್ಯ ಇಷ್ಟವಿಲ್ಲದವರು ವೇಮನನ್ನು ಅಜ್ಞಾನಿ ಅಂದವರು ಸಹ ಇದ್ದಾರೆ.) ವೇಮನ ಬದುಕಿರುವಾಗಲೇ ಆತನನ್ನು ಕುರಿತು ಬಹಳಜನ ಬಹಳ ಅಭಿಪ್ರಾಯಗಳು ಹೊರಇಟ್ಟಾಗ, ಅವುಗಳನ್ನು ಕೇಳಿದ ವೇಮನ ತನ್ನನ್ನು ಪ್ರಜೆಗಳು ಎಲ್ಲಾ ವಿಧಗಳಾಗಿ ಅರ್ಥ ಮಾಡಿಕೊಂಡಿದಕ್ಕೆ ನಕ್ಕು ಕೊನೆಗೆ ಒಂದು ಪದ್ಯವನ್ನು ಹೀಗೆ ಹೇಳಿದ್ದಾನೆ.

**ಸಾವಿರ ವಿಧದಲ್ಲಿ ಲಮರು ವೇಮನ ಪದ್ಯವು**
**ಅರ್ಥಕೊಡುವುದನು ಅರಸಿ ನೋಡು**
**ನೋಡಿ ನೋಡಿ ಉದಿಸು ಅಚ್ಚರಿ ಜ್ಞಾನವು**
**ವಿಶ್ವದಾಭಿರಾಮ ಕೇಳೊ ವೇಮಾ.**

ವೇಮನ ಹೇಳಿದ ಪದ್ಯವನ್ನು ಅನುಸರಿಸಿ ಆತನನ್ನು ಸಾವಿರಜನರು

ಸಾವಿರ ವಿಧಗಳಲ್ಲಿ ಅರ್ಥ ಮಾಡಿಕೊಂಡರೂ, ಕೊನೆಗೆ ಆತನು ಹೇಳಿರುವುದು ಆಶ್ಚರ್ಯವನ್ನುಂಟುಮಾಡುವ ಜ್ಞಾನವೆಂದು ತಿಳಿಯಲಾಗುತ್ತಿದೆ. ಸ್ವತಃವಾಗಿ ವೇಮನನೇ ನಾನು ಇಂತಹ ವಿಷಯವನ್ನು ಹೇಳಿದ್ದೇನೆಂದು ಹೇಳಿದರೂ, ಈಗಲೂ ಆತನನ್ನು ಪ್ರಜಾಕವಿಯಾಗಿ, ನಾಸ್ತಿಕವಾದಿಯಾಗಿ, ಸಮಾಜವಾದಿಯಾಗಿ ಲೆಕ್ಕಿಸಿಕೊಳ್ಳುವವರು ಬಹಳಜನ ಇದ್ದಾರೆ. ಒಬ್ಬ ವೇಮನಯೋಗಿ ಹೇಳಿದ ವಿಷಯದ ಮೇಲೆಯೇ ಮನುಷ್ಯರಿಗೆ ಇಷ್ಟು ಅಭಿಪ್ರಾಯಗಳಿರುವಾಗ, ದೇವರು ಹೇಳಿದ ವಿಷಯವನ್ನು ಒಂದು ವಿಧದಲ್ಲಿ ಅರ್ಥ ಮಾಡಿಕೊಳ್ಳುತ್ತಾರಾ? ವೇಮನ ಕಾಣಿಸುವ ಮನುಷ್ಯನಾಗಿದ್ದು ಒಂದೇ ಕಾಲದಲ್ಲಿ ಹೇಳಿದ ವಿಷಯವೇ ಎಷ್ಟೋ ಅಭಿಪ್ರಾಯಗಳಿಗೆ ದಾರಿ ಮಾಡುವಾಗ, ಇನ್ನು ದೇವರು ಕಾಣಿಸದವನಾಗಿದ್ದು, ಮೂರು ವಿಧಗಳಾಗಿ ಮೂರು ಕಾಲಗಳಲ್ಲಿ ಹೇಳಿದ ಜ್ಞಾನವಿಷಯಗಳು ಅರ್ಥವಾಗದೆ ಮೇಧಾವಿಗಳನ್ನು ಸಹಿತವು ತಿಕಮಕ ಮಾಡಿವೆ. ಆದ್ದರಿಂದ ದೇವರ ಜ್ಞಾನ ಒಂದೇ ಆದರೂ, ದೇವರು ಒಬ್ಬನೇ ಆದರೂ ಯಾರಿಗು ದೇವರೂ, ದೇವರ ಜ್ಞಾನವೂ ಒಂದಾಗಿ ಅರ್ಥವಾಗಲಿಲ್ಲ. ಅರ್ಥವಾಗದಿರುವುದರಿಂದ ದೇವರನ್ನು ಕುರಿತು ಅನೇಕ ಮತಗಳು, ಆ ಮತಗಳಲ್ಲಿಯೇ ಅನೇಕ ಸೀಳಿಕೆಗಳು ಏರ್ಪಟ್ಟಿವೆ. ಹಾಗೆ ಏರ್ಪಡುವುದರಿಂದ ವಾದಗಳು ಹುಟ್ಟಿಬಂದು ಅವು ಕೊನೆಗೆ ಉಗ್ರವಾದದ ವರೆಗೂ ದಾರಿಮಾಡಿವೆ.

ಕೃತಯುಗ, ತ್ರೇತಾಯುಗ, ದ್ವಾಪರಯುಗ ಕಳೆದುಹೋಗಿ ಕೊನೆಯದಾದ ಕಲಿಯುಗದಲ್ಲಿ ಮೂರು ಸಾವಿರ ವರ್ಷಗಳವರೆಗು ಮನುಷ್ಯರ ಮಧ್ಯದಲ್ಲಿ ಒಂದು ಇಂದೂತ್ವ ಇರುತ್ತಿತ್ತು. ಈಗಲೂ ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಕ್ರೈಸ್ತಮತ ಹೊರಗೆ ಬಂದಾಗ, ಇಂದೂತ್ವಕ್ಕೆ ಇಂದೂ ಮತವೆಂದು ಹೆಸರು ಬಂದಿದೆ. ಇಂದೂಮತ ಕೊನೆಗೆ ಈದಿನ ಹಿಂದೂಮತವಾಗಿ ಕರೆಯಲಾಗುತ್ತಿದೆ. ಸೃಷ್ಟಿ ಆದಿಯಲ್ಲಿಯೇ **'ವಾಣಿ'** ಮೂಲಕ ತಿಳಿಯಲ್ಪಟ್ಟ ದೇವರಜ್ಞಾನ ನಂತರ ಕಾಣಿಸುವ ಮನುಷ್ಯನ ಮೂಲಕ ಒಂದುಬಾರಿ, ಕಾಣಿಸದ ವ್ಯಕ್ತಿ ಮೂಲಕ ಒಂದುಬಾರಿ ತಿಳಿಸಲಾಗಿದೆ. ಹೀಗೆ ಮೂರುಬಾರಿ ಒಂದೇ ಜ್ಞಾನವನ್ನು ದೇವರು ತಿಳಿಸಿದರೂ, ಮನುಷ್ಯರು ಅದನ್ನು ಅರ್ಥ ಮಾಡಿಕೊಳ್ಳದೆ, ಒಬ್ಬರ ಮಧ್ಯೆ

ಒಬ್ಬರು ಅಭಿಪ್ರಾಯ ಭೇದಗಳು ಹೊಂದಿದ್ದಾರೆ. ಆ ಅಭಿಪ್ರಾಯ ಭೇದಗಳು ಮತಗಳಾಗಿ, ಮತದಲ್ಲಿ ಸೀಳಿಕೆಗಳಾಗಿ ಬದಲಾಗಿ ಹೋಗಿ ಈದಿನ ಕಾಣಿಸುತ್ತಿವೆ. ವೇಮನ ಒಂದುಬಾರಿ ಹೇಳಿದ ಜ್ಞಾನವೇ ಸಾವಿರ ವಿಧಗಳಲ್ಲಿ ಅರ್ಥವಾದಾಗ, ಕಾಣಿಸದ ದೇವರು ಮೂರುಬಾರಿ, ಮೂರು ಪದ್ಧತಿಗಳ ಮೂಲಕ ಹೇಳಿದ ವಿಷಯ, ಮೂರುಸಾವಿರ ಸೀಳಿಕೆಗಳಾಗಿ ಮನುಷ್ಯರಿಗೆ ಅರ್ಥವಾಗಿರುತ್ತದೆ. ಅಂತಹ ಎಲ್ಲಾ ಸೀಳಿಕೆಗಳನ್ನು ಒಂದು ಮಾಡಿ, ಒಂದೇ ಅಭಿಪ್ರಾಯಕ್ಕೆ ಎಲ್ಲರನ್ನು ತಂದು, ಎಲ್ಲರನ್ನು ಒಂದೇ ಭಾವನೆಯಲ್ಲಿ ಇಡಬೇಕೆಂಬುವುದೇ ನಮ್ಮ ಉದ್ದೇಶ. ಅಂತಹ ಪ್ರಯತ್ನದಲ್ಲಿ ಹೇತುವಾದ, ಪ್ರತಿವಾದವನ್ನು ಆಧಾರ ಮಾಡಿಕೊಂಡಿ ಎಲ್ಲರನ್ನು ಒಂದು ದಾರಿಗೆ ತರಬೇಕೆಂದುಕೊಂಡಿದ್ದೇವೆ. ಆದ್ದರಿಂದ ಈ ಗ್ರಂಥದಲ್ಲಿ ನಾವು ಹೇತುವಾದ ಪಾತ್ರವನ್ನೂ, ಪ್ರತಿವಾದ ಪಾತ್ರವನ್ನೂ ಎರಡನ್ನು ಪೋಷಿಸಬೇಕಾಗಿ ಬಂದಿದೆ. ನಾವು ಹೇಗೆ ಹೇಳಿದರೂ ಪ್ರಜೆಗಳನ್ನು ಜ್ಞಾನಿಗಳಾಗಿ ಮಾರ್ಪಡಿಸಿ, ತೀವ್ರವಾದ ಉಗ್ರವಾದದಿಂದ ಹೊರಗೆ ತೆಗೆಯಬೇಕೆಂಬುದೇ ಮುಖ್ಯ ಉದ್ದೇಶ.

ವೇಮನ ಯೋಗಿ ದೈವಜ್ಞಾನವನ್ನು ಹೇಳಿದರೂ ಅದು ಎಲ್ಲರಿಗೂ ನಾಸ್ತಿಕವಾದವಾಗಿ ಕಾಣಿಸಿದೆ ಅಲ್ಲವೆ! ಅದೇ ವಿಧವಾಗಿ ನಾವು ಹೇಳುವ ಬೋಧನೆಗಳು ಸಹ ಕೆಲವರಿಗೆ ಬೇರೆಬೇರೆ ವಿಧಗಳಾಗಿ ಕಾಣಿಸಿದರೂ, ನಾವು ಹೇಳುವುದು ಸ್ವಚ್ಛವಾದ ದೈವಜ್ಞಾನವೆಂದು ತಿಳಿಯಬೇಕು. ನಾವು ಹೇಳುವ ಬೋಧನೆಗಳು ಹೇಗಿರುತ್ತವೋ ತಿಳಿಯುವುದಕ್ಕೆ ಉದಾಹರಣೆಗೆ ಎರಡು ವಾಕ್ಯಗಳನ್ನು ಹೇಳುತ್ತೇನೆ ನೋಡಿರಿ. **ಒಂದು <u>ದೇವರು </u>ನಿಜವಾಗಲು ಇಲ್ಲ. ಎರಡು <u>ದೇವರು </u>ಅಬದ್ಧವಾಗಿ ಇದ್ದಾನೆ.** ಈ ಎರಡು ವಾಕ್ಯಗಳಲ್ಲಿ ದೇವರು ಎಂಬ ಪದ ಬಿಟ್ಟರೇ ನಿಜವಾಗಲೂ ಇಲ್ಲ, ಅಸತ್ಯವಾಗಿ ಇದ್ದಾನೆ ಎಂಬ ಎರಡು ಮಾತುಗಳು ಇವೆ. ಎರಡು ಮಾತುಗಳಲ್ಲಿಯೂ ದೇವರು ಇಲ್ಲವೆಂದೇ ಮೇಲ್ನೋಟಕ್ಕೆ ಕಾಣಿಸುತ್ತದೆ. ಕೆಲವರಿಗೆ ಈ ಎರಡು ಮಾತುಗಳಲ್ಲಿ ದೇವರು ಇಲ್ಲವೆಂಬ ನಾಸ್ತಿಕತ್ವವು ಕಾಣಿಸಿದರೂ ನಾವು ಹೇಳಿದ ಉದ್ದೇಶ ದೇವರು

ಇದ್ದಾನೆಂದೇ. ಹೇಳಿದ ಪದಗಳಲ್ಲಿನ ಭಾವವನ್ನು ಆಳವಾಗಿ ನೋಡಿದಾಗ ನಿಜವಾದ ಅರ್ಥ ತಿಳಿಯುತ್ತದೆ. ಹಾಗೆಯೇ ಬಹಳ ವಿಷಯಗಳಲ್ಲಿ ಆಳವಾಗಿ ನೋಡದೆಯೇ ಒಂದು ನಿರ್ಣಯಕ್ಕೆ ಬಹಳಜನ ಬರುತ್ತಿರುತ್ತಾರೆ. ಹಾಗೆ ತೊಂದರೆಬಿದ್ದು ಬುದ್ದಿಯಿಂದ ಯೋಚಿಸದೆ ಒಂದು ನಿರ್ಣಯಕ್ಕೆ ಬರುವುದರಿಂದ ನಮಗೆ ಬಂದಿರುವ ನಿರ್ಣಯ ತಪ್ಪಾಗಬಹುದು ಅಥವಾ ಸರಿಯಾಗಬಹುದು. ಸರಿಯಾದರೆ ಫರವಾಗಿಲ್ಲ, ಒಂದುವೇಳೆ ತಪ್ಪಾದರೆ ಎಲ್ಲಾ ವಿಧಗಳಲ್ಲಿ ಮಾರ್ಗ ತಪ್ಪಿಹೋಗಿ ಕೊನೆಗೆ ಅನರ್ಥಗಳು ಏರ್ಪಡುತ್ತವೆ. ಆದ್ದರಿಂದ ಪ್ರತಿ ವಿಷಯವನ್ನು ಶಾಸ್ತ್ರಬದ್ಧತೆಯಿಂದ ಆಳವಾಗಿ ನೋಡಬೇಕಾಗಿದೆ. ಹಾಗೆ ಶಾಸ್ತ್ರವನ್ನು ಉಪಯೋಗಿಸಿಕೊಂಡು ನೋಡುವುದರಿಂದ ಪ್ರತಿ ವಿಷಯದಲ್ಲಿ ಅಡಕವಾಗಿರುವ ಸತ್ಯ ಹೊರಗೆ ತಿಳಿಯುತ್ತದೆ.

ಕೆಲವರು ಪ್ರತ್ಯಕ್ಷವಾಗಿ ಕಾಣಿಸುವ ವಿಷಯಗಳಲ್ಲಿಯೇ ಯಾವ ಯೋಚನೆ ಮಾಡದೆ ತಪ್ಪು ಮಾಡುತ್ತಿರುತ್ತಾರೆ. ಒಂದು ವಸ್ತುವನ್ನು ನೋಡಿದ ತಕ್ಷಣ ತಪ್ಪಾಗಿ ಭಾವಿಸುತ್ತಾರೆ. ಉದಾಹರಣೆಗೆ ದೂರವಾಗಿರುವ ಬನ್ನಿ ಮರವನ್ನು ತಪ್ಪಾಗಿ ಹುಣಸೆಮರ ಎಂದುಕೊಳ್ಳುವುದು, ಹಾಗೆಯೇ ದೂರವಾಗಿರುವ ಕತ್ತೆಯನ್ನು ಕುದುರೆ ಎಂದುಕೊಳ್ಳುವುದು. ಕತ್ತಲಲ್ಲಿ ಹಗ್ಗವನ್ನು ಹಾವೆಂದುಕೊಂಡಂತೆ, ಬಹಳ ವಿಷಯಗಳಲ್ಲಿ ತಪ್ಪಾಗಿ ಒಂದಿದ್ದರೆ ಮತ್ತೊಂದಾಗಿ ನಿರ್ಣಯಿಸಿಕೊಳ್ಳುತ್ತಾರೆ. ಪ್ರತ್ಯಕ್ಷವಾಗಿ ಕಾಣಿಸುವ ಸ್ಥೂಲ ವಿಷಯಗಳಲ್ಲಿಯೇ ಈ ವಿಧವಾಗಿ ಮನುಷ್ಯ ತಪ್ಪು ಮಾಡುತ್ತಿರುವಾಗ, ಇನ್ನು ಕಾಣಿಸದ ಸೂಕ್ಷ್ಮ ವಿಷಯಗಳಲ್ಲಿ ಪೂರ್ತಿಯಾಗಿ ತಪ್ಪುದಾರಿ ಹಿಡಿಯುವುದಕ್ಕೆ ಅವಕಾಶ ಇದೆ. ಈಗ ಅಸಲು ವಿಷಯಕ್ಕೆ ಬಂದು ನೋಡಿದರೆ ಉಗ್ರವಾದ ಬಂದಿದೆಯೆಂದರೆ ದೈವ ವಿಷಯಗಳೆಂಬುವ ಮತ ವಿಷಯಗಳಲ್ಲಿಯೇ ಎಂದು ಹೇಳಬಹುದು. ದೇವರಾಗಲಿ, ದೇವರು ಸೃಷ್ಟಿಸಿದ ಜೀವಿಯಾಗಲಿ, ಜೀವಿಯೊಂದಿಗೆ ಶರೀರದಲ್ಲಿರುವ ಮನಸ್ಸಾಗಲಿ, ಬುದ್ಧಿಯಾಗಲಿ ಯಾವುದು ಕಾಣಿಸುವುದು ಅಲ್ಲ. ಜೀವಿಯು ಸ್ಥೂಲವಲ್ಲ, ಸೂಕ್ಷ್ಮವಾದವನು. ಜೀವಿಯೇ ಕಾಣಿಸದೆ

ಸೂಕ್ಷ್ಮವಾಗಿರುವಾಗ ಜೀವಿಯನ್ನು ತಯಾರುಮಾಡಿದ ದೇವರು ಪೂರ್ತಿಯಾಗಿ ತಿಳಿಯದವನು. ದೇವರಿಗೆ ಮುಖ್ಯವಾದ ಮೂರು ವಿವರಗಳು ಇವೆ. ಅವು ಯಾವೆಂದರೆ! ಒಂದು ದೇವರಿಗೆ ರೂಪವಿಲ್ಲ, ಎರಡು ದೇವರಿಗೆ ಹೆಸರಿಲ್ಲ, ಮೂರು ದೇವರಿಗೆ ಕೆಲಸವಿಲ್ಲ. ಇದನ್ನೇ ಒಂದೇ ವಾಕ್ಯವಾಗಿ ಹೇಳುತ್ತಾ ದೇವರು ರೂಪ ನಾಮ ಕ್ರಿಯೆ ಇಲ್ಲದವನೆಂದು ಹೇಳಿದ್ದಾರೆ. ರೂಪ ನಾಮ ಕ್ರಿಯಾರಹಿತನು ದೇವರು ಎಂಬ ಮಾತು ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಬಹಳ ಮುಖ್ಯವಾದುದು. ದೇವರ ವಿಷಯವನ್ನು ಕುರಿತು ಎಲ್ಲಿ ಮಾತನಾಡಿದರೂ, ಮುಖ್ಯವಾದ ದೇವರ ಶಾಸ್ತ್ರ ಸೂತ್ರವನ್ನು ಬಿಟ್ಟು ಮಾತನಾಡಿದರೆ, ಅದು ಅಶಾಸ್ತ್ರೀಯವಾದ ಮಾತಾಗುತ್ತದೆ. ಶಾಸ್ತ್ರವನ್ನು ಅನುಸರಿಸಿ ನೋಡಿದಂತಾದರೆ ಕಾಣಿಸದಿರುವುದು ಸಹ ತಿಳಿಯುತ್ತದೆ. ದೇವರು ಸಹ ಸುಲಭವಾಗಿ ತಿಳಿಯುತ್ತಾನೆ. ಶಾಸ್ತ್ರಬದ್ಧತೆ ಇಲ್ಲದಿದ್ದರೆ ಕಾಣಿಸುವ ಪ್ರತ್ಯಕ್ಷ ವಿಷಯ ಸಹ ಸರಿಯಾಗಿ ಅರ್ಥವಾಗದೆ ಹೋಗುತ್ತದೆ. ಆದ್ದರಿಂದ ಈಗ ನಾವು ಪ್ರತಿ ವಿಷಯಕ್ಕೂ ಶಾಸ್ತ್ರವನ್ನು ಜೋಡಿಸಿ ಹೇಳಿಕೊಳ್ಳೋಣ.

ಸಹಜವಾಗಿ ಎಲ್ಲರೂ ತಪ್ಪಾಗಿ ಅರ್ಥೈಸಿಕೊಂಡು ಪಕ್ಕದಾರಿ ಹಿಡಿದು ಹೋಗುವ ದೈವ ವಿಷಯಗಳನ್ನೇ ನಾವು ತೆಗೆದುಕೊಳ್ಳಬೇಕಾದ ಅಗತ್ಯವಿದೆ. ದೇವರ ವಿಷಯಗಳಲ್ಲಿಯೇ ಮನುಷ್ಯರ ಮಧ್ಯೆ ಅಭಿಪ್ರಾಯ ಭೇದಗಳು ಬಂದು ಕೊನೆಗವು ಹಿಂಸೆಯವರೆಗು ಸೇರುತ್ತಿವೆ. ದೇವರ ಮಾರ್ಗದಲ್ಲಿ ಅಪೋಹಗಳು ಹೋಗಬೇಕೆಂದರೆ ಆ ವಿಷಯಗಳನ್ನೇ ತೆಗೆದುಕೊಂಡು ನೋಡಬೇಕಾಗಿರುತ್ತದೆ. ದೇವರ ವಿಷಯಗಳನ್ನು ತೆಗೆದುಕೊಂಡು ನೋಡಿದರೆ, ದೇವರ ವಿಷಯಗಳು ಎರಡು ಭಾಗಗಳಾಗಿ ಇದ್ದಂತೆ ತಿಳಿಯುತ್ತಿದೆ. ಒಂದು ಸ್ಥೂಲಭಾಗ, ಎರಡು ಸೂಕ್ಷ್ಮಭಾಗ. ದೇವರು ಸೂಕ್ಷ್ಮವೇ ಆದರೂ ಸೂಕ್ಷ್ಮವನ್ನು ಮುಚ್ಚಲ್ಪಟ್ಟಿರುವ ಸ್ಥೂಲವನ್ನು ಸಹ ತಿಳಿಯಬೇಕಾಗಿದೆ. ಉದಾಹರಣೆಗೆ ಗಾಳಿ ತುಂಬಿದ ಪುಟ್‌ಬಾಲ್ ಬಗ್ಗೆ ಪೂರ್ತಿಯಾಗಿ ತಿಳಿಯಬೇಕೆಂದರೆ ಅದರಲ್ಲಿ ತುಂಬಿದ ಗಾಳಿಯೊಂದಿಗೆ ಸಹ ತಿಳಿಯಬೇಕಾಗಿ ಬರುತ್ತದೆ. ಒಳಗೆ ಗಾಳಿ ಇಲ್ಲದೆ ಚಂಡಿಗೆ

ದುಂಡನೆ ಆಕಾರ ಬರುವುದಿಲ್ಲ. ದುಂಡನೆ ರಬ್ಬರ್‌ಚೀಲದಲ್ಲಿ ಗಾಳಿ ತುಂಬಲ್ಪಟ್ಟು ನಂತರ ಅದು ಚಂಡಾಗಿ ಕರೆಯಲ್ಪಟ್ಟಿದೆ. ರಬ್ಬರ್‌ಚೀಲದಲ್ಲಿ ತುಂಬಲ್ಪಟ್ಟ ಗಾಳಿ ಸ್ವಲ್ಪ ಇರುವಾಗ, ಚೀಲದಲ್ಲಿ ತುಂಬಲಾಗದ ಗಾಳಿ ಹೊರಗೆ ಎಷ್ಟೋ ಇದೆ. ಒಳಗೆ ತುಂಬಲ್ಪಟ್ಟ ಗಾಳಿಯನ್ನು ಅಳತೆಮಾಡಿ ಇಷ್ಟು ಅಳತೆ ಇದೆಯೆಂದು, ಇಷ್ಟು ಭಾರ ಇದೆಯೆಂದು ಹೇಳಬಹುದು. ಆದರೆ ಹೊರಗಿನ ಗಾಳಿಯನ್ನು ಅಳೆಯಲಾರೆವು ಹಾಗೆಯೇ ಅದರ ಬಾರವನ್ನು ಹೇಳಲಾರೆವು.

ಉದಾಹರಣೆಗೆ ಚಂಡನ್ನು ತೆಗೆದುಕೊಂಡು ನೋಡಿದರೆ ಮೇಲೆ ಕಾಣಿಸುವ ಚಂಡಿನ ಆಕಾರವಾದ ರಬ್ಬರ್‌ಚೀಲದಂತಿರುವುದನ್ನು ಸ್ಥೂಲ ಭಾಗವೆಂದೂ, ಅದಕ್ಕೆ ಒಳಗೆ ಕಾಣಿಸದಂತಿರುವ ಗಾಳಿಯನ್ನು ಸೂಕ್ಷ್ಮಭಾಗವೆಂದು ಹೇಳಬಹುದು. ಈ ವಿಧವಾಗಿ ಚಂಡನ್ನು ಎರಡು ಭಾಗಗಳಾಗಿ ವಿಭಜಿಸಬಹುದು. ಹಾಗೆ ಎರಡು ಭಾಗಗಳಾಗಿರುವ ಚಂಡನ್ನು ಕುರಿತು ಪೂರ್ತಿಯಾಗಿ ತಿಳಿಯಬೇಕೆಂದರೆ, ಚಂಡು ಎಂದು ಹೇಳುವ ಎರಡು ಭಾಗಗಳನ್ನು ಪೂರ್ತಿ ವಿವರವಾಗಿ ತಿಳಿದಿರಬೇಕು. ದೇವರು ಸಹ ನಮಗೆ ಪೂರ್ತಿಯಾಗಿ ಅರ್ಥವಾಗಬೇಕೆಂದರೆ, ಸೂಕ್ಷ್ಮವನ್ನು ಕುರಿತು ಮತ್ತು ಸ್ಥೂಲವನ್ನು ಕುರಿತು ತಿಳಿಯಬೇಕು. ಚಂಡಿಗೆ ಆಕಾರ ಬರುವುದಕ್ಕೆ ಕಾರಣವಾದ ಗಾಳಿಯನ್ನು ಕುರಿತು ತಿಳಿಯದೆಹೋದರೆ ಚಂಡೇ (ಬಾಲ್) ಅರ್ಥವಾಗುವುದಿಲ್ಲ. ಹಾಗೆಯೇ ಒಂದು ಸ್ಥೂಲ ಶರೀರದಲ್ಲಿರುವ ಸೂಕ್ಷ್ಮವನ್ನು ತಿಳಿಯದೆಹೋದರೆ ಮನುಷ್ಯ ಅರ್ಥವಾಗುವುದಿಲ್ಲ, ಮನುಷ್ಯನನ್ನು ಸೃಷ್ಟಿಸಿದ ದೇವರೂ ಅರ್ಥವಾಗುವುದಿಲ್ಲ. ಚಂಡಿನಲ್ಲಿ ತುಂಬಿರುವುದು ಸ್ವಲ್ಪ ಗಾಳಿಯೇ, ಹೊರಗಿರುವುದು ಎಷ್ಟು ಗಾಳಿಯೊ ತಿಳಿಯದ ಹಾಗೆ, ಒಂದು ಶರೀರದಲ್ಲಿ ತುಂಬಲ್ಪಟ್ಟಿರುವುದು ಜೀವವೆಂಬ ಸ್ವಲ್ಪ ಸೂಕ್ಷ್ಮವೇ ಇದೆ. ಶರೀರದ ಹೊರಗೆ ಎಷ್ಟು ಸೂಕ್ಷ್ಮ ಇದೆಯೋ ಯಾರಿಗೂ ತಿಳಿದಿಲ್ಲ. ಈ ವಿಶ್ವವೆಲ್ಲವೂ ಕಾಣಿಸುವ ಸ್ಥೂಲದಿಂದಲೂ, ಕಾಣಿಸದ ಸೂಕ್ಷ್ಮದಿಂದ ಮಿಳಿತವಾಗಿದೆ. ಕಾಣಿಸುವ ಸ್ಥೂಲವು ಪ್ರಕೃತಿಗೆ ಸಂಬಂಧಿಸಿರುವುದಾಗಿರುವಾಗ, ಕಾಣಿಸದ ಸೂಕ್ಷ್ಮ ಪರಮಾತ್ಮನಿಗೆ (ದೇವರಿಗೆ) ಸಂಬಂಧಿಸಿರುವುದಾಗಿ ಇದೆ.

ದೇವರನ್ನು ತಿಳಿಯಬೇಕೆಂದರೆ ಪ್ರಕೃತಿಯಿಂದ ಶುರು ಮಾಡಬೇಕು. ಚಂಡನ್ನು ತಿಳಿಯಬೇಕೆಂದರೆ ಮೇಲೆ ರಬ್ಬರ್ ಚೀಲದಿಂದ ಶುರು ಮಾಡಿದಂತೆ, ದೇವರನ್ನು ತಿಳಿಯಬೇಕೆಂದರೆ ಪ್ರಕೃತಿ ನಿರ್ಮಿತವಾಗಿ ಸ್ಥೂಲವಾಗಿರುವ ಶರೀರದಿಂದ ಶುರು ಮಾಡಬೇಕಾಗಿದ್ದೆ.

ಈದಿನ ಅತಿವಾದಿಗಳು, ನಾಸ್ತಿಕವಾದಿಗಳು ಕಾಣಿಸುವ ಸ್ಥೂಲವನ್ನು ಮಾತ್ರವೇ ಆಧಾರ ಮಾಡಿಕೊಂಡು, ಅದು ಹೊರತು ಯಾವುದು ಇಲ್ಲವೆಂದು, ಕಾಣಿಸದ ದೇವರು ಇಲ್ಲವೇ ಇಲ್ಲವೆಂದು ಅನ್ನುತ್ತಿದ್ದಾರೆ. ದೇವರು ಸೂಕ್ಷ್ಮವಾಗಿರುವಾಗ ಸ್ಥೂಲವನ್ನು ಮಾತ್ರ ನೋಡುವವರಿಗೆ ದೇವರು ಹೇಗೆ ತಿಳಿಯುತ್ತಾನೆ? ಚಂಡಿನಲ್ಲಿ ತುಂಬಿರುವ ಗಾಳಿ ಕಾಣಿಸದಷ್ಟು ಮಾತ್ರಕ್ಕೆ ಅದನ್ನು ಇಲ್ಲವೆಂದು ಹೇಳುತ್ತೇವಾ? ಹಾಗೆಯೇ ತಮಗೆ ತಿಳಿಯದಷ್ಟು ಮಾತ್ರಕ್ಕೆ ಯಾವುದನ್ನಾದರೂ ಇಲ್ಲವೆಂದು ಹೇಳುತ್ತೇವಾ? ಕೆಲವರು ಅತಿವಾದಿಗಳು ನಾವು ಕಾಣಿಸುವ ಭೌತಿಕವನ್ನೇ ಒಪ್ಪಿಕೊಳ್ಳುತ್ತೇವೆ, ಕಾಣಿಸದ ಅಭೌತಿಕವನ್ನು ಒಪ್ಪಿಕೊಳ್ಳುವುದಿಲ್ಲ ಎನ್ನುವವರೂ ಇದ್ದಾರೆ. ಭೌತಿಕ ಸತ್ಯ, ಅಭೌತಿಕ ಅಸತ್ಯವೆಂದು ಹೇಳುತ್ತಾರೆ. ಹಾಗೆ ಅವರ ಮಾತಿನ ಪ್ರಕಾರ ಅಭೌತಿಕ ಅಸತ್ಯವೆಂಬ ವಾದನೆ ಸರಿಯಾದುದಂದುಕೊಂಡರೆ, ಸುವಾಸನೆ ಅಭೌತಿಕವಾಗಿ ಒಂದುಕಡೆಯಿಂದ ಮತ್ತೊಂದು ಕಡೆಗೆ ಹರಡುತ್ತಿದೆ. ಅಂತಹದರಲ್ಲಿ ಸುವಾಸನೆಯನ್ನು ಅಸತ್ಯವೆನ್ನಬೇಕು. ಬುದ್ಧಿ ಇರುವವನು ಅಭೌತಿಕವಾದ ಸುವಾಸನೆಯನ್ನು ಅಸತ್ಯವೆಂದು ಹೇಳಲಾರನು. ಭೌತಿಕ ಹೊರತು ಅಭೌತಿಕವನ್ನು ಒಪ್ಪಿಕೊಳ್ಳುವುದಿಲ್ಲ ಎನ್ನುವ ಭೌತಿಕವಾದಿಗಳು ತಮ್ಮ ಕೈಗೆ ಟಿ.ವಿ. ರಿಮೋಟ್ ತೆಗೆದುಕೊಂಡು ಆನ್ ಬಟನ್‌ನನ್ನು ರಿಮೋಟ್‌ನಲ್ಲಿ ಒತ್ತಿದರೆ ಹತ್ತು ಅಡಿಗಳ ದೂರದಲ್ಲಿರುವ ಟಿ.ವಿ. ಆನ್ ಆಗುತ್ತದೆ. ಆಗ ರಿಮೋಟ್‌ನಿಂದ ಟಿ.ವಿ. ವರೆಗು ಕಾಣಿಸದ ಅಭೌತಿಕವಾದುದೇನೋ ಪ್ರಯಾಣಿಸಿ ಟಿ.ವಿಯನ್ನು ಆನ್ ಮಾಡಿದಂತೆ ಯಾರಾದರೂ ಒಪ್ಪಿಕೊಳ್ಳುತ್ತಾರೆ. ಹಾಗಿರುವಾಗ ಅದನ್ನು ಮಾಯ ಮಂತ್ರವೆಂದು ಯಾರೂ ಹೇಳಲಾರರು ತಾನೆ! ಕೇವಲ ಚಿಕ್ಕಶಕ್ತಿಯಾದ ಟಿ.ವಿ. ರಿಮೋಟ್ ಕಿರಣವೇ ಕಾಣಿಸದಿರುವಾಗ, ಎಷ್ಟೋ ದೊಡ್ಡ ಶಕ್ತಿಯಾದ ದೇವರು ಹೇಗೆ

ಕಾಣಿಸುತ್ತಾನೆ. ಟಿ.ವಿ. ರಿಮೋಟ್ ಶಕ್ತಿಯನ್ನು ಒಪ್ಪಿಕೊಂಡರೆ, ಯಾರಾದರೂ ದೇವರನ್ನಾದರೂ ಒಪ್ಪಿಕೊಳ್ಳಬೇಕಾಗಿದ್ದೆ. ದೇವರನ್ನು ಒಪ್ಪಿಕೊಳ್ಳದ ಯಾವ ಭೌತಿಕವಾದಿಯಾದರೂ ಟಿ.ವಿ. ರಿಮೋಟ್ ಶಕ್ತಿಯನ್ನು ಸಹ ಒಪ್ಪಿಕೊಳ್ಳಬಾರದು. ಕೆಲವರು ನಾವು ಭೌತಿಕವನ್ನು ಒಪ್ಪಿಕೊಳ್ಳುವುದಿಲ್ಲ, ಅದನ್ನು ಯಾರೂ ನಿರೂಪಿಸಲಾರರೆಂದು ಅನ್ನುತ್ತಿರುತ್ತಾರೆ. ಹೂವಿನಲ್ಲಿನ ಸುವಾಸನೆ ಅಭೌತಿಕ ಅಲ್ಲವಾ? ಟಿ.ವಿ. ರಿಮೋಟ್ ಶಕ್ತಿ ಅಭೌತಿಕ ಅಲ್ಲವಾ?

ಈದಿನ ಬಹಳ ಮತಗಳಲ್ಲಿ ಮತ ಹಿರಿಯರೆಂದುಕೊಳ್ಳುವವರಿಗೆ ಕೂಡಾ ಅಭೌತಿಕದ ಬಗ್ಗೆ ತಿಳಿದಿಲ್ಲ. ಅವರ (ಮತ) ಗ್ರಂಥಗಳಲ್ಲಿ ಸೂಕ್ಷ್ಮವಾದ ಅಭೌತಿಕ ವಿಷಯಗಳನ್ನು ಎಷ್ಟನ್ನೊ ಹೇಳಿರುವಾಗ, ಅವುಗಳನ್ನು ಕೆಲವರು ಬಿಟ್ಟುಬಿಡುತ್ತಿದ್ದಾರೆ. ಕೆಲವರು ಸೂಕ್ಷ್ಮವನ್ನು ಸಹ ಸ್ಥೂಲವಾಗಿ ಭಾವಿಸಿಕೊಂಡು ಹೇಳುತ್ತಿದ್ದಾರೆ. ಕೆಲವರು ಸೂಕ್ಷ್ಮವಿಷಯಗಳನ್ನೇ ಹೇಳಿಕೊಳ್ಳಬಾರದೆಂದು ಅನ್ನುತ್ತಿದ್ದಾರೆ. ಈ ವಿಧವಾಗಿ ಕೆಲವರು ಮತ ಹಿರಿಯರು ಸಹ ಅಭೌತಿಕವಾದಿಗಳಂತೆ ಭೌತಿಕವನ್ನೇ ಸಮರ್ಥಿಸುತ್ತಾ, ಅಭೌತಿಕವನ್ನು ಪೂರ್ತಿಯಾಗಿ ಬಿಡುತ್ತಿದ್ದಾರೆ. ಅಭೌತಿಕವನ್ನು ಬಿಟ್ಟು ಭೌತಿಕ ಜ್ಞಾನವನ್ನು ಮಾತ್ರ ಆಶ್ರಯಿಸಿದವರು, ಗಾಳಿಯಿಲ್ಲದ ಚಂಡನ್ನು ಹಿಡಿದುಕೊಂಡಂತೆ, ಹಾಗೆಯೇ ಜೀವವಿಲ್ಲದ ಶರೀರವನ್ನು ಹಿಡಿದುಕೊಂಡಂತೆ ಆಗುತ್ತಿದೆ. ಕೆಲವರು ಅಭೌತಿಕ ಅಸತ್ಯ, ಭೌತಿಕ ಮಾತ್ರ ಸತ್ಯವೆನ್ನುತ್ತಾ, ತಾವು ಎಷ್ಟೋ ತಿಳುವಳಿಕೆಯುಳ್ಳ ಮೇಧಾವಿಗಳೆಂದು ಮೆರೆಯುತ್ತಾರೆ. ಸೈನ್ಸ್‌ಗೆ ಪೂರ್ತಿ ಅರ್ಥ ತಿಳಿಯದಿದ್ದರೂ ತಾವು ಸೈನ್ಸ್ ಆಧಾರದಿಂದ ವಾದಿಸುತ್ತಿದ್ದೇವೆಂದು, ತಮಗೆ ತಿಳಿದಿರುವವು ಮಾತ್ರವೇ ಸತ್ಯವೆಂದು, ತಮಗೆ ತಿಳಿಯದಿರುವವೆಲ್ಲ ಅಸತ್ಯವೆಂದು ಅನ್ನುತ್ತಿದ್ದಾರೆ. ಅಂತಹವರಿಗೆ ಸೈನ್ಸು ಎರಡು ವಿಧಗಳಾಗಿ ಇದೆಯೆಂದು, ತಮಗೆ ತಿಳಿದ ಸೈನ್ಸ್ ಜನರಲ್ ಸೈನ್ಸೆಂದು (ಸಾಮಾನ್ಯಶಾಸ್ತ್ರ) ತಿಳಿಯದ ಸೂಪರ್ ಸೈನ್ಸ್ ಮತ್ತೊಂದು ಇದೆಯೆಂದು ಅವರಿಗೆ ತಿಳಿದಿಲ್ಲ. ಕಣ್ಣಿಗೆ ಕಾಣಿಸದ ದೇವರು, ಬುದ್ಧಿಗೆ ತಿಳಿಯದ ದೇವರು ಸಾಮಾನ್ಯ ಶಾಸ್ತ್ರಕ್ಕೆ ತಿಳಿಯುವುದಿಲ್ಲವೆಂದು, ಅಸಾಮಾನ್ಯ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಮಾತ್ರ ತಿಳಿಯುತ್ತದೆಂದು ಬಹಳ

ಜನರಿಗೆ ತಿಳಿದಿಲ್ಲ. ಇತ್ತ ಜನರಲ್ ಸೈನ್ಸನ್ನು ಅತ್ತ ಸೂಪರ್ ಸೈನ್ಸನ್ನು ತಿಳಿದವನು ಸುಲಭವಾಗಿ ತನ್ನ ಬುದ್ಧಿಗೆ ದೇವರು ಎಂತಹವನೋ ಗ್ರಹಿಸಿಕೊಳ್ಳುತ್ತಾನೆ.

ನಿಮಗೆ ಚೆನ್ನಾಗಿ ಅರ್ಥ ಆಗಬೇಕೆಂದರೆ ಎರಡು ಕನ್ನಡಿಗಳ ಉದಾಹರಣೆಯನ್ನು ಹೇಳುತ್ತೇನೆ ನೋಡಿರಿ. ಕನ್ನಡಿ ಎಂದರೆ ತನಗೆ ಎದುರುಗಡೆ ಇರುವುದೇನಾದರೂ ಸ್ಪಷ್ಟವಾಗಿ ತೋರಿಸುತ್ತದೆ. ಯಾರಾದರೂ ಕನ್ನಡಿ ಮುಂದೆ ನಿಂತರೆ ಅವನ ಶರೀರದ ಮುಂದಿನ ಭಾಗವನ್ನು ಮುಖವನ್ನು ತೋರಿಸುತ್ತದೆ. ಅಷ್ಟೇಯಾಗಲಿ ಕನ್ನಡಿ ಮುಂದೆ ನಿಂತಮಾತ್ರಕ್ಕೆ ಅವನ ಶರೀರ ಹಿಂದಿನ ಭಾಗದಲ್ಲಿರುವ ಬೆನ್ನನ್ನು, ತಲೆಯನ್ನು ತೋರಿಸಲಿಲ್ಲ ತಾನೆ! ಕನ್ನಡಿ ಮುಂದೆ ನಿಂತು ನೋಡಿದವನು ತನಗೆ ಕಾಣಿಸುವ ಮುಖ ಮಾತ್ರ ಸತ್ಯ, ಕಾಣಿಸದ ಬೆನ್ನು ಅಸತ್ಯವೆನ್ನುತ್ತಾನಾ? ಆಗ ಕಾಣಿಸದೆ ಹೋದರೂ ತನಗೆ ಬೆನ್ನಿನ ಭಾಗ ಇದೆಯೆಂಬ ನಂಬಿಕೆಮಾತ್ರ ಇದೆ. ತನಗೆ ಅಲ್ಲಿಯವರೆಗು ಕಾಣಿಸದ ಹಿಂದಿನ ಭಾಗವಾದ ಬೆನ್ನು ಸಹ ಕಾಣಿಸಬೇಕೆಂದರೆ ಮತ್ತೊಂದು ಕನ್ನಡಿ ಬೇಕು. ಆ ಎರಡನೆ ಕನ್ನಡಿ ಹಿಂಬದಿಯಲ್ಲಿ ಇಡಲಾಗುತ್ತದೆ. ಆದ್ದರಿಂದ ಆ ಎರಡನೇ ಕನ್ನಡಿಯನ್ನು ಮಾತ್ರ ನಿಂತಿರುವವನು ಪ್ರತ್ಯಕ್ಷವಾಗಿ ನೋಡಲಾರನು. ಆದರೆ ತನಗೆ ಕಾಣಿಸದೆ ಹಿಂಬದಿಯಲ್ಲಿರುವ ಕನ್ನಡಿ ಮುಂದಿರುವ ಕನ್ನಡಿಯಲ್ಲಿ ಕಾಣಿಸುತ್ತದೆ. ಹಾಗೆ ಮುಂದಿನ ಕನ್ನಡಿಯಲ್ಲಿ ಕಾಣಿಸುವುದಲ್ಲದೇ ಹಿಂಬದಿ ಯಲ್ಲಿರುವ ಬೆನ್ನು ಭಾಗವೂ ಸಹ ಹಿಂದಿನ ಕನ್ನಡಿಯಲ್ಲಿ ಕಾಣಿಸುವಂತೆ ಮುಂದಿನ ಕನ್ನಡಿಯಲ್ಲಿಯೇ ನೋಡಬಹುದು. ಒಬ್ಬ ಮನುಷ್ಯ ತನಗೆ ಹಿಂಬದಿಯಿರುವ ಕಾಣಿಸದ ಬೆನ್ನಿನ ಭಾಗವನ್ನು ಕಾಣಿಸದೆ ಹಿಂಬದಿಯಲ್ಲಿರುವ ಕನ್ನಡಿಯಲ್ಲಿ ಹೇಗೆ ನೋಡುತ್ತಿದ್ದಾನೋ, ಹಾಗೆಯೇ ಒಬ್ಬ ಮನುಷ್ಯ ತನಗೆ ತಿಳಿಯದ ಸೂಕ್ಷ್ಮವನ್ನು ಸಹ ತಿಳಿಯಬಹುದು. ಎದುರುಗಡೆ ಇರುವ ಕನ್ನಡಿ ಎಲ್ಲರಿಗೂ ತಿಳಿದ ಜನರಲ್ ಸೈನ್ಸ್‌ನಂತಾದ್ದು. ಅದರಲ್ಲಿ ಪ್ರತ್ಯಕ್ಷವಾಗಿರುವ ಸ್ಥೂಲ ವಿಷಯಗಳು ಮಾತ್ರವೇ ತಿಳಿಯುತ್ತದೆ. ಹಿಂಬದಿಯಲ್ಲಿರುವ ಕನ್ನಡಿ ಎಲ್ಲರಿಗೂ ತಿಳಿಯದ ಸೂಪರ್‌ಸೈನ್ಸು ನಂತಾದ್ದು. ಅದರಲ್ಲಿ ಪ್ರತ್ಯಕ್ಷವಾಗಿ ಇಲ್ಲದ ಸೂಕ್ಷ್ಮವಿಷಯಗಳು ಸಹ ತಿಳಿಯುತ್ತವೆ.

ಕೆಲವರು ತಮಗೆ ತಿಳಿದ ಸೈನ್ಸನ್ನು ಆಧಾರ ಮಾಡಿಕೊಂಡು ಮುಂದಿರುವ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡಂತೆ, ಕಾಣಿಸುವ ವಿಷಯಗಳನ್ನು (ಸ್ಥೂಲ ವಿಷಯಗಳನ್ನು) ಮಾತ್ರವೇ ತಿಳಿಯುತ್ತಾ, ತಮಗೆ ಕಾಣಿಸದ ಹಿಂದೆ ತನ್ನ ಶರೀರದ ಬೆನ್ನು ಭಾಗವೇ ಇಲ್ಲವೆನ್ನುವಂತೆ, ತನ್ನ ಶರೀರದಲ್ಲಿ ಭಾಗವಾಗಿರುವ ದೇವರನ್ನು ಸಹ ಹೇಗೆ ನೋಡಬೇಕೋ ತಿಳಿಯದೆ ದೇವರೇ ಇಲ್ಲವೆನ್ನುತ್ತಿದ್ದಾರೆ. ಕಾಣಿಸದ ಶರೀರದ ಬೆನ್ನು ಭಾಗವನ್ನು ಮತ್ತೊಂದು ಕನ್ನಡಿಯಿಂದ ನೋಡಿದಂತೆ, ಕಾಣಿಸದ ಶರೀರ ಅಂತರ್ಭಾಗವಾದ ದೇವರನ್ನು ಮತ್ತೊಂದು ಸೈನ್ಸಿಂದ ನೋಡಬಹುದೆಂದು ತಿಳಿಯಲಾರದೆಹೋಗುತ್ತಿದ್ದಾರೆ. ಮುಂದಿನ ಕನ್ನಡಿ ಮಾತ್ರ ಹೊರೆತು ಹಿಂದಿನ ಕನ್ನಡಿವೊಂದರ ಉಪಯೋಗ ತಿಳಿಯದವನು ಎಷ್ಟು ಮೂರ್ಖನೋ, ಹಾಗೆಯೇ ತನಗೆ ತಿಳಿದ ಒಂದು ಸೈನ್ಸು ಮಾತ್ರ ಹೊರತು ಎರಡನೇ ಸೈನ್ಸಿನ ಉಪಯೋಗ ತಿಳಿಯದವನು ಅಷ್ಟೇ ಮೂರ್ಖನಾಗುತ್ತಾನೆ. ಗಣಿತ, ಖಗೋಳ, ರಸಾಯನ, ಭೌತಿಕ ಎನ್ನುವ ನಾಲ್ಕು ಶಾಸ್ತ್ರಗಳು ಸೇರಿ ಒಂದು ಸೈನ್ಸು ಆಗಿದ್ದು, ಕೇವಲ ಬ್ರಹ್ಮವಿದ್ಯಾ ಶಾಸ್ತ್ರ (ದೊಡ್ಡ ವಿದ್ಯಾಶಾಸ್ತ್ರ) ಎನ್ನುವುದು ಮಾತ್ರ ಎರಡನೆ ಸೈನ್ಸಾಗುತ್ತದೆ. ಹಿಂದಿರುವ ಎರಡನೇ ಕನ್ನಡಿ ಹೇಗೆ ಕಾಣಿಸುವುದಿಲ್ಲವೋ ಹಾಗೆಯೇ ಎರಡನೇ ಸೈನ್ಸಾದ ಸೂಪರ್‌ಸೈನ್ಸು ಸಹ ಯಾರಿಗೂ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲ. ಕಾಣಿಸದ ಎರಡನೆ ಕನ್ನಡಿಯನ್ನು ಎದುರುಗಡೆ ಇರುವ ಮೊದಲಿನ ಕನ್ನಡಿಯಿಂದಲೇ ನೋಡಿ ಅದರಲ್ಲಿ ತನ್ನ ಬೆನ್ನನ್ನು ನೋಡಿದಂತೆ, ನಮಗೆ ತಿಳಿದ ವಿಜ್ಞಾನ (ಸೈನ್ಸ್) ದಿಂದಲೇ ದೈವಜ್ಞಾನವನ್ನು ಸಹ ತಿಳಿಯಬೇಕಾಗಿದೆ. ಜನರಲ್ ಸೈನ್ಸಿಗೆ ಸಂಬಂಧಿಸಿದ ಭೌತಿಕಶಾಸ್ತ್ರದಲ್ಲಿಯೇ ಸೂಪರ್ ಸೈನ್ಸ್‌ನ್ನು ಸಹ ನೋಡಲ್ಪಟ್ಟು, ಅದರ ಮೂಲಕ ಯಾರಿಗೂ ತಿಳಿಯದ ದೇವರನ್ನು ತಿಳಿಯಬಹುದು. ಮುಂದೆ ಕನ್ನಡಿ ಇಲ್ಲದಿದ್ದರೆ ಹಿಂಬದಿಯಲ್ಲಿರುವ ಎರಡನೇ ಕನ್ನಡಿ ತಿಳಿಯುವುದಿಲ್ಲ. ಎರಡನೇ ಕನ್ನಡಿ ತಿಳಿಯದೆಹೋದರೆ ನಿನ್ನ ಬೆನ್ನು ನಿನಗೆ ಎಂದಿಗೂ ತಿಳಿಯುವುದಿಲ್ಲ. ಹಾಗೆಯೇ ಭೌತಿಕಶಾಸ್ತ್ರವೆಂಬ ಸೈನ್ಸ್ ತಿಳಿಯದೆಹೋದರೆ ಅದಕ್ಕೆ ಅತೀತವಾದ ಸೂಪರ್‌ಸೈನ್ಸ್ ತಿಳಿಯುವುದಿಲ್ಲ. ಸೂಪರ್ ಸೈನ್ಸ್

ತಿಳಿಯದೆಹೋದರೆ ನಿನ್ನ ದೇವರು ನಿನಗೆ ಎಂದಿಗೂ ತಿಳಿಯುವುದಿಲ್ಲ. ನಿನ್ನ ಹಿಂದೆ ಶರೀರವಿದ್ದರೇನೆ ನಿನ್ನ ಮುಂದೆ ಶರೀರವಿದ್ದಂತೆ, ನಿನ್ನ ಶರೀರದಲ್ಲಿ ಕಾಣಿಸದ ದೇವರಿದ್ದರೇನೆ ಕಾಣಿಸುವ ನೀನಿದ್ದೀಯಾಯೆಂದು ಮರೆಯಬಾರದು.

ಒಂದು ವಿಷಯವನ್ನು ಬಹಳ ವಿವರವಾಗಿ ತಿಳಿಸಿದರೂ, ಶಾಸ್ತ್ರಬದ್ಧ ವಾಗಿ ಆಧಾರಗಳು ತೋರಿಸಿ ವಿವರಿಸಿದರೂ, ಕೆಲವರಿಗದು ಪೂರ್ತಿ ಅವಗಾಹನೆ ಆಗಬಹುದು ಅಥವಾ ಆಗದೆಹೋಗಬಹುದು. ಹೇಳಿರುವುದನ್ನು ಕೇಳಿ ಮೌನವಾಗಿ ಆಲೋಚಿಸುತ್ತಾ ಎದುರು ಮಾತನಾಡದ ಮಿತವಾದಿಗಳು ಕೆಲವರು ಇದ್ದಾರೆ. ಕೆಲವರು ಅರ್ಥವಾದರೂ ತಮ್ಮನ್ನು ದೊಡ್ಡದಾಗಿ ಪ್ರಕಟಿಸಿಕೊಳ್ಳುವುದಕ್ಕೆ ಮತ್ತೊಬ್ಬರು ಹೇಳಿರುವುದನ್ನು ಒಪ್ಪಿಕೊಳ್ಳದೆ ಮಾರ್ಗ ತಪ್ಪಿ ವಿಮರ್ಶಿಸುತ್ತಿರುತ್ತಾರೆ. ಅಂತಹವರನ್ನು ಅತಿವಾದಿಗಳು ಅನ್ನುತ್ತಿದ್ದೇವೆ. ಹೇಳಲಾದ ಸಮಾಧಾನ ಸರಿಯಾದುದಾದರೂ, ಮೊಂಡುತನದಿಂದ ಅಲ್ಲವೆಂದು ವಾದಿಸುವವರನ್ನು ಅತಿವಾದಿಗಳೆನ್ನುತ್ತಿದ್ದೇವೆ ಅಲ್ಲವೆ! ಈ ಅತಿವಾದವೇ ಹೆಚ್ಚಾಗಿ ತೀವ್ರವಾದವಾಗಿ, ನಂತರ ಉಗ್ರವಾದವಾಗಿ ಬದಲಾಗುತ್ತದೆ. ಹೇಗೆಂದರೆ ಒಂದು ವಿಷಯವನ್ನು ಕೇಳಿ ಅಥವಾ ಓದಿ ಅಥವಾ ತಿಳಿದುಕೊಂಡು ಅದನ್ನು ಅಡ್ಡವಾಗಿ ಅಲ್ಲವೆನ್ನುವವರು ಅತಿವಾದಿಗಳಾದರೆ, ಅಂತಹ ಅತಿವಾದಿಗಳಿಂದ ಪ್ರೇರೇಪಿ ಸಲ್ಪಟ್ಟು ವಿಷಯವನ್ನು ಹೇಳಿದವರ ಮೇಲೆ ದಾಳಿ ಮಾಡಿ ಹಿಂಸಿಸುವವರನ್ನು ತೀವ್ರವಾದಿಗಳು ಎನ್ನಬಹುದು. ತೀವ್ರವಾದಿಗಳು ಅತಿವಾದಿಗಳಿಂದ ರೊಚ್ಚಿಗೆಬ್ಬಿಸಲ್ಪಟ್ಟವರಾಗಿರುತ್ತಾರೆ ಅಥವಾ ಪ್ರೇರೇಪಿಸಲ್ಪಟ್ಟವ ರಾಗಿರುತ್ತಾರೆ. ಅಷ್ಟೇಯಾಗಲಿ ಹೇಳಲಾದ ವಿಷಯ ತಪ್ಪಾ, ಒಪ್ಪಾ, ಶಾಸ್ತ್ರಬದ್ಧವಾದುದಾ ಅಲ್ಲವಾ, ಸತ್ಯವಾ ಅಸತ್ಯವಾ ಎಂದು ಅವರಿಗೆ ಸ್ವಲ್ಪವೂ ತಿಳಿದಿಲ್ಲ. ಇಂತಹ ವಿಚಕ್ಷಣ ಇಲ್ಲದ ತೀವ್ರವಾದಿಗಳಿಂದ ಶಿಕ್ಷಣೆ ಪಡೆದವರೇ ಉಗ್ರವಾದಿಗಳು. ಉಗ್ರವಾದಿಗಳಿಗೆ ಸಾಯುವುದು ಅಥವಾ ಸಾಯಿಸುವುದು ಹೊರತು ವಿಷಯವೇನೆಂದಾಗಲಿ, ತಾವು ಮಾಡುತ್ತಿರುವ ಕೆಲಸ ಸರಿಯಾದುದಾ ಅಲ್ಲವಾ ಎಂದು ಯೋಚಿಸುವ ಸ್ಥಿತಿಯಲ್ಲಿರುವುದಿಲ್ಲ. ಯಾರೋ ಹೇಳಿದರೆ ಅವನ

ಮಾತು ಕೇಳಿ ಹಿಂಸೆಗೆ ಸಿದ್ಧವಾಗುವುದು ಹೊರತು ಬೇರೆ ವಿಧಾನವೇ ಅವರಲ್ಲಿ ಇರುವುದಿಲ್ಲ.

ತಾವು ದೊಡ್ಡವರು ಎನಿಸಿಕೊಳ್ಳುವುದಕ್ಕೋ, ತಮ್ಮ ಮತ ದೊಡ್ಡದೆಂದು ಎನಿಸಿಕೊಳ್ಳುವುದಕ್ಕೋ, ಸತ್ಯವನ್ನು ಸಹ ಒಪ್ಪಿಕೊಳ್ಳದವನು ಅತಿವಾದಿ. ಅಂತಹ ಅತಿವಾದಿ ತೀವ್ರವಾದಿಗಳನ್ನು ಉಗ್ರವಾದಿಗಳನ್ನು ತಯಾರು ಮಾಡುತ್ತಿದ್ದಾನೆ. ಈದಿನ ತೀವ್ರವಾದ, ಉಗ್ರವಾದ ಭೂಮಿಮೇಲೆ ಇದೆ ಎಂದರೆ, ಅದು ಅತಿವಾದದಿಂದ ಹುಟ್ಟಿಕೊಂಡು ಬರುತ್ತಿದೆಯೆಂದು ತಿಳಿಯಬೇಕು. ಈದಿನ ಉಗ್ರವಾದವನ್ನು ಅಡಗಿಸದೆ ಅನೇಕ ದೇಶಗಳಲ್ಲಿನ ಸರ್ಕಾರಗಳು ಸಹ ಜುಟ್ಟು ಕಿತ್ತುಕೊಳ್ಳುತ್ತಿವೆ. ಉಗ್ರವಾದದ ಜನ್ಮ ಸ್ಥಾನವನ್ನು ತಿಳಿಯದವರೆಗು ಯಾವ ಪ್ರಭುತ್ವವೂ ಸಹ ಉಗ್ರವಾದವನ್ನು ಅಡಗಿಸಲಿಲ್ಲ. ಪೋಲೀಸರನ್ನೂ, ಸೈನ್ಯವನ್ನೂ, ಧನವನ್ನೂ ಉಪಯೋಗಿಸಿದರೂ ಉಗ್ರವಾದ ಬೆಳೆಯುತ್ತಾ ಹೋಗುತ್ತಿದೆಯಾಗಲಿ ಇಳಿಮುಖವಾಗಲ್ಲಿಲ್ಲವೆಂದು ಎಲ್ಲರಿಗೂ ತಿಳಿದಿದೆ. ಯಾರಾದರೂ ಯಾವ ದೇಶದವರಾದರೂ ಉಗ್ರವಾದವನ್ನು ಇಲ್ಲದಂತೆ ಮಾಡಬೇಕೆಂದರೆ ಸ್ವಾರ್ಥ ಪರರಾದ ಅತಿವಾದಿಗಳಿಂದ ತೀವ್ರವಾದಗಳನ್ನೂ, ಉಗ್ರವಾದಿಗಳನ್ನು ಬೇರೆ ಮಾಡಬೇಕಾದ ಅವಶ್ಯಕತೆ ಇದೆ. ತೀವ್ರವಾದಿಗಳಾಗಲಿ, ಉಗ್ರವಾದಿಗಳಾಗಲಿ ಇತರರ ಪ್ರೇರಣೆಯಿಂದ ತಯಾರಾಗುತ್ತಿದ್ದಾರೆ ಹೊರತು ಸ್ವತಃವಾಗಿ ಅವರ ಭಾವನೆಗಳಿಂದಲ್ಲ. ಆದ್ದರಿಂದ ಯಾರಿಂದ ಪ್ರೇರೇಪಿಸಲ್ಪಡುತ್ತಿದ್ದಾರೋ ಅವರನ್ನು ಇಲ್ಲದಂತೆ ಮಾಡಬೇಕು. ಯಾವ ಭಾವವೂ ಇಲ್ಲದ ಸಾಮಾನ್ಯ ಮನುಷ್ಯ ಅತಿವಾದಿ ಹೇಳುವುದರಿಂದಾಗಲಿ, ಆತನು ಕೊಡುವ ಧನದಿಂದಾಗಲಿ, ಯಾವುದೋ ಒಂದು ಬಲಹೀನತೆಯಿಂದಾಗಲಿ ಇತರರ ಮಾತು ಕೇಳಿ ಅವರು ಪ್ರೇರೇಪಿಸಿದಂತೆ ತನಗೆ ಯಾವ ಶತ್ರುತ್ವವಾಗಲಿ, ಪರಿಚಯವಾಗಲಿ ಇಲ್ಲದ ಮನುಷ್ಯರನ್ನು ಘೋರವಾಗಿ ಸಾಯಿಸುತ್ತಿದ್ದಾನೆ. ಉದಾಹರಣೆಗೆ ಒಸಾಮಾ ಬಿನ್ ಲಾಡೆನ್ ಎಂಬ ವ್ಯಕ್ತಿ ಅತಿವಾದಿಯಾಗಿದ್ದು ಆತನು ಎಷ್ಟೋ ಜನರನ್ನು ಪ್ರೇರೇಪಿಸಿ ಉಗ್ರವಾದಿಗಳನ್ನಾಗಿ ತಯಾರು ಮಾಡಿದ್ದಾನೆ. ಹಾಗೆ ತಯಾರಾದ

ಉಗ್ರವಾದಿಗಳು ಕೆಲವರು ಅಮೇರಿಕಾ ವಿಮಾನಗಳನ್ನು ಹೈಜಾಕ್ ಮಾಡಿ ತಮಗೆ ಸ್ವಲ್ಪವೂ ಪರಿಚಯವಾಗಲಿ, ಶತ್ರುತ್ವವಾಗಲಿ ಇಲ್ಲದವರನ್ನು ಸಾಯಿಸುವುದೂ, ಅವರು ಸತ್ತುಹೋಗುವುದು ನಡೆದಿದೆ. ಆ ಸಂಘಟನೆಯಲ್ಲಿ ಸಾವಿರಾರುಜನರು ಸತ್ತುಹೋಗುವುದೂ, ಕೆಲವು ಕೋಟಿಗಳ ಆಸ್ತಿ ನಷ್ಟ ಆಗಿದೆ. ನಿಧಾನವಾಗಿ ಆಲೋಚಿಸಿದರೆ ಉಗ್ರವಾದಿಗಳಾಗಿ ಬದಲಾಗಿ ಇತರರನ್ನು ಸಾಯಿಸಿದವರಿಗೆ ಯಾವ ವಿಧವಾಗಿ ಲಾಭವಿಲ್ಲ. ಒಬ್ಬ ಅತಿವಾದಿ ಕೈಯಲ್ಲಿ ಕೀಲುಗೊಂಬೆಗಳಂತೆ ಬದಲಾದವರೇ ತೀವ್ರವಾದಿಗಳು, ಉಗ್ರವಾದಿಗಳು. ಅವರು ಕಲಿಸಿದ ಅಸತ್ಯ ಮಾತುಗಳಿಂದ ಏನೊ ತಮಗೆ ಬರುತ್ತದೆಂದು ತಿಳಿದು ಅವರು ಆ ಕೆಲಸಕ್ಕೆ ಭಾಗಿಗಳಾಗಿ, ತಮಗೆ ತಿಳಿದು ಪ್ರಾಣಗಳನ್ನು ಕಳೆದುಕೊಳ್ಳುವುದು ನಡೆದಿದೆ. ಸತ್ತುಹೋದ ನಂತರ ನೇರವಾಗಿ ದೇವರ ಹತ್ತಿರಕ್ಕೆ ಹೋಗುತ್ತಾರೆಂದೋ, ಯಾವಾಗಲೂ ಸ್ವರ್ಗದಲ್ಲಿ ಇರುತ್ತಾರೆಂದೋ ಅತಿವಾದಿಗಳು ಹೇಳುವುದರಿಂದ ಆ ಮಾತುಗಳು ಸತ್ಯವಾ ಅಲ್ಲವಾ ಎಂದು ಸ್ವಲ್ಪವೂ ಆಲೋಚಿಸದೆ, ಈ ಮಾತುಗಳು ಶಾಸ್ತ್ರಬದ್ಧವಾದವುಗಳಾ ಅಲ್ಲವಾ ಎಂದು ಸ್ವಲ್ಪವಾದರೂ ನೋಡದೆ, ಕುರುಡರು ಪ್ರವರ್ತಿಸಿದಂತೆ ಪ್ರವರ್ತಿಸುತ್ತಾ, ಉಗ್ರವಾದಿಗಳಾಗಿ ತಯಾರಾಗಿ ಹಿಂಸೆಗೆ ಭಾಗಿಗಳಾಗಿದ್ದಾರೆ.

ಮುಂಬಯಿ (ಬೊಂಬಾಯಿ)ನಲ್ಲಿ ತಾಜ್‌ಹೋಟೆಲ್‌ನ ಮೇಲೆ ಉಗ್ರವಾದಿಗಳು ದಾಳಿ ಮಾಡಿದ ವಿಷಯ ಎಲ್ಲರಿಗೂ ತಿಳಿದಿರುವುದೇ. ಪಾಕಿಸ್ಥಾನದಲ್ಲಿ ಎಲ್ಲಿಯೊ ಯಾರೋ ಪ್ರೇರೇಪಿಸಿ ಕಳಿಸಿದಾಗ ಬಂದಿರುವವರು, ಇಂಡಿಯಾದಲ್ಲಿ ತಮಗೆ ಸ್ವಲ್ಪವೂ ಸಂಬಂಧವಿಲ್ಲದ ವ್ಯಕ್ತಿಗಳನ್ನೂ, ತಮ್ಮಂತೆ ಬದುಕುತ್ತಿರುವ ಮನುಷ್ಯರನ್ನೂ ಸಾಯಿಸುವುದು ನಡೆದಿದೆ. ಆ ಹೊರಾಟದಲ್ಲಿ ಒಬ್ಬ ಉಗ್ರವಾದಿ ಪಾಕಿಸ್ಥಾನ್‌ನಲ್ಲಿರುವ ಅತಿವಾದಿಯೊಂದಿಗೆ ಫೋನ್‌ನಲ್ಲಿ ಮಾತನಾಡುತ್ತಾ ಹೀಗೆ ಒಂದುಮಾತು ಅಂದಿದ್ದಾನೆ. "ನನಗೆ ಇಲ್ಲಿ ಪೋಲೀಸರು ಗುಂಡು ಹಾರಿಸಿದ ದಾಳಿಯಲ್ಲಿ ಗುಂಡು ತಗುಲಿದೆ, ನಾನು ಸತ್ತುಹೋಗುತ್ತಿದ್ದೇನೆ. ನಾನು ಸ್ವರ್ಗಕ್ಕೆ ಹೋಗಬೇಕೆಂದು ಅಲ್ಲಾಹ್‌ನನ್ನು (ದೇವರನ್ನು) ಪ್ರಾರ್ಥಿಸು" ಎಂದು ಪ್ರಾಣಗಳು ಬಿಡುವುದು ನಡೆದಿದೆ. ನೀನು ಇತರರನ್ನು ಸಾಯಿಸುತ್ತಾ

ಮರಣಿಸಿದರೆ ಸ್ವರ್ಗಕ್ಕೆ ಹೋಗುತ್ತೀಯಾ ಎಂದು ಹೇಳಿದ ಮಾತು ನಿಜವೆಂದು ನಂಬಿ, ನಂತರ ಬರುವ ಸ್ವರ್ಗಕ್ಕೋಸ್ಕರ ಪ್ರಸ್ತುತವಿರುವ ತನ್ನ ಪ್ರಾಣವನ್ನು ಕಳೆದುಕೊಂಡಿದ್ದಾನೆ. ಒಂದುವೇಳೆ ಆ ಮಾತು ಅಸತ್ಯವಾದರೂ, ದೇವರು ಆ ವಿಧವಾಗಿ ತನ್ನ ಗ್ರಂಥಗಳಲ್ಲಿ ಹೇಳದಿದ್ದರೂ, ಉಗ್ರವಾದಿಯಾದವನು ಅತಿವಾದಿ ಕೈಯಲ್ಲಿ ಮೋಸಹೋದಂತೆ ಅಲ್ಲವೆ! ದೇವರಮೇಲೆ ವಿಶ್ವಾಸವಿರುವ ಮನುಷ್ಯರನ್ನು ದೇವರು ಹೀಗೆ ಹೇಳಿದ್ದಾನೆಂದು ನಂಬಿಸಿ ಅತಿವಾದಿಗಳು ಮೋಸ ಮಾಡುತ್ತಿದ್ದಾರೆ. ತಮ್ಮಲ್ಲಿರುವ ಮತಾಭಿಮಾನದಿಂದಾಗಲಿ, ದೇವರ ಮೇಲಿರುವ ವಿಶ್ವಾಸದಿಂದಾಗಲಿ, ಇತರರು ಹೇಳಿದ ಮಾತುಗಳನ್ನು ಕೆಲವರು ಸುಲಭವಾಗಿ ನಂಬುವುದರಿಂದ, ಯಾವ ಸಂಬಂಧ ಇಲ್ಲದವನು ಅನವಶ್ಯವಾಗಿ ತೀವ್ರವಾದಿಯಾಗಲಿ, ಉಗ್ರವಾದಿಯಾಗಲಿ ಬದಲಾಗುತ್ತಿದ್ದಾನೆ. ನಿಜಕ್ಕೆ ಉಗ್ರವಾದಿಗಳಾಗಿ ಬದಲಾದವರೆಲ್ಲರೂ ಅತಿವಾದಿಗಳ ಕೈಯಲ್ಲಿ ಮೋಸಹೋದವರೇಯೆಂದು, ಕೇವಲ ಯಾವ ಉದ್ದೇಶವಿಲ್ಲದ ಸಾಮಾನ್ಯ ಅಮಾಯಕರೇಯೆಂದು, ಇತರೊಂದಿಗೆ ಯಾವ ಶತ್ರುತ್ವ ಇಲ್ಲದ ವ್ಯಕ್ತಿಗಳೆಂದು, ಇತರರನ್ನು ಸಾಯಿಸುವಾಗ ಒಂದುಕಡೆ ಮನಸ್ಸು ಒಪ್ಪಿಕೊಳ್ಳದೆ ಹೋದರೂ, ತನಗೆ ಇಷ್ಟ ಇಲ್ಲದಿದ್ದರೂ ಒಪ್ಪಿಕೊಂಡ ಕೆಲಸವನ್ನು ಮಾಡಬೇಕಾಗಿಬರುತ್ತಿದೆ.

ಈ ಮಧ್ಯಕಾಲದಲ್ಲಿ ಮೂರು ತಿಂಗಳ ಕೆಳಗೆ ಹೈದರಾಬಾದ್‌ನಲ್ಲಿ ದಿಲ್‌ಸುಖ್‌ನಗರ್ ಬಸ್ಟಾಂಡು ಎದುರುಗಡೆ ನಡೆದ ಬಾಂಬು ಸ್ಫೋಟದಲ್ಲಿ ಕೆಲವರು ಸತ್ತುಹೋಗುವುದು ಎಷ್ಟೋ ಜನ ತೀವ್ರವಾಗಿ ಗಾಯಗೊಂಡಿರುವುದು ನಡೆದಿದೆ. ಅಲ್ಲಿ ಮರಣಿಸಿದವರಿಗಾಗಲಿ, ಗಾಯಗೊಂಡವರಿಗಾಗಲಿ ಸ್ವಲ್ಪವೂ ಶತ್ರುತ್ವವಿಲ್ಲದ ಇಬ್ಬರು ವ್ಯಕ್ತಿಗಳು ಎರಡು ಸೈಕಲ್‌ಗಳಲ್ಲಿ ಬಾಂಬುಗಳು ಅಳವಡಿಸಿ ಹೋಗುವುದು ನಡೆದಿದೆ. ಅಲ್ಲಿ ತಂದಿಟ್ಟವನಿಗೆ ಯಾರಮೇಲೆ ಯಾವ ದ್ವೇಷವಾಗಲಿ, ಕಕ್ಷೆಯಾಗಲಿ ಇಲ್ಲ. ಒಂದುಕಡೆ ಘೋರ ನಡೆದುಹೋಗುತ್ತದೆಂದು ತಿಳಿದು ಅವರಿಗೆ ಸ್ವಲ್ಪ ದುಃಖವಾಗಿದ್ದರೂ, ಒಂದುಕಡೆ ಒಳಗೆ ಅಯಿಷ್ಟತೆ ಇದ್ದರೂ, ವಿಧಿಯಿಲ್ಲದ ಪರಿಸ್ಥಿತಿಯಲ್ಲಿ ಅಲ್ಲಿ ಬಾಂಬು ಇಡುವುದು ನಡೆದಿರುತ್ತದೆ. ಹಿಂದೂಗಳನ್ನು ಸಾಯಿಸಬೇಕೆಂದು ಬಾಂಬು ಇಟ್ಟರೂ, ಬಾಂಬು ಇಟ್ಟವನು

ಮುಸ್ಲಿಮ್ ಆದರೂ, ಅವನು ಸಹ ಮನುಷ್ಯನೇ ಆಗಿರುವುದರಿಂದ ಒಳಗೆ ಏನೋ ಒಂದು ಅಯಿಷ್ಟತೆ ಇದ್ದೇ ಇರುತ್ತದೆ. ಆ ಕಾರ್ಯದಲ್ಲಿ ಮುಖ್ಯಪಾತ್ರ ಎಲ್ಲವೂ ಕಳುಹಿಸಿದವನದೇ ಆದರೆ, ಮಾಡಿದವನದು ಅಲ್ಲವೆಂದು ತಿಳುವಳಿ ಕೆಯುಳ್ಳವರು ಗ್ರಹಿಸಬಲ್ಲರು. ಅಂತಹದರಲ್ಲಿ ಉಗ್ರವಾದವನ್ನು ಇಲ್ಲದಂತೆ ಮಾಡಬೇಕೆಂದರೆ, ಉಗ್ರವಾದಿಗಳನ್ನು ಹಿಡಿದುಕೊಂಡು ಶಿಕ್ಷೆಗಳು ಹಾಕಿದಷ್ಟು ಮಾತ್ರಕ್ಕೆ ಸರಿಹೋಗುವುದಿಲ್ಲ. ಎಷ್ಟು ಉರಿಶಿಕ್ಷೆಗಳು ಹಾಕಿದರೂ ಉಗ್ರವಾದವು ಹೆಚ್ಚಾಗುತ್ತಲೇ ಇರುತ್ತದೆ ಹೊರತು ಕಡಿಮೆಯಾಗುವುದಿಲ್ಲ. ಒಂದು ವೃಕ್ಷದ ಕೊಂಬೆಗಳನ್ನು ಎಷ್ಟನ್ನು ಕತ್ತರಿಸಿದರು ಹೊಸದಾಗಿ ಚಿಗುರೊಡೆದು ಕೊಂಬೆಗಳು ಬೆಳೆಯುತ್ತಿರುತ್ತವೆ. ವೃಕ್ಷದ ಬೇರುಗಳನ್ನು ಇಲ್ಲದಂತೆ ಮಾಡಿದರೆ ಪುನಃ ಕೊಂಬೆಗಳು ಹುಟ್ಟುವುದಿಲ್ಲ ಅಲ್ಲವೆ! ಹಾಗೆಯೇ ತೀವ್ರವಾದ ಉಗ್ರವಾದ ಎನ್ನುವವು ಚಿಕ್ಕ ದೊಡ್ಡ ಕೊಂಬೆಗಳಾಗಿ ಇರುವಾಗ, ಅತಿವಾದವೆನ್ನುವುದು ವೃಕ್ಷವೊಂದರ ಬೇರುಗಳಂತೆ ಇದೆ. ಬೇರಿನಂತಿರುವ ಅತಿವಾದವನ್ನು ಇಲ್ಲದಂತೆ ಮಾಡಿದರೆ, ತೀವ್ರವಾದ ಉಗ್ರವಾದ ಅದಷ್ಟಕ್ಕದು ಅಣಗಿಹೋಗುತ್ತದೆ. ಈ ಸೂತ್ರ ತಿಳಿಯದವರೆಗು ಉಗ್ರವಾದವನ್ನು ಇಲ್ಲದಂತೆ ಮಾಡಲಾರೆವು.

ಅತಿವಾದವನ್ನು ಇಲ್ಲದಂತೆ ಮಾಡುವುದಕ್ಕೆ ಅದು ಎಲ್ಲಿದೆಯೋ ಹುಡುಕಬೇಕು. ಅತಿವಾದವನ್ನು ಹೆಚ್ಚಾಗಿ ಹುಡುಕಬೇಕಾದ ಕೆಲಸವಿಲ್ಲದೆಯೇ ತಿಳಿದುಹೋಗುತ್ತದೆ. ಮುಂದೆ ಕಾಣಿಸುವ ಮನುಷ್ಯರನ್ನು ಪ್ರೇರೇಪಿಸಿ ಕಳಿಸುವವನು ತಾನು ಕಾಣಿಸದೆ ಹಿಂದಿದ್ದರೂ ಕೊನೆಗೆ ಸುಲಭವಾಗಿ ಅವನನ್ನು ತಿಳಿಯಬಹುದು. ಅದಕ್ಕೆ ಉದಾಹರಣೆಯಾಗಿ ಒಂದು ನಡೆದ ವಿಷಯವನ್ನು ವಿವರಿಸಿಕೊಳ್ಳೋಣ. ನಾವು ಇಲ್ಲಿಯವರೆಗೂ 52 ಗ್ರಂಥಗಳನ್ನು ಬರೆದಿದ್ದೇವೆ. ಎಲ್ಲವೂ ಒಂದು ಆಧ್ಯಾತ್ಮಿಕವನ್ನು ಹೊರತು ಮತ್ತ್ಯಾವ ವಿಷಯವನ್ನು ಕುರಿತು ಇಲ್ಲ. ಅದರಲ್ಲಿ ಮುಖ್ಯವಾದುದು ಭಗವದ್ಗೀತೆ. ಸುಮಾರು ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಕೇರಳ ರಾಷ್ಟ್ರದಲ್ಲಿ ಹುಟ್ಟಿದ ಒಬ್ಬ ಬ್ರಾಹ್ಮಣನು ಆದಿ ಶಂಕರಾಚಾರ್ಯ ಎಂಬ ಹೆಸರುಹೊಂದಿ, ಹಿಂದೂ ಮತದಲ್ಲಿ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ನಂತರ ಸ್ವಲ್ಪ ಕಾಲಕ್ಕೆ ತಮಿಳನಾಡಿನಲ್ಲಿ

ಹುಟ್ಟಿದ ರಾಮಾನುಜಾಚಾರ್ಯರು ವಿಶಿಷ್ಠಾದ್ವೈತವೆಂಬ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾನೆ. ಆ ನಂತರ ಕರ್ನಾಟಕದಲ್ಲಿ ಹುಟ್ಟಿದ ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾನೆ. ಪ್ರಸ್ತುತ ಕಾಲದಲ್ಲಿ ಆಂಧ್ರಪ್ರದೇಶದಲ್ಲಿ ಹುಟ್ಟಿದ ನಾವು **ತ್ರೈತ ಸಿದ್ಧಾಂತವನ್ನು** ಪ್ರತಿಪಾದಿಸಿದ್ದೇವೆ. ನಾವು ಹೇಳಿದ ತ್ರೈತಸಿದ್ಧಾಂತವನ್ನನುಸರಿಸಿ **ತ್ರೈತಸಿದ್ಧಾಂತ ಭಗವದ್ಗೀತೆಯನ್ನು** ಬರೆದು ಆಂಧ್ರರಾಷ್ಟವೆಲ್ಲವೂ ಮನೆಮನೆ ತಿರುಗಿ ಭಗವದ್ಗೀತೆಯನ್ನು ಪ್ರಚಾರ ಮಾಡುತ್ತಿದ್ದೇವೆ. ಇಲ್ಲಿಯವರೆಗು ಭಗವದ್ಗೀತೆಯನ್ನು ಪ್ರಚಾರ ಮಾಡಿದವರು ನಮ್ಮೊಂದಿಗೆ ಸಮಾನರು ಚರಿತ್ರೆ ಎಲ್ಲಾ ಹುಡಿಕಿದರೂ ಕಾಣಿಸುವುದಿಲ್ಲ. ಅಂತಹ ದೊಡ್ಡ ಕಾರ್ಯವನ್ನು ನಾವು ಮಾಡುತ್ತಿದ್ದರೆ, ಹಿಂದೂಮತದಲ್ಲಿಯೇ ಕೆಲವರು ಅಸೂಯಪರರು ನಮ್ಮಮೇಲೆ ದ್ವೇಷ ಬೆಳೆಸಿಕೊಂಡು, ಅವರ ವಾದನೆಯನ್ನು ಅವರ ಇರುವಿಕೆಯನ್ನು ಕಾಪಾಡಿಕೊಳ್ಳುವುದಕ್ಕೆ ಅತಿವಾದಿಗಳಾಗಿ, ನಮ್ಮ ಮೇಲೆ ಕೆಟ್ಟದಾಗಿ ಬೋಧಿಸಿ ತ್ರೈತ ಎಂದರೆ ಕ್ರೈಸ್ತರದೆಂದು, ಹಿಂದೂಗಳ ಮುಸುಗಿನಲ್ಲಿ ಕ್ರೈಸ್ತವನ್ನು ಬೋಧಿಸುತ್ತಿದ್ದಾರೆಂದು, ಹಿಂದೂ ಧರ್ಮರಕ್ಷಣೆಯಲ್ಲಿ ಕೆಲಸ ಮಾಡುವವರನ್ನು ಪ್ರೇರೆಪಿಸುವುದು ನಡೆದಿದೆ. ನಮ್ಮ ಮೇಲೆ ಅಸೂಯೆಹೊಂದಿದ ಸ್ವಾಮೀಜಿಗಳು ಅತಿವಾದಿಗಳಾಗಿ ಪ್ರೇರೇಪಿಸಿದಾಗ, ನಮ್ಮ ಮೇಲೆ ದಾಳಿಗೆ ಬಂದವರನ್ನು ಏನನ್ನಬೇಕು? ತೀವ್ರವಾದಿಗಳೆಂದು ಹೆಸರಿಡಬೇಕು. ಹಿಂದೂ ಸಮಾಜದಲ್ಲಿ ಸಿದ್ಧಾಂತಕರ್ತನಾಗಿರುವ ನಮ್ಮ ಮೇಲೆಯೇ, ದಾಳಿಗೆ ಪ್ರಯತ್ನ ಮಾಡಿದವರು ಹಿಂದೂ ಮತವನ್ನು ರಕ್ಷಿಸುತ್ತೇವೆಂದು ಹೇಳಿಕೊಳ್ಳುವವರೇ. ಅನೇಕ ಕಡೆ ಹಿಂದೂಗಳ ರಕ್ಷಕರೆಂದುಕೊಳ್ಳುವವರ ಹತ್ತಿರವೇ ನಮಗೆ ತೊಂದರೆಗಳು ಬಂದಿವೆ. ಆದರೆ ಜಿಜ್ಞಾಸಿಗಳಾದ ಕೆಲವರು ಹಿಂದೂಗಳು ನಮ್ಮ ಜ್ಞಾನವನ್ನು ತಿಳಿದುಕೊಂಡು ಇದು ನಿಜವಾದ ಬೋಧನೆ, ನಿಜವಾದ ಜ್ಞಾನವೆಂದು ಸಂತೋಷಪಡುವುದನ್ನು ನೋಡಿ, ಎಲ್ಲಾ ಆತಂಕಗಳನ್ನು ಅತಿಕ್ರಮಿಸಿ ಬಂದಿದ್ದೇವೆ. ಅತಿವಾದಿಗಳು ನಮ್ಮ ಮೇಲೆ ಹೇಗೆ ಪ್ರೇರೇಪಿಸುತ್ತಿದ್ದಾರೋ ಎಲ್ಲರಿಗೂ ತಿಳಿಸಿದ್ದೇವೆ. ಅದರಿಂದ ನಮ್ಮ ಮೇಲೆ ತೀವ್ರವಾದ ಕಡಿಮೆಯಾಗಿ ನಾವು ಹೇಳುವುದೇ ಅಸಲಾದ ಸತ್ಯವೆಂದು ಎಲ್ಲರೂ ತಿಳಿದುಕೊಳ್ಳುತ್ತಿದ್ದಾರೆ.

ಅತಿವಾದಿಗಳಿಂದ ಪ್ರೇರೇಪಿಸಲ್ಪಟ್ಟವರಿಂದ ಗುಂತಕಲ್ಲಿನಲ್ಲಿ ಸರಸ್ವತಿ ವಿದ್ಯಾಮಂದಿರದಲ್ಲಿ, ಮಹಾನಂದಿಯಲ್ಲಿಯೂ, ಹೈದರಾಬಾದ್ ದಿಲ್‌ಸುಖ್‌ನಗರ ದಲ್ಲಿಯೂ ಕೆಲವು ಆತಂಕಗಳು ಏರ್ಪಟ್ಟಿವೆ. ಆದರೂ ನಮ್ಮ ಜ್ಞಾನದಿಂದ ನಾವು ಅವುಗಳನ್ನು ಅತಿಕ್ರಮಿಸಿ ಧೈರ್ಯವಾಗಿ ಇಂದೂಧರ್ಮಗಳನ್ನು ಊರೂರು ತಿರುಗಿ, ಮನೆಮನೆ ತಿರುಗಿ ಪ್ರಚಾರ ಮಾಡುತ್ತಿದ್ದೇವೆ. ಈ ದಿನ ನಮ್ಮ ರಚನೆಗಳನ್ನು ನೋಡಿ ಎಲ್ಲಾ ಮತದವರು ಇಂದೂಧರ್ಮವೆಂದರೆ ಏನೋ ತಿಳಿದುಕೊಳ್ಳುತ್ತಿದ್ದಾರೆ. ಇತರ ಮತದವರಿಗೂ ಸಹ ಇಂದೂಧರ್ಮ ಎಂದರೆ ಏನೋ ತಿಳಿಸಿದ ಘನತೆ ನಮಗೊಬ್ಬರಿಗೇ ದಕ್ಕಿದೆ ಎಂದು ಧೈರ್ಯವಾಗಿ ಹೇಳುತ್ತಿದ್ದೇವೆ. ಸ್ವತಃ ನಮಗೆ ಉಂಟಾದ ಅನುಭವದಿಂದ, ತಮ್ಮ ವಿಧಾನವೇ ದೊಡ್ಡದಾಗಿ ಹೇಳಿಕೊಳ್ಳುವವರು ಅತಿವಾದಿಗಳಾಗಿ ತಯಾರಾಗಿ ಇತರರನ್ನು ಹೇಗೆ ಪ್ರೇರೇಪಿಸುತ್ತಿದ್ದಾರೋ ತಿಳಿದುಕೊಂಡಿದ್ದೇವೆ. ನಂತರ ಪ್ರೇರೇಪಿಸಲ್ಪಟ್ಟ ತೀವ್ರವಾದವನ್ನು ಹೇಗೆ ಎದುರಿಸಬೇಕೋ ಸಹ ಕಲಿತುಕೊಂಡಿದ್ದೇವೆ. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿರಿ ಎಂದು ಹಂಪಿ ಕ್ಷೇತ್ರಕ್ಕೆ ಒಂದು ಕಿಲೋಮೀಟರು ದೂರದಲ್ಲಿ ಬರೆದಿರುವುದಕ್ಕೆ, ಅದನ್ನು ಪರಮತ ಪ್ರಚಾರವಾಗಿ ಹಿಂದೂಗಳು ಕೇಸು ಹಾಕಿದರೆ ಹೋಸಪೇಟೆ ಕೋರ್ಟ್ ಕುರುಡುತನದಿಂದ ಅಪರಾದವನ್ನು ಹೊರಿಸಿ 22 ದಿನಗಳು ನಮ್ಮ ಭಕ್ತರನ್ನು ಜೈಲಿಗು ಸಹ ಕಳಿಸಿದೆ. ಅತಿವಾದವನ್ನು ನ್ಯಾಯಸ್ಥಾನವು ಸಹ ಗುರುತಿಸಲಿಲ್ಲವೆಂದು, ಉಗ್ರವಾದವನ್ನು ಯಾವ ಸರ್ಕಾರವೂ ಪೂರ್ತಿಯಾಗಿ ಇಲ್ಲದಂತೆ ಮಾಡಲಿಲ್ಲವೆಂದು ತಿಳಿದುಹೋಗಿದೆ. ಆದ್ದರಿಂದ ಅದಕ್ಕೆ ಸರಿಯಾದ ಔಷಧಿ ಯಾವುದೊ ನಾವೇ ತಿಳಿಸಬೇಕೆಂದುಕೊಂಡಿದ್ದೇವೆ. ಆ ಪ್ರಯತ್ನದಲ್ಲಿ ಮನುಷ್ಯನಲ್ಲಿನ ಅಜ್ಞಾನವನ್ನು ತೆಗೆದುಹಾಕಿ ಜ್ಞಾನದಲ್ಲಿ ವಿಚಕ್ಷಣೆ ಉಂಟಾಗುವಂತೆ ಮಾಡುವುದೇ ಮುಖ್ಯವಾದ ಕೆಲಸ ಎಂದು ತಿಳಿದುಕೊಂಡಿದ್ದೇವೆ. ಎಂತಹ ಹಿಂಸೆಯನ್ನಾದರೂ ಜ್ಞಾನದಿಂದಲೇ ಬಿಡಿಸಬಹುದೆಂದು ತಿಳಿದು, ನಿಮಗು ಸಹ ಅದೇ ವಿಧಾನವನ್ನೇ ಹೇಳಬೇಕೆಂದುಕೊಂಡಿದ್ದೇವೆ. ಅದೇ ವಿಧಾನವೇ ಇಲ್ಲಿ ಹೇಳುತ್ತಿದ್ದೇವೆ. ನಾವು ಹೇಳುವ ವಿಧಾನವನ್ನು ಯಾವ ದೇಶದಲ್ಲಿ ಆಚರಿಸಿದರೂ ಆ ದೇಶದಲ್ಲಿ ಅತಿವಾದವೇ

ಇರುವುದಿಲ್ಲ. ಅತಿವಾದ ಎಂಬುದು ಮೊದಲು ಇಲ್ಲದಿರುವಾಗ ತೀವ್ರವಾದ, ಉಗ್ರವಾದವೆಂಬ ಶಾಖೋಪಶಾಖಗಳು ಅಸಲು ಇರುವುದಿಲ್ಲ.

ಭೂಮಿ ಮೇಲೆ ಎಲ್ಲಿಯಾದರೂ ಅತಿವಾದವನ್ನು ಇಲ್ಲದಂತೆ ಮಾಡುವುದಕ್ಕೆ ಶಾಸ್ತ್ರ ಅಗತ್ಯ. ಶಾಸ್ತ್ರ ಎಂದರೆ ಶಾಸನಗಳಿಂದ ಕೂಡಿಕೊಂಡಿರುವುದೆಂದು ಅರ್ಥ. ಈಗ ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಉಗ್ರವಾದಕ್ಕೆ ಹುಟ್ಟುವಿಕೆಯಾದ ಅತಿವಾದವನ್ನು ಅಣಗಿಸಬಹುದು. ಅತಿವಾದವನ್ನು ಇಲ್ಲದಂತೆ ಮಾಡುವುದಕ್ಕೆ ಸ್ಥೂಲವನ್ನು, ಸೂಕ್ಷ್ಮವನ್ನು ಎರಡನ್ನು ವಿವರವಾಗಿ ತಿಳಿಯಬೇಕು. ಸ್ಥೂಲಕ್ಕು ಮತ್ತು ಸೂಕ್ಷ್ಮಕ್ಕು ಉದಾಹರಣೆಯಾಗಿ ಗಾಳಿ ತುಂಬಿದ ಚಂಡನ್ನು ಹೇಳಿಕೊಂಡಿದ್ದೇವೆ. ಚಂಡು ಇಲ್ಲದಿದ್ದರೂ ಗಾಳಿ ಇರುತ್ತದಾಗಲಿ, ಗಾಳಿ ಇಲ್ಲದೆ ಚಂಡು ಇರುವುದಿಲ್ಲ ಎಂಬ ಸೂತ್ರದ ಪ್ರಕಾರ ಸ್ಥೂಲ ಇಲ್ಲದಿದ್ದರೂ ಸೂಕ್ಷ್ಮ ಇರುತ್ತದಾಗಲಿ, ಸೂಕ್ಷ್ಮ ಇಲ್ಲದೆ ಸ್ಥೂಲ ಇರುವುದಿಲ್ಲ. ಸೂಪರ್‌ಸೈನ್ಸ್ ಎನ್ನುವುದರಲ್ಲಿ ಸ್ಥೂಲವನ್ನು ಸೂಕ್ಷ್ಮವನ್ನು ಎರಡನ್ನು ತಿಳಿಯುವುದಕ್ಕೆ ಉಪಮಾನವಾಗಿ ಎರಡು ಕನ್ನಡಿಗಳ ವಿವರವನ್ನು ಹೇಳಿಕೊಂಡಿದ್ದೇವೆ. ಮುಂದೆ ಸ್ಥೂಲವಾಗಿರುವ ಮುಖವನ್ನು ತಿಳಿಯುವುದಕ್ಕೆ ಮುಂದೆ ಕನ್ನಡಿ, ಹಿಂದೆ ಸೂಕ್ಷ್ಮವಾಗಿರುವ ಬೆನ್ನನ್ನು ತಿಳಿಯುವುದಕ್ಕೆ ಹಿಂದೆ ಕನ್ನಡಿ ಉಪಯೋಗಪಟ್ಟಂತೆ **ಸ್ಥೂಲವಾದ ಜ್ಞಾನ ತಿಳಿಯುವುದಕ್ಕೆ ನಾಲ್ಕು ಶಾಸ್ತ್ರಗಳ ವಿಜ್ಞಾನವೂ, ಸೂಕ್ಷ್ಮಜ್ಞಾನ ತಿಳಿಯುವುದಕ್ಕೆ ದೊಡ್ಡ ಶಾಸ್ತ್ರವೊಂದರ ಸುಜ್ಞಾನ ಉಪಯೋಗಪಡುತ್ತದೆಂದು ಹೇಳಿಕೊಂಡಿದ್ದೇವೆ.** ವಿಜ್ಞಾನವನ್ನು ಸಾಮಾನ್ಯಶಾಸ್ತ್ರವೆಂದು (ಜನರಲ್ ಸೈನ್ಸೆಂದು), ಸುಜ್ಞಾನವನ್ನು ಅಸಾಮಾನ್ಯ ಶಾಸ್ತ್ರವೆಂದು (ಸೂಪರ್ ಸೈನ್ಸೆಂದು) ಹೇಳಿಕೊಂಡಿ ದ್ದೇವೆ. ಕೆಲವರಿಗೆ ಇಲ್ಲೊಂದು ಪ್ರಶ್ನೆ ಬರಬಹುದು. ನಮಗೆ ಜನರಲ್ ಸೈನ್ಸ್ ತಿಳಿದಿದೆಯಾಗಲಿ, ಸೂಪರ್ ಸೈನ್ಸ್ ಎಲ್ಲಿದೆಯೋ, ಅದೇನೋ ಸಹ ತಿಳಿದಿಲ್ಲ. ನಿಮಗೆ ತಿಳಿದಿದೆಯಾ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ!

ಮನುಷ್ಯರಿಗೆ ತೋರಿಸಿದಾಗ ಮನುಷ್ಯರು ಕಂಡುಹಿಡಿದು, ಮನುಷ್ಯರ ಮುಖಾಂತರ ಹೊರಗೆ ಬಂದಿರುವುದು ಸಾಮಾನ್ಯಶಾಸ್ತ್ರ. ಶರೀರದಲ್ಲಿರುವ

ಅಧಿಪತಿ ಆ ಮನುಷ್ಯನ ಒಳದೃಷ್ಟಿಗೆ ತೋರಿಸಿದಾಗ, ಆ ವ್ಯಕ್ತಿ ನಾನು ಕಂಡುಕೊಂಡಿದ್ದೇನೆಂದು ಹೇಳುವುದು ಸಾಮಾನ್ಯಶಾಸ್ತ್ರ (ಜನರಲ್ ಸೈನ್ಸ್) ಎನ್ನುತ್ತೇವೆ. ಇನ್ನೂ ಅಸಾಮಾನ್ಯಶಾಸ್ತ್ರ ಎನ್ನುವ ಸೂಪರ್‌ಸೈನ್ಸ್ ಮನುಷ್ಯ ಎನ್ನುವವನು ಯಾರೂ ಹೇಳುವುದಿಲ್ಲ. ಸೂಪರ್ ಸೈನ್ಸ್ ಎನ್ನುವುದು ಸೃಷ್ಠಿ ಆದಿಯಲ್ಲಿಯೇ ಹೇಳಿರುವುದು. ಆಕಡೆ ದೇವರು ಅಲ್ಲದೆ, ಈಕಡೆ ಮನುಷ್ಯನು ಅಲ್ಲದೆ ಮಧ್ಯದಲ್ಲಿರುವ ಭಗವಂತನು ಹೇಳಿರುವುದೇ ದೊಡ್ಡ ವಿದ್ಯಾಶಾಸ್ತ್ರವೆನ್ನುವ ಸೂಪರ್ ಸೈನ್ಸ್. ಅದು ಎಲ್ಲಿ ಬರೆದಿಡಲ್ಪಟ್ಟಿದೆ ಎಂದು ಯಾರಾದರೂ ಕೇಳಿದರೆ, ಅದಕ್ಕೆ ಉತ್ತರವಾಗಿ ಹೀಗೆ ಹೇಳಬಹುದು. ಈದಿನ ಮತ ಗ್ರಂಥಗಳೆಂದು ಹೆಸರು ಇಟ್ಟುಕೊಂಡು ಯಾರ ಮತದಲ್ಲಿ ಅವರು ದೊಡ್ಡದಾಗಿ ಹೇಳಿಕೊಳ್ಳುವ **ಭಗವದ್ಗೀತೆ, ಬೈಬಲ್, ಖುರ್‌ಆನ್ ಎನ್ನುವ ಮೂರು ಗ್ರಂಥಗಳಲ್ಲಿಯೂ ಬ್ರಹ್ಮ ವಿದ್ಯಾಶಾಸ್ತ್ರ (ಸೂಪರ್ ಸೈನ್ಸು) ಕಾಣಿಸುತ್ತಿದೆ.** ಈ ನನ್ನ ಮಾತು ಕೆಲವರಿಗೆ ನಂಬಿಕೆಯಾಗದಿದ್ದರೂ ಈಮಾತು ನೂರಕ್ಕೆ ನೂರುಪಾಲು ಸತ್ಯ. ಇದೇನೋ ಊಹಿಸಿಕೊಂಡು ಹೇಳುವಂತದಲ್ಲ. ಆದ್ದರಿಂದ ಸತ್ಯವೆಂದು ಹೇಳುತ್ತಿದ್ದೇವೆ. ಇದರಲ್ಲಿ ಯಾರಿಗೂ ತಿಳಿಯದ ಸತ್ಯ ಮತ್ತೊಂದು ಇದೆ. ಅದೇನೆಂದರೆ! ಭೂಮಿಮೇಲೆ ಮೂರು ವಿಧಗಳ ಬೋಧನೆಗಳಾಗಿ ಬ್ರಹ್ಮವಿದ್ಯೆ ತಿಳಿಸಿದೆ. ಪ್ರಕೃತಿಯಲ್ಲಿ ಒಂದು ಭಾಗವಾದ ಆಕಾಶವೆನ್ನುವ ಒಂದು ಭೂತದ ಮುಖಾಂತರ ಮೊದಲು ಶಬ್ದರೂಪದಿಂದ ಆಕಾಶದಲ್ಲಿರುವ ಅತಿದೊಡ್ಡ ಗ್ರಹವಾದ ಸೂರ್ಯಗ್ರಹಕ್ಕೆ ತಿಳಿಸಲಾಗಿದೆ. ಮೊದಲು ಬ್ರಹ್ಮವಿದ್ಯೆಯನ್ನು ತಿಳಿದ ಸೂರ್ಯನ ಮೂಲಕ ಸಕಲ ವಿಶ್ವಕ್ಕೆ ಆ ವಿದ್ಯೆ ತಿಳಿಸಲಾಗಿದೆ. ಈ ವಿಷಯ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲ ಶ್ಲೋಕದಲ್ಲಿಯೇ ಹೇಳಿದ್ದಾರೆ. ನಂತರ ದ್ವಾಪರ ಯುಗದ ಕೊನೆಯಲ್ಲಿ ಸಾಧಾರಣ ಮನುಷ್ಯನಾಗಿ ಕಾಣಿಸುವ ಕೃಷ್ಣನ ಮುಖಾಂತರ ಹೇಳಲಾಗಿದೆ. ನಂತರ ಸಹ ಹೇಳಲಾಗುತ್ತದೆಂದು ಗೀತೆಯಲ್ಲಿ ಕಷ್ಣನೇ ಜ್ಞಾನಯೋಗದಲ್ಲಿ ಎಂಟನೆಯ ಶ್ಲೋಕದಲ್ಲಿ ಹೇಳಿದ್ದಾನೆ. **ಒಂದು ಪ್ರಕೃತಿ ಭಾಗವಾದ ಆಕಾಶದಿಂದ ವಾಣಿ ಮುಖಾಂತರ, ಎರಡನೆಯದು ಮನುಷ್ಯನಿಗೂ ದೇವರಿಗೂ ಮಧ್ಯದಲ್ಲಿರುವ ಭಗವಂತನ ಮೂಲಕ, ಮೂರನೆಯದು ಕಾಣಿಸದ**

**ತೆರೆಹಿಂಬದಿಯ ವ್ಯಕ್ತಿ ಮುಖಾಂತರ ದೇವರ ಜ್ಞಾನ ಮನುಷ್ಯರಿಗೆ ತಿಳಿಯಲ್ಪಡುತ್ತದೆಂದು ಇದೆ.** ಖುರ್ ಆನ್ ಗ್ರಂಥದಲ್ಲಿ 42ನೇ ಸುರಾದಲ್ಲಿ 51ನೇ ಆಯತ್‌ನಲ್ಲಿ ದೇವರ ಜ್ಞಾನ ಮೂರು ಮಾರ್ಗಗಳ (ವಿಧಾನಗಳ) ಮೂಲಕ ತಿಳಿಯುತ್ತದೆಂದು ತಿಳಿಸಲಾಗಿದೆ.

ವಿಜ್ಞಾನಿಗಳೆಂದು ಹೆಸರುವಾಸಿಯಾದವರಿಗಿಂತ ಮೀರಿದ ವಿಜ್ಞಾನ ಭಗವದ್ಗೀತೆಯಲ್ಲಿ ಇದೆಯೆಂದರೆ, ಈಗಿನ ವಿಜ್ಞಾನಿಗಳು ಆ ಮಾತು ಹೇಳಿದವನಿಗೆ ಹುಚ್ಚು ಇದೆಯೆನೋ ಎಂದು ಅಂದುಕೊಳ್ಳುತ್ತಾರೆ. ಈದಿನ ಪ್ರತ್ಯಕ್ಷವಾಗಿ ವಿಜ್ಞಾನ (ಸೈನ್ಸು) ಎಷ್ಟೋ ಪುರೋಗತಿ ಸಾಧಿಸಿ, ಮನುಷ್ಯರಿಗೆ ಎಷ್ಟೋ ಸೌಕರ್ಯಗಳನ್ನು ಮಾಡುತ್ತಿದ್ದರೆ, ಅದಕ್ಕಿಂತ ಮೀರಿದ ವಿಜ್ಞಾನ ಭಗವದ್ಗೀತೆಯಲ್ಲಿ ಇದೆಯೆಂದರೆ, ಅವರಿಗೆ ನಂಬಿಕೆಯಾಗಲಿಲ್ಲವೆಂದೇ ಹೇಳಬಹುದು. ಭಗವದ್ಗೀತೆ ಕೇವಲ ಒಂದು ಗ್ರಂಥವಾಗಿ ಅರ್ಥವಾದರೆ, ಭಗವದ್ಗೀತೆ ಅರ್ಜುನನನ್ನು ಪ್ರೇರೇಪಿಸಿ ಯುದ್ಧ ಮಾಡಿಸುವುದಕ್ಕೆ ಮಾತ್ರವೇ ಹೇಳಲಾಗಿದೆ ಎಂದು ಅರ್ಥವಾದರೆ, ಅದರಲ್ಲಿ ಯಾವ ವಿಜ್ಞಾನವೂ ಕಾಣಿಸುವುದಿಲ್ಲ. ಕನಿಷ್ಟ ಜನರಲ್ ಸೈನ್ಸ್ ಸಹ ಕಾಣಿಸುವುದಿಲ್ಲ. ಅಂತಹದರಲ್ಲಿ ಭಗವದ್ಗೀತೆಯಲ್ಲಿ ಸೂಪರ್‌ಸೈನ್ಸ್ ಇದೆಯೆಂದು ಯಾರೂ ನಂಬುವುದಿಲ್ಲ. ನಂಬುವುದಕ್ಕೆ ಆಧಾರ ಸಹ ಸಿಗುವುದಿಲ್ಲ. ಆಗ ನಡೆಯುತ್ತಿರುವ ಭಾರತಯುದ್ಧಕ್ಕಾಗಲಿ, ಆ ಸಮಯದಲ್ಲಿ ಕೇಳಿದ ಅರ್ಜುನನಿಗಾಗಲಿ, ಸಂಬಂಧವಿಲ್ಲದೆ ಭಗವದ್ಗೀತೆಯನ್ನು ನೋಡಿದಾಗ, ಹೇಳಲಾದ ಪ್ರತಿಯೊಂದು ಮಾತು ಎಷ್ಟು ಆಳವಾಗಿ ಹೇಳಲಾಗಿದೆಯೋ ತಿಳಿದುಕೊಂಡಾಗ, ಗೀತೆ ಸೂಪರ್ ಸೈನ್ಸೆಂದು ತಿಳಿಯುತ್ತದೆ. ಇಲ್ಲಿಯವರೆಗು ಭಗವದ್ಗೀತೆ ಯಾರಿಗೂ ಅರ್ಥ ವಾಗದಿರುವಾಗ, ಅದು ಸೂಪರ್ ಸೈನ್ಸ್ ಅಲ್ಲವೆಂದು ಹೇಗೆ ಹೇಳುತ್ತಾರೆ? ಸಾಂಖ್ಯಯೋಗದಲ್ಲಿ 19, 20, 21, 22, 23 ಶ್ಲೋಕಗಳು ಸೂಪರ್ ಸೈನ್ಸ್ ಅಲ್ಲವೆಂದು ಯಾರಾದರೂ ಹೇಳುತ್ತಾರಾ? ಇಲ್ಲಿಯವರೆಗೂ 22ನೇ ಶ್ಲೋಕವೊಂದರ ಭಾವನೆ ಯಾರಿಗೂ ಅರ್ಥವಾಗಿಲ್ಲವೆಂದು ನಾವು ಹೇಳುತ್ತಿದ್ದೇವೆ. 22ನೇ ಶ್ಲೋಕದಲ್ಲಿ ಭೌತಿಕಶಾಸ್ತ್ರಜ್ಞರಿಗೇ ಅರ್ಥವಾಗದ ಸೈನ್ಸ್ ಇದೆ.

ಭೌತಿಕಶಾಸ್ತ್ರವನ್ನು ಮೀರಿದ ದೊಡ್ಡ ಶಾಸ್ತ್ರ ಆ ಶ್ಲೋಕಗಳಲ್ಲಿ ಹೊರಬಿದ್ದು, ಅದು ಒಂದು ಸಿದ್ಧಾಂತವಾಗಿದೆ. ಈ ವಿಧವಾಗಿ ಕೆಲವು ಶ್ಲೋಕಗಳಲ್ಲಿ ನಮ್ಮ ಭೌತಿಕಶಾಸ್ತ್ರಜ್ಞರು ಸಾವಿರ ವರ್ಷಗಳು ಶ್ರಮಿಸಿದರೂ ತಿಳಿಯಲಾರದ ಸಿದ್ಧಾಂತಗಳಿವೆಯೆಂದು ಹೇಳಬಹುದು. ಈದಿನ ಭೂಮಿಮೇಲಿರುವ ನಾಸ್ತಿಕತ್ವವಾಗಲಿ, ಅತಿವಾದ ಮೊದಲುಗೊಂಡು ತೀವ್ರವಾದದ ವರೆಗಿರುವ ವಾದಗಳೆಲ್ಲವನ್ನು ಇಲ್ಲದಂತೆ ಮಾಡುವುದಕ್ಕೆ ಹಿಂದೂ (ಇಂದೂ)ಗಳಲ್ಲಿ ಭಗವದ್ಗೀತೆ, ಕ್ರೈಸ್ತರಲ್ಲಿ ಬೈಬಲ್, ಮುಸ್ಲಿಮ್‌ರಲ್ಲಿ ಖುರ್‌ಆನ್ ಗ್ರಂಥವು ಇವೆಯೆಂದು ಹೇಳಬಹುದು. ಭಾರತದೇಶದಲ್ಲಿ ಪ್ರಸ್ತುವಿರುವ ಮೂರು ಮತಗಳಲ್ಲಿನ ತೀವ್ರವಾದವನ್ನು, ಉಗ್ರವಾದವನ್ನು ಮೂರು ಗ್ರಂಥಗಳ ಸಾರಾಂಶವನ್ನು ಉಪಯೋಗಿಸಿ ಇಲ್ಲದಂತೆ ಮಾಡಬಹುದು. ಮೂರು ಮತಗಳಲ್ಲಿನ ಅತಿವಾದ ಮೊದಲುಗೊಂಡು ಉಗ್ರವಾದದವರೆಗಿರುವ ಮನುಷ್ಯ ರನ್ನು ಮಿತವಾದಿಗಳಾಗಿ ಬದಲಾಯಿಸುವುದಕ್ಕೆ ನಾವು ಹೇಗೆ ಪ್ರಯತ್ನಿಸಿದ್ದೇವೋ, ನನ್ನ ಅನುಭವವನ್ನು ಒಂದನ್ನು ವಿವರಿಸುತ್ತೇನೆ ನೋಡಿರಿ.

ಎದುರಿಗಿರುವ ವ್ಯಕ್ತಿ ಸತ್ಯ ಹೇಳಿದರೂ ಒಪ್ಪಿಕೊಳ್ಳದೆ ತನ್ನ ವಾದನೆಯೇ ದೊಡ್ಡದೆಂದು ಅಡ್ಡವಾಗಿ ಮಾತನಾಡುವವರನ್ನು ಅತಿವಾದಿಗಳನ್ನುತ್ತೇವೆ ಅಲ್ಲವೆ! ಅಂತಹ ಅತಿವಾದಿಗಳು ತಮ್ಮನ್ನು ತಾವು ದೊಡ್ಡದಾಗಿ ಹೇಳಿಕೊಳ್ಳುತ್ತಾ, ಎದುರಿಗಿರುವ ವ್ಯಕ್ತಿ ಸತ್ಯವನ್ನು ಹೇಳಿದರೂ, ಅದು ಸತ್ಯನಾ, ಅಸತ್ಯನಾ ಎಂದು ಸ್ವಲ್ಪವೂ ಆಲೋಚಿಸದೆ ತನ್ನ ವಾದನೆ ವಿಜ್ಞಾನದಿಂದ ಕೂಡಿಕೊಂಡಿದೆ ಎಂದು, ಎದುರಿಗಿರುವ ವ್ಯಕ್ತಿ ಹೇಳಿರುವುದು ಅಜ್ಞಾನದಿಂದ ಕೂಡಿಕೊಂಡಿದೆ ಎಂದು ಹೇಳುತ್ತಿರುತ್ತಾರೆ. ಅಂತಹವರಿಗೆ ಸತ್ಯವನ್ನು ಕುರಿತು ಅರ್ಥ ಮಾಡಿಕೊಳ್ಳುವುದಕ್ಕಿಂತ, ಎದುರಿಗಿರುವ ವ್ಯಕ್ತಿ ಕಡಿಮೆ ನಾನು ಹೆಚ್ಚು ಎಂಬ ಸ್ವಭಾವವಿರುತ್ತದೆ. ಅಂತಹವರು ತಾವು ಸತ್ಯಾನ್ವೇಷಕರೆಂದು, ತಮಗಿಂತ ಸತ್ಯ ತಿಳಿದವರು ಇಲ್ಲವೆಂದು ಹೇಳಿಕೊಳ್ಳುತ್ತಾ, ಸತ್ಯಾನ್ವೇಷಣೆ ಸಂಘಗಳೆಂದು ಬೋರ್ಡ್ ಇಟ್ಟುಕೊಂಡವರು ಸಹ ಇದ್ದಾರೆ. ಅಂತಹ ಅತಿವಾದಿಗಳಿಗೆ ಮತ್ತೊಬ್ಬರು ಹೇಳಿರುವುದು

ಅಲ್ಲಗಳೆಯುವುದೇ ಕೆಲಸವಾಗಿರುತ್ತದೆ. ಅಂತಹವರು ನಮಗೆ ಒಂದುಬಾರಿ ಎದುರುಬೀಳುವುದು ನಡೆದಿದೆ. 1980ರಲ್ಲಿ ಒಂದುಬಾರಿ ನನ್ನ ಹತ್ತಿರಕ್ಕೆ ಬಂದಿರುವ ಅತಿವಾದಿ ನನ್ನೊಂದಿಗೆ ಮಾತನಾಡುವುದು ನಡೆದಿದೆ. ಅಂತಹ ಅತಿವಾದಿಗಳು ಮೊದಲೆ ಒಂದು ನಿಯಮ ಹೇಳುತ್ತಿರುತ್ತಾರೆ. ನೀವು ವಾದನೆಯಲ್ಲಿ ಸೋತುಹೋದರೆ, ನಿಮ್ಮ ವಾದನೆಯನ್ನು ಬಿಟ್ಟು ನಮ್ಮ ವಾದನೆಯನ್ನು ಒಪ್ಪಿಕೊಂಡು ಪ್ರಚಾರ ಮಾಡಬೇಕು. ನಾವು ನಿಮ್ಮ ವಾದನೆಯಲ್ಲಿ ಸೋತುಹೋದರೆ, ನಮ್ಮ ವಾದನೆಯನ್ನು ಬಿಟ್ಟು ನಿಮ್ಮ ವಾದನೆಯನ್ನೇ ಸರಿಯಾದುದೆಂದು ಪ್ರಚಾರ ಮಾಡುತ್ತೇವೆ ಎಂದು ಒಪ್ಪಂದ ಮಾಡಿಕೊಳ್ಳುತ್ತಾರೆ. ಅದಕ್ಕೆ ಪೇಪರ್ ಮೇಲೆ ಬರಹವನ್ನು ಸಹ ಬರೆದುಕೊಳ್ಳೋಣ ಎನ್ನುತ್ತಾರೆ. ಹಾಗೆ ಬಾಂಡು ಪೇಪರ್ ಮೇಲೆ ಬರೆದುಕೊಳ್ಳೋಣವೆಂದು ಧೈರ್ಯವಾಗಿ ಹೇಳುತ್ತಿದ್ದಾರೆಂದರೆ, ನಾವು ಸೋತುಹೋಗುವುದಿಲ್ಲ ಎಂಬ ವಿಷಯ ಅವರಿಗೆ ಮೊದಲೇ ನಿರ್ಣಯವಾಗಿರುತ್ತದೆಂದು ಅರ್ಥವಾಗುತ್ತಿದೆ. ವಾದನೆ ಅಂದ ಮೇಲೆ ಸೋಲು ಗೆಲುವುಗಳಿರಬಹುದು ಅಲ್ಲವೆ! ಅಂತಹದರಲ್ಲಿ ಅಷ್ಟು ಖಚಿತವಾಗಿ ಮೊದಲೇ ಒಪ್ಪಂದ ಮಾಡಿಕೊಳ್ಳಬೇಕಾದ ಅವಶ್ಯಕತೆ ಏನು ಬಂದಿದೆಯೆಂದು ಆಲೋಚಿಸಿದರೆ, ಅಡ್ಡ ಮಾತನಾಡುವವನಿಗೆ ಸೋಲು ಇರುವುದಿಲ್ಲ ತಾನೆ! ಆದ್ದರಿಂದ ಅಷ್ಟು ಧೈರ್ಯವಾಗಿ ಮೊದಲೇ ಬರೆದು ಕೊಳ್ಳೋಣ ಎನ್ನುವವರಿರುತ್ತಾರೆಂದು ತಿಳಿಯುತ್ತಿದೆ. 1980ನೇ ವರ್ಷದಲ್ಲಿ ನಮ್ಮ ಹತ್ತಿರಕ್ಕೆ ಬಂದಿರುವ ಒಬ್ಬ ಅತಿವಾದಿಯೊಂದಿಗೆ ನಾವು ಆತನ ಒಪ್ಪಂದಕ್ಕೆ ಒಪ್ಪಿಕೊಂಡು ಮಾತನಾಡಿದ್ದೇವೆ.

ಅಂತಹ ಮೊಂಡುವಾದಿಗಳು ಹೇಗೆ ಮಾತನಾಡುತ್ತಾರೋ ನಮಗೆ ಮೊದಲೇ ತಿಳಿದಿದೆ. ಅಂತಹವರು ಪ್ರಶ್ನೆಗಳು ಕೇಳುವುದೇ ಕೆಲಸವಾಗಿ ಇಟ್ಟುಕೊಂಡು, ಎದುರಿಗಿರುವವನು ಹೇಳಿರುವುದನ್ನು ಸ್ವಲ್ಪವೂ ಒಪ್ಪಿಕೊಳ್ಳದೆ ಅಡ್ಡವಾಗಿ ವಾದಿಸುತ್ತಾರೆ. ಆದ್ದರಿಂದ ಆತನನ್ನು ಒಂದು ಪ್ರಶ್ನೆ ಕೇಳುವುದಕ್ಕೆ ಮಾತ್ರ ಪರಿಮಿತಿ ಮಾಡಿ ಎರಡನೇ ಪ್ರಶ್ನೆ ನಾನು ಕೇಳುತ್ತೇನೆಂದು ಹೇಳಿದೆವು.

ಒಬ್ಬರ ನಂತರ ಒಬ್ಬರು ಪ್ರಶ್ನೆಯನ್ನು ಕೇಳಬೇಕೆಂದು, ಏಕಧಾಟಿಯಾಗಿ ಒಬ್ಬರೇ ಪ್ರಶ್ನೆಗಳು ಕೇಳಬಾರದೆಂದು ಮೊದಲೇ ಹೇಳಿದ್ದೇವೆ. ಮೊದಲ ಪ್ರಶ್ನೆ ಕೇಳುವುದಕ್ಕೆ ಆತನಿಗೆ ಅವಕಾಶಕೊಟ್ಟಿದ್ದೇವೆ. ಆಗ ಆತನಿಗೆ ನಮಗೆ ವಾದನೆ ಹೀಗೆ ಸಾಗಿದೆ.

**ಅತಿವಾದಿ :–** ದೇವರಿದ್ದಾನಾ?

**ನಾವು :–** ದೇವರು ನಿಜವಾಗಲು ಇಲ್ಲ, ಅಬದ್ಧ(ಅಸತ್ಯ)ವಾದ ದೇವರನ್ನು ನಿಜವಾಗಲು ಇದ್ದಾನೆಂಬುವುದು ಶಾಸ್ತ್ರವಿರುದ್ಧವಾದ ಮಾತು.

(ನಾನು ಆತನ ಮಾತಿಗೆ ದೇವರಿದ್ದಾನೆ ಎಂದು ಉತ್ತರ ಹೇಳಿದ್ದರೆ, ಆತನು ನೀನು ನೋಡಿದ್ದೀಯಾ ಎಂದು ಕೇಳಿ ಕೊನೆಗೆ ದೇವರು ಇಲ್ಲವೆಂಬ ತನ್ನ ವಾದನೆಯೇ ಸರಿಯಾದುದೆಂದು ಹೇಳುತ್ತಿದ್ದನು. ಆದರೆ ಆತನು ಅಂದುಕೊಂಡಿರುವುದಕ್ಕೆ ಭಿನ್ನವಾಗಿ ದೇವರು ನಿಜವಾಗಲು ಇಲ್ಲ. ದೇವರು ಅಸತ್ಯ ಅಂದಿದ್ದೇನೆ. ಆ ಮಾತಿಗೆ ನಾನು ಸಹಾ ನಾಸ್ತಿಕವಾದಿಯಂತೆ ಆತನಿಗೆ ಕಾಣಿಸಿದ್ದೇನೆ. ನನ್ನ ಮಾತನ್ನು ಪೂರ್ತಿಯಾಗಿ ಗ್ರಹಿಸಿಕೊಳ್ಳುವ ಶಕ್ತಿಯಿಲ್ಲದೆ ದೇವರನ್ನು ಒಟ್ಟಾರೆ ಇಲ್ಲವೆಂದುಕೊಂಡಿದ್ದಾನೆ. ಆದರೆ ದೇವರು ಇಲ್ಲವೆಂದು ನಾನು ಅಲ್ಲಿ ಹೇಳಲಿಲ್ಲ. ದೇವರು ಅಬದ್ಧವಾಗಿ ಇದ್ದಾನೆಂದೇ ಹೇಳಿದ್ದೇನೆ. ನಿಜವಾಗಿ ಇಲ್ಲವೆಂದು ಮಾತ್ರವೇ ಹೇಳಿದ್ದೇನೆ. ಒಟ್ಟಾರೆ ದೇವರು ಇಲ್ಲವೆಂದು ನಾನು ಹೇಳಲಿಲ್ಲ ಅಲ್ಲವೆ! ರಾಮನು ಶುಭ್ರವಾಗಿ ಇಲ್ಲ ಎಂದು ಅಂದಿದ್ದೇವೆಂದುಕೊಳ್ಳಿ, ಆ ಮಾತನ್ನು ಹಿಡಿದುಕೊಂಡು ರಾಮನು ಪೂರ್ತಿಯಾಗಿ ಇಲ್ಲ ಅಂದುಕೊಂಡರೆ ಕೇಳಿದವನದೇ ತಪ್ಪಾಗುತ್ತದೆ. ಹೇಳಿದವನದು ತಪ್ಪಲ್ಲ. ಏಕೆಂದರೆ ರಾಮನು ಶುಭ್ರವಾಗಿ ಇಲ್ಲ ಎಂದರೆ ಅಶುಭ್ರವಾಗಿ ಇದ್ದಾನೆಂದೇ ತಾನೆ ಅರ್ಥ. ಹಾಗೆಯೇ ದೇವರು ನಿಜವಾಗಿ ಇಲ್ಲ ಎಂದರೆ ಅಸತ್ಯವಾಗಿ ಇದ್ದಾನೆಂದೆ ತಾನೆ ಅರ್ಥ. ನಾವು ಹೇಳಿದ ಮಾತಿನಲ್ಲಿ ಅರ್ಥವನ್ನು ಗ್ರಹಿಸಿದರೆ 'ಜ' ಎಂದರೆ ಹುಟ್ಟುವುದೆಂದು ಅರ್ಥ. ಶಬ್ಧಕ್ಕೆ ವಿರುದ್ಧ ಪದ ನಿಶ್ಶಬ್ಧ ಎನ್ನುವಂತೆ 'ಜ' ಗೆ ವಿರುದ್ಧ ಪದ 'ನಿಜ' ಆಗುತ್ತದೆ. 'ನಿಜ' ಎಂದರೆ ಹುಟ್ಟಲಿಲ್ಲ, ಅಥವಾ ಹುಟ್ಟದಿರುವಂತಹದ್ದು ಅಥವಾ ಹುಟ್ಟುವುದೇ ಇಲ್ಲವೆಂದು ಅರ್ಥ. ಹಾಗೆಯೇ

ಬದ್ದ ಎಂದರೆ ಬಂಧಿಸಲ್ಪಟ್ಟಿರುವುದು ಅಥವಾ ಕಟ್ಟಿಹಾಕಲ್ಪಟ್ಟಿರುವುದೆಂದು ಅರ್ಥ. (ಸತ್ಯ) ಬದ್ಧಕ್ಕೆ ವಿರುದ್ಧಪದ ಅಸತ್ಯ (ಅಬದ್ಧ) ಆಗುತ್ತಿದೆ. ಅಬದ್ಧ ಎಂದರೆ ಬಂಧಿಸಲ್ಪಡದಿರುವುದು ಅಥವಾ ಕಟ್ಟಿಹಾಕಲ್ಪಡದಿರುವುದೆಂದು ಅರ್ಥವಾಗಲಿ, ಪೂರ್ತಿಯಾಗಿ ಇಲ್ಲವೆಂದು ಅರ್ಥವಲ್ಲ ತಾನೆ! ದೇವರು ಹೀಗೆ ಇಲ್ಲ, ಹೀಗೆ ಇದ್ದಾನೆ ಎಂದು ಹೇಳುತ್ತಾ ನಿಜವಾಗಲು ಇಲ್ಲ, ಅಬದ್ಧವಾಗಿ ಇದ್ದಾನೆಂದು ಹೇಳಿದ್ದೇನೆ ಹೊರತು ಪೂರ್ತಿಯಾಗಿ ಇಲ್ಲವೆಂದು ಹೇಳಲಿಲ್ಲ ಅಲ್ಲವೆ! ನಾವು ಹೇಳಿದ ಭಾವವು ಪೂರ್ತಿ ಅವಗಾಹನೆಯಾಗದೆ ಆತನು ಅದಕ್ಕೆ ಯಾವ ಮಾತು ಮಾತನಾಡದೆ, ಯಾವ ವಿಧವಾಗಿಯೂ ನನ್ನ ಮಾತನ್ನು ಖಂಡಿಸದೇ ನಿಂತುಹೋಗಿದ್ದಾನೆ. ಅಲ್ಲಿಗೆ ಆತನ ಪ್ರಶ್ನೆಗೆ ನನ್ನ ಉತ್ತರ ಮುಗಿದುಹೋಗಿದೆ, ನಂತರ ಪ್ರಶ್ನೆ ಕೇಳುವುದು ನಮ್ಮ ಸರದಿ ಆಗಿದೆ. ಆಗ ನಾವು ಹೀಗೆ ಕೇಳಿದ್ದೇವೆ.)

**ನಾವು :–** ತಾಯಿ ಗರ್ಭದಲ್ಲಿ ಕದಲಿಕೆಗಳಿರುವ ಒಂಭತ್ತನೇ ತಿಂಗಳ ಶಿಶುವಿಗೆ ಪ್ರಾಣ ಇದೆಯಾ?

**ಅತಿವಾದಿ :–** ಗರ್ಭದಲ್ಲಿನ ಶಿಶುವಿಗೆ ಪ್ರಾಣವಿದೆಯೆಂದು ಪ್ರತಿ ತಾಯಿಗು ತಿಳಿದಿದೆ, ಚಿಕಿತ್ಸೆ ತಿಳಿದ ಪ್ರತಿ ಡಾಕ್ಟರ್‌ಗು ತಿಳಿದಿದೆ, ಗರ್ಭದಲ್ಲಿನ ಶಿಶುವಿಗೆ ಪ್ರಾಣ ಇದೆಯೆಂಬುದು ಜಗತ್ತು ತಿಳಿದ ಸತ್ಯ (ಆತನು ಸ್ವಲ್ಪವು ತಡವರಿಸದೆ, ಆಲಸ್ಯ ಮಾಡದೆ, ಆಲೋಚಿಸದೆ ತಕ್ಷಣ ಕೊಟ್ಟಿರುವ ಉತ್ತರವಿದು. ಉತ್ತರ ಪೂರ್ತಿ ಆಗಲಿಲ್ಲವಾದ್ದರಿಂದ, ಅದು ಅಸತ್ಯವಾದ ಉತ್ತರವಾದ್ದರಿಂದ, ಆತನದು ಸರಿಯಾದ ಸತ್ಯವಾದ ವಾದನೆ ಅಲ್ಲವೆಂದು ತಿಳಿಸುವುದಕ್ಕೆ ನಾವು ಹೀಗೆ ಹೇಳಿದ್ದೇವೆ.)

**ನಾವು :–** ತಾಯಿ ಗರ್ಭದಲ್ಲಿ ಶಿಶುವಿಗೆ ಪ್ರಾಣವಿದ್ದರೆ, ಕೆಲವು ಶಿಶುಗಳು ಪ್ರಸವಿಸಿದ ನಂತರ ಐದು ಅಥವಾ ಹತ್ತು ಅಥವಾ ಇನ್ನೂ ಹೆಚ್ಚಿನ ನಿಮಿಷಗಳ ಕಾಲದವರೆಗೂ ಏಕೆ ಅರಚುತ್ತಿಲ್ಲ? ಏಕೆ ಶ್ವಾಸವಾಡುತ್ತಿಲ್ಲ? ಶಿಶುಶರೀರದಲ್ಲಿ ರಕ್ತಪ್ರಸರಣೆ ಏಕೆ ನಡೆಯುತ್ತಿಲ್ಲ. ಶಿಶು ಶರೀರದಲ್ಲಿ ಯಾವ ಕಾರ್ಯವಾಗಲಿ, ಯಾವ ಕದಲಿಕೆಯಾಗಲಿ ಏಕೆ ಆಗಲಿಲ್ಲ?

**ಅತಿವಾದಿ :–** ಸ್ವಲ್ಪ ಸಮಯ ಕದಲದ ಮಾತ್ರಕ್ಕೆ ಶಿಶುವಿಗೆ ಪ್ರಾಣ ಇಲ್ಲ ಅನ್ನುತ್ತೇವಾ? ತಾಯಿಗರ್ಭದಲ್ಲಿಯೇ ಗುಂಡಿಗೆ ಬಡಿದುಕೊಳ್ಳುತ್ತಿದೆ. ಅಂತಹದರಲ್ಲಿ ರಕ್ತಪ್ರಸರಣೆ ನಡೆಯುತ್ತಿಲ್ಲ ಎನ್ನುವುದು ಪ್ರಶ್ನೆಯಲ್ಲ.

**ನಾವು :–** ಶಿಶುವಿಗೆ ತಾಯಿಗರ್ಭದಲ್ಲಿ ಗುಂಡಿಗೆ ಬಡಿದುಕೊಳ್ಳುವುದಿಲ್ಲವೆಂದು ನಾವು ಅನ್ನುತ್ತಿಲ್ಲ. ಅದರೆ ಆಗಲೇ ಹುಟ್ಟಿ ಕದಲದ ಶಿಶುಶರೀರದಲ್ಲಿ ಗುಂಡಿಗೆ ಬಡಿದುಕೊಳ್ಳುತ್ತಿದ್ದರೆ ರಕ್ತಪ್ರಸರಣೆ ನಡೆಯುತ್ತಿರಬೇಕು. ಹಾಗೆ ರಕ್ತಪ್ರಸರಣೆ ನಡೆಯುತ್ತಿದೆಯಾ? ಶ್ವಾಸ ಆಡುತ್ತಿದೆಯಾ? ಎಂದು ಕೇಳುತ್ತಿದ್ದೇವೆ. ಗುಂಡಿಗೆ ಬಡಿದುಕೊಳ್ಳುವುದಾಗಲಿ, ರಕ್ತಪ್ರಸರಣೆ ನಡೆಯುವುದಾಗಲಿ, ಶ್ವಾಸ ಆಡುವುದಾಗಲಿ ನೀವು ಪ್ರತ್ಯಕ್ಷವಾಗಿ ನೋಡಿದ್ದೀರಾ?

**ಅತಿವಾದಿ :–** ನಾನು M.B.B.S ಡಾಕ್ಟರ್ ನನಗೆ ಗರ್ಭದ ಬಗ್ಗೆ ತಿಳಿದಿಲ್ಲವಾ? ಶಿಶುವಿನ ಬಗ್ಗೆ ತಿಳಿದಿಲ್ಲವಾ?

**ನಾವು :–** ನಿವು ಡಾಕ್ಟರ್ ಅಲ್ಲವೆಂದಾಗಲಿ, ಶಿಶುವಿನ ಬಗ್ಗೆ ತಿಳಿದಿಲ್ಲವೆಂದಾಗಲಿ ಹೇಳುತ್ತಿಲ್ಲ. ಹುಟ್ಟಿದ ನಂತರ ಕದಲದ ಮೆದಲದ ಶಿಶುವು ಶ್ವಾಸಿಸುವುದು ನೀವು ನೋಡಿದ್ದೀರಾ? ಎಂದು ಕೇಳುತ್ತಿದ್ದೇನೆ. ಅದಕ್ಕೆ ಸರಿಯಾದ ಉತ್ತರವನ್ನು ಹೇಳಿರಿ.

**ಅತಿವಾದಿ :–** ಸ್ವಲ್ಪಸಮಯ ಕದಲದ ಶಿಶುವು ಅಪಸ್ಮಾರಕ ಸ್ಥಿತಿಯಲ್ಲಿ ಇರುತ್ತದೆ, ಆದ್ದರಿಂದ ಸ್ವಲ್ಪಸಮಯ ಕದಲದೆ ಹೋಗಬಹುದು. ಅಷ್ಟುಮಾತ್ರಕ್ಕೆ ಪ್ರಾಣವೇ ಇಲ್ಲ, ಶ್ವಾಸವೇ ಇಲ್ಲ ಎನ್ನುವುದು ತಪ್ಪು. ಅಂತಹ ಶಿಶುವಿಗೆ ರಕ್ತಪ್ರಸರಣೆ ಇದೆ, ಶ್ವಾಸ ಆಡುತ್ತಿದೆ. ಗುಂಡಿಗೆ ಬಡಿದುಕೊಂಡರೆ ಶ್ವಾಸ ಆಡಬೇಕಾದದ್ದೆ. ಗುಂಡಿಗೆಗೂ ಶ್ವಾಸಕ್ಕೂ ಒಂದಕ್ಕೊಂದು ಸಂಬಂಧವಿದೆ. ಗುಂಡಿಗೆ ಬಡಿದುಕೊಳ್ಳು ವುದು ತಾಯಿಗರ್ಭದಲ್ಲಿಯೇ ಶುರುವಾಗಿದೆ ಎಂದು ಒಪ್ಪಿಕೊಂಡಾಗ ಶ್ವಾಸ ಆಡುತ್ತಿದೆಯಾ ಎಂದು ನೀವು ಹೇಗೆ ಕೇಳುತ್ತಿದ್ದೀರಾ. ಶ್ವಾಸ ಆಡುವುದು ನಾಡಿ ಬಡಿದುಕೊಳ್ಳುವುದನ್ನು ಪ್ರತ್ಯಕ್ಷವಾಗಿ ನೋಡಿದ್ದೇನೆ. ಒಬ್ಬ ಡಾಕ್ಟರ್ ಆಗಿ ತಾಯಿಗರ್ಭದಲ್ಲಿನ ಶಿಶುವಿಗೆ ಪ್ರಾಣವಿದೆಯೆಂದು ಹೇಳುತ್ತಿದ್ದೇನೆ.

**ನಾವು :–** ಈಗ ಈ ವಾದನೆಯಲ್ಲಿ ನೀವು ಸೋತುಹೋಗಿದ್ದೀರಾ. ನೀವು ಪ್ರಸವಿಸಲ್ಪಟ್ಟು ಸ್ವಲ್ಪಸಮಯ ಕದಲದ ಶಿಶುವಿಗೆ ಪ್ರಾಣವಿದೆಯೆಂದಾಗಲಿ, ಶ್ವಾಸ ಆಡುತ್ತಿದಂತೆ ನಿರೂಪಿಸಿದರೆ ನೀವು ಗೆದ್ದಂತಾಗುತ್ತದೆ. ಅಲ್ಲಿಯವರೆಗು ನಿಮಗೆ ತಿಳಿಯದ ವಿಷಯವನ್ನು ಕುರಿತು ಕುರುಡರಂತೆ ಮಾತನಾಡುತ್ತಿದ್ದೀರೆಂದು ನಾವು ಹೇಳುತ್ತಿದ್ದೇವೆ.

**ಅತಿವಾದಿ :–** ಆದರೆ ನಾವು ಪೂರ್ತಿ ಆಧಾರಗಳಿಂದ ಒಂದು ತಿಂಗಳಿಗೆ ಬಂದು ನಾವು ಗೆದ್ದಿದ್ದೇವೆಂದು ನಿರೂಪಿಸಿಕೊಳ್ಳುತ್ತೇವೆ. ತಿಂಗಳ ನಂತರ ನಾವು ಬರದಿದ್ದರೆ ನಾವು ಸೋತುಹೋದಂತೆ ನೀವು ಗೆದ್ದಂತೆ, ಅಲ್ಲಿಯವರೆಗು ನಮ್ಮ ಸೋಲನ್ನು ಅಂಗೀಕರಿಸುವುದಿಲ್ಲ.

ಆ ವಿಧವಾಗಿ ಮಾತನಾಡಿ ಹೋದ ಆ ಅತಿವಾದಿ ಮತ್ತೆ ನಮ್ಮ ಹತ್ತಿರಕ್ಕೆ ಬರಲಿಲ್ಲ, ನಂತರ ಆತನ ಹೆಸರು ಸಹ ನಾವು ಮರೆತುಹೋಗಿದ್ದೇವೆ. ಹಾಗೆ ಕೆಲವು ವರ್ಷಗಳು ಕಳೆದುಹೋಗಿವೆ. ಒಂದುಬಾರಿ 2005ನೇ ವರ್ಷ ನಮಗೆ ತಿಳಿಯದೆಯೇ ಅದೇ ವ್ಯಕ್ತಿ ಹತ್ತಿರಕ್ಕೆ ಇತರರ ಜೊತೆ ಹೋಗುವುದು ನಡೆದಿದೆ. ಸುಮಾರು 25 ವರ್ಷಗಳ ನಂತರ ಆತನ ರೂಪರೇಖೆಗಳೆಲ್ಲಾ ಬದಲಾಗಿಹೋಗಿವೆ. ತಲೆಮೇಲಿರುವ ಕೂದಲೆಲ್ಲ ಉದುರಿಹೋಗಿ ಪೂರ್ತಿ ಬೋಳಾದ ಆ ವ್ಯಕ್ತಿಯನ್ನು ಮೊದಲು ನಾನು ಗುರುತಿಸಲಾಗದಿದ್ದರೂ, ಕೆಲವು ನಿಮಿಷಗಳ ನಂತರ ಆತನ ಮಾತಿನ ವಿಧಾನವನ್ನನುಸರಿಸಿ ಆತನನ್ನು ನಾನು ಗುರುತಿಸಿದರೂ, ಆತನು ಮಾತ್ರ ನನ್ನನ್ನು ಗುರುತಿಸಲಿಲ್ಲ. ಅಲ್ಲಿಗೂ ನನ್ನಿಂದೆ ಬಂದವರು ನೀವು ದೊಡ್ಡ ಮೇಧಾವಿಗಳೆಂದು, ನಿಮಗೆ ತಿಳಿಯದ ವಿಷಯವೇ ಇಲ್ಲವೆಂದು ಹೊಗಳುತ್ತಿದ್ದರೆ ಆತನು ಮುಗುಳ್ನಗುತ್ತಾ ಮೆರೆಯುವುದನ್ನು ನೋಡಿ, ನನಗೆ ಏನು ತಿಳಿಯದವನಂತೆ ನಾವು ಆತನನ್ನು ಒಂದು ಪ್ರಶ್ನೆ ಕೇಳಿದ್ದೇವೆ.

**ನಾವು :–** ಶ್ರೀಕೃಷ್ಣನು ಗೀತೆಯನ್ನು ಬೋಧಿಸಿದ್ದಾನೆ, ಯೇಸು ಬೈಬಲ್‌ನ್ನು ಹೇಳಿದ್ದಾನೆ ಆದರೆ ಅವರು ಹೇಳದಂತೆ ಬಿಟ್ಟಿರುವವು ಏನಾದರೂ ಇವೆಯಾ? ಏನಾದರೂ ಇದ್ದರೆ ಅವರಿಬ್ಬರನ್ನು ಮೀರಿ ಬೋಧಿಸುವವರು ಈ ಕಾಲದಲ್ಲಿ ಯಾರಾದರೂ ಇದ್ದಾರಾ?

**ಅತಿವಾದಿ :–** ಕೃಷ್ಣನು, ಯೇಸೂ ಹೇಳುವುದು ನಿಮಗೇನಾದರೂ ದೊಡ್ಡದಾಗಿ ಕಾಣಿಸಿದೆಯೇನೋ, ಅವರು ಹೇಳಿರುವುದರಲ್ಲಿ ಏನು ದೊಡ್ಡತನ ಇಲ್ಲ. ಅವರಿಗಿಂತ ನಾನು ಎಷ್ಟೋ ಮೇಲು, ಅವರಿಗೆ ತಿಳಿಯದ ಎಷ್ಟೋ ವಿಷಯಗಳನ್ನು ಹೇಳುತ್ತೇನೆ. ಅವರು ಸೈನ್ಸ್ ಅಭಿವೃದ್ಧಿಯಾಗದ ಕಾಲದಲ್ಲಿ ಹಳೆಯುಗಗಳಲ್ಲಿನ ಮಾತುಗಳನ್ನು ಮಾತನಾಡಿದ್ದಾರೆ. ಈ ಕಾಲದಲ್ಲಿ ಅವರು ಹೇಳಿರುವವು ಬಹಳ ಚಿಕ್ಕವಿಷಯಗಳೇ ಎಂದು ನಾನು ಹೇಳುತ್ತಿದ್ದೇನೆ.

ಆ ವಿಧವಾಗಿ ಆತನ ಮಾತುಗಳು ಕೇಳಿದ ನಾನು, ಆತನು ಕೃಷ್ಣನನ್ನು ಯೇಸನ್ನು ಕಡಿಮೆಮಾಡಿ ಮಾತನಾಡಿರುವುದಕ್ಕೆ, ಇವನು ಪೂರ್ತಿ ಮೂರ್ಖ ನೆಂದುಕೊಂಡು ಆತನೊಂದಿಗೆ ನಂತರ ಏನು ಮಾತನಾಡದೆ ಮೌನವಾಗಿದ್ದು, ನಂತರ ಅಲ್ಲಿಂದ ಹೊರಟು ಬಂದೆವು. ನಂತರ ಮೂರು ವರ್ಷಗಳಿಗೆ ಆತನ ಬಳಿಗೆ ನಾವೇ ಹೋಗಿ ಬೇಟಿಯಾದೆವು. ಎರಡನೇಬಾರಿ ತಿಳಿದು ಅದೇ ಕೆಲಸವಾಗಿ ಆ ವ್ಯಕ್ತಿಯ ಹತ್ತಿರಕ್ಕೆ ಹೋದೆವು. ಆತನು ಸತ್ಯವಾದ ಸಂಘವನ್ನು ಏರ್ಪಡಿಸಿ, ತನ್ನನ್ನು ಹೇತುವಾದಿಯಾಗಿ ಸತ್ಯಶೋಧಕನಾಗಿ ಹೇಳಿಕೊಳ್ಳುವುದನ್ನು ನೋಡಿ, ಆತನು ಸತ್ಯಶೋಧಕನಾಗಲಿ, ಹೇತುವಾದಿಯಾಗಲಿ ಅಲ್ಲವೆಂದು ತಿಳಿದು, ನನ್ನ ಜ್ಞಾನವನ್ನು ಅನುಸರಿಸುವ ಕೆಲವರರೊಂದಿಗೆ ಸೇರಿ ಅಲ್ಲಿಗೆ ಹೋಗುವುದು ನಡೆದಿದೆ. ನಾನು ಎಲ್ಲಿಗೆ ಹೋದರೂ ನಾನು ಇಂತಹ ವ್ಯಕ್ತಿಯೆಂಬ ಗುರುತು ಸ್ವಲ್ಪವೂ ಇರುವುದಿಲ್ಲ. ಆದ್ದರಿಂದ ನನ್ನನ್ನು ಇಂತಹವನೆಂದು ಯಾರೂ ಗುರುತಿಸುವುದಿಲ್ಲ. ಅಡ್ಡವಾಗಿ ಮಾತನಾಡಿ ನಾನೇ ಗೆದ್ದಿದ್ದೇನೆಂದು ಹೇಳಿಕೊಳ್ಳುವುದು ಅಭ್ಯಾಸವಾದ ಆತನು ನಾವು ಹೋದ ತಕ್ಷಣ ನಮಗೆ ಮಾತನಾಡುವುದಕ್ಕೆ ಅವಕಾಶಕೊಟ್ಟು ನಮ್ಮೊಂದಿಗೆ ಮಾತನಾಡುವುದಕ್ಕೆ ಶುರು ಮಾಡಿದನು. ಆಗ ನಮ್ಮ ವ್ಯಕ್ತಿಗಳು ಆತನು ಮಾತನಾಡುತ್ತಿರುವಾಗ ಮಧ್ಯದಲ್ಲಿ ನಾವು ಸಹ ಮಾತನಾಡಬೇಕಾಗಿ ಬಂದಿದೆ. ಅಲ್ಲಿ ವಾದೋಪವಾದಗಳು ಹೇಗೆ ನಡೆದಿವೆಯೋ ಕೆಳಗೆ ನೋಡಿರಿ.

**ನಮ್ಮ ವ್ಯಕ್ತಿ :–** ನಾವು ಹೈದರಾಬಾದ್‌ನಿಂದ ನಿಮ್ಮನ್ನು ಬೇಟಿಯಾಗಬೇಕೆಂದು

ಬಂದಿದ್ದೇವೆ, ನಮ್ಮ ಸಂಶಯಗಳಿಗೆ ಉತ್ತರಗಳನ್ನು ನಿಮ್ಮ ಮುಖಾಂತರ ತಿಳಿದುಕೊಳ್ಳಬೇಕೆಂದುಕೊಂಡಿದ್ದೇವೆ.

**ಅತಿವಾದಿ :–** ನೀವು ಬಂದಿರುವುದಕ್ಕೆ ಸಂತೋಷ. ನಿಮಗೆ ಬಂದಿರುವ ಸಂಶಯಗಳೇನೊ ಹೇಳಿರಿ.

**ನಮ್ಮ ವ್ಯಕ್ತಿ :–** ಭೌತಿಕ ಅಭೌತಿಕ ಎನ್ನುತ್ತಾರೆ ಅಲ್ಲವೆ! ಇದರಲ್ಲಿ ಯಾವುದು ಸತ್ಯ? ಅಥವಾ ಎರಡೂ ಸತ್ಯವಾ?

**ಅತಿವಾದಿ :–** ಭೌತಿಕ ಸತ್ಯ, ಅಭೌತಿಕ ಅಸತ್ಯ. ಅಭೌತಿಕ ಸತ್ಯವಾದಕ್ಕೆ ನಿಲ್ಲುವುದಿಲ್ಲ. ನಿರೂಪಣೆಗೆ ಬರುವುದಿಲ್ಲ. ಇತರರನ್ನು ಮೋಸ ಮಾಡುವುದಕ್ಕೆ ಅಸತ್ಯವಾದ ಅಭೌತಿಕವಾದವು ಉಪಯೋಗಪಡುತ್ತಿದೆ. ಅಷ್ಟು ಬಿಟ್ಟರೆ ವಿಜ್ಞಾನ (ಸೈನ್ಸು) ತಿಳಿದವರು ಯಾರೂ ಅಭೌತಿಕವನ್ನು ಒಪ್ಪಿಕೊಳ್ಳುವುದಿಲ್ಲ. ಅಭೌತಿಕವನ್ನು ನಿರೂಪಿಸುವವರಿಗೆ ಹತ್ತು ಲಕ್ಷ ರೂಪಾಯಿಗಳು ಕೊಡುತ್ತೇವೆಂದು ನಾವು ಪ್ರಕಟಿಸಿದರೂ ಯಾರೂ ಮುಂದಕ್ಕೆ ಬರಲಿಲ್ಲ. ಆದ್ದರಿಂದ ಭೌತಿಕ ಸತ್ಯವೆಂದು, ಅಭೌತಿಕ ಅಸತ್ಯವೆಂದು ಹೇಳಬಹುದು.

**ನಮ್ಮ ವ್ಯಕ್ತಿ :–** ದೇವರು ಕಾಣಿಸದವನು ಅಲ್ಲವೆ! ಅಂತಹ ದೇವರು ಅಭೌತಿಕವೇ ಅಲ್ಲವೆ! ಅಂತಹದರಲ್ಲಿ ನಿಮ್ಮ ಮಾತಿನ ಪ್ರಕಾರ ದೇವರನ್ನು ಸಹ ಇಲ್ಲವೆಂದು ಹೇಳಬೇಕಾಗಿ ಬರುತ್ತದೆ ಅಲ್ಲವೆ!

**ಅತಿವಾದಿ :–** ವಿಜ್ಞಾನದ ಪ್ರಕಾರ ದೇವರು ಇಲ್ಲ. ಇಲ್ಲದ ದೇವರನ್ನು ಇದ್ದಾನೆಂದು ಅಭೌತಿಕವಾದಿಗಳು ಹೇಳುತ್ತಿರುತ್ತಾರೆ. ಭೌತಿಕವಾದಿಗಳು ಯಾರೂ ದೇವರನ್ನು ಒಪ್ಪಿಕೊಳ್ಳುವುದಿಲ್ಲ.

**ನಮ್ಮ ವ್ಯಕ್ತಿ :–** ಭಗವದ್ಗೀತೆ, ಬೈಬಲ್, ಖುರಾನ್ ದೇವರಿದ್ದಾನೆಂದು ಬೋಧಿಸುತ್ತಿವೆ ಅಲ್ಲವೆ!

**ಅತಿವಾದಿ :–** ವಿಜ್ಞಾನಶಾಸ್ತ್ರವು ಸರಿಯಾಗಿ ತಿಳಿಯದ ಕಾಲದಲ್ಲಿ ಹೇಳಲಾಗಿರುವವು

ಗೀತೆ, ಬೈಬಲ್, ಖುರಾನ್. ಈ ಕಾಲದಲ್ಲಿ ಸೈನ್ಸ್ ಮುಂದೆ ಅವೆಲ್ಲವೂ ತಪ್ಪಾಗಿ ಹೇಳಲಾಗುತ್ತಿವೆ. ಕಾಣಿಸುವ ಭೌತಿಕ ಪ್ರಕೃತಿ ಹೊರತು, ಕಾಣಿಸದ ಅಭೌತಿಕ ದೇವರು ಇಲ್ಲವೇ ಇಲ್ಲ.

**ನಾನು :–** ಕಾಣಿಸುವ ಭೌತಿಕ ಮಾತ್ರ ವಿಜ್ಞಾನವೆಂದು, ಕಾಣಿಸದ ಅಭೌತಿಕವನ್ನು ಅಜ್ಞಾನವೆಂದರೆ, ಕಾಣಿಸದಂತೆ ಇರುವವು ಎಷ್ಟೋ ಇವೆ ಅವೆಲ್ಲವೂ ಇಲ್ಲದಂತೇನಾ, ಮನಸ್ಸು ಕಣ್ಣಿಗೆ ಕಾಣಿಸುವುದಿಲ್ಲ, ಅಷ್ಟುಮಾತ್ರಕ್ಕೆ ಮನುಷ್ಯನಲ್ಲಿ ಮನಸ್ಸು ಇಲ್ಲವೆನ್ನುತ್ತೇವಾ?

**ಅತಿವಾದಿ :–** ಆಧ್ಯಾತ್ಮಿಕವಾದಿಗಳು ಮನಸ್ಸಿಗೆ ಹೆಸರನ್ನು ಕಲ್ಪಿಸಿದ್ದಾರೆ. ಮನುಷ್ಯನ ಶರೀರದಲ್ಲಿ ಮೆದುಳು ಹೊರತು ಮನಸ್ಸು ಇಲ್ಲ.

**ನಾನು :–** ನಿಮಗೆ ತಿಳಿಯದಿರುವುದನ್ನು ಬೇರೊಂದಕ್ಕೆ ಹೋಲಿಸಿಕೊಳ್ಳುವುದು ಶಾಸ್ತ್ರಬದ್ಧತೆ ಅನಿಸಿಕೊಳ್ಳುವುದಿಲ್ಲ. ಕೆಲವು ಪಕ್ಷಿಗಳು, ಭೂಮಿಯಲ್ಲಿ ನೂರಾರು ಅಡಿಗಳ ಆಳದಲ್ಲಿನ ನೀರನ್ನು ಸೂಕ್ಷ್ಮವಾಗಿ ಗ್ರಹಿಸಿ ಬಾಯಾರಿಕೆ ತೀರಿಸಿಕೊಂಡು ಬದುಕುತ್ತಿವೆ. ಆ ವಿಷಯ ನಿಮಗೆ ತಿಳಿದಿಲ್ಲ. ಎಷ್ಟೋ ಆಳದಲ್ಲಿನ ನೀರನ್ನು ಒಂದು ಅಡಿಉದ್ದವೂ ಸಹ ಇಲ್ಲದ ಪಕ್ಷಿ ಹೇಗೆ ಗ್ರಹಿಸಿಕೊಳ್ಳುತ್ತಿದೆಯೋ, ನೂರು ವರ್ಷಗಳು ಪರಿಶೋಧನೆ ಮಾಡಿದರೂ ನಿಮ್ಮಂತಹ ಭೌತಿಕವಾದಿಗಳಿಗೆ ಅರ್ಥವಾಗುವುದಿಲ್ಲ. ನಿಮಗೆ ತಿಳಿದಿರುವವು ಮಾತ್ರವೇ ಸತ್ಯ, ತಿಳಿಯದಿರುವವು ಅಸತ್ಯವೆಂಬ ಸೂತ್ರ ಎಲ್ಲಿಯೂ ಅನ್ವಯಿಸುವುದಿಲ್ಲ. ಭೂಮಿಯಲ್ಲಿ ಎರಡು ಅಥವಾ ಮೂರು ಅಡಿಗಳ ಆಳದಲ್ಲಿ ಅಡಿಕೆಯಷ್ಟು ಚಿಕ್ಕ ಕಲ್ಲನ್ನು ಹೋಲಿದ ಗೆಡ್ಡೆ ಇದ್ದರೆ, ಅದರಿಂದ ಕಾಣಿಸುವ ಯಾವ ಆಧಾರ ಇಲ್ಲದಂತೆ ಗಿಡದ ಮೇಲೆ ಬಳ್ಳಿ ಬೆಳೆಯುತ್ತಿದೆ. ಅದು ಯಾವ ಗಿಡದ ಮೇಲಾದರೂ ಮೇಲ್ಭಾಗದಲ್ಲಿ ಹರಡಿಕೊಂಡು ಬೆಳೆಯಬಲ್ಲದು. ಭೂಮಿಯಲ್ಲಿ ಗೆಡ್ಡೆಗು ಆಕಾಶದಲ್ಲಿನ ಗಿಡಕ್ಕು ಅಭೌತಿಕವಾದ ಸಂಬಂಧದಿಂದಲೇ ಅದು ಬೆಳೆಯುತ್ತದೆ. ಗಿಡದ ಮೇಲೆ ಬಳ್ಳಿ ಅಥವಾ ಗಿಡದ ಮೇಲಿನ ಪಾಚಿ ಅಥವಾ ಆಕಾಶವಲ್ಲಿ ಎಂಬ ಹೆಸರಿರುವ

ಬಳ್ಳಿಗೆ ಹುಟ್ಟಿದ ಸ್ಥಾನ ಕಾಣಿಸದಷ್ಟು ಮಾತ್ರಕ್ಕೆ ನಿಮ್ಮಂತಹವರು ಅಸತ್ಯವೆಂದರೂ ಶಾಸ್ತ್ರಬದ್ಧವಾಗಿ ಅದು ಸತ್ಯವೇ.

**ಅತಿವಾದಿ :–** ನಮಗೆ ತಿಳಿಯದಿರುವವೆಲ್ಲ ಹೇಳಿ ನೀವು ನಂಬಿರೆಂದರೆ ನಾವು ನಂಬುವುದಿಲ್ಲ. ಏನಾದರೂ ಪ್ರತ್ಯಕ್ಷವಾಗಿ ಹತ್ತುಜನರಿಗೆ ಅರ್ಥವಾಗುವಂತೆ ಇದು ಅಭೌತಿಕ ಎಂದು ತಿಳಿಸುತ್ತೀರಾ? ಹತ್ತು ಅಡಿಗಳ ದೂರದಲ್ಲಿರುವ ಕಲ್ಲನ್ನು ಮುಟ್ಟದಂತೆ ಕದಲಿಸುತ್ತೀರಾ? ಅಭೌತಿಕ ಬಲದಿಂದ ದೃಷ್ಟಿಯಿಂದ ಗಿಡಕ್ಕಿರುವ ಕಾಯನ್ನು ಕೀಳಬಲ್ಲಿರಾ? ಯಾವುದಾದರೂ ಒಂದನ್ನಾದರೂ ನಿರೂಪಿಸುತ್ತೀರಾ? ಸೈನ್ಸ್ ಪ್ರಕಾರ ಅಭೌತಿಕವಿದೆಯೆಂದು ಹೇಳುತ್ತೀರಾ?

**ನಾನು :–** ನಿನಗೆ ತಿಳಿದಿರುವುದು ಕಾಣಿಸುವ ಸೈನ್ಸೇ. ಸೈನ್ಸೆಂದರೆ ಏನೊ ಪೂರ್ತಿ ಅರ್ಥ ತಿಳಿದಿದೆಯಾ? ಕಾಣಿಸದಿರುವುದನ್ನು ಸಹ ತಿಳಿಸುವುದು ಸೈನ್ಸ್. ಸೈನ್ಸಿನಲ್ಲಿ ಅಆಗಳು ಕಲಿತುಕೊಂಡು, ಎಲ್ಲಾ ತಿಳಿದಿದೆಯೆಂದು ಭ್ರಮಿಸುವ ನಿನ್ನಂತಹವರಿಗೆ, ಸೈನ್ಸಿನಲ್ಲಿ ತಿಳಿಯದಿರುವುದು ಬೆಟ್ಟದಷ್ಟು ಇದೆಯೆಂದು ತಿಳಿದಿಲ್ಲ. ನಿನ್ನಂತಹವರಿಗೆ ಅರ್ಥವಾಗದ ಅಭೌತಿಕಶಕ್ತಿಗಳಿಂದ ಎಷ್ಟೋ ಕೆಲಸಗಳು ಪ್ರತ್ಯಕ್ಷವಾಗಿ ನಡೆಯುತ್ತಿವೆ. ನಡೆಯುತ್ತಿರುವವುಗಳನ್ನು ಅಲ್ಲವೆಂದು ಹೇಳಬಲ್ಲೆಯಾ? ಒಬ್ಬನಿಗೆ ನಾಗರಹಾವು ಕಚ್ಚಿದರೆ, ಆ ವಿಷಯವನ್ನು ನೂರುಕಿಲೋಮಿಟರ್‌ಗಳ ದೂರದಲ್ಲಿರುವ ವ್ಯಕ್ತಿಗೆ ಫೋನ್ ಮಾಡಿ ಹೇಳಿದರೆ, ಇಲ್ಲಿ ಹಾವಿನ ವಿಷ ನಿವಾರಿಸಲ್ಪಡುತ್ತಿದೆ. ಇದು ಅಭೌತಿಕವಾಗಿ ಕಾಣಿಸದ ಚಿಕಿತ್ಸೆಯ ಮುಖಾಂತರ ಗುಣವಾಗಲಿಲ್ಲವೆನ್ನುತ್ತಿಯಾ? ಸುನಾಮಿ ಬರುತ್ತಿದೆಯೆಂದು ಈಗಿನ ಶಾಸ್ತ್ರಜ್ಞರು ಹೇಳದಿದ್ದರೂ ಗಂಟೆಮುಂಚೆಯೇ ಅದನ್ನು ತಿಳಿದುಕೊಂಡ ಆನೆಗಳು ಎತ್ತರವಾದ ಬೆಟ್ಟಗಳು ಹತ್ತಿವೆ. ಮನುಷ್ಯನಿಗೆ ತಿಳಿಯದ ವಿಷಯ ಕೆಲವು ಪ್ರಾಣಿಗಳಿಗೆ ಹೇಗೆ ತಿಳಿದಿದೆಯೋ ನಿನಗೆ ತಿಳಿದ ಸ್ವಲ್ಪಮಟ್ಟಿನ ಸೈನ್ಸಿಂದ ಹೇಳಲಾರೆ. ಒಂದು ಚಿಕ್ಕ ಗಿಡ ನೂರು ಅಡಿಗಳ ದೂರದಲ್ಲಿರುವಾಗಲೇ ಹಾವುಗಳು ಅದರ ಹತ್ತಿರಕ್ಕೆ ಹೋಗದಂತೆ ಎಚ್ಚರ ವಹಿಸುತ್ತವೆ. ಹಾಗೆಯೇ ಚೇಳು ಕುಟಿಕಿದವನು ವಿಷದಿಂದ ಬಾಧೆ ಪಡುತ್ತಿರುವಾಗ ಆ ವಿಷಯವನ್ನು ವೈದ್ಯನಿಗೆ ಹೇಳಿದ ವ್ಯಕ್ತಿಗೆ ವೈದ್ಯ

ಮಾಡಿದರೆ, ಔಷಧಿ ಹಚ್ಚಿದರೆ ಪಕ್ಕದಲ್ಲಿರುವವನಿಗೆ ಚೇಳಿನ ವಿಷ ಇಳಿದು ಹೋಗುತ್ತಿದೆ. ಪ್ರತ್ಯಕ್ಷವಾಗಿ ನಡೆಯುವ ಈ ಕೆಲಸದಲ್ಲಿ ಸೈನ್ಸ್ ಇಲ್ಲವೆನ್ನುತ್ತೀಯಾ?

**ಅತಿವಾದಿ :–** ಕೊನೆಯದಾಗಿ ಹೇಳಿದ ಈ ವಿಷಯವನ್ನು ನೀವು ತೋರಿಸುತ್ತೀರಾ?

**ನಾನು :–** ನಾನು ತೋರಿಸುವುದು ಅಲ ನಿನ್ನ ಕೈಯಿಂದಲೇ ಮಾಡಿಸಿ ನಿರೂಪಿಸುತ್ತೇನೆ ಅದಕ್ಕೇನನ್ನುತ್ತೀಯಾ?

**ಅತಿವಾದಿ :–** ಚೇಳಿನಿಂದ ನಾನೇ ಕುಟುಕಿಸಿ ಆಗ ನೀವು ಹೇಳಿದಂತೆ ಪರೀಕ್ಷಿಸುತ್ತೇನೆ, ನಿಮಗೆ ಸಮ್ಮತವೇ ತಾನೆ!

**ನಾನು :–** ನಾವು ಎಲ್ಲದಕ್ಕೂ ಸಮ್ಮತವೇ. ನಮಗೆ ಅದರಲ್ಲಿ ಸತ್ಯವೆಷ್ಟಿದೆಯೋ ತಿಳಿದಿದೆ. ಆದ್ದರಿಂದಲೇ ಧೈರ್ಯವಾಗಿ ಹೇಳುತ್ತಿದ್ದೇವೆ. ನಮಗೆ ಸ್ಥೂಲ ಸೂಕ್ಷ್ಮ ಎರಡು ತಿಳಿದಿದೆ. ನಿನಗೆ ಸ್ಥೂಲ ಮಾತ್ರ ತಿಳಿದಿದೆ. ಆದ್ದರಿಂದ ನಿಮ್ಮಂತಹವರನ್ನು ಅರ್ಧ ಮೇಧಸ್ಸು ಇರುವವರೆಂದು, ಪೂರ್ತಿ ಮೆದುಳು ಇಲ್ಲದವರೆಂದು, ಆಫ್ ನಾಲೆಡ್ಜಿ ಮನುಷ್ಯರೆಂದು ನಾವನ್ನುತ್ತಿರುತ್ತೇವೆ. ದೃಷ್ಟಿ ಇಲ್ಲದವನು ಪ್ರಪಂಚವೇ ಇಲ್ಲವೆನ್ನುವಂತೆ, ತನಗೆ ಅವಗಾಹನೆ ಇಲ್ಲದ ವಿಷಯಗಳೆಲ್ಲವನ್ನು ಇಲ್ಲವೆನ್ನುವವರಿದ್ದಾರೆ. ಈಗ ನಿನ್ನಿಂದಲೇ ಚೇಳಿನಿಂದ ಕುಟುಕಿಸಿ, ನಿನ್ನಿಂದಲೇ ಚೇಳು ಕುಟುಕಿದವನಿಗೆ ಅಲ್ಲದೆ ಪಕ್ಕದಲ್ಲಿರುವವನಿಗೆ ಚಿಕಿತ್ಸೆ ಮಾಡಿಸುತ್ತೇವೆ. ಚೇಳು ಕುಟುಕಿದವನು ನೋವು ಹೋಗಿದೆಯೆಂದರೆ ಅದಕ್ಕೇನನ್ನುತ್ತಿಯಾ?

**ಅತಿವಾದಿ :–** ನೀವು ಮಸಿಬಳಿದು ಮಾರೇಡು ಕಾಯನ್ನು ಮಾಡಬೇಕೆಂದು ಕೊಳ್ಳುತ್ತಿದ್ದೀರ. ಅಭೌತಿಕವಾಗಲಿ, ಅಭೌತಿಕ ವಿದ್ಯೆಯಾಗಲಿ ಎಲ್ಲಿ ನಿರೂಪಿಸಲ್ಪಡಲಿಲ್ಲ. ಅದು ಇದೆಯೆಂದು ನೀವು ಎಷ್ಟು ಹೇಳಿದರೂ ನಾವು ನಂಬುವುದಿಲ್ಲ.

**ನಾನು :–** ನಿನ್ನನ್ನು ನಂಬಿಸಬೇಕಾದ ಅವಶ್ಯಕತೆ ನಮಗಿಲ್ಲ. ನಿನ್ನಂತವರೊಂದಿಗೆ ಮಾತನಾಡುವುದರಿಂದ ಕಾಲ ವ್ಯರ್ಥ ಹೊರತು ಏನು ಪ್ರಯೋಜನೆ ಇರುವುದಿಲ್ಲ.

ಈ ವಿಧವಾಗಿ ಅಡ್ಡವಾಗಿ ಮಾತನಾಡುವ ಅತಿವಾದಿಯೊಂದಿಗೆ ನಾವು ಮೂರುಬಾರಿ ಮಾತನಾಡುವುದು ನಡೆದಿದೆ ಎಂದು ಹೇಳಿದ್ದೇವೆ, ಅಂತಹವರು ಎಷ್ಟುಕಾಲವಾದರೂ ಅವರ ಛಲವನ್ನು ಅವರು ಬಿಡದೆ, ತಾವು ಸ್ವಲ್ಪವೂ ಬದಲಾಗದೆ ಮೊಂಡರಂತೆ ವಾದಿಸುತ್ತಾ ಇರುತ್ತಾರೆ. ಮೇಲಾಗಿ ಅಂತಹವರು ತಮ್ಮದೇ ಸತ್ಯವಾದನೆ ಎಂದು ಹೇಳಿಕೊಳ್ಳುತ್ತಿರುತ್ತಾರೆ. ನಾವು ಆ ಅತಿವಾದಿ ಯೊಂದಿಗೆ ಮಾತನಾಡಿದ ಮಾತುಗಳೆಲ್ಲವನ್ನು ಶಾಸ್ತ್ರವನ್ನು ಜೋಡಿಸಿ ಮಾತನಾಡಿದ್ದೇವೆ. ಅಂತಹ ವ್ಯಕ್ತಿಯೊಂದಿಗೆ ಮಾತನಾಡಿದ ವಿಧಾನವನ್ನು ಈಗ ಓದಿದವರೆಲ್ಲರಿಗೂ ಅತಿವಾದಿಗಳು ಅಸತ್ಯವಾದಿಗಳೆಂದು ತಿಳಿದುಹೋ ಗುತ್ತಿದೆ. ಹಾಗೆ ತಿಳಿಯುವುದರಿಂದ ಅವರಿಂದ ಯಾರೂ ಪ್ರೇರೇಪಿಸಲ್ಪಡುವುದಿಲ್ಲ, ಅವರ ಮಾತು ಯಾರೂ ಕೇಳುವುದಿಲ್ಲ. ಆದ್ದರಿಂದ ಈ ಗ್ರಂಥದಲ್ಲಿ ನಾಸ್ತಿಕವಾದಿಗಳು, ಹೇತುವಾದಿಗಳು ಎಂದು ತಮಗೆ ತಾವು ಹೇಳಿಕೊಳ್ಳುವ ವರಿಂದ ಎದುರಾಗುವ ಪ್ರಶ್ನೆಗಳನ್ನು ತೆಗೆದುಕೊಂಡು, ಅವುಗಳಿಗೆ ಶಾಸ್ತ್ರಬದ್ಧವಾದ ಉತ್ತರಗಳು ಕೊಡುವುದು ನಡೆದಿದೆ. ಅದರಿಂದ ಭೂಮಿಮೇಲೆ ಅತಿವಾದ, ನಾಸ್ತಿಕವಾದ ಇಲ್ಲದಂತೆ ಹೋಗುತ್ತದೆ. ಹಾಗೆ ಅತಿವಾದ ಇಲ್ಲದಂತೆ ಹೋಗುವುದರಿಂದ ತೀವ್ರವಾದವಾಗಲಿ, ಉಗ್ರವಾದವಾಗಲಿ ಹುಟ್ಟುವುದಕ್ಕೆ ಅವಕಾಶವೇ ಇರುವುದಿಲ್ಲ. ಪ್ರಪಂಚದಲ್ಲಿ ಮತದ್ವೇಷಗಳಾಗಲಿ, ಅಜ್ಞಾನ ಬೋಧನೆಗಳಾಗಲಿ, ಇಲ್ಲದಂತೆ ಹೋಗಬಲ್ಲವು. ಹಾಗೆ ನಡೆಯುವುದರಿಂದ ಪ್ರಪಂಚವೆಲ್ಲಾ ದೈವಜ್ಞಾನದಿಂದ ಕೂಡಿಕೊಂಡಿರುವುದಾಗಿ ಶಾಂತಿಯನ್ನು ಹೊಂದುತ್ತದೆ. ಈಗಿರುವ ಅಶಾಂತಿಯಿಂದ ಹೊರಬೀಳಬಲ್ಲದು. ಅಂತಹ ಸ್ಥಿತಿ ಬರುವುದಕ್ಕೆ ಪ್ರತಿ ಪ್ರಶ್ನೆಗು ಶಾಸ್ತ್ರಬದ್ಧವಾದ ಉತ್ತರವನ್ನು ಕೊಡಬೇಕಾದ ಅಗತ್ಯವಿದೆ.

ಇಸ್ಲಾಮ್ ಸಮಾಜದಲ್ಲಿ ಅಂದರೆ ಮುಸ್ಲಿಮರಲ್ಲಿ ಕೆಲವರು “ಜೀಹಾದ್” ಎಂಬ ಪದವನ್ನು ಉಪಯೋಗಿಸಿ ಮಾತನಾಡುತ್ತಿರುತ್ತಾರೆ. ಜೀಹಾದ್ ಎಂದರೆ ಪವಿತ್ರಯುದ್ಧ ಎಂದು ಅರ್ಥ. ಆದರೆ ಈದಿನ ಪವಿತ್ರ ಎನ್ನುವ ಪದ ಹೋಗಿ,

ಕೇವಲ ಯುದ್ಧ ಮಾತ್ರ ಉಳಿದಿದೆಯೆಂದು ಹೇಳಬಹುದು. ಪವಿತ್ರವಾದ ದೇವರಿಗೋಸ್ಕರ ಮಾಡುವುದನ್ನು ಪವಿತ್ರಯುದ್ಧವೆಂದು ಹಿರಿಯರು ಪೂರ್ವದಲ್ಲಿ ಹೇಳಿರುವಾಗ, ಈದಿನ ಪವಿತ್ರಯುದ್ಧವೆನ್ನುತ್ತಾ ಅಪವಿತ್ರವಾದ ಪ್ರಪಂಚ ವಿಷಯಗಳಿಗೋಸ್ಕರ ಯುದ್ಧ ಮಾಡುತ್ತಿರುವವರು ಇದ್ದಾರೆ. ಇಸ್ಲಾಮ್‌ನಲ್ಲಿ ಪವಿತ್ರಯುದ್ಧದ ಅರ್ಥ ತಿಳಿಯದವರು, ತಾವು ಮಾಡುತ್ತಿರುವುದೇ ಪವಿತ್ರಯುದ್ಧವೆಂದು (ಜೀಹಾದ್ ಎಂದು) ಅಂದುಕೊಳ್ಳುತ್ತಿದ್ದಾರೆ. ಕ್ರೈಸ್ತರಲ್ಲಿ ಪಾಪಕ್ಷಮಾಪಣೆ ಎಂಬ ಪದವನ್ನು ಹೆಚ್ಚುಜನರು ಬಳಸುತ್ತಿದ್ದಾರೆ. ಪಾಪಕ್ಷಮಾಪಣೆ ಎಂದರೆ ಏನು? ಅದು ಯಾವ ಸಂದರ್ಭದಲ್ಲಿ ಹೇಳಿದ ಮಾತೆಂದು ತಿಳಿಯದೆಯೇ, ಕೆಲವರು ಕ್ರೈಸ್ತರಾಗಿ ಬದಲಾದರೆ ಯಾರಿಗಾದರೂ ಪಾಪಕ್ಷಮಾ ಪಣೆ ಇದೆಯೆಂದು ಹೇಳುವವರೂ ಇದ್ದಾರೆ. ತಮ್ಮ ಮತದಲ್ಲಿ ಪಾಪಕ್ಷಮಾಪಣೆ ಇದೆಯೆಂದು, ಪಾಪವನ್ನು ಮಾಡುವವರೂ ಇದ್ದಾರೆ. ಇನ್ನು ಹಿಂದೂ ಮತದೊಳಗೆ ಬಂದು ನೋಡಿದರೆ, ನಾನು ಹಿಂದೂವೆಂದು ಹೇಳಿಕೊಳ್ಳುವುದಕ್ಕೆ ನನಗೇ ನಾಚಿಕೆಯಾಗುತ್ತಿದೆ. ಆ ವಿಧವಾಗಿ ಹಿಂದೂಮತ ಅಜ್ಞಾನದಲ್ಲಿ ಕೂರಿಕೊಂಡುಹೋಗಿದೆ. ಈ ವಿಧವಾಗಿ ಅಜ್ಞಾನದಲ್ಲಿರುವ ಮೂರು ಮತಗಳಲ್ಲಿನವರನ್ನು ಒಳ್ಳೆಯವರನ್ನಾಗಿ ಮಾಡುವುದಕ್ಕೆ ಮೂರು ಮತಸ್ಥರಿಂದ ಬರುವ ಪ್ರಶ್ನೆಗಳಿಗೆ ಶಾಸ್ತ್ರಬದ್ಧವಾದ ಉತ್ತರಗಳನ್ನು ಈ ಗ್ರಂಥದಲ್ಲಿ ಕೊಡಲಾಗಿದೆ. ಮೊದಲು ಒಬ್ಬ ಮುಸ್ಲಿಮ್ ಕೇಳಿದ ಪ್ರಶ್ನೆಯನ್ನು ತೆಗೆದುಕೊಂಡು ನೋಡೋಣ.

**ಮುಸ್ಲಿಮ್ :–** ನಿಮ್ಮ ಮತದಲ್ಲಿ ರಾಮನನ್ನು ದೇವರು ಎನ್ನುತ್ತಾರೆ, ರಾಮನು ನಿಜವಾಗಲು ದೇವರೇನಾ?

**ಉತ್ತರ :–** ರಾಮನು ತ್ರೇತಾಯುಗದಲ್ಲಿ ಹುಟ್ಟಿದ್ದಾನೆ, ರಾಮನಿಗಿಂತ ಮೊದಲು ತ್ರೇತಾಯುಗದಲ್ಲಿಯೇ ಎಷ್ಟೋ ಕಾಲ ಕಳೆದಿದೆ. ಆ ಯುಗಕ್ಕಿಂತ ಮೊದಲು ಕೃತಯುಗ 17,28,000 ವರ್ಷಗಳು ಕಳೆದುಹೋಗಿವೆ. ರಾಮನು ಹುಟ್ಟುವುದಕ್ಕಿಂತ ಮೊದಲು ಸಹ ದೇವರಿದ್ದಾನೆಂದು ಭಗವದ್ಗೀತೆ ಮುಖಾಂತರ ತಿಳಿಯುತ್ತಿದೆ. ದೇವರು ಎಂಬ ಪದಕ್ಕೆ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಮುಖ್ಯವಾಗಿ ಒಂದು ಧರ್ಮವಿದೆ.

ಅದರ ಪ್ರಕಾರ ದೇವರು ರೂಪ, ನಾಮ, ಕ್ರಿಯಾ ರಹಿತನೆಂದು ತಿಳಿಯುತ್ತಿದೆ. ಅದರಪ್ರಕಾರ ರೂಪವಿರುವವನಾಗಲಿ, ಹೆಸರಿರುವವನಾಗಲಿ, ಕೆಲಸವನ್ನು ಮಾಡುವವನಾಗಲಿ ದೇವರಲ್ಲವೆಂದು ಹೇಳಲಾಗುತ್ತದೆ. ಅದರ ಪ್ರಕಾರ ದೇವರೆಂದರೆ ಒಬ್ಬ ವ್ಯಕ್ತಿಯಲ್ಲ, ಅದೊಂದು ಶಕ್ತಿಯೆಂದು ತಿಳಿಯುತ್ತಿದೆ. ರಾಮನು ವ್ಯಕ್ತಿ ಆದ್ದರಿಂದ ಆತನನ್ನು ಬಿಟ್ಟು, ಆತನಿಗಿರುವ ಹೆಸರಾದ "ರಾಮ" ಎಂಬ ಶಬ್ಧದಲ್ಲಿಯೇ ದೇವರೆಂಬ ಅರ್ಥವಿದೆಯೆಂದು ಹೇಳಬಹುದು. ಅಲ್ಲಾ ಎಂದರೆ ದೇವರೆಂದು ನೀವು ಅಂದಂತೆ, ರಾಮ ಎನ್ನುವ ಎರಡಕ್ಷರಗಳಲ್ಲಿ ದೇವರೆಂಬ ಅರ್ಥ ಒಳಗೊಂಡಿದೆಯೆಂದು ಹೇಳುತ್ತಿದ್ದೇವೆ, ಈಶ್ವರ್ ಎಂದರೆ ಅಧಿಪತಿ ಎಂದು ಅರ್ಥ, ಎಲ್ಲದಕ್ಕೂ ಅಧಿಪತಿ ದೇವರೇ, ಆದ್ದರಿಂದ ದೇವರಿಗೆ ಈಶ್ವರನೆಂಬ ಶಬ್ಧ ಸರಿಹೋದಂತೆ, ರಾಮ ಎನ್ನುವ ಶಬ್ದದಲ್ಲಿ ಸಹ ಅರ್ಥ ಇದೆ. 'ಮ' ಎಂದರೆ ನಾನು ಎಂದೂ 'ರಾ' ಎಂದರೆ ಇಲ್ಲದಂತೆ ನಶಿಸುವುದೆಂದು ಅರ್ಥ. ನಾನು ಎಂಬುವವನು ಇಲ್ಲದಂತೆಹೋದರೆ ದೇವರಲ್ಲಿ ಐಕ್ಯವಾಗಿಹೋ ಗುತ್ತಾನೆ. ಆಗ ಅವನು ದೇವರಾಗಿ ಬದಲಾಗಿಹೋಗುತ್ತಾನೆ. ಅಂತಹ ಅರ್ಥಕೊಡುವ ಶಬ್ಧ ರಾಮ ಎಂದು ಹೇಳಲಾಗುತ್ತಿದೆ. ರಾಮ ಎಂದರೆ ಅರ್ಥ ದೇವರೆಂದು, ವ್ಯಕ್ತಿಯಾದ ರಾಮನಲ್ಲಿನ ಶಕ್ತಿ ದೇವರೆಂದು ಹೇಳಬಹುದು. ಯಾವ ವ್ಯಕ್ತಿಯನ್ನಾದರೂ ಭಗವಂತನನ್ನಬಹುದಾಗಲಿ, ದೇವರು ಎಂದು ಅನ್ನುವುದು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ವಿರುದ್ಧವಾಗುತ್ತದೆ. ಕಾಣಿಸುವ ವ್ಯಕ್ತಿ ಮಹಾತ್ಮನಾಗಬಹುದು, ಯೋಗಿಯಾಗಬಹುದು, ಜ್ಞಾನಿಯಾಗಬಹುದು, ಪ್ರವಕ್ತನಾಗಬಹುದು, ಬ್ರಹ್ಮರ್ಷಿಯಾಗಬಹುದಾಗಲಿ ದೇವರು ಎಂದಿಗೂ ಆಗುವುದಿಲ್ಲ. ದೇವರು ಎಂದರೆ ಕಾಣಿಸದವನು, ಕೇಳಿಸದವನು, ಆದ್ದರಿಂದ ಸೂಪರ್ ಸೈನ್ಸ್ ಪ್ರಕಾರ ವ್ಯಕ್ತಿಯನ್ನು ಎಂದಿಗೂ ದೇವರು ಅನ್ನಬಾರದು. ಕಾಣಿಸದ ದೇವರೇ ಮನುಷ್ಯನಾಗಿ ಬಂದರೆ, ಆತನನ್ನು ಭಗವಂತನೆಂದು ಅನ್ನಬಹುದಾಗಲಿ, ದೇವರು ಎಂದು ಅನ್ನಬಾರದು.

ಆ ವಿಧವಾಗಿ ನಾವು ಬ್ರಹ್ಮವಿದ್ಯಾ ಶಾಸ್ತ್ರದ (ಸೂಪರ್ ಸೈನ್ಸ್) ಪ್ರಕಾರ ಸಮಾಧಾನ ಹೇಳಿದಾಗ, ಅದಕ್ಕಾತನು ತೃಪ್ತಿಹೊಂದಿ ಇದು ಯಾರಾದರೂ

ಒಪ್ಪಿಕೊಳ್ಳಬೇಕಾದ ಉತ್ತರವೇ ಎಂದು ಹೇಳಿಹೋಗಿದ್ದಾನೆ. ಇಲ್ಲಿ ಮೊದಲು ಮೂರು ಮತದವರು ಕೇಳಿದ ಮೂರು ಪ್ರಶ್ನೆಗಳಿಗೆ ಉತ್ತರವನ್ನು ಹೇಳುವುದು ನಡೆದಿದೆ. ಮೂರು ಮತದವರು ಇತರ ಮತಗಳ ಮೇಲೆ ಹಾಕಿದ ಪ್ರಶ್ನೆಯನ್ನೇ ತೆಗೆದುಕೊಂಡು ಹೇಳಿದ್ದೇವೆ. ಮೊದಲು ಮೂರು ಸಮಾಜದವರಿಗೆ ಸರಿಯಾದ ಉತ್ತರ ದೊರೆತರೆ, ನಂತರ ಅವರು ಈ ಗ್ರಂಥವನ್ನು ಕೊನೆಯವರೆಗು ನೋಡುವುದಕ್ಕೆ ಅವಕಾಶವಿದೆ. ಆದ್ದರಿಂದ ಮೊದಲು ಸ್ವಲ್ಪ ಕಠಿಣವಾಗಿರುವ ಪ್ರಶ್ನೆಗಳನ್ನು ಬರೆಯುವುದು ನಡೆದಿದೆಯೆಂದು ಹೇಳುತ್ತಿದ್ದೇವೆ. ಇವು ಮೂರು ಕಠಿಣವಾದ ಪ್ರಶ್ನೆಗಳು, ಹಾಗೆಯೇ ಉತ್ತರಗಳು ಸಹ ಕೆಲವರಿಗೆ ಇಷ್ಟವಾಗ ದಿದ್ದರೂ, ಹೇಳಿರುವುದು ಪೂರ್ತಿ ಶಾಸ್ತ್ರಬದ್ಧತೆಯನ್ನನುಸರಿಸಿ ಹೇಳಿರುವವೆಂದು ತಿಳಿಯಬೇಕು. **ಯಾವ ಮಾತಿಗಾದರು ಶಾಸ್ತ್ರ ಪ್ರಾಣವಿದ್ದಂತೆ. ಶಾಸ್ತ್ರವನ್ನು ಅನುಸರಿಸಿ ಹೇಳದ ಮಾತು ಪ್ರಾಣವಿಲ್ಲದ ಮೃತ ಶರೀರವಂತಾದ್ದು,** ಒಂದುವೇಳೆ ಎಲ್ಲಿಯಾದರು ಅತಿವಾದಿಗಳು ಯಾವುದನ್ನು ಒಪ್ಪಿಕೊಳ್ಳದೆ ಅವರು ತೀವ್ರವಾದ ವನ್ನು ಪ್ರೇರೇಪಿಸಿದರೂ, ಅವರ ಬಲೆಯಲ್ಲಿ ಬೀಳದಂತೆ ನಿಮ್ಮ ಸ್ವತಃ ಬುದ್ಧಿಯಿಂದ ಆಲೋಚಿಸಿ ನಾವು ಹೇಳುವ ಮಾತು ಶಾಸ್ತ್ರವೋ ಅಲ್ಲವೋ, ಸತ್ಯವೋ ಅಲ್ಲವೋ ನೋಡಿರಿ. ಇದು ಶಾಸ್ತ್ರಬದ್ಧವಾದ ಜ್ಞಾನ, ಆದ್ದರಿಂದ ಯಾರೂ ಇದನ್ನು ಎದುರಾಡಲಾರರು. ಯಾರೂ ಎದುರಾಡದ ಜ್ಞಾನವನ್ನು ತಿಳಿಸುತ್ತೇನೆಂದು ದೇವರು ತನ್ನ ಗ್ರಂಥದಲ್ಲಿ ಹೇಳಿದ ಮಾತನ್ನು ನಾವು ಮರೆಯಬಾರದು. ಈಗ ಅಂತಹ ಜ್ಞಾನವನ್ನೇ ದೇವರು ತಿಳಿಸುತ್ತಿದ್ದಾನೆಂದು ಅಂದುಕೊಳ್ಳೋಣ. ಈಗ ಒಬ್ಬ ಕ್ರೈಸ್ತನು ಕೇಳಿದ ಪ್ರಶ್ನೆಯನ್ನು ನೋಡೋಣ.

**ಪ್ರಶ್ನೆ :– ಖುರ್‌ಆನ್‌ನನ್ನು ಪವಿತ್ರಗ್ರಂಥವೆಂದು ಮುಸ್ಲಿಮ್‌ರೆಲ್ಲರೂ ಅನ್ನುತ್ತಾರೆ. ನಿಜಕ್ಕೆ ದೇವರ ಗ್ರಂಥವೇನಾ?**

**ಉತ್ತರ :–** ಅಜ್ಞಾನದಿಂದ ಒಂದು ಮತದವರು ಮತ್ತೊಂದು ಮತವನ್ನು ದ್ವೇಷಿಸುವುದು ಸಹಜವಾಗಿ ನಡೆಯುತ್ತಿರುತ್ತದೆ. ಹಾಗೆಯೇ ಒಂದು ಮತದವರು ಮತ್ತೊಂದು ಮತ ಗ್ರಂಥವನ್ನು ವಿಮರ್ಶಿಸುವುದು ನಡೆಯುತ್ತಿರುತ್ತದೆ. ಪ್ರಪಂಚದಲ್ಲಿ

ಎಷ್ಟೋ ಮತಗಳಿದ್ದರೂ ಮುಖ್ಯವಾಗಿ ಹಿಂದೂ, ಇಸ್ಲಾಮ್, ಕ್ರೈಸ್ತಮತಗಳ ಬಗ್ಗೆ ನಾನು ಮಾತನಾಡುತ್ತೇನೆ. ನಾನು ಸ್ವಚ್ಛವಾದ ಇಂದೂ (ಹಿಂದುವು) ನಾನು ಓದಿರುವುದು ಭಗವದ್ಗೀತೆಯನ್ನು. ಭಗವದ್ಗೀತೆ ಬ್ರಹ್ಮವಿದ್ಯಾಶಾಸ್ತ್ರ. ಬ್ರಹ್ಮವಿದ್ಯಾ ಶಾಸ್ತ್ರವನ್ನು ನಾನು ಪೂರ್ತಿಯಾಗಿ ತಿಳಿದಾಗ, ಆ ಶಾಸ್ತ್ರ ಎಲ್ಲಿದ್ದರೂ, ಯಾವ ಗ್ರಂಥರೂಪದಲ್ಲಿದ್ದರೂ ಸುಲಭವಾಗಿ ಗುರುತಿಸುತ್ತೇನೆ. ಗೀತೆಯಲ್ಲಿರುವ ಶಾಸ್ತ್ರ ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಸಹ ಕಾಣಿಸುವುದರಿಂದ ಮೂರು ಮತಗಳ ಪ್ರಜೆಗಳಿಗೆ ನಾನು ಸುಲಭವಾಗಿ ಉತ್ತರವನ್ನು ಕೊಡುತ್ತೇನೆ. ಖುರ್‌ಆನ್ ಗ್ರಂಥ ಅರ್ಥವಾಗಬೇಕೆಂದರೆ ಬಹಳ ಕಷ್ಟ. ನಡು ಸಮುದ್ರದಲ್ಲಿಂದ ತೀರದಕಡೆಗೆ ಉಟ್ಟು ಇಲ್ಲದಂತೆ ದೋಣಿಯನ್ನು ನಡೆಸುವುದು ಎಷ್ಟುಕಷ್ಟವೋ ಖುರಾನ್ ಅರ್ಥವಾಗುವುದು ಅಷ್ಟು ಕಷ್ಟವಾಗಿರುತ್ತದೆ. ಪ್ರವಕ್ತರ ಕಾಲದಲ್ಲಿಯೇ ಆತನಿಗೆ ಓದುಬಾರದ ಕಾರಣದಿಂದ ಖುರ್‌ಆನ್ ಇತರರಿಂದ ಬರೆಯಲಾದ ಗ್ರಂಥ. ಅದರಲ್ಲಿ ವರಸೆಕ್ರಮ ಇರುವುದಿಲ್ಲ. ಆದ್ದರಿಂದ ಇಸ್ಲಾಮ್ ಪಂಡಿತರೆಂದು ಹೇಳಿಕೊಳ್ಳುವವರಿಗೇ ಅದು ಪೂರ್ತಿ ಅವಗಾಹನೆ ಆಗಿಲ್ಲವೆಂದು ಹೇಳಬಹುದು. ಇಸ್ಲಾಮ್ ಪಂಡಿತರೆ ತಪ್ಪುದಾರಿ ಹಿಡಿದು ಸರಿಯಾಗಿ ಅರ್ಥ ಮಾಡಿಕೊಳ್ಳದಿರುವಾಗ, ಇತರ ಮತಸ್ಥರಿಗದು ಅರ್ಥವಾಗಬೇಕೆಂದರೆ ಬಹಳಕಷ್ಟವೆಂದು ಹೇಳಬಹುದು. ಆದರೂ ಅದು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥ, ಆದ ಕಾರಣ ಅದನ್ನು ಕುರಿತು ಸುಲಭವಾಗಿ ಹೇಳುತ್ತೇನೆ. ಎಲ್ಲರಿಗೂ ಕಷ್ಟವಾದರೂ ನನಗದು ಬಹಳ ಸುಲಭ. ಖುರ್‌ಆನ್ ನಿಜಕ್ಕೆ ದೇವರ ಗ್ರಂಥವೇನಾ ಎಂದು ಮುಸ್ಲಿಮ್‌ಲ್ಲದ ವ್ಯಕ್ತಿ ಕೇಳುವುದು ನಡೆದಿದೆ. ಅದೇ ಪ್ರಶ್ನೆ ಯಾವುದೋ ಒಬ್ಬ ಮುಸ್ಲಿಮ್‌ನಲ್ಲಿ ಸಹ ಇರಬಹುದು. ಖುರ್‌ಆನ್ ದೇವರ ಗ್ರಂಥವೇ ಎಂದು ನಾನು ಹೇಳದ ಮುಂಚೆ ಇದನ್ನು ಕುರಿತು ಸ್ವಲ್ಪ ಇತರರು ಸಹ ತಿಳಿಯಬೇಕಾಗಿದೆ.

ದೇವರು ಸೃಷ್ಟಿಯೆಲ್ಲವನ್ನು ಸೃಷ್ಟಿಸಿದ್ದಾನೆ ಎನ್ನುವಮಾತು ನಿಜ, ಆದರೂ ಕೆಲವರು ದೇವರು ಸೋಮವಾರದಿಂದ ಶನಿವಾರದವರೆಗೂ ಆರುದಿನಗಳು ಕಷ್ಟಪಟ್ಟು ವಿಶ್ವವೆಲ್ಲವನ್ನು ತಯಾರು ಮಾಡಿದ್ದಾನೆಂದು, ಆರುದಿನಗಳು ಕೆಲಸವನ್ನು

ಮಾಡಿದ ಕಾರಣದಿಂದ ಆಯಾಸಗೊಂಡು ಕೊನೆಯದಿನವಾದ ಭಾನುವಾರ ವಿಶ್ರಾಂತಿ ತೆಗೆದುಕೊಂಡಿದ್ದಾನೆಂದು ಹೇಳುತ್ತಿರುತ್ತಾರೆ. ವಾರಕ್ಕಿರುವ ಒಟ್ಟು ಏಳುದಿನಗಳಲ್ಲಿ ಆರು ದಿನಗಳು ಕೆಲಸಮಾಡಿ, ಒಂದುದಿನ ರಜಾ ತೆಗೆದು ಕೊಂಡಿದ್ದಾನೆಂದು ಹೇಳಿಕೊಳ್ಳುವುದರಲ್ಲಿ ಎಷ್ಟರಮಟ್ಟಿಗೆ ಸತ್ಯವಿದೆಯೆಂದು ಆಲೋಚಿದರೆ, ಇಲ್ಲಿಯವರೆಗೂ ಎಲ್ಲರಿಗಿರುವ ಆ ಭಾವನೆ ಪೂರ್ತಿ ತಪ್ಪೆಂದು ತಿಳಿದುಹೋಗುತ್ತಿದೆ. ಆದಿವಾರ ವಾರದಲ್ಲಿ ಕೊನೆಯದಿನವಲ್ಲ. ಆದಿವಾರ ಎಂಬ ಹೆಸರಿನಲ್ಲಿಯೇ ಆದಿ ಎಂದರೆ ಮೊದಲನೆಯದು ಎಂದು ಅರ್ಥ ಇರುವಾಗ ಅದನ್ನು ಕೊನೆಯ ದಿನವೆನ್ನುವುದು ಪೂರ್ತಿ ತಪ್ಪು. ಅಷ್ಟೇ ಅಲ್ಲದೆ ದೇವರು ನಮ್ಮಂತೆ ಮನುಷ್ಯನಲ್ಲ, ನಮ್ಮಂತೆ ಕೆಲಸ ಮಾಡುವವನಲ್ಲ. ದೇವರನ್ನು ಮನುಷ್ಯನಂತೆ ಕೆಲಸ ಮಾಡುವವನಾಗಿ, ಆಯಾಸಗೊಂಡವನಾಗಿ, ವಿಶ್ರಾಂತಿ ತೆಗೆದುಕೊಳ್ಳುವವನಾಗಿ ಹೇಳಿಕೊಳ್ಳಬಾರದು. ಹಾಗೆ ಹೇಳಿಕೊಳ್ಳುವುದರಿಂದ ದೇವರನ್ನು ಕಡಿಮೆ ಮಾಡಿ ಮಾತನಾಡಿದಂತಾಗುತ್ತದೆ. ದೇವರಿಗೆ ನಮ್ಮಂತೆ ಕೆಲಸ ಮಾಡಬೇಕಾದ ಅಗತ್ಯವಿಲ್ಲ. ಆತನ ಸಂಕಲ್ಪದಿಂದಲೇ ಎಲ್ಲಾ ಒಂದು ಕ್ಷಣದಲ್ಲಿ ನಡೆದುಹೋಗುತ್ತದೆ. ದೇವರಿಗೆ ಆರುದಿನಗಳು ಕೆಲಸದ ದಿನಗಳೆಂದು ಹೇಳುವುದು ಶಾಸ್ತ್ರ ವಿರುದ್ಧ. ಆತನು ಅಂದುಕೊಂಡರೆ ಒಂದು ಕ್ಷಣದಲ್ಲಿಯೇ ಏನಾದರೂ ನಡೆದುಹೋಗುತ್ತದೆ. ಈ ವಿಷಯವನ್ನೇ ಭಗವದ್ಗೀತೆಯಲ್ಲಿ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ ಆರನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ. "ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ" "ನಾ ಸಂಕಲ್ಪದಿಂದಲೇ ಸಮಸ್ತಲೋಕವು ಅದರಲ್ಲಿ ಪ್ರಜೆಗಳು ಹುಟ್ಟಿದ್ದಾರೆ." ಈ ಮಾತು ಶಾಸ್ತ್ರದಲ್ಲಿನ ಶಾಸನವಾದ್ದರಿಂದ ಅದನ್ನು ಯಾರೂ ಖಂಡಿಸಲಾರರು. ಇದೇ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ 2ನೇ ಸುರಾದಲ್ಲಿ 117ನೇ ಆಯತ್‌ನಲ್ಲಿ, 36ನೇ ಸುರಾದಲ್ಲಿ 82ನೇ ಆಯತ್‌ನಲ್ಲಿ, 40ನೇ ಸುರಾದಲ್ಲಿ 68ನೇ ಆಯತ್‌ನಲ್ಲೂ ಸಹ ಹೇಳಿದ್ದಾರೆ.

2ನೇ ಸುರಾ ಅಲ್‌ಬಖರಾಲ್ 117ನೇ ವಾಕ್ಯ "ಭೂಮ್ಯಾಕಾಶಗಳನ್ನು ಪ್ರಪ್ರಥಮವಾಗಿ ಸೃಷ್ಟಿಸಿದವನು ಆತನೇ (ದೇವರೇ). ಆತನು ಯಾವ

ಕೆಲಸವನ್ನಾದರೂ ಮಾಡಲು ಸಂಕಲ್ಪಿಸಿಕೊಂಡಾಗ ಅದನ್ನು "ಆಗಿಹೋಗಲಿ" ಎಂದರೆ ಸಾಕು, ಅದು ಆಗಿಹೋಗುತ್ತದೆ." ಈ ವಿಧವಾಗಿರುವಾಗ ದೇವರಿಗೆ ಆರುದಿನಗಳು ಕೆಲಸ, ಒಂದು ದಿನ ರಜಾ ಎಂಬಮಾತು ಮೇಲಿನ ವಾಕ್ಯಗಳಿಗೆ ವಿರುದ್ಧವಾಗುತ್ತದೆ. ಕೆಲವರು ಯಾವುದು ಶಾಸ್ತ್ರವೋ ಯಾವುದು ಶಾಸ್ತ್ರ ಅಲ್ಲವೋ ತಿಳಿಯಲಾರದ ಸ್ಥಿತಿಯಲ್ಲಿ ಗಲಿಬಿಲಿ ಆಗುತ್ತಿರುತ್ತಾರೆ. ಏಕೆಂದರೆ ಒಂದೇ ಗ್ರಂಥದಲ್ಲಿಯೇ ಎರಡು ವಿಧಗಳ ಜ್ಞಾನ ಕಾಣಿಸಿದಾಗ ಅಂತಹ ಸ್ಥಿತಿ ಏರ್ಪಡುತ್ತದೆ. ಸುರಾ 2, ಆಯತ್ 117ರಲ್ಲಿ ಮೇಲೆ ಹೇಳಿದ ವಾಕ್ಯಕ್ಕೆ ವಿರುದ್ಧವಾಗಿ ಅಲ್ಲಾ ಆರುದಿನಗಳು ಸೃಷ್ಟಿಸಿದ್ದಾನೆ ಎಂಬ ಮಾತು ಅದೇ ಖುರ್‌ಆನ್ ಗ್ರಂಥದಲ್ಲಿ 7ನೇ ಸುರಾದಲ್ಲಿ 54ನೇ ಆಯತ್‌ನಲ್ಲಿ, 11ನೇ ಸುರಾದಲ್ಲಿ 7ನೇ ಆಯತ್‌ನಲ್ಲೂ, 32ನೇ ಸುರಾದಲ್ಲಿ 4ನೇ ಆಯತ್‌ನಲ್ಲಿ, 50ನೇ ಸುರಾದಲ್ಲಿ 38ನೇ ವಾಕ್ಯದಲ್ಲಿ, 57ನೇ ಸುರಾದಲ್ಲಿ 4ನೇ ವಾಕ್ಯದಲ್ಲಿ ಇದೆ. ಉದಾಹರಣೆಗೆ 32. 4ರಲ್ಲಿ "ಅಲ್ಲಾಯೇ ಆಕಾಶಗಳನ್ನು, ಭೂಮಿಯನ್ನು ಅವುಗಳಮಧ್ಯದಲ್ಲಿರುವ ಸಮಸ್ತವನ್ನು ಆರು ದಿನಗಳಲ್ಲಿ ಸೃಷ್ಟಿಸಿದ್ದಾನೆ. ನಂತರ ಸಿಂಹಾಸನವನ್ನು (ಅರ್ಷನು) ಅದಿಷ್ಠಿಸಿದ್ದಾನೆ. ಆತನು ಹೊರತು ನಿಮಗೆ ಯಾವ ಸಹಾಯಕನೂ, ಮತ್ತ್ಯಾವ ಸಿಫಾರಸನ್ನು ಮಾಡುವವನು ಇಲ್ಲ. **ಆದರೂ ನೀವು ಹಿತಬೋಧನೆಯನ್ನು ಗ್ರಹಿಸಲಾರದಿದ್ದೀರೇನು?"** ಎಂದು ಇದೆ. ಈ ಮಾತು 2, 117ರಲ್ಲಿನ ಮಾತಿಗೆ ಪರಸ್ಪರ ವಿರುದ್ಧವಾಗಿ ಕಾಣಿಸುವುದು. ಎಂತಹ ಜ್ಞಾನಿಯಾದರೂ ಯಾವಕಡೆ ತೀರ್ಮಾನಿಸಿಕೊಳ್ಳದೆ ಸಂದಿಗ್ಧಾವಸ್ಥೆಯಲ್ಲಿ ಬಿದ್ದುಹೋಗುವನು. ಅಂತಹ ಸ್ಥಿತಿಯಲ್ಲಿ ಯಾರಿಗಾದರೂ ಇದು ದೇವರ ಗ್ರಂಥವೇನಾ ಎಂದು ಪ್ರಶ್ನೆಬರುತ್ತದೆ. ಅಂತಹ ಸಂದರ್ಭದಲ್ಲಿ ಇತರ ಮತಸ್ಥನು ಯಾರಾದರೂ ಈ ಪ್ರಶ್ನೆಯನ್ನು ಕೇಳುತ್ತಾನೆ. ಆದ್ದರಿಂದ ಮೊದಲೇ ನಾನು ಒಂದುಮಾತನ್ನು ಹೇಳಿದ್ದೇನೆ. ಅದೇನೆಂದರೆ! ಇದು ದೇವರ ಗ್ರಂಥವೇಯೆಂದು ನಾನು ಹೇಳದಮೊದಲೇ ಇದರ ಬಗ್ಗೆ ಮೊದಲೇ ಸ್ವಲ್ಪ ತಿಳಿಯಬೇಕಾಗಿರುವುದಿದೆಯೆಂದು ಹೇಳಿದ್ದೇನೆ. ಹಾಗೆ ಹೇಳುವುದಕ್ಕೆ ಕಾರಣ ಏನೆಂದರೆ!

ಖುರ್‌ಆನ್ ಗ್ರಂಥದಲ್ಲಿ ಪರಸ್ಪರ ವಿರುದ್ಧ ವಾಕ್ಯಗಳಿವೆಯೆಂದು ತಿಳಿದರೂ ಅದು ಶಾಸ್ತ್ರಬದ್ಧವಾದ ದೇವರ ಗ್ರಂಥವೇ ಎಂದು ಮೊದಲೇ ನಾನೊಂದು ನಿರ್ಣಯಕ್ಕೆ ಬಂದಿದ್ದೇನೆಂದು ಮೇಲಿನ ಮಾತಿನಿಂದ ತಿಳಿದುಹೋಗುತ್ತದೆ. ಆದರೆ ನಿಮಗೆ ಪರಸ್ಪರ ವಿರುದ್ಧ ವಾಕ್ಯಗಳಿರುವಂತೆ ತಿಳಿಯದಮೊದಲೇ ಅದು ದೇವರ ಗ್ರಂಥವೇ ಎಂದು ನನ್ನ ನಿರ್ಣಯವನ್ನು ಹೇಳಿದರೂ, ನಂತರ ಒಂದಕ್ಕೊಂದು ವಿರುದ್ಧ ವಾಕ್ಯಗಳು ಕಾಣಿಸಿದಾಗ ನನ್ನ ಮಾತನ್ನು ನೀವು ಅಲ್ಲಗಳೆಯುತ್ತೀರ. ಆದ್ದರಿಂದ ನಿಮಗೆ ಅನುಮಾನ ಬರುವ ವಿಷಯವನ್ನು ಮೊದಲೇ ಹೇಳಿ, ಅದರಲ್ಲಿನ ಆತಂಕಗಳನ್ನು ತೆಗೆದುಹಾಕಿದರೆ ನಂತರ ಎಂತಹ ಸಂದಿಗ್ದ ಬಂದರೂ, ಅದನ್ನು ಅತಿಕ್ರಮಿಸಿ ನನ್ನ ಮಾತನ್ನೇ ವಿಶ್ವಾಸಿಸುತ್ತಾರೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ! ಪರಸ್ಪರ ವಿರುದ್ಧವಾದ ಮಾತುಗಳು ಮೊದಲು ತಿಳಿದರೂ ಅಥವಾ ನಂತರ ತಿಳಿದರೂ ಅದರ ಮೇಲೆ ಯಾರಿಗಾದರೂ ಅನುಮಾನ ಬಾರದೆ ಇರುವುದಿಲ್ಲ ಅಲ್ಲವೆ! ನೀನು ನಿನ್ನ ನಿರ್ಣಯವನ್ನು ಹೇಳಿದರೂ ನಾವು ಅದನ್ನೇಕೆ ಒಪ್ಪಿಕೊಳ್ಳುತ್ತೇವೆ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗಿದೆ. ನಾನು ಇನ್ನೂ ಹೇಳಬೇಕಾಗಿರು ವುದು ಇದೆ. ನಿಮಗೆಲ್ಲಾ ತಿಳಿದ ನಂತರ ನಾನು ಹೇಳದಿದ್ದರೂ ನೀವೇ ನನ್ನ ಮಾತುಗಳನ್ನು ಹೇಳುತ್ತೀರಾ. ಆದ್ದರಿಂದ ಇನ್ನೂ ಮುಂದಕ್ಕೆ ಹೋಗಿ ತಿಳಿದುಕೊಳ್ಳೋಣ.

ದೇವರು ರೂಪ, ನಾಮ, ಕ್ರಿಯಾರಹಿತನು ಅಲ್ಲವೆ! ಅಂತಹದರಲ್ಲಿ ಸೃಷ್ಠಿಯನ್ನು ತಯಾರು ಮಾಡಬೇಕೆಂಬ ಆಲೋಚನೆ ಬರುವುದೂ, ಹಾಗೆಯೇ ಆಗಿಹೋಗಲಿ ಎಂದರೆ ಎಲ್ಲಾ ತಯಾರಾಗುವುದು ನಡೆದರೂ, ಆಲೋಚನೆ ಬರುವುದಾಗಲಿ, ಅದರ ಪ್ರಕಾರವೇ ಸಂಕಲ್ಪದಿಂದಲೇ ಸೃಷ್ಠಿಯನ್ನು ನಿರ್ಮಿಸುವುದಾಗಲಿ ಕೆಲಸವೇ ತಾನೆ! ಅಂತಹದರಲ್ಲಿ ದೇವರಿಗೆ ಕ್ರಿಯೆ ಇಲ್ಲವೆಂದು, ದೇವರು ಕ್ರಿಯಾರಹಿತನೆಂದು ನೀವು ಹೇಗೆ ಹೇಳುತ್ತೀರೆಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಸೃಷ್ಠಿ

ತಯಾರಾಗದ ಮುಂಚೆ ಯಾರೂ ಇಲ್ಲ, ಆದ್ದರಿಂದ ದೇವರು ಎಂತಹವನೋ ಯಾರಿಗೂ ತಿಳಿದಿಲ್ಲ. ಆತನ ಬಗ್ಗೆ ಹೇಳಿಕೊಳ್ಳುವವರೇ ಇಲ್ಲ!. ಸೃಷ್ಠಿ ತಯಾರಾದ ನಂತರ ಆತನನ್ನು ಕುರಿತು ಹೇಳಬಹುದು. ಸೃಷ್ಟಿ ತಯಾರಾದ ನಂತರ ದೇವರು ಎಂಬುವವನಿಗೆ ರೂಪವಾಗಲಿ, ಹೆಸರಾಗಲಿ, ಕೆಲಸವಾಗಲಿ ಯಾವುದು ಇಲ್ಲ ಎಂಬುವುದು ಶಾಸನ. ಸೃಷ್ಠಿ ತಯಾರಾಗದ ಮೊದಲು ದೇವರು ಏನು ಮಾಡುವವನೋ, ಹೇಗಿರುವವನೋ, ಯಾವ ಹೆಸರು ಹೊಂದಿರುತ್ತಾನೋ ಯಾರಿಗೂ ತಿಳಿದಿಲ್ಲ. ಅದನ್ನು ಕುರಿತು ಯಾರೂ ಹೇಳಲಾರರು. ಸೃಷ್ಟಿ ತಯಾರು ಮಾಡಲಾದ ನಂತರ ದೇವರು ಯಾರು? ಏನು ಮಾಡುತ್ತಾನೆ? ಆತನು ಹೇಗಿದ್ದಾನೆ? ಎನ್ನುವ ಮೂರು ಪ್ರಶ್ನೆಗಳಿಗೆ ಯಾರು ಎನ್ನುವುದಕ್ಕು ಇಂತಹದು ಎನ್ನುವುದಕ್ಕು ಹೆಸರಿಲ್ಲ. ಏನು ಮಾಡುತ್ತಾನೋ ಅನ್ನುವುದಕ್ಕೆ ಆತನಿಗೆ ಕೆಲಸವಿಲ್ಲ. ಆತನು ಹೇಗಿದ್ದಾನೆನ್ನುವುದಕ್ಕೆ ಆತನಿಗೆ ಆಕಾರವೇ ಇಲ್ಲ, ಆದ್ದರಿಂದ ದೇವರನ್ನು ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ಹೇಳಿದ್ದಾರೆ. ಅಂತಹ ದೇವರನ್ನು ತಿಳಿಸುವುದಕ್ಕೆ ಯಾರಿಗೂ ಶಕ್ಯವಾಗುವುದಿಲ್ಲ, ಯಾರೂ ಹೇಳಲಾರರು. ಅಂತಹದರಲ್ಲಿ ದೇವರ ವಿಷಯ ಮನುಷ್ಯರಿಗೆ ಹೇಗೆ ತಿಳಿಯುತ್ತದೆಂಬ ಪ್ರಶ್ನೆಬರುತ್ತದೆ. ಅದಕ್ಕೆ ಉತ್ತರವಾಗಿ ಹೇಳಿದರೆ ಹೀಗಿದೆ. ದೇವರ ವಿಷಯವನ್ನು ದೇವರೇ ಹೇಳಬೇಕು. ಇಲ್ಲದಿದ್ದರೆ ಯಾರೂ ಹೇಳುವುದಕ್ಕೆ ಅವಕಾಶವಿಲ್ಲವೆಂದು ಹೇಳಬಹುದು. ದೇವರು ಕೆಲಸ ಮಾಡದವನು ಅಲ್ಲವೆ! ಅಂತಹದರಲ್ಲಿ ಆತನು ಹೇಗೆ ಹೇಳುತ್ತಾನೆಂಬ ಪ್ರಶ್ನೆಯೂ ಸಹ ಬರುತ್ತದೆ. ಆದ್ದರಿಂದ ದೇವರು ವಿಶ್ವವನ್ನು ಸೃಷ್ಟಿಸಿದಾಗಲೇ, ತನ್ನ ಜ್ಞಾನವನ್ನು ಪ್ರಜೆಗಳಿಗೆ ತಿಳಿಸುವುದಕ್ಕೋಸ್ಕರ, ತಾನು ಸ್ವತಃ ತಿಳಿಸದಂತೆ, ಬೇರೆ ವಿಧಾನದ ಮೂಲಕ ತಿಳಿಯುವಂತೆ ಏರ್ಪಾಟು ಮಾಡಿಟ್ಟಿದ್ದಾನೆ. ದೇವರು ಮೊದಲೇ ನಿರ್ಣಯಿಸಿದ ವಿಧಾನಗಳು ಮೂರು ವಿಧಗಳಾಗಿವೆ. ಈ ಮೂರು ವಿಧಾನಗಳಲ್ಲಿಯೂ ದೇವರು ಸ್ವತಃವಾಗಿ ಸ್ವಲ್ಪವೂ ತಿಳಿಸದಿದ್ದರೂ, ದೇವರ ಜ್ಞಾನ ಮನುಷ್ಯರಿಗೆ ತಿಳಿಯುವಂತೆ ಮಾಡಿದ್ದಾನೆ.

ಮೂರು ವಿಧಾನಗಳಲ್ಲಿ ಒಂದು ಆಕಾಶವಾಣಿ ಮೂಲಕ ದೇವರ ಜ್ಞಾನ ತಿಳಿಯುತ್ತದೆ. ಎರಡು ದೇವರ ಅಂಶವಿರುವ ವ್ಯಕ್ತಿ ದೇವರ ಜ್ಞಾನವನ್ನು

ತಿಳಿಸುತ್ತಾನೆ. ಮೂರು ಕಾಣಿಸದೆ ತೆರೆಹಿಂಬದಿಯಲ್ಲಿರುವವನು ಹೇಳುವುದರಿಂದ ದೇವರ ಜ್ಞಾನ ಪ್ರಜೆಗಳಿಗೆ ತಿಳಿಯುತ್ತದೆ. ಈ ಮೂರು ವಿಧಾನಗಳಲ್ಲಿ ಒಬ್ಬರು ಕಾಣಿಸುವ ವ್ಯಕ್ತಿ ಹೇಳಿದಾಗ, ಒಬ್ಬರು ಕಾಣಿಸದ ವ್ಯಕ್ತಿ ಹೇಳಿದಾಗ, ಮತ್ತೊಬ್ಬ ವ್ಯಕ್ತಿಯಲ್ಲದೆ ಪಂಚಭೂತಗಳಲ್ಲಿ ಒಂದುಶಕ್ತಿಯಾದ ಆಕಾಶ ಹೇಳುವುದು ನಡೆಯುತ್ತಿದೆಯೆಂದು, ದೇವರು ಸೃಷ್ಟಿಗೆ ಪೂರ್ವದಲ್ಲಿಯೇ ದೇವರು ನಿರ್ಣಯಿಸಿದ್ದಾನೆ. ದೇವರ ನಿರ್ಣಯದ ಪ್ರಕಾರ ಮೂರು ವಿಧಗಳಾಗಿ ದೇವರ ಜ್ಞಾನ ಮನುಷ್ಯರಿಗೆ ತಿಳಿಯುತ್ತಿದೆ. ಆದರೆ ದೇವರು ಸ್ವತಃವಾಗಿ ಎಲ್ಲಿಯೂ ಹೇಳಲಿಲ್ಲ. ಆದ್ದರಿಂದ ಕ್ರಿಯಾರಹಿತನೆಂಬ ಮಾತು ಆತನಿಗೆ ಸರಿಹೋಗಿದೆ. ಇದೇ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ 42ನೇ ಸುರಾದಲ್ಲಿ 51ನೇ ಆಯತ್‌ನಲ್ಲಿ ಹೀಗೆ ಹೇಳುವುದು ನಡೆದಿದೆ. “ಯಾವ ಮಾನವನೊಂದಿಗೂ ದೇವರು ನೇರವಾಗಿ ಮಾತನಾಡುವುದಿಲ್ಲ.” ಆದರೆ ಒಂದು ವಾಣಿ ಮೂಲಕ (ಆಕಾಶ ಶಬ್ಧದ ಮೂಲಕ), ಎರಡು ತೆರೆ ಹಿಂಬದಿಯಿಂದ ಒಬ್ಬರು ಹೇಳುವುದರಿಂದ, ಮೂರು ತನ್ನದೂತನ ಮೂಲಕ ದೇವರು ನಿರ್ಣಯಿಸಿದಂತೆ ದೇವರ ಜ್ಞಾನ ಮನುಷ್ಯರಿಗೆ ತಿಳಿಯುತ್ತಿದೆ. ನಿಶ್ಚಯವಾಗಿ **ಆತನು ಮಹೋನ್ನತನು, ವಿವೇಕವಂತನು**.

ಮನುಷ್ಯರು ಅಧರ್ಮವರರು ಆಗದಂತಿರುವುದಕ್ಕೆ, ಭೂಮಿಮೇಲೆ ಅಧರ್ಮಗಳು ಹೆಚ್ಚಾಗಿ ಧರ್ಮಗಳಿಗೆ ಗ್ಲಾನಿ (ಮುಪ್ಪು) ಏರ್ಪಟ್ಟಾಗ ನನ್ನನ್ನು ನಾನು ಸೃಷ್ಟಿಸಿಕೊಂಡು ಬಂದು ಯುಗಯುಗದಲ್ಲಿಯೂ ಧರ್ಮಗಳನ್ನು ತಿಳಿಸುತ್ತೇನೆಂದು ಭಗವದ್ಗೀತಾ ಗ್ರಂಥದಲ್ಲಿ ಜ್ಞಾನಯೋಗದಲ್ಲಿ “ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ” ಎನ್ನುವ ಏಳನೇ ಶ್ಲೋಕದಲ್ಲಿಯೂ, “ಪರಿತ್ರಾಣಾಯ ಸಾಧೂನಾಂ ವಿನಾಶಾಯಚದುಷ್ಕೃತಾಮ್” ಅನ್ನುವ ಎಂಟನೇ ಶ್ಲೋಕದಲ್ಲಿಯೂ ಭಗವಂತನು ಹೇಳುವುದು ನಡೆದಿದೆ. (ನೀವು ಚೆನ್ನಾಗಿ ಜ್ಞಾಪಕ ಇಟ್ಟುಕೊಳ್ಳಬೇಕಾಗಿರುವುದೇನೆಂದರೆ! ಇಲ್ಲಿ ಗೀತೆಯಲ್ಲಿ ಭಗವಂತನು ಹೇಳಿದ್ದಾನೆಂದು ಹೇಳಿದ್ದೇವೆಯಾಗಲಿ ದೇವರು ಹೇಳಿದ್ದಾನೆಂದು ಹೇಳಲಿಲ್ಲ.)

ಗೀತೆಯಲ್ಲಿಯೇ ಜ್ಞಾನಯೋಗದಲ್ಲಿ ಮೊದಲ ಶ್ಲೋಕದಲ್ಲಿಯೇ "ಇಮಂ ವಿವಸ್ವತೇ ಯೋಗಂ ಪ್ರೋಕ್ತ ವಾನಹ ಮವ್ಯಯಮ್" ಎಂದು ಸಹ ಹೇಳಲಾಗಿದೆ. ಈ ಶ್ಲೋಕದಲ್ಲಿ ಆಕಾಶದಲ್ಲಿನ ಸೂರ್ಯಗ್ರಹಕ್ಕೆ ಜ್ಞಾನ ಹೇಳಲಾಗಿದೆ ಎಂದು ಇದೆ. ಈ ವಿಧವಾಗಿ ಭಗವದ್ಗೀತೆಯಲ್ಲಿಯೇ ಎರಡು ವಿಧಗಳಾಗಿ ಜ್ಞಾನ ತಿಳಿಸಲಾಗಿದೆ. ಒಂದು ಶೂನ್ಯದಲ್ಲಿನ ಸೂರ್ಯನಿಗೆ, ಎರಡನೆಯದು ಭೂಮಿಮೇಲೆ ಮನುಷ್ಯರಿಗೆ ಹೇಳುವುದರಿಂದ ಎರಡು ವಿಧಗಳ ಜ್ಞಾನವನ್ನು ದೇವರು ಭೂಮಿ ಮೇಲೆ ತಿಳಿಸಿದಂತೆ ತಿಳಿಯುತ್ತಿದೆ. ವಿವರವಾಗಿ ನಿಮಗೆ ಅರ್ಥವಾಗಬೇಕೆಂದರೆ 1400 ವರ್ಷಗಳ ಪೂರ್ವದಲ್ಲಿ ಹೇಳಲಾದ ಖುರಾಆನ್ ಗ್ರಂಥದಲ್ಲಿ 42ನೇ ಸುರಾ 51 ಆಯತ್‌ನಲ್ಲಿ ದೇವರು ಮೂರು ವಿಧಗಳ ತನ್ನ ಜ್ಞಾನವನ್ನು ತಿಳಿಯುವಂತೆ ಮಾಡುತ್ತಾನೆ ಅನ್ನುವಂತೆ ಒಂದು ಆಕಾಶ ತನ್ನ ವಾಣಿ ಮೂಲಕ ಸೂರ್ಯನಿಗೆ ಸೃಷ್ಟಿ ಆದಿಯಲ್ಲಿಯೇ ಹೇಳುವುದು ನಡೆದಿದೆ. ಪಂಚ ಭೂತಗಳಲ್ಲಿ ಒಂದಾದ ಆಕಾಶ ಭೂತಗಳಲ್ಲಿ ಮಹಭೂತವಾಗಿ ಹೇಳಲಾಗಿದೆ. ಖಗೋಳದಲ್ಲಿರುವ ಉಪ ಭೂತಗಳು, ಭೂತಗಳು, ಮಹಾಭೂತಗಳು ಎನ್ನುವ ಮೂರು ವಿಧಗಳ ಭೂತಗಳಲ್ಲಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವವು ಮಹಾ ಭೂತಗಳಾಗಿ ಹೇಳಲಾಗುತ್ತಿವೆ. ಮಹಾಭೂತಗಳಲ್ಲಿ ಮೊದಲನೆಯದಾದ ಆಕಾಶ ತನ್ನ ಸೂಕ್ಷ್ಮವಾಣಿಯಿಂದ ಸೂರ್ಯ ಗ್ರಹಕ್ಕೆ ಹೇಳುವುದು ನಡೆದಿದೆ. ವಿಶ್ವದಲ್ಲಿರುವ ಗ್ರಹಗಳು, ಉಪಗ್ರಹಗಳು, ಮಹಾಗ್ರಹಗಳು ಎಂಬ ಮೂರು ವಿಧಗಳಲ್ಲಿ ಒಂದು ಗ್ರಹವಾದ ಸೂರ್ಯನಿಗೆ, ಮಹಾಭೂತವಾದ ಆಕಾಶ ತನ್ನ ವಾಣಿಮೂಲಕ ಆದಿಯಲ್ಲಿಯೇ ದೇವರ ಜ್ಞಾನವನ್ನು ಹೇಳುವುದು ನಡೆದಿದೆ. ಅದರಿಂದ ದೇವರು ಮೂರು ವಿಧಗಳ ತನ್ನ ಜ್ಞಾನ ಭೂಮಿಮೇಲೆ ತಿಳಿಯುತ್ತದೆ ಎನ್ನುವುದರಲ್ಲಿ ಒಂದು ವಾಣಿಮೂಲಕ (ವಹಿಮೂಲಕ) ಅನ್ನುವ ಒಂದು ವಿಧಾನ ನೇರವೇರಿದೆಯೆಂದು ಹೇಳಬಹುದು.

ಇನ್ನುಹೋದರೆ ಭಗವದ್ಗೀತೆ ಶ್ರೀಕೃಷ್ಣನಿಂದ ಹೇಳಲಾಗಿದೆ. ಶ್ರೀಕೃಷ್ಣನು ದೇವರ ಸಮಾಚಾರವನ್ನು ತಂದ ದೂತನಂತೆ ಬಂದು (ಭಗವಂತನಾಗಿ ಬಂದು)

ದೇವರ ಜ್ಞಾನವನ್ನು ತಿಳಿಸುವುದು ನಡೆದಿದೆ. ದ್ವಾಪರಯುಗದ ಕೊನೆಯಲ್ಲಿ ಐದುಸಾವಿರ ವರ್ಷಗಳ ಪೂರ್ವದಲ್ಲಿ ಭಗವಂತನಾದ (ಅವಧೂತನಾದ) ಕೃಷ್ಣನು ಹೇಳುವುದರಿಂದ, ಅದೇ ಅವಧೂತ ಮತ್ತೊಂದುಬಾರಿ, ಮತ್ತೊಂದು ಹೆಸರಿನಿಂದ ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಸಹಾ ಹೇಳುವುದರಿಂದ, ದೇವರು ತನ್ನ ದೂತನ ಮೂಲಕ ಜ್ಞಾನವನ್ನು ತಿಳಿಸುತ್ತೇನೆಂಬ ವಿಧಾನವೂ ಸಹಾ ನೇರವೇರಿದೆ. ಮತ್ತೊಂದು ವಿಧಾನವಾದ ತೆರೆಮರೆಯಿಂದ ಹೇಳುವುದೆಂಬ ಮಾತು ಸಹಾ ಬಹಳಸಲ ನೇರವೇರಿದೆ. ವಿವರವಾಗಿ ಹೇಳಿದರೆ ಹೇಳುವವನು ಒಬ್ಬನಿದ್ದು, ಅವನು ಕಾಣಿಸದಂತೆ ಹೇಳುವುದನ್ನು ತೆರೆಹಿಂದಿನಿಂದ ಹೇಳುವುದಾಗುತ್ತಿದೆ. ಸೂಕ್ಷ್ಮರೂಪದಲ್ಲಿ ಕಾಣಿಸದಂತೆ ಇದ್ದು ದೇವರ ಜ್ಞಾನವನ್ನು ತಿಳಿದವರು ಯಾರಾದರೂ ಮನುಷ್ಯರಿಗೆ ಹೇಳಬಹುದು. ಸೂರ್ಯಗ್ರಹ ಒಂದುಬಾರಿ ಹೇಳಿದಾಗ ದೇವರ ಪರಿಪಾಲನೆಯಲ್ಲಿರುವ ಜಿಬ್ರಯೇಲ್ ಎಂಬ ಸೂಕ್ಷ್ಮವಾಗಿ ಕಾಣಿಸದ ಗ್ರಹ ಎರಡನೆಬಾರಿ ಮಹಮ್ಮದ್ ಪ್ರವಕ್ತಗೆ ದೇವರ ಜ್ಞಾನ ಹೇಳುವುದು ನಡೆದಿದೆ. ಹಾಗೆ ಸೂರ್ಯನು, ಜಿಬ್ರಯೇಲ್ ಹೇಳುವುದರಿಂದ ತೆರೆಮರೆಯಿಂದ ಹೇಳುವುದೆಂಬ ವಿಧಾನ ಸಹಾ ನೇರವೇರಿದೆಂದು ಹೇಳಬಹುದು. ಈ ವಿಧವಾಗಿ ದೇವರ ಜ್ಞಾನ ವಾಣಿ ಮೂಲಕ ಸೃಷ್ಟ್ಯಾದಿಯಲ್ಲಿ ಒಂದಬಾರಿ, ಕಾಣಿಸುವ ಅವಧೂತ (ಭಗವಂತನು) ಹೇಳುವುದರ ಮೂಲಕ ಎರಡನೆ ಬಾರಿ, ಅವ್ಯಕ್ತವಾದ ಜಿಬ್ರಯೇಲ್ ಮತ್ತು ಸೂರ್ಯನು ಕಾಣಿಸದೆ ತೆರೆ ಹಿಂದಿನಿಂದ ಎರಡುಬಾರಿ ಹೇಳುವುದರಿಂದ, ದೇವರು ಜ್ಞಾನ ಮೂರು ವಿಧಗಳು ಭೂಮಿಮೇಲೆ ತಿಳಿಯುತ್ತದೆಂಬ ಮಾತು ನೇರವೇರಿದೆ. ಈ ಮೂರು ವಿಧಾನಗಳಲ್ಲಿ ಅವಧೂತ ಹೇಳಿದ ಭಗವದ್ಗೀತೆ, ಬೈಬಲ್ ಗ್ರಂಥಗಳು ಎರಡು ಇರುವಾಗ, ತೆರೆಮರೆಯಿಂದ ಹೇಳಿದ ವಿಧಾನವಾದ ಖುರ್‌ಆನ್ ಗ್ರಂಥ ಸಹಾ ಇದೆ. ಹಾಗೆಯೇ ಸೃಷ್ಠಿಆದಿಯಲ್ಲಿ ವಾಣಿ ಮೂಲಕ ಹೇಳಿರುವುದೇ ಭಗವದ್ಗೀತೆಯೆಂದು ತಿಳಿದಿದೆ.

ಈಗಲೂ ಸ್ವಲ್ಪಮಟ್ಟಿಗೆ ನಮಗರ್ಥವಾಗಿರುವುದನ್ನನುಸರಿಸಿ ಖುರ್‌ಆನ್ ದೇವರಗ್ರಂಥವೆಂದು ಹೇಳಬಹುದು. ಒಂದು ಖುರ್‌ಆನ್ ಗ್ರಂಥವೇ ಅಲ್ಲದೆ

ಅವಧೂತ ಎರಡು ಬಾರಿ ಹೇಳಿದ ಗೀತೆ, ಬೈಬಲ್ ಎರಡು ಗ್ರಂಥಗಳು ಸಹಾ ದೇವರ ಗ್ರಂಥಗಳೆಂದು ಹೇಳಬಹುದು. ಇನ್ನೂ ಚೆನ್ನಾಗಿ ಹೇಳಿದರೆ ಸೃಷ್ಠಿಆದಿಯಲ್ಲಿ ಆಕಾಶವಾಣಿ ಮೂಲಕ ಸೂರ್ಯನಿಗೆ ಹೇಳಲಾದ ಜ್ಞಾನವೇ ಭಗವದ್ಗೀತೆಯಲ್ಲಿ ಹೇಳಿರುವುದರಿಂದ ಮೂರು ವಿಧಾನಗಳ ಸಂಪೂರ್ಣ ಜ್ಞಾನವೆಲ್ಲವೂ ಗೀತೆಯಲ್ಲಿ ಇದೆಯೆಂದು ತಿಳಿಯುತ್ತಿದೆ. ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲನೆ 1.2.3 ಶ್ಲೋಕಗಳಲ್ಲಿಯೇ ಸೃಷ್ಠಿ ಆದಿಯಲ್ಲಿ ವಾಣಿ ಮೂಲಕ ಸೂರ್ಯನಿಗೆ ಹೇಳಿದ ಜ್ಞಾನವೇ ಹೇಳುತ್ತಿದ್ದೇನೆಂದು ಇರುವುದರಿಂದ ಭಗವದ್ಗೀತೆ ಜ್ಞಾನ ಆದಿಯಲ್ಲಿ ಹೇಳಿದ ಜ್ಞಾನವೆಂದು ತಿಳಿದುಹೋಗಿದೆ. ಇಲ್ಲಿ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಭಗವದ್ಗೀತೆಯಲ್ಲಿ ನೀನು ಮಾಡುವ ಕೆಲಸಗಳನ್ನನುಸರಿಸಿ ನಿನಗೆ ಪಾಪಪುಣ್ಯಗಳು ಬರುತ್ತವೆಂದು ಒಂದುಕಡೆ ಹೇಳಿ, ನಂತರ ಎಲ್ಲಾ ನಾನೇ ಮಾಡುತ್ತಿದ್ದೇನೆಂದು, ನೀನು ಏನು ಮಾಡಲಿಲ್ಲ ಎಂದು ಹೇಳುವುದು ಎರಡು ನಾಲಿಗೆಗಳ ಧೋರಣಿ ಅಲ್ಲವೆ! ಹಾಗೆಯೇ ಬೈಬಲ್‌ನಲ್ಲಿ ಒಂದುಕಡೆ ನನ್ನಿಂದ ನಿನಗೆ ಪಾಪಕ್ಷಮಾಪಣೆ ಇದೆಯೆಂದು ಹೇಳಿ, ಮತ್ತೊಂದು ಕಡೆ ನಾನು ಯಾರ ಪಾಪವನ್ನು ಕ್ಷಮಿಸುವವನ ಅಲ್ಲವೆಂದು ಹೇಳುವುದು ಎರಡು ವಿಧಗಳು ಮಾತನಾಡಿದಂತೆ ಅಲ್ಲವೇ! ಖುರ್‌ಆನ್ ಗ್ರಂಥದಲ್ಲಿ 2ನೇ ಸುರಾ, 117 ಆಯತ್‌ನಲ್ಲಿ "ಭೂಮಿ ಆಕಾಶಗಳನ್ನು ಸೃಷ್ಠಿಸಿದ ದೇವರು ಏನಾನ್ನದರೂ ಆಗಿಹೋಗಲಿ ಎಂದರೆ ಅದು ತಯಾರಾಗಿ ಹೋಗುತ್ತದೆ" ಎಂದು ಹೇಳಿ ನಂತರ 32ನೇ ಸುರಾ, 4ನೇ ಆಯತ್‌ನಲ್ಲಿ "ಅಲ್ಲಾಹ್‌ನೇ(ದೇವರು) ಆಕಾಶವನ್ನು, ಭೂಮಿಯನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಆರು ದಿನಗಳಲ್ಲಿ ಸೃಷ್ಠಿಸಿದ್ದಾನೆ, ನಂತರ ಸಿಂಹಾಸನವನ್ನು ಅಧಿಷ್ಠಿಸಿದ್ದಾನೆ" ಎಂದು ಹೇಳಿದ್ದಾರೆ. ಇದು ಪರಸ್ಪರ ವಿರುದ್ಧ ವಾಕ್ಯಗಳಾಗಿ, ಎರಡು ನಾಲಿಗೆಗಳ ಧೋರಣಿಯಾಗಿ ಕಾಣಿಸುತ್ತಿದೆ. ಅಂತಹ ವಾಕ್ಯಗಳನ್ನು ದೈವವಾಕ್ಯಗಳಾಗಿ, ಆ ಗ್ರಂಥಗಳನ್ನು ದೈವಗ್ರಂಥಗಳಾಗಿ ನೀವು ಹೇಗೆ ಹೇಳುತ್ತಿದ್ದೀರೆಂದು? ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ ನೋಡಿರಿ.

ಈ ಉತ್ತರವನ್ನು ನೋಡದಮೊದಲೇ ಕೇಳುವ ಉತ್ತರ ಚೆನ್ನಾಗಿ ಅರ್ಥವಾಗುವುದಕ್ಕೆ ಮೊದಲು ಒಂದು ಉದಾಹರಣೆಯನ್ನು ಹೇಳಿಕೊಳ್ಳೋಣ. ಪಟ್ಟಣದಲ್ಲಿ ಪ್ರಜೆಗಳು ಉದ್ಯೋಗಗಳು ಮಾಡುತ್ತಾ, ವ್ಯಾಪಾರಗಳು ಮಾಡುತ್ತಾ, ಅನೇಕ ವಿಧ ಕೆಲಸಗಳು ಮಾಡುತ್ತಾ ಬದುಕುತ್ತಿರುತ್ತಾರೆ. ಪಟ್ಟಣದಲ್ಲಿನ ಪ್ರಜೆಗಳು ಬದುಕುವುದಕ್ಕೆ ಹಳ್ಳಿಗಳಲ್ಲಿ ಪ್ರಜೆಗಳು ಬೆಳೆಗಳನ್ನೂ, ಪಶುಗಳನ್ನು ಸಂಪದವನ್ನು ಅಭಿವೃದ್ಧಿ ಮಾಡುತ್ತಿರುತ್ತಾರೆ. ಬೆಳೆಯನ್ನೂ, ಹಾಲನ್ನು ಪಟ್ಟಣದಲ್ಲಿ ಮಾರಿಕೊಂಡು ತಮ್ಮ ಜೀವನ ಸಾಗಿಸುತ್ತಿರುತ್ತಾರೆ. ಆ ವಿಧಾನದಲ್ಲಿ ಒಂದು ಪಟ್ಟಣದಲ್ಲಿನ ಪ್ರಜೆಗಳಿಗೆ ಹಾಲನ್ನು ಮಾರಿಕೊಳ್ಳುತ್ತಾ ಜೀವಿಸುವ ಹಳ್ಳಿಗಳು ಅದಕ್ಕೆ ಪಕ್ಕದಲ್ಲಿಯೇ ಇವೆ. ಅಂತಹ ಮೂರು ಸಮೀಪ ಗ್ರಾಮಗಳಿಂದ ಪ್ರತಿ ದಿನ ಹಾಲನ್ನು ತಂದು ಮಾರಿಕೊಂಡು ಹೋಗುವವರು ಮೂವರು ಇದ್ದಾರೆ. ನಾನು ಹೇಳುವ ಮೂವರು ವ್ಯಕ್ತಿಗಳು ಪಕ್ಕ ಗ್ರಾಮಗಳಲ್ಲಿನ ಮೂವರು ರೈತರ ಹತ್ತಿರ ಹಾಲನ್ನು ಕೊಂಡುತಂದು ಪಟ್ಟಣದಲ್ಲಿ ಲಾಭಕ್ಕೆ ಮಾರಿಕೊಂಡು ಹಾಲಿನ ವ್ಯಾಪಾರವೇ ತಮ್ಮ ಜೀವನವಾಗಿ ಸಾಗಿಸುತ್ತಿದ್ದಾರೆ. ಪಕ್ಕದಲ್ಲಿರುವ ಹಳ್ಳಿಯಲ್ಲಿ ಕೃಷ್ಣಪ್ರಸಾದ್, ಏಸುದಾಸು, ಆಜ್ ಕಲ್ ಜಿಬ್ರೇಲ್ ಎಂಬ ಹೆಸರಿರುವ ಮೂವರು ರೈತರು ಒಬ್ಬೊಬ್ಬರು ಅರವತ್ತು ಲೀಟರ್‌ಗಳ ಹಾಲನ್ನು ಕೊಡುವ ಒಂದು ಎಮ್ಮೆಯನ್ನು ಕಟ್ಟಿದ್ದಾರೆ. ಆ ಗ್ರಾಮದಲ್ಲಿ 60 ಲೀಟರ್‌ಗಳು ಹಾಲನ್ನು ಕೊಡುವ ಒಂದೇ ಎಮ್ಮೆಯನ್ನು ಹೊಂದಿದವರು ಆ ಮೂವರು ಹೊರತು ಯಾರೂ ಇಲ್ಲ. ಉಳಿದವರ ಹತ್ತಿರವಿರುವ ಎಮ್ಮೆಗಳು ಐದು ಅಥವಾ ಆರು ಲೀಟರ್‌ಗಳಿಗಿಂತ ಹಾಲನ್ನು ಹೆಚ್ಚಾಗಿ ಕೊಡುವವು ಇಲ್ಲ. ಹೆಚ್ಚಾಗಿ ಹಾಲನ್ನು ಕೊಡುವ ಎಮ್ಮೆಗಳಿರುವುದರಿಂದ ಕೃಷ್ಣಪ್ರಸಾದ್, ಏಸುದಾಸು, ಆಜ್ ಕಲ್ ಜಿಬ್ರೇಲ್ ಅನ್ನುವ ಮೂವರು ರೈತರು ಆ ಪ್ರಾಂತದಲ್ಲಿ ಹೆಸರುವಾಸಿಯಾದವರಾಗಿದ್ದಾರೆ. ಹಾಲಿನ ವ್ಯಾಪಾರ ಮಾಡುವ ಮೂವರು ವ್ಯಕ್ತಿಗಳು, ಆ ಮೂವರು ರೈತರಹತ್ತಿರದಿಂದ ಹಾಲನ್ನು ತಂದು ಮಾರಿಕೊಳ್ಳುತ್ತಿದ್ದರು. ಹಾಗೆ ವ್ಯಾಪಾರ ಮಾಡುವ ಆನಂದರಾವು, ಡೇವಿಡ್‌ರಾಜು, ಮಹಾಮ್ಮದ್‌ಬೇಗ್ ಅನ್ನುವ ಮೂವರು ಮೂರು ಕುಲದವರಾಗಿ ಇದ್ದಾರೆ. ಅವರಲ್ಲಿ ಆನಂದರಾವ್

ಎನ್ನುವವನು ಕೃಷ್ಣಪ್ರಸಾದ್ ಕುಲಕ್ಕೆ ಸಂಬಂಧಿಸಿದವನು. ಆದ್ದರಿಂದ ಕೃಷ್ಣಪ್ರಸಾದ್ ಹತ್ತಿರದಿಂದ ಹಾಲನ್ನು ತಂದು ಪಟ್ಟಣದಲ್ಲಿ ತನ್ನ ಕುಲದವರಿಗೆಲ್ಲಾ ಮಾರುತ್ತಿದ್ದನು. ಅಷ್ಟೇ ಅಲ್ಲದೆ ಕೃಷ್ಣಪ್ರಸಾದ್ ಮನೆಯಲ್ಲಿನ ಎಮ್ಮೆ ಒಳ್ಳೆಯ ಬಲಹೊಂದಿದೆ, ಒಳ್ಳೆಯ ಆರೋಗ್ಯವಾಗಿದೆ. ಈ ಹಾಲನ್ನು ಕುಡಿಯುವುದರಿಂದ ಎಲ್ಲರಿಗೂ ಒಳ್ಳೆಯ ಆರೋಗ್ಯ ಕೈಗೂಡುತ್ತದೆಂದು ಹೇಳಿ ಕೃಷ್ಣಪ್ರಸಾದ್ ಹಾಲನ್ನು ಕುರಿತು ಚೆನ್ನಾಗಿ ಪ್ರಚಾರ ಮಾಡಿ ಮಾರುತ್ತಿದ್ದನು. ಪಟ್ಟಣದಲ್ಲಿ ಉಳಿದ ವ್ಯಾಪಾರಸ್ಥರೆಲ್ಲರೂ ಹಾಲನ್ನು ಲೀಟರ್‌ಗೆ ಹತ್ತು ರೂಪಾಯಿಗಳ ಪ್ರಕಾರ ಮಾರುತ್ತಿದ್ದರೆ ಕೃಷ್ಣಪ್ರಸಾದ್‌ರವರ ಹಾಲನ್ನು ಆನಂದರಾವು ಲೀಟರ್‌ಗೆ ಹನ್ನೊಂದು ರೂಪಾಯಿಗಳ ಪ್ರಕಾರ ಮಾರುತ್ತಿದ್ದನು.

ಡೇವಿಡ್‌ರಾಜು ಅನ್ನುವತನು ಏಸುದಾಸು ಮನೆಯ ಎಮ್ಮೆಹಾಲನ್ನು ತಂದು ಮಾರುತ್ತಿದ್ದನು. ಹಾಗೆ ಮಾರುವ ಹಾಲಿನವ್ಯಾಪಾರಿಯಾದ ಡೇವಿಡ್‌ರಾಜು ತನ್ನ ವ್ಯಾಪಾರವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಏಸುದಾಸು ಎಮ್ಮೆಯ ಬಗ್ಗೆ ಸ್ವಲ್ಪ ಪ್ರಚಾರ ಮಾಡಿದ್ದಾನೆ. ಏಸುದಾಸು ಮನೆಯಲ್ಲಿನ ಎಮ್ಮೆಗೆ ಹಾಲನ್ನು ಕರೆಯುವ ಕೆಚ್ಚಲುಗಳು ಐದು ಇವೆಯೆಂದು, ಹಾಗೆ ಐದು ಇರುವುದರಿಂದ ಆ ಎಮ್ಮೆ ಬಹಳ ಮಹತ್ಯಗಳಿಂದ ಕೂಡಿಕೊಂಡಿದೆ ಎಂದು, ಆ ಎಮ್ಮೆಹಾಲನ್ನು ಕುಡಿಯುವವರಿಗೆಲ್ಲಾ ಅವರು ಮಾಡಿಕೊಂಡ ಪಾಪಗಳೆಲ್ಲ ಹೋಗುತ್ತವೆಂದು ಪ್ರಚಾರ ಮಾಡಿ ತನ್ನ ವ್ಯಾಪರವನ್ನು ಅಭಿವೃದ್ಧಿ ಮಾಡಿಕೊಂಡಿದ್ದಾನೆ. ನಿಜಕ್ಕೆ ಏಸುದಾಸು ಮನೆಯಲ್ಲಿನ ಎಮ್ಮೆಗೆ ನಾಲ್ಕೇ ಕೆಚ್ಚಲು ಇದ್ದರೂ, ವ್ಯಾಪಾರಸ್ಥನಾದ ಡೇವಿಡ್‌ರಾಜು ಇಲ್ಲದ್ದು ಹೇಳಿ ತನ್ನ ವ್ಯಾಪಾರವನ್ನು ಪ್ರತಿ ದಿನ ಅಭಿವೃದ್ಧಿ ಮಾಡಿಕೊಳ್ಳುತ್ತಿದ್ದಾನೆ. ಡೇವಿಡ್‌ರಾಜನನ್ನು ನೋಡಿದ ಮಹಮ್ಮದ್ ಬೇಗ್ ಅನ್ನುವ ವ್ಯಾಪಾರಿ ತಾನು ಸಹಾ ತನ್ನ ವ್ಯಾಪಾರವನ್ನು ಹೆಚ್ಚಿಸಿಕೊಳ್ಳಬೇಕೆಂದು, ಅಜ್ ಕಲ್ ಜಿಬ್ರೇಲ್ ಎಂಬ ರೈತನ ಮನೆಯಿಂದ ತಾನು ಹಾಲನ್ನು ತರುತ್ತಿದ್ದೇನೆಂದು, ಆದರೆ ಆ ಮನೆಯಲ್ಲಿ ಎಮ್ಮೆ ಎಲ್ಲಾ ಎಮ್ಮೆಗಳಿಗಿಂತ ಭಿನ್ನವಾಗಿ ಬೆಳ್ಳಗೆ ಹುಟ್ಟಿದೆಯೆಂದು, ಅಂತಹದ್ದು ಇಲ್ಲಿಯವರೆಗೂ ಎಲ್ಲಿಯೂ

ಹುಟ್ಟಲಿಲ್ಲವೆಂದು, ನಂತರ ಭವಿಷ್ಯತ್ತಿನಲ್ಲಿ ಕೂಡಾ ಹುಟ್ಟುವುದಿಲ್ಲವೆಂದು ಹೇಳುವುದೇ ಅಲ್ಲದೆ, ಆ ಎಮ್ಮೆ ಅಮಾವಾಸ್ಯೆ ದಿನ ರಾತ್ರಿಹೊತ್ತು ಸ್ವತಃ ತನ್ನ ಯಜಮಾನನ ಹತ್ತಿರ ಮಾತನಾಡಿ, ತನ್ನ ಹಾಲನ್ನು ಕುಡಿದವರು ಯಾರಾದರೂ ನರಕಕ್ಕೆ ಹೋಗುವುದಿಲ್ಲವೆಂದು, ಸ್ವರ್ಗಕ್ಕೆ ಹೋಗುತ್ತಾರೆಂದು, ಸ್ವರ್ಗದಲ್ಲಿ ರಂಭ, ಊರ್ವಶಿ, ತಿಲೋತ್ತಮೆಗಳಿಗಿಂತ ಸುಂದರಾಂಗಿಯರು ಐದುಜನ ಬಂದು ಎಲ್ಲಾ ವಿಧಗಳ ಸುಖಗಳನ್ನು ನೀಡುತ್ತಾರೆಂದು, ಸ್ವರ್ಗದಲ್ಲಿ ಸುಕುಮಾರವಾದ ಸುಂದರವಾದ ಹೆಂಗಸರನ್ನು ಹೊಂದಬೇಕೆಂದರೆ, ಆಜ್ ಕಲ್ ಜಿಬ್ರೇಲ್ ಅನ್ನುವ ರೈತು ಮನೆಯಿಂದ ತಾನು ತರುವ ಹಾಲನ್ನು ತೆಗೆದುಕೊಂಡು ಕುಡಿಯಿರೆಂದು ಮಹಮ್ಮದ್ ಬೇಗ್ ಎನ್ನುವಾತನು ಪ್ರಚಾರ ಮಾಡಿದನು.

ಈ ವಿಧವಾಗಿ ಮೂವರು ಹಾಲಿನ ವ್ಯಾಪಾರಿಗಳು ಅಸತ್ಯವಾಗಿ ಹೇಳಿ ತಮ್ಮ ವ್ಯಾಪಾರವನ್ನು ಬೆಳೆಸಿಕೊಂಡಿದ್ದಾರೆ. ಆದರೆ ಎಮ್ಮೆಗಳ ಯಜಮಾನಿಗಳಾದ ಕೃಷ್ಣಪ್ರಸಾದಾಗಲಿ, ಏಸುದಾಸಾಗಲಿ, ಆಜ್ ಕಲ್ ಜಿಬ್ರೇಲ್ ಆಗಲಿ ತಮ್ಮ ಎಮ್ಮೆಗಳನ್ನು ಕುರಿತು ಯಾವಾಗಾಗಲಿ ಕಲ್ಪಿಸಿ ಅಸತ್ಯಗಳು ಹೇಳಲಿಲ್ಲ. ಎಲ್ಲಾ ಎಮ್ಮೆಗಳಿಗಿಂತ ತಮ್ಮ ಎಮ್ಮೆಗಳು ಹೆಚ್ಚಾಗಿ ಹಾಲು ಕೊಡುತ್ತಿವೆಂಬ ಸತ್ಯವನ್ನು ಹೇಳುವುದು ಹೊರತು ಎಂದಿಗೂ ಅಸತ್ಯ ಹೇಳಲಿಲ್ಲ. ಕೃಷ್ಣಪ್ರಸಾದ್ ಎಂಬ ರೈತನ ಮನೆಯಿಂದ ಆನಂದರಾವು ಗಟ್ಟಿ ಹಾಲನ್ನು ಹಾಲಿನಡಬ್ಬಾಗಳಲ್ಲಿ ತೆಗೆದುಕೊಂಡು ಬರುತ್ತಾ, ಮಾರ್ಗಮಧ್ಯದಲ್ಲಿ ಒಂದು ನದಿಯನ್ನು ದಾಟಿಬರುವಾಗ ಅಲ್ಲಿ ನಿಂತು ನದಿಯಲ್ಲಿನ 40 ಲೀಟರ್‌ಗಳ ನೀರನ್ನು 60 ಲೀಟರ್‌ಗಳ ಹಾಲಿಗೆ ಬೆರೆಸಿ ಸರಿಯಾಗಿ ನೂರು ಲೀಟರ್‌ಗಳ ಹಾಲನ್ನು ಮಾಡಿಕೊಂಡು ಬಂದು ಪಟ್ಟಣದಲ್ಲಿ ಎಲ್ಲರಿಗೂ ಹೊಯುತ್ತಿದ್ದನು. ಹಾಲನ್ನು ತೆಗೆದುಕೊಳ್ಳುವವರಿಗೆ ಅವು ಆರೋಗ್ಯವಾದ ಹಾಲೆಂದು, ಆ ಹಾಲು ಕುಡಿದರೆ ಆರೋಗ್ಯವಾಗಿ ಇರುತ್ತಾರೆಂಬ ನಂಬಿಕೆಯಿಂದ ಇತರರಿಗೂ ಸಹಾ ಅದೇ ವಿಷಯವನ್ನು ಹೇಳುತ್ತಿದ್ದರು. ಏಸುದಾಸು ಮನೆಯಿಂದ ಹಾಲನ್ನು ತರುವ ಡೇವಿಡ್‌ರಾಜು ಸಹಾ 60 ಲೀಟರ್‌ಹಾಲನ್ನು ತೆಗೆದುಕೊಂಡು ಪಟ್ಟಣಕ್ಕೆ ಬರುತ್ತಾ, ಮಾರ್ಗ ಪಕ್ಕದಲ್ಲೇ ಇರುವ ಬಾವಿಯಲ್ಲಿ ನೀರು 30 ಲೀಟರ್‌ಗಳು ತೆಗೆದುಕೊಂಡು

ಗಟ್ಟಿಹಾಲಿನೊಳಗೆ ಬೆರೆಸಿ ತನ್ನವು 90 ಲೀಟರ್ ಹಾಲನ್ನು ಮಾಡಿಕೊಂಡು ಬಂದು ಎಲ್ಲರಿಗೂ ಮಾರುವುದು ನಡೆಯುತ್ತಿದೆ. 30 ಲೀಟರ್‌ಗಳು ನೀರು ಬೆರೆತರು ಕಂಡುಕೊಳ್ಳದ ಪ್ರಜೆಗಳು ಕುರುಡರಂತೆ ಆ ಹಾಲು ಕುಡಿದರೆ ಪಾಪಗಳು ಹೋಗುತ್ತವೆಂಬ ಮೂಢನಂಬಿಕೆಯನ್ನು ಹೊಂದಿದ್ದಾರೆ. ಇನ್ನುಹೋದರೆ ಮೂರನೆಯವನಾದ ಮಹಮ್ಮದ್ ಬೇಗ್ ಗ್ರಾಮದಲ್ಲಿನ ಆಜ್ ಕಲ್ ಜಿಬ್ರೇಲ್ ಮನೆಯಿಂದ 60 ಲೀಟರ್‌ಗಳ ಹಾಲನ್ನು ತೆಗೆದುಕೊಂಡು ಬರುತ್ತಾ, ರಸ್ತೆ ಪಕ್ಕದಲ್ಲೇ ಇರುವ ಬೋರ್‌ನಲ್ಲಿನ ನೀರನ್ನು 20 ಲೀಟರ್‌ಗಳು ತೆಗೆದುಕೊಂಡು ತನ್ನ ಹತ್ತಿರವಿರುವ ಹಾಲಿನೊಳಗೆ ಬೆರೆಸಿದ್ದಾನೆ. ಆಗ ತನ್ನಹತ್ತಿರ ಒಟ್ಟು 80 ಲೀಟರ್‌ಗಳ ಹಾಲಾಗಿವೆ. ಆ 80 ಲೀಟರ್‌ಗಳ ಹಾಲನ್ನು ಪಟ್ಟಣದಲ್ಲಿ ತನ್ನಹತ್ತಿರ ನಂಬಿಕೆಯಿಂದ ಹಾಲನ್ನು ತೆಗೆದುಕೊಳ್ಳುವವರಿಗೇ ಹಾಕುವುದು ನಡೆದಿದೆ. ಮಹಮ್ಮದ್ ಬೇಗ್ ಹಾಲು ಉಳಿದ ಇಬ್ಬರ ಹಾಲಿಗಿಂತ ಗಟ್ಟಿಯಾಗಿವೆ. ಅಷ್ಟೇ ಹೊರತು ಅವುಗಳಲ್ಲಿ ಸ್ವರ್ಗಕ್ಕೆ ಕಳಿಸುವ ಶಕ್ತಿ ಏನುಯಿಲ್ಲ. ಸತ್ತುಹೋದರೂ ಸ್ತ್ರೀಯರ ಸುಖವೇ ಬೇಕೆಂದುಕೊಳ್ಳುವವರು ಮುಹಮ್ಮದ್ ಬೇಗ್ ಹಾಲನ್ನೇ ಬಳಸುತ್ತಿದ್ದರು.

ಒಬ್ಬನು ರೋಗಗಳು ಹೋಗುತ್ತವೆಂದು ಹೇಳುವುದೂ, ಮತ್ತೊಬ್ಬನು ಪಾಪಗಳು ಹೋಗುತ್ತವೆಂದು ಹೇಳುವುದೂ, ಇನ್ನೊಬ್ಬನು ಸ್ವರ್ಗಕ್ಕೆ ಹೋಗುತ್ತೀಯಾ ಎಂದು ಹೇಳುವುದೂ, ಅವರ ಮಾತುಗಳನ್ನು ಪ್ರಜೆಗಳು ಕೇಳುವುದು ಕೇವಲ ಮೂಢನಂಬಿಕೆಯೆಂದು ನಾವು ಸಹಾ ಹೇಳುತ್ತಿದ್ದೇವೆ. ಗ್ರಾಮಗಳು ಸತ್ಯವೇ, ಮೂವರು ಹಾಲಿನ ಯಜಮಾನರು ಸತ್ಯವೇ, ಎಮ್ಮೆಗಳು ಸತ್ಯವೇ, ಹಾಲು ಸತ್ಯವೇ, ಹಾಲಿನಲ್ಲಾಗಲಿ, ಎಮ್ಮೆಗಳಲ್ಲಾಗಲಿ ಅವುಗಳ ಯಜಮಾನರಲ್ಲಾಗಲಿ ಯಾವ ತಪ್ಪು ಇಲ್ಲ. ಇರುವ ತಪ್ಪೆಲ್ಲಾ ಪ್ರಜೆಗಳಿಗು ಎಮ್ಮೆಗಳಿಗು ಮಧ್ಯದಲ್ಲಿ ಹಾಲನ್ನು ತರುವ ವ್ಯಾಪಾರಿಗಳಲ್ಲಿಯೇ ಇದೆ. ಅವರ ವ್ಯಾಪಾರವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಎಮ್ಮೆಗಳ ಮೇಲೆ, ಎಮ್ಮೆಗಳ ಯಜಮಾನರ ಮೇಲೆ, ಅವುಗಳ ಹಾಲಿನ ಮೇಲೆ ಅಸತ್ಯಮಾತುಗಳನ್ನು ಪ್ರಚಾರ ಮಾಡಿದ್ದಾರೆ.

ಈ ಕಥೆಯೆಲ್ಲಾ ತಿಳಿದ ನಮಗೆ ಯಾರದು ತಪ್ಪಾಗಿರುವುದು ತಿಳಿದಿದೆ. ಆದರೆ ವಿಷಯವೆಲ್ಲಾ ತಿಳಿಯದವರು ಎಮ್ಮೆಯ ಯಜಮಾನರನ್ನೆ ತಪ್ಪುಮಾಡಿದವರೆಂದು ಹೇಳುವ ಅವಕಾಶ ಇದೆ. ಮೂವರು ವ್ಯಾಪಾರಸ್ತರು ಮೂರು ಗ್ರಾಮಗಳಲ್ಲಿ ಮೂವರು ಯಜಮಾನರಹತ್ತಿರ ಒಬ್ಬೊಬ್ಬರು 60 ಲೀಟರ್‌ಗಳ ಹಾಲನ್ನು ಶೇಕರಿಸುವುದು ನಡೆದಿದೆ. ನಂತರ ಮೂರು ಗ್ರಾಮಗಳಿಂದ ಅವರು ಬರುವ ಮಾರ್ಗದಲ್ಲಿರುವ ನೀರನ್ನು ತಮ್ಮಹತ್ತಿರ ಇರುವ ಹಾಲಿನಲ್ಲಿ ಬೆರೆಸುವುದು ನಡೆದಿದೆ. ಆನಂದರಾವು ನದಿಯಲ್ಲಿನ 40 ಲೀಟರ್‌ಗಳನ್ನು ಬೆರಸಿ ತನ್ನವು ನೂರು ಲೀಟರ್‌ಗಳಾಗಿ ಮಾಡಿಕೊಂಡಿದ್ದಾನೆ. ಎರಡನೆಯವನಾದ ಡೇವಿಡ್ ರಾಜು ತನ್ನ ದಾರಿಯಲ್ಲಿ ಬರುತ್ತಾ ದಾರಿ ಪಕ್ಕದಲ್ಲಿರುವ ಬಾವಿಯಿಂದ 30 ಲೀಟರ್‌ಗಳ ನೀರನ್ನು ತನ್ನ ಹತ್ತಿರವಿರುವ 60 ಲೀಟರ್‌ಗಳ ಹಾಲನ್ನುಸೇರಿಸಿ ಒಟ್ಟು 90 ಲೀಟರ್‌ಗಳ ಹಾಲನ್ನು ಮಾಡಿಕೊಂಡಿದ್ದಾನೆ. ನಂತರ ಮೂರನೇಯವ ನಾದ ಮುಹಮ್ಮದ್ ಬೇಗ್ 20 ಲೀಟರ್ ನೀರನ್ನು ಬೆರೆಸಿ ಒಟ್ಟು ತನ್ನಹತ್ತಿರವಿರುವ ಹಾಲನ್ನು 80 ಲೀಟರ್ ಮಾಡಿಕೊಂಡಿದ್ದಾನೆ. ಈ ವಿಧವಾಗಿ ಮಧ್ಯವ್ಯಾಪಾರಿಗಳು ಮಾಡಿದ ತಪ್ಪಿನಿಂದ, ವಿಷಯ ಎಷ್ಟುಮಾತ್ರ ತಿಳಿಯದವರು, ಮೊದಲಿಗೆ ಎಮ್ಮೆ ಯಜಮಾನರನ್ನು ನಿಂದಿಸಿದಂತೆ, ಪ್ರಸ್ತುತ ನಾವು ನಾಸ್ತಿಕರು, ಸತ್ಯವಾದಿಗಳು, ಹೇತುವಾದಿಗಳು, ವಿಜ್ಞಾನ ತಿಳಿದವರು ಅನ್ನುವವರು ದೇವರಿಗೆ ಸಂಬಂಧಿಸಿದ ವಿಷಯವನ್ನು ಸ್ವಲ್ಪವೂ ತಿಳಿಯದಿದ್ದರೂ, ಯಾರೋ ಮಧ್ಯದಲ್ಲಿ ಬಂದಿರುವ ಆಧ್ಯಾತ್ಮಿಕ ವ್ಯಾಪಾರಿಗಳಾದವರು ಶಾಸ್ತ್ರವನ್ನು ಬೆರಕೆ ಮಾಡಿ, ಅಶಾಸ್ತ್ರೀಯಾ ಪದ್ಧತಿಯಲ್ಲಿ ಅವರಿಗೆ ಅನುಕೂಲವಾಗಿ ಹೇಳಿದ ಮಾತುಗಳನ್ನು ಹಿಡಿದುಕೊಂಡು, ಮೊದಲಿಗೇ ಬ್ರಹ್ಮವಿದ್ಯೆಯೇ ಮೂಢನಂಬಿಕೆಯೆಂದು, ದೇವರೆಂಬುವವನು ಕಲ್ಪಿತವೆಂದು ಹೇಳುವುದು ಪೂರ್ತಿಯಾಗಿ ತಪ್ಪಾಗುತ್ತದೆ.

ಮೂವರು ಹಾಲಿನ ಉತ್ಪಾದನೆ ಪರಿಶ್ರಮವನ್ನು ಇಟ್ಟಿದ ಯಜಮಾನಿಗಳಿರುವಂತೆ ಶ್ರೀಕೃಷ್ಣನು, ಏಸು, ಜಿಬ್ರಯೇಲ್ ಇದ್ದಾರೆ. ಯಜಮಾನಿಗಳ ಹತ್ತಿರ 60 ಲೀಟರ್ ಸ್ವಚ್ಛವಾದ ಹಾಲನ್ನು ಕೊಡುವ ಎಮ್ಮೆಗಳಿರುವಂತೆ, ಮೂವರು ಪ್ರವಕ್ತರ ಹತ್ತಿರ ಸ್ವಚ್ಛವಾದ ಜ್ಞಾನವನ್ನು ಕೊಡುವ

ಮೂರು ಮೂಲ ಗ್ರಂಥಗಳಿವೆ. ಎಮ್ಮೆಗಳಿಂದ ಸ್ವಚ್ಛವಾದ ಗಟ್ಟಿಹಾಲು ಲಭಿಸಿದಂತೆ, ಮೂಲ ಗ್ರಂಥಗಳಿಂದ ಸ್ವಚ್ಛವಾದ ಶಕ್ತಿವಂತವಾದ ಜ್ಞಾನ ಲಭಿಸುತ್ತಿದೆ. ತಮ್ಮ ಸ್ವಾರ್ಥದಿಂದ ಲಾಭಕ್ಕಾಗಿ ಸ್ವಚ್ಛವಾದ ಹಾಲನ್ನು ನೀರಿನಲ್ಲಿ ಬೆರಕೆ ಮಾಡಿ ಮಾರುವ ವ್ಯಾಪಾರಿಗಳಿರುವಂತೆ, ಈದಿನ ಪವಿತ್ರ ಗ್ರಂಥಗಳಲ್ಲಿನ ಜ್ಞಾನದೊಳಗೆ ದೇವರು ಹೇಳದ ತಮಗೆ ಇಷ್ಟವಾದ ವಿಷಯಗಳನ್ನು ಬೆರಕೆ ಪ್ರಜೆಗಳಿಗೆ ಹೇಳುವ ಬೋಧಕರಿದ್ದಾರೆ. ತಮ್ಮ ಹಾಲಿನಿಂದ ರೋಗಗಳು ಹೋಗುತ್ತವೆಂದು ಒಬ್ಬರು, ಪಾಪಗಳು ಹೋಗುತ್ತವೆಂದು ಮತ್ತೊಬ್ಬನು, ಸ್ವರ್ಗ ಬರುತ್ತದೆಂದು ಹೇಳುವ ಇನ್ನೊಬ್ಬನು ವ್ಯಾಪಾರಿಗಳಿರುವಂತೆ, ತಾವು ಹೇಳುವ ಬೋಧನೆಗಳಿಂದ ಲಾಭಗಳು ಉಂಟಾಗುತ್ತವೆಂದು, ಸುಖಗಳು ಬರುತ್ತವೆಂದು, ದೇವರು ಕಾಣಿಸುತ್ತಾನೆಂದು, ನೇರವಾಗ ಸ್ವರ್ಗಕ್ಕೆ ಹೋಗಬಹುದೆಂದು, ನರಕಕ್ಕೆ ಹೋಗದಂತೆ ತಪ್ಪಿಸಿಕೊಳ್ಳಬಹುದೆಂದು, ಧನಿಕರು ಆಗಬಹುದೆಂದು ಅನೇಕ ವಿಧಗಳ ಆಸೆಗಳನ್ನು ಬೋಧಕರು ಕಲ್ಪಿಸುತ್ತಿದ್ದಾರೆ. ಅಶಾಸ್ತ್ರೀಯವಾದ ವಾಕ್ಯಗಳನ್ನು ಹೇಳುತ್ತಿದ್ದಾರೆ. ಅಂತಹ ಮಾತುಗಳನ್ನೆ ಈದಿನ ನಾಸ್ತಿಕವಾದಿಗಳು ತಪ್ಪು ಹಿಡಿಯುತ್ತಿದ್ದಾರೆ. ಅಂತಹ ಅವಕಾಶವನ್ನು ನಾಸ್ತಿಕ ವಾದಿಗಳಿಗೆ ಈಗಿನ ಬೋಧಕರು ಕೊಡುತ್ತಿದ್ದಾರೆ. ಬೋಧಕರ ಕಲ್ತಿ (ಬೆರೆಕೆ) ಮಾತುಗಳನ್ನು ಬಿಟ್ಟು ನೋಡಿದರೆ ಮೂಲಗ್ರಂಥಗಳಲ್ಲಿ ಸ್ವಚ್ಛವಾದ ಶಾಸ್ತ್ರಬದ್ಧವಾದ ಜ್ಞಾನ ಇರುವಂತೆ ತಿಳಿಯುತ್ತಿದೆ. ಮೂಲ ಗ್ರಂಥಗಳಲ್ಲಿನ ಸ್ವಚ್ಛವಾದ ಶಾಸ್ತ್ರಬದ್ಧವಾದ ಜ್ಞಾನದಿಂದ ನಾಸ್ತಿಕ ವಾದಿಗಳಾಗಲಿ, ಹೇತುವಾದಿಗಳೆಂದು ಹೇಳಿಕೊಳ್ಳುವವರಾಗಲಿ, ಸತ್ಯಾನ್ವೇಷಿಗಳೆನ್ನುವವರಾಗಲಿ ಪ್ರಶ್ನಿಸುವ ಪ್ರಶ್ನೆಗಳಿಗೆ ಸುಲಭವಾಗಿ ಉತ್ತರಗಳು ಹೇಳಬಹುದು. ಈದಿನ ದೈವಗ್ರಂಥಗಳನ್ನು ವಿಮರ್ಶಿಸುವವರಿಗೆ ಆ ಗ್ರಂಥಗಳ ಪರಿಚಯ ಸ್ವಲ್ಪವೂ ಇಲ್ಲವೆಂದು, ಅವರಿಗೆ ತಿಳಿದಿರುವುದು ಬೋಧಕರ ಮಾತುಗಳೇ ಎಂದು ಹೇಳುತ್ತಿದ್ದೇವೆ. ಸೈನ್ಸನ್ನು ಮೀರಿದ ಸೈನ್ಸು ಮೂರು ಗ್ರಂಥಗಳಲ್ಲಿ ಕಾಣಿಸುತ್ತಿದೆ. ಕಲ್ತಿ ಹಾಲನ್ನು ಒಲೆ ಮೇಲಿಟ್ಟು ಬಿಸಿಮಾಡಿದರೆ, ಹಾಲಿನಲ್ಲಿ ಬೆರೆತ ನೀರೆಲ್ಲವೂ ಆವಿಯಾಗಿ, ಕೊನೆಗೆ ಗಟ್ಟಿ ಹಾಲು ಉಳಿದಂತೆ, ಮೂರು ಗ್ರಂಥಗಳಲ್ಲಿ ಎಲ್ಲಿಯಾದರೂ ಅಶಾಸ್ತ್ರೀಯ ಜ್ಞಾನವಿದ್ದರೆ, ಅದು ಕಲ್ತಿ

ಜ್ಞಾನವೆಂದು ತಿಳಿದು, ಕೆಂಡದಿಂದ ಬಿಸಿಮಾಡಿದರೆ ಸ್ವಚ್ಛವಾದ ಹಾಲು ಉಳಿದಂತೆ ಗ್ರಂಥವಚನಗಳನ್ನು ಶಾಸ್ತ್ರ ಅನ್ನುವ ಅಗ್ನಿಯಿಂದ ಪರಿಶೀಲನೆ ಎಂಬ ಬಿಸಿಮಾಡಿದರೆ, ಕಲ್ತಿ ಜ್ಞಾನ ನೀರು ಆವಿಯಾಗಿಹೋದಂತೆ ಹೊರಬಿದ್ದುಹೋ ಗುತ್ತದೆ. ಆಗ ಮೂಲ ಗ್ರಂಥಗಳಲ್ಲಿ ಸ್ವಚ್ಛವಾದ ಜ್ಞಾನ ಲಭಿಸುತ್ತದೆ.

ಒಲೆಮೇಲೆ ಕಲ್ತಿ ಹಾಲನ್ನು ಕಾಸಿ ನೀರನ್ನು ಹಿಂಗಿಸಿ, ಕೊನೆಗೆ ಸ್ವಚ್ಛವಾದ ಹಾಲನ್ನು ಮನೆಯಲ್ಲಿ ಒಬ್ಬರು ಮಾತ್ರ ಹೊರಗೆ ತೆಗೆಯಬಹುದು. ಒಬ್ಬರು ಮಾಡಿದ ಕೃಷಿಯಿಂದ ಮನೆಯೆಲ್ಲರೂ ಸ್ವಚ್ಛವಾದ ಹಾಲನ್ನು ಕುಡಿಯಬಹುದು. ಹಾಗೆಯೇ ಗ್ರಾಹಿತಶಕ್ತಿ ಇರುವ ಒಬ್ಬ ವ್ಯಕ್ತಿ ಜ್ಞಾನದ ಮೇಲೆ ಶಾಸ್ತ್ರದಿಂದ ಪರಿಶೀಲನೆ ಮಾಡಿ, ಅಶಾಸ್ತ್ರೀಯವಾದುದನ್ನು ತೆಗೆದುಹಾಕಿ ಸ್ವಚ್ಛವಾದ ಜ್ಞಾನವನ್ನು ಪ್ರಜೆಗಳೆಲ್ಲರಿಗೂ ತಿಳಿಸಬಹುದು. ಶಾಸ್ತ್ರಪರಿಶೀಲನೆ ಮಾಡುವುದು ಎಲ್ಲರಿಗೂ ತಿಳಿಯದಿದ್ದರೂ ಪರಿಶೀಲನೆ ಮಾಡಿದವರು ತಿಳಿಸಿದ ಜ್ಞಾನವನ್ನು ತಿಳಿಯಬಹುದು. ಈಗ ಅಸಲು ವಿಷಯಕ್ಕೆ ಬಂದು ನೋಡೋಣ. ನಮಗೆ ಒಬ್ಬ ಕ್ರೈಸ್ತವನ ಮೂಲಕ ಬಂದಿರುವ ಪ್ರಶ್ನೆ ಖುರ್ಆನ್ ದೈವಗ್ರಂಥವಾ ಎಂದು ಪ್ರಶ್ನಿಸುತ್ತಾ, ಆ ಗ್ರಂಥದಲ್ಲಿನ ಎರಡು ಪರಸ್ಪರ ವಿರುದ್ಧವಾದ ಅರ್ಥವಿರುವ ವಾಕ್ಯಗಳನ್ನು ಕೇಳಿ ಇದರಲ್ಲಿ ಯಾವುದು ಸತ್ಯ ಎಂದು ಕೇಳಿದ್ದಾರೆ. ಅದಕ್ಕೆ ಈಗ ಹಾಲಿನ ವ್ಯಾಪಾರಿಗಳ ವಿಷಯವೆಲ್ಲಾ ಹೇಳಿದ ನಂತರ ನಾವು ಉತ್ತರ ಹೇಳಿದರೂ ನಿಮಗೆ ಸುಲಭವಾಗಿ ಅರ್ಥವಾಗುತ್ತದೆ. ನಾನು ಇಂದೂವಾಗಿ (ಹಿಂದುವಾಗಿ) ಹುಟ್ಟಿದವನಾದ್ದರಿಂದ, ನನಗೆ ತಿಳಿದಮಟ್ಟಿಗೆ ಭಗವದ್ಗೀತೆಯಲ್ಲಿ ಕೆಲವುಕಡೆ ಕೆಲವು ಅಶಾಸ್ತ್ರೀಯ ವಾಕ್ಯಗಳು ಬೆರೆತಿರುವಂತೆ ಕಾಣಿಸುತ್ತಿದೆ. ಹಾಗೆ ಕಾಣಿಸಿದವುಗಳನ್ನು ನಾವು ಬರೆದಿರುವ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಎಂಬ ಗ್ರಂಥದಲ್ಲಿ ತೆಗೆದುಹಾಕಿ ಬರೆಯುವುದು ನಡೆದಿದೆ. ಭಗವದ್ಗೀತೆ ಗ್ರಂಥದಲ್ಲಿಯೇ ಸ್ವಾರ್ಥಪರರಾದ ಕೆಲವರು ಬೋಧಕರು ಬೆರೆಸಿರುವ ಶ್ಲೋಕಗಳಿರುವಾಗ, ಉಳಿದ ಎರಡು ಮೂಲ ಗ್ರಂಥಗಳಲ್ಲಿ ಸಹಾ ಅಷ್ಟೋ ಇಷ್ಟೋ ಮಿಶ್ರಮ ಜ್ಞಾನವಿರಬಹುದು. ಆದ್ದರಿಂದ ಜಾಗ್ರತೆಯಾಗಿ ಪರಿಶೀಲನೆ ಮಾಡಿ ನೋಡಬೇಕಾದ ಅಗತ್ಯವಿದೆ.

ಯಾವುದು ದೇವರ ಜ್ಞಾನವೋ ಮೊದಲೇ ತಿಳಿದಿದ್ದರೆ, ಅದರಲ್ಲಿ ಏನಾದರೂ ಬೆರೆತಿರುವುದು ಇಲ್ಲದಿರುವುದು ಸುಲಭವಾಗಿ ತಿಳಿಯುತ್ತದೆ. ಹಾಗೆ ಮೊದಲೇ ದೇವರ ಜ್ಞಾನ ತಿಳಿಯದಿದ್ದರೂ, ಶಾಸ್ತ್ರವೆಂದರೆ ಏನು? ಎಂದು ಶಾಸ್ತ್ರಕ್ಕಿರುವ ನಿಯಮ ನಿಬಂಧನೆಗಳಾದರೂ ತಿಳಿದಿರಬೇಕು. ಆಗ ಗ್ರಂಥದಲ್ಲಿನ ವಿಷಯ ಶಾಸ್ತ್ರಬದ್ಧವಾದುದ್ದಾ ಅಲ್ಲವಾ ಎಂದು ನೋಡಿ, ಅಶಾಸ್ತ್ರೀಯವಾದು ದ್ದನ್ನು ದೇವರ ಜ್ಞಾನ ಅಲ್ಲವೆಂದು ತಿಳಿಯಬಹುದು. ಆ ವಿಧಾನದ ಪ್ರಕಾರ ಖುರ್‌ಆನ್ ಗ್ರಂಥದಲ್ಲಿನ ಸೃಷ್ಟಿಯನ್ನು ದೇವರು ಸೃಷ್ಟಿಸಿದ ವಿಷಯದಲ್ಲಿ ಬಂದಿರುವ ಪರಸ್ಪರ ವಿರುದ್ಧ ವಾಕ್ಯಗಳನ್ನು ತೆಗೆದುಕೊಂಡು ನೋಡಿದರೆ, ಆ ಎರಡು ವಾಕ್ಯಗಳಲ್ಲಿಯೂ ಶಾಸ್ತ್ರವಿರುದ್ದವಾದ ಜ್ಞಾನ ಕಾಣಿಸಲಿಲ್ಲ. ಬೈಬಲ್, ಖುರಾಆನ್ ಗ್ರಂಥಗಳನ್ನು ನೋಡವಮೊದಲೇ ನಾನು ಭಗವದ್ಗೀತೆ ಗ್ರಂಥವನ್ನು ನೋಡಿದ್ದೇನೆ. ಭಗವದ್ಗೀತಾ ಗ್ರಂಥದಲ್ಲಿನ ಜ್ಞಾನವನ್ನೂ, ಅದರಲ್ಲಿನ ಬ್ರಹ್ಮವಿದ್ಯಾ ಶಾಸ್ತ್ರವನ್ನೂ ಪೂರ್ತಿಯಾಗಿ ತಿಳಿದುಕೊಂಡು, ಗೀತೆಯಲ್ಲಿನ ಅಶಾಸ್ತ್ರೀಯ ವಾದವುಗಳನ್ನು ನನ್ನ ಗ್ರಂಥ (ತ್ರೈತ ಸಿದ್ಧಾಂತ ಭಗವದ್ಗೀತೆ)ಯಲ್ಲಿ ಹೊರಗಿಟ್ಟಿದ್ದೇನೆ. ಮೊದಲೇ ಈಕಡೆ ಶಾಸ್ತ್ರವೂ, ಆಕಡೆ ಜ್ಞಾನವೂ ತಿಳಿದಿರುವು ದರಿಂದ, ಇತರ ಎರಡು ಗ್ರಂಥಗಳಲ್ಲಿನ ವಿಷಯಗಳನ್ನು ಸುಲಭವಾಗಿ ಗ್ರಹಿಸಿದ್ದೇವೆ, ಅವುಗಳಲ್ಲಿನ ಕಲ್ತಿ ಭಾವನೆಗಳನ್ನು ಸಹಾ ತಿಳಿದು ಇದು ಶಾಸ್ತ್ರಬದ್ಧವೆಂದು, ಇದು ಶಾಸ್ತ್ರಬದ್ಧವಾದುದು ಅಲ್ಲವೆಂದು ಹೇಳುತ್ತಿದ್ದೇವೆ. ಖುರಾನ್ ಗ್ರಂಥದಲ್ಲಿ ಸುರಾ 2. ಆಯತ್ 117ರಲ್ಲಿ ಬರೆದಂತೆ, ದೇವರು ಏನನ್ನಾದರೂ ಮಾಡಬೇಕೆಂದುಕೊಂಡಾಗ ಅದನ್ನು ಆಗಿಹೋಗು ಎಂದರೆ ಆಗಿಹೋಗುತ್ತದೆ ಎಂದು ಹೇಳುವುದು, ದೇವರಿಗಿರುವ ಕ್ರಿಯಾರಹಿತನು ಎಂಬ ಧರ್ಮದ ಪ್ರಕಾರ ದೇವರು ಕೆಲಸ ಮಾಡುವುದಿಲ್ಲವೆಂದು, ಆತನ ಸಂಕಲ್ಪದಿಂದಲೇ ಎಲ್ಲಾ ನಡೆದುಹೋಗುತ್ತವೆಂದು ತಿಳಿಯುತ್ತಿದೆ. ದೇವರು ರೂಪ, ನಾಮ, ಕ್ರಿಯಾರಹಿತನು ಅನ್ನುವ ಧರ್ಮಸೂತ್ರಕ್ಕೆ ಮೇಲಿನ ವಾಕ್ಯ ಕಟ್ಟುಬಿದ್ದು ಇದೆ. ಆದ್ದರಿಂದ ಧರ್ಮಬದ್ಧವಾದುದೆಂದು ಹೇಳಿದಾಗ 32ನೇ ಸುರಾ, 4ನೇ ವಾಕ್ಯದಲ್ಲಿ ಅದಕ್ಕೆ ವಿರುದ್ಧವಾಗಿ, ದೇವರು ಆರು ದಿನಗಳಲ್ಲಿ ಸಮಸ್ತವನ್ನು ಸೃಷ್ಟಿಸಿ, ನಂತರ

ಸಿಂಹಾಸನವನ್ನು ಅಧಿಷ್ಠಿಸಿದ್ದಾನೆಂದು ಹೇಳುವುದು ಅಶಾಸ್ತ್ರೀಯ ಅಲ್ಲವೇ! ಎಂದು ಯಾರಾದರೂ ಕೇಳಬಹುದು. ವಾಸ್ತವವಾಗಿ ಅದು 2ನೆ ಸುರಾದಲ್ಲಿನ 117ನೇ ವಾಕ್ಯಕ್ಕೆ ಪೂರ್ತಿ ವಿರುದ್ಧವಾಗಿ ಕಾಣಿಸುತ್ತಿದೆ. ಆದರೆ ವಾಸ್ತವಕ್ಕೆ ಯಾವುದು ಸತ್ಯ ಎಂದು ನೋಡುವುದಕ್ಕೆ ಎರಡು ವಾಕ್ಯಗಳ ಮೇಲೆ ಶಾಸ್ತ್ರವನ್ನಿಟ್ಟು ನೋಡಬೇಕು. ಒಂದು ಸತ್ಯವೆಂದು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ, ಹಾಗೆ ಒಂದು ಅಸತ್ಯ ಎಂದು ಹೇಳುವುದಕ್ಕೂ ಸಹಾ ಶಾಸ್ತ್ರವು ಅಷ್ಟೇ ಅಗತ್ಯವಾಗುತ್ತದೆ. ಅಂತಹದರಲ್ಲಿ ಪ್ರತ್ಯಕ್ಷವಾಗಿ ಒಂದಕ್ಕೊಂದು ವಿರುದ್ಧವಾಗಿ ಕಾಣಿಸುವ ವಾಕ್ಯಗಳಲ್ಲಿ ಒಂದು ಸತ್ಯವಾದಾಗ, ಎರಡನೆಯದು ಅಸತ್ಯವಾಗುತ್ತ ದೆಂದು ಸುಲಭವಾಗಿ ಹೇಳಬಹುದು. ಆದರೆ ಇಲ್ಲಿ ಪ್ರತ್ಯಕ್ಷವಾಗಿ ಕಾಣಿಸಿದಷ್ಟು ಮಾತ್ರಕ್ಕೆ ಶಾಸ್ತ್ರವನ್ನು ಬಿಟ್ಟು ನಿರ್ಣಯಿಸಬಾರದು ಎಂಬ ಸೂತ್ರದ ಪ್ರಕಾರ ಪರಿಶೀಲಿಸಿದರೆ, 32ನೇ ಸುರಾದಲ್ಲಿನ 4ನೇ ವಾಕ್ಯವೂ ಸಹಾ ಶಾಸ್ತ್ರಬದ್ಧವಾದುದೇ ಎಂದು ತಿಳಿಯುತ್ತಿದೆ.

32ನೇ ಸುರಾದಲ್ಲಿನ 4ನೇ ಆಯತ್‌ನ್ನು ಪರಿಶೀಲಿಸುವುದಕ್ಕೆ ನಾವು ಈ ವಿಧವಾಗಿ ಪ್ರಶ್ನಿಸಿಕೊಳ್ಳಬೇಕಾದ ಅಗತ್ಯವಿದೆ. ಆ ಪ್ರಶ್ನೆಗಳು ಹೀಗೆ ಇವೆ. ಆಕಾಶವನ್ನೂ ಭೂಮಿಯನ್ನೂ ಅವುಗಳ ಮಧ್ಯದಲ್ಲಿರುವ ಸಮಸ್ತವನ್ನೂ ಆರು ದಿನಗಳಲ್ಲಿ ಸೃಷ್ಟಿಸಿದ್ದಾನೆ ಎಂಬ ಮಾತು ಎಲ್ಲರಿಗೂ ಅರ್ಥವಾಗುತ್ತಿರುವಾಗ, ಈ ವಾಕ್ಯದ ಕೊನೆಯಲ್ಲಿ ನೀವು ಹಿತಬೋಧನೆಯನ್ನು ಗ್ರಹಿಸದಿದ್ದೀರೇನು? ಎಂದು ಪ್ರಶ್ನಿಸುವುದು ಸಹಾ ಇದೆ. ಇಲ್ಲಿ ಎಲ್ಲರೂ ಬುದ್ಧಿಯನ್ನು ಉಪಯೋಗಿಸಿ ನೋಡಿದರೆ ಸಮಸ್ತವನ್ನು ಆರು ದಿನಗಳಲ್ಲಿ ಸೃಷ್ಠಿಸಿದ್ದಾನೆಂಬುವುದು ಎಲ್ಲರೂ ಗ್ರಹಿಸಿದಾಗ, ಆ ವಾಕ್ಯವನ್ನು ಹೇಳಿದ ಜಿಬ್ರಯೇಲ್ "ನೀವು ಹಿತಬೋಧನೆಯನ್ನು ಗ್ರಹಿಸದೇ ಇದ್ದೀರೇಕೆ?" ಎಂದು ಪ್ರಶ್ನೆಹಾಕಿದನು. ಅಲ್ಲಿ ಆತನು ಆ ಮಾತು ಹೇಳಿದ್ದಾನೆಂದರೆ ನಾವು ಆ ವಾಕ್ಯವನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ ವೆಂದು ಹೇಳದೆಯೇ ತಿಳಿಯುತ್ತಿದೆ. ಆದರೆ ಎಲ್ಲಿ ತಪ್ಪುಮಾಡಿದ್ದೇವೆ ಎಂದು ನೋಡಿಕೊಳ್ಳಬೇಕಾಗಿದೆ. ಆಗ ನಮ್ಮನ್ನು ನಾವೇ ಪ್ರಶ್ನಿಸಿಕೊಂಡು ಅವುಗಳಿಗೆ

ಉತ್ತರವನ್ನು ಹುಡುಕಬೇಕಾಗಿದೆ. ಆಕಾಶ ಎಂದರೆ ಮೇಲೆ ಕಾಣಿಸುವುದೇನಾ? ಭೂಮಿ ಎಂದರೆ ಕೆಳಗೆ ಇರುವುದೇನಾ? ಅವುಗಳ ಮಧ್ಯದಲ್ಲಿ ಸಮಸ್ತವು ಎಂದರೆ ನಮಗೆ ಕಾಣಿಸುವ ಪ್ರಪಂಚವೇನಾ? ಆರು ದಿನಗಳೇ ಸೃಷ್ಟಿ ಏಕೆ ನಡೆದಿದೆ? ನಂತರ ಸೃಷ್ಟಿಕರ್ತ ಸಿಂಹಾಸನವನ್ನು ಏರಿದ್ದಾನೆಂದು ಹೇಳಿದ್ದಾರೆ. ಆ ಸಿಂಹಾಸನವು ಎಲ್ಲಿದೆ.? ಆತನು ಹೊರೆತು ನಮಗೆ ಸಹಾಯ ಮಾಡುವವನು ಯಾರೂ ಇಲ್ಲ ಎನ್ನುವಂತೆ, ಆತನು ಹೊರತು ನಿಮಗೆ ಯಾವ ಸಹಾಯಕನೂ ಇಲ್ಲ ಎಂದಿದ್ದಾರೆ. ನಮಗೆ ಭೂಮಿಮೇಲ ಎಷ್ಟೋಜನ ಹಿತರು, ಸ್ನೇಹಿತರು, ತಾಯಿತಂದೆಯರು ಸಹಾಯ ಮಾಡುವವರಿರುವಾಗ ಆತನು ಹೊರತು ಯಾರೂ ಇಲ್ಲ ಎಂದು ಏಕೆಂದಿದ್ದಾರೆ? ಕನಿಷ್ಟ, ಶಿಫಾರಸು ಮಾಡುವವನು ಸಹಾ ಇಲ್ಲವೆಂದು ಏಕಂದಿದ್ದಾರೆ. ಅಸಲಿಗೆ ನಾವೆಲ್ಲಿದ್ದೇವೆ? ದೇವರೆಲ್ಲಿದ್ದಾನೆ? ಎಂದು ಈ ವಿಧವಾಗಿ ಎಷ್ಟೋ ಪ್ರಶ್ನೆಗಳನ್ನು ಹಾಕಿಕೊಂಡು ಅವುಗಳಿಗೆ ಉತ್ತರವನ್ನು ಗ್ರಹಿಸಿದಾಗ, ಆತನ ಹಿತಬೋಧನೆಯನ್ನು ಗ್ರಹಿಸಿದವರಾಗುತ್ತೇವೆ.

ಖುರ್‌ಆನ್ ಗ್ರಂಥದಲ್ಲಿ ಎಲ್ಲಿಯಾದರೆ ನಾವು ತಪ್ಪಾಗಿ ಅರ್ಥ ಮಾಡಿಕೊಳ್ಳುವ ವಿಷಯಗಳಿವೆಯೋ, ಎಲ್ಲಿಯಾದರೆ ಶಾಸ್ತ್ರಬದ್ಧವಾಗಿ ಗ್ರಹಿಸಲಾರದ ಜ್ಞಾನವಿದೆಯೋ, ಅಲ್ಲಿ ಆ ವಾಕ್ಯದ ಕೆಳಗೆ ನಮ್ಮನ್ನು ಎಚ್ಚರಿಸುವ ಮಾತುಗಳಿರುತ್ತವೆ. ಉದಾಹರಣೆಗೆ 6ನೇ ಸುರಾ 95ನೇ ವಾಕ್ಯವನ್ನು ಹೇಳಿ ಅದರ ಕೊನೆಯಲ್ಲಿ "ನೀವು ಮಾರ್ಗವನ್ನು ತಪ್ಪಿ ಯಾವಕಡೆಗೆ ಹೊಡೆದುಕೊಂಡು ಹೋಗುತ್ತಿದ್ದೀರಾ." ಎಂದು ಹೇಳುವುದು ನಡೆದಿದೆ. ಹಾಗೆಯೇ ಅದೇ ಸುರಾದಲ್ಲಿ 98ನೇ ವಾಕ್ಯದ ಕೊನೆಯಲ್ಲಿ ಸಹಾ "ವಿಜ್ಞತೆ ಇರುವವರಿಗೋಸ್ಕರ ನಾವು ಈ ಸೂಚನೆಗಳನ್ನು ಸ್ಪಷ್ಟಪಡಿಸಿದ್ದೇವೆ" ಎಂದು ಇದೆ. ಹಾಗೆ ಹೇಳುವುದರಲ್ಲಿ ಮೇಲಿನ ವಾಕ್ಯಗಳು ನಿಮಗೆ ಸರಿಯಾಗಿ ಅರ್ಥವಾಗಿಲ್ಲ, ನೀವು ತಪ್ಪಾಗಿ ಅರ್ಥ ಮಾಡಿಕೊಳ್ಳುತ್ತಿದ್ದೀರಾ ಎಂದು ಹೇಳಿದಂತೆಯೆ ಅಲ್ಲವೆ! ಈ ವಿಧವಾಗಿ ಬಹಳ ವಾಕ್ಯಗಳ ಹಿಂದೆ ದೇವರು ಕೆಲಸಗಳನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳಬೇಡಿ ಎಂದು ಎಚ್ಚರಿಸಿದಂತಿದೆ. 32ನೇ ಸುರಾ 4ನೇ ವಾಕ್ಯದಲ್ಲಿ ಕೊನೆಯಲ್ಲಿ ಸಹಾ

"ನೀವು ಹಿತಬೋಧನೆಯನ್ನು ಗ್ರಹಿಸದಿದ್ದೀರಾ ಏಕೆ?" ಎಂದು ಪ್ರಶ್ನಿಸಿ ಹೇಳುವುದು ಸಹಾ ನಡೆದಿದೆ. ಯಾವ ವಾಕ್ಯದ ಕೆಳಗೆ ನಮ್ಮನ್ನು ಎಚ್ಚರಿಸಿ ಹೇಳಿದ್ದಾರೋ, ಆ ವಾಕ್ಯಗಳನ್ನು ಸ್ಥೂಲ ದೃಷ್ಟಿಯಿಂದಲೇ ಅಲ್ಲದೇ, ಸೂಕ್ಷ್ಮದೃಷ್ಟಿಯಿಂದಲೂ ಸಹಾ ನೋಡಬೇಕಾಗಿದೆ. ದೇವರು ಸಿಂಹಾಸನವನ್ನು ಅಧಿಷ್ಠಿಸಿದ್ದಾನೆ ಎಂದರೆ, ದೇವರು ಎಷ್ಟು ದೊಡ್ಡದಾಗಿದ್ದಾನೆ? ಆತನ ಸಿಂಹಾಸನದ ವಿಸ್ತೀರ್ಣ ಎಷ್ಟು ಇರುತ್ತದೆ? ದೇವರು ಕಾಣಿಸುವವು ಅಲ್ಲದಿರುವಾಗ ಆತನ ಸಿಂಹಾಸನ ಹೇಗೆ ಕಾಣಿಸುತ್ತದೆ.? ಆರು ದಿನಗಳ ಸೃಷ್ಠಿ ಅಂದಾಗ ಒಂದು ದಿನ ಎಷ್ಟು ಗಂಟೆಗಳ ಕಾಲವಿರುತ್ತದೆ?

ಈ ವಿಧವಾಗಿ ಕೆಲವು ಪ್ರಶ್ನೆಗಳನ್ನು ತಯಾರುಮಾಡಿಕೊಂಡು ಆಲೋಚಿಸಿಯಾಗಲಿ, ಇತರರನ್ನು ಕೇಳಿ ವಿವರವನ್ನು ತಿಳಿದುಕೊಂಡಾಗಲಿ, ಸಮಾಧಾನಗಳು ಸ್ವೀಕರಿಸಿ ಉತ್ತರಗಳು ಶಾಸ್ತ್ರಬದ್ದ ಅಲ್ಲದಿದ್ದರೆ, ಆ ವಿಷಯವನ್ನು ಸತ್ಯವಾದುದಲ್ಲವೆಂದು ನಿರ್ಧಾರಣೆ ಮಾಡಿಕೊಳ್ಳಬಹುದು. ಸಮಾಧಾನ ಸರಿಯಾದುದಾಗಿ ಶಾಸ್ತ್ರಬದ್ಧವಾಗಿ ಇದ್ದರೆ, ಅದನ್ನು ತಪ್ಪದೆ ಸತ್ಯವಾಗಿ ಗ್ರಹಿಸಬಹುದು. ಖುರ್‌ಆನ್ ಗ್ರಂಥದಲ್ಲಿ ಬಹಳ ವಾಕ್ಯಗಳು ಸೂಕ್ಷ್ಮಜ್ಞಾನದಿಂದ ಕೂಡಿಕೊಂಡಿವೆ. ಅಂತಹ ವಾಕ್ಯಗಳಲ್ಲಿ ಆರು ದಿನಗಳ ಸೃಷ್ಠಿ ನಂತರ ದೇವರು ಸಿಂಹಾಸನವನ್ನು ಅಧಿಷ್ಠಿಸಿದ್ದಾನೆ ಎಂಬ ಮಾತನ್ನು ಸ್ಥೂಲ ದೃಷ್ಠಿಯಿಂದ ನೋಡಬಾರದು. ಸೃಷ್ಠಿಯನ್ನು ದೇವರು ತನ್ನ ಸಂಕಲ್ಪದಿಂದ ಒಂದು ಕ್ಷಣದಲ್ಲಿ ಮಾಡಿದ್ದಾನೆ ಅನ್ನುವುದಕ್ಕೆ, ಆರು ದಿನಗಳು ಶ್ರಮಿಸಿ ಮಾಡಿದ್ದಾನೆನ್ನುವುದಕ್ಕು ಬಹಳ ವ್ಯತ್ಯಾಸ ಕಾಣಿಸಿದರೂ, ಆ ಮಾತುಗಳಲ್ಲಿ ತಪ್ಪಿಲ್ಲವೆಂದು ಅರ್ಥವಾಗುತ್ತಿದೆ. ಮೂರು ಮೂಲ ಗ್ರಂಥಗಳಲ್ಲಿ ಎಷ್ಟೋ ಅಶಾಸ್ತ್ರೀಯ ವಾಕ್ಯಗಳನ್ನು ಗುರುತಿಸಿದ ನಾವು, ಇದು ಶಾಸ್ತ್ರೀಯವಾದ ವಾಕ್ಯವೇ ಅನ್ನುವುದಕ್ಕೆ ಆಧಾರವಿದೆ. ಈ ಮಾತನ್ನು ಸಮರ್ಥಿಸುವುದಕ್ಕೆ ಏನು ಆಧಾರವಿದೆಯೋ ಬಹುಶಾ ಮುಸ್ಲೀಮ ರಾಗಿರು ವವರಿಗೂ ಸಹಾ ತಿಳಿದಿಲ್ಲ ಎಂದುಕೊಳ್ಳುತ್ತೇನೆ. ಈ ವಾಕ್ಯವನ್ನು ಯಾವಾಗಾದರೆ ಸ್ಥೂಲವಾಗಿ ಅರ್ಥ ಮಾಡಿಕೊಳ್ಳುತ್ತಾರೋ, ಆಗ ಅವರಿಗೆ

ತಪ್ಪು ವಾಕ್ಯವಾಗಿ ಕಾಣಿಸುತ್ತದೆ. ಇದೇ ಖುರ್‌ಆನ್ ಗ್ರಂಥದಲ್ಲಿ ಸಪ್ತ ಅಕಾಶಗಳನ್ನು ದೇವರು ಸೃಷ್ಟಿಸಿದ್ದಾನೆ ಎಂದು ಬರೆದಿದ್ದಾರೆ. ಏಳು ಆಕಾಶಗಳು ಹೊರಗೆ ಎಲ್ಲಿ ಹುಡಿಕಿದರೂ ಕಾಣಿಸುವುದಿಲ್ಲ. ಇರುವುದು ಒಂದೇ ಆಕಾಶ ತಾನೆ! ಎಂದು ನಾಸ್ತಿಕವಾದಿಗಳು ಆ ಮಾತನ್ನು ಪೂರ್ತಿಯಾಗಿ ಖಂಡಿಸುವುದಕ್ಕೆ ಅವಕಾಶವಿದೆ. ಹಾಗೆ ಸ್ಥೂಲವಾಗಿ ಅಲ್ಲದೆ ಸೂಕ್ಷ್ಮಜ್ಞಾನದಿಂದಲೇ ನೋಡಿದರೆ ಆರು ದಿನಗಳ ಸೃಷ್ಟಿ ಏಳನೆದಿನ ವಿಶ್ರಾಂತಿ ಎಂಬ ಮಾತಿಗಾಗಲಿ, ಏಳು ಆಕಾಶಗಳು ಅನ್ನುವ ಮಾತಿಗಾಗಲಿ ಸುಲಭವಾಗಿ ಅರ್ಥ ಲಭಿಸಬಲ್ಲದು.

ಇಂತಹ ಸೂಕ್ಷ್ಮ ವಿಷಯಗಳು ಮೂರು ಮೂಲ ಗ್ರಂಥಗಳಲ್ಲಿಯೂ ಇವೆ. ಪ್ರತ್ಯೇಕಿಸಿ ಸ್ಥೂಲ ಸೂಕ್ಷ್ಮ ಜ್ಞಾನವನ್ನು ಕುರಿತು ಖುರ್‌ಆನ್ ಗ್ರಂಥದಲ್ಲಿ ಮೂರನೆ ಸುರಾ, ಏಳನೆ ಆಯತ್‌ನಲ್ಲಿ ಹೇಳುವುದು ನಡೆದಿದೆ. ಸ್ಥೂಲ ವಿಷಯಗಳನ್ನು "ಮುಹ್ಕಮಾತ್" ಎಂದೂ ಸೂಕ್ಷ್ಮ ವಿಷಯಗಳನ್ನು "ಮುತಷಾ ಭಿಹಾತ್" ಎಂದೂ ಹೇಳಿದ್ದಾರೆ. ಇದು ಇಂತಹ ಗ್ರಂಥವೆಂದು, ಈ ಗ್ರಂಥದಲ್ಲಿ ಈ ವಿಷಯಗಳಿವೆಯೆಂದು ಹೇಳುವುದು ಸ್ಥೂಲವಾಗಿರುವ ವಿಷವಾಗಿದ್ದು, ಖುರ್‌ಆನ್ ಗ್ರಂಥದಲ್ಲಿ ಮೂರುಹಂತದಷ್ಟು ವಿಷಯಗಳು ಸೂಕ್ಷ್ಮಜ್ಞಾನ ಆಗಿದ್ದು, ಒಂದುಹಂತ ಮಾತ್ರ ಸ್ಥೂಲ ಜ್ಞಾನವಾಗಿ ಇದೆಯೆಂದು ನಾವು ಹೇಳುತ್ತಿದ್ದೇವೆ. 3ನೇ ಸುರಾ 7ನೆ ಆಯತ್‌ನಲ್ಲಿ ಸೂಕ್ಷ್ಮಜ್ಞಾನವಾದ "ಮುತಷಾಭಿಹಾತ್" ವಾಕ್ಯಗಳ ವಿವರ ದೇವರಿಗೆ ಹೊರತು ಇತರ ಮನುಷ್ಯನ್ಯಾರಿಗೂ ತಿಳಿಯದೆಂದು ಸಹಾ ಹೇಳಿದ್ದಾರೆ. ಸೂಕ್ಷ್ಮಜ್ಞಾನ ದೇವರನ್ನು ವಿಶ್ವಸಿಸುವವರಿಗು ಸಹಾ ತಿಳಿಯದೆಂದು ದೇವರೇ ಹೇಳಿದಾಗ, ಅತಿವಾದಿಗಳಿಗು, ನಾಸ್ತಿಕವಾದಿಗಳಿಗು ಹೇಗೆ ತಿಳಿಯುತ್ತದೆ. ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿಯದು. ಅಂಥದರಲ್ಲಿ ದೇವರು ಕೆಲಸಮಾಡುವುದಿಲ್ಲ, ಹೇಳುವುದಿಲ್ಲ. ಅಂಥದರಲ್ಲಿ ದೇವರು ಹೇಳದವನಾದರೆ ಆತನ ಜ್ಞಾನ ನಮಗೆ ಹೇಗೆ ತಿಳಿಯುತ್ತದೆಂಬ ಪ್ರಶ್ನೆ ಬರಬಹುದು. ಅಂತಹ ಸಮಸ್ಯೆ ಬಾರದಂತಿರುವುದಕ್ಕೆ ಆದಿಯಲ್ಲಿಯೇ ದೇವರು ಪ್ರತ್ಯೇಕವಾದ ವ್ಯಕ್ತಿಯನ್ನು ಸೃಷ್ಟಿಸಿದ್ದಾನೆ. ಆತನು ಮನುಷ್ಯನಲ್ಲ, ಹಾಗೆಂದು

ದೇವರೂ ಅಲ್ಲ. ಆತನೇ ದೇವರ ಸಮಾಚಾರ ತಿಳಿದ ಅವಧೂತ. ದೂತ ಅನ್ನುವವನು ವಾರ್ತೆಯನ್ನು ತರುವವನು. ಅವಧಿಯಿಲ್ಲದ ದೇವರ ಸಮಾಚಾರವನ್ನು ತರುವವನು ಅವಧೂತ. ಅವಧೂತ ಮನುಷ್ಯನಿಗು ದೇವರಿಗು ಮಧ್ಯದಲ್ಲಿರುವವನು. ಅವಧೂತ ಇತ್ತ ಮನುಷ್ಯನಲ್ಲ ಅತ್ತ ದೇವರೂ ಅಲ್ಲ. ಅಂತಹ ದೂತನಿಂದ ದೇವರು ತನ್ನ ಜ್ಞಾನವನ್ನು ಪ್ರಜೆಗಳಿಗೆ ತಿಳಿಯುವಂತೆ ಮಾಡುತ್ತಾನೆ. ಹಾಗೆ ದೂತನ ಮೂಲಕ ತಿಳಿಸಿದಾಗ, ದೇವರ ಜ್ಞಾನದ ಮೇಲೆ ಶ್ರದ್ಧೆ ಇರುವವನು, ದೂತ ತಿಳಿಸಿದ ಸೂಕ್ಷ್ಮವಾದ ದೇವರ ಜ್ಞಾನವನ್ನು ತಿಳಿಯುತ್ತಾನೆ. ದೂತನ ಮೂಲಕ ತಿಳಿಯದಂತೆ ಯಾರೂ ಅವುಗಳಲ್ಲಿನ ಸತ್ಯವನ್ನು ತಿಳಿಯಲಾರರು. ಅಂತಹ ಅರ್ಥ ತಿಳಿಯದ ವಾಕ್ಯಗಳನ್ನು ಗ್ರಹಿಸಲಾರದ ಅತಿವಾದಿಗಳು, ನಾಸ್ತಿಕವಾದಿಗಳು ದೇವರೇ ಇಲ್ಲವೆಂದು ವಾದಿಸುತ್ತಿರುತ್ತಾರೆ. ಕೆಲವರು ಅತಿವಾದಿಗಳು ಸಹಾ ದೇವರೂ ಇಲ್ಲ. ದೆವ್ವವೂ ಇಲ್ಲ ಎಂದು ವಾದಿಸುತ್ತಿರುತ್ತಾರೆ.

ಸೂಕ್ಷ್ಮವಾದ ಜ್ಞಾನ ಸುಲಭವಾಗಿ ಯಾರಿಗೂ ಅರ್ಥವಾಗುವುದಿಲ್ಲ. ದೇವರಿಗು ಮನುಷ್ಯನಿಗು ಮಧ್ಯವರ್ತಿಯಾದ ದೂತ ಅಥವಾ ಅವಧೂತ ಎಂದು ಕರೆಯಲ್ಪಡುವವನು ಬಂದು ಹೇಳಿದಾಗಲೇ, ಅದೂ ಸಹಾ ಶ್ರದ್ಧೆಯಿರುವ ವರಿಗೆ ಮಾತ್ರವೇ ಅರ್ಥವಾಗುತ್ತದೆ. ಪ್ರಸ್ತುತ ನಾವು ಸಹಾ ಆರು ದಿನಗಳು ಕೆಲಸ, ಒಂದುದಿನ ವಿಶ್ರಾಂತಿ ಅನ್ನುವ ಏಳು ದಿನಗಳ ಮಾತನ್ನು ಕುರಿತು ಈಗ ಹೇಳಿಕೊಳ್ಳದೆ ಪಕ್ಕಕ್ಕಿಟ್ಟು ಈ ವಿಷಯವನ್ನು ನಂತರ ಹೇಳಿಕೊಳ್ಳೋಣ. ಅದಕ್ಕೆ ಮೊದಲು ಮತ್ತೆಸ್ವಲ್ಪ ಜ್ಞಾನವನ್ನು ನೋಡಿದ ನಂತರ 32ನೇ ಸುರಾ, 4ನೇ ವಾಕ್ಯ ಸುಲಭವಾಗಿ ಅರ್ಥವಾಗುತ್ತದೆಂದು ಅಂದು ಕೊಳ್ಳುತ್ತಿದ್ದೇನೆ. ಆದ್ದರಿಂದ ಈ ವಾಕ್ಯವನ್ನು ಗ್ರಂಥದ ಕೊನೆಯಲ್ಲಾಗಲಿ, ಮಧ್ಯದಲ್ಲಾಗಲಿ ಸಂಧರ್ಭಾನುಸಾರ ವಿವರಿಸುತ್ತೇವೆ. ಕಾಯಿ ಪಕ್ವಕ್ಕೆ ಬಾರದ ಮೊದಲೇ ತೊಂದರೆಪಟ್ಟು ತಿಂದರೆ ಅದು ಹುಳಿಯಾಗಿರುತ್ತದೆ, ಸಿಹಿಯಾಗಿ ಇರುವುದಿಲ್ಲ. ಹಾಗೆಯೇ ಕೆಲವು ವಿಷಯಗಳನ್ನು ಪಕ್ಕಕ್ಕಿಟ್ಟು ಪಕ್ವಕ್ಕೆ ಬಂದಾಗ ಹಣ್ಣನ್ನು

ತಿಂದಂತೆ, ಸಂರ್ಭಾನುಸಾರ ಹೇಳಿದರೆ ಪೂರ್ತಿಯಾಗಿ ಅರ್ಥವಾಗುತ್ತದೆ. ಆದ್ದರಿಂದ ಆಗಿಹೋಗು ಎಂದರೆ ಆಗಿಹೋಗುವ ವಿಷಯವನ್ನು, ಆರು+ಒಂದು ಏಳು ದಿನಗಳ ವಿಷಯವನ್ನು ಪಕ್ಕಕ್ಕಿಡುತ್ತಿದ್ದೇವೆ. ಈಗ ಒಬ್ಬ ನಾಸ್ತಿಕವಾದಿ ಪ್ರಶ್ನಿಸುವ ಪ್ರಶ್ನೆಯನ್ನು ಕುರಿತು ನೋಡೋಣ. "ಪ್ರತಿ ಮುಸ್ಲಿಮ್ ಜೀವನದಲ್ಲಿ ಒಂದುಬಾರಿಯಾದರೂ ಹಜ್‌ಯಾತ್ರೆಗೆ (ಮಕ್ಕಾಯಾತ್ರೆಗೆ) ಹೋಗಬೇಕು. ಹೊರಟ ಪ್ರತಿ ಮುಸ್ಲೀಮ್ ಮುಖ್ಯವಾಗಿ ಮೂರು ನಿಯಮಗಳು ಪಾಟಿಸಬೇಕು. 1) ಕಾಬಾ ಸುತ್ತಾ (ಉದ್ದನೆಯ ಗ್ರಾನೆಟ್ ಬ್ಲಾಕ್‌ಸ್ಟೋನ್ ಸುತ್ತಾ) ಏಳುಸಲ ಪ್ರದಕ್ಷಿಣೆಗಳು ಮಾಡಬೇಕು. ನಾಲ್ಕು ಪ್ರದಕ್ಷಿಣೆಗಳು ವೇಗವಾಗಿಯೂ, ಮೂರು ಪ್ರದಕ್ಷಿಣೆಗಳು ನಿಧಾನವಾಗಿ ಸಾಮಾನ್ಯವಾಗಿ ಮಾಡಬೇಕು. 2) ಮಕ್ಕಾಗೆ ಎಂಟು (8) ಕಿಲೋಮೀಟರುಗಳ ದೂರದಲ್ಲಿ ಮೀನಾ ಹತ್ತಿರವಿರುವ ಮೂರು ದೆವ್ವದ (ಸಾತಾನು) ಸ್ಥಂಭಗಳ ಮೇಲೆ ಏಳು (7) ಗುಲಕ (ಹರಳುಕಲ್ಲು) ಎಸೆಯಬೇಕು. 3) ಬಿಳಿಯ ಪುಣ್ಯವಸ್ತ್ರಗಳನ್ನು ಧರಿಸಬೇಕು. ಮಕ್ಕಾಗೆ ಹೋದ ಪ್ರತಿ ಮುಸ್ಲೀಮ್ ತಪ್ಪದೆ ಈ ನಿಯಮಗಳನ್ನು ಆಚರಿಸುತ್ತಾನೆ.

ಪೂರ್ವಕ್ಕಿಂತ ಈಗಿನಕಾಲದಲ್ಲಿ ಮರಸ್ಲೀಮರುಗಳು ವಿಮಾನಗಳು ಬಂದ ನಂತರ ಪ್ರತಿ ವರ್ಷ ಮುಸ್ಲೀಮ್‌ರು ಲಕ್ಷಗಳ ಸಂಖ್ಯೆಯಲ್ಲಿ ಹಜ್‌ಯಾತ್ರೆಗೆ ಹೋಗುತ್ತಿದ್ದಾರೆ. ಸುಮಾರು ಹತ್ತು ವರ್ಷಗಳಿಂದ 25 ಲಕ್ಷಜನರಿಗೆ ಕಡಿಮೆ ಇಲ್ಲದಂತೆ ಮಕ್ಕಾವನ್ನು ದರ್ಶಿಸಿಕೊಂಡು ಬರುತ್ತಿದ್ದಾರೆ. ಪ್ರತಿ ಯಾತ್ರಿಕನು ಅಲ್ಲಿರುವ ಸೈತಾನ್ ಸ್ಥಂಭಗಳ ಮೇಲೆ ಏಳು ಕಲ್ಲುಗಳನ್ನು ಎಸೆಯುತ್ತಿದ್ದಾರೆ. ಇಲ್ಲಿಗೆ ಸುಮಾರು 1350 ವರ್ಷಗಳಿಂದ ಅಲ್ಲಿರುವ ಸೈತಾನ್ ಸ್ಥಂಭಗಳ ಮೇಲೆ ಹರಳುಕಲ್ಲುಗಳ ಗುಡ್ಡೆಗಳು ಬೆಳೆಯುತ್ತಲೇ ಇವೆಯಾಗಲಿ, ಇಲ್ಲಿಯವರೆಗೂ ಆ ಸೈತನ್ ಸಾಯಲಿಲ್ಲ. ಆ ಸ್ಥಂಭಗಳ ಹತ್ತಿರದಿಂದ ಅದು ಓಡಿಹೋಗಲೂ ಇಲ್ಲ. ನಾವು ಭೌತಿಕವಾಗಿ ಒಬ್ಬ ಮನುಷ್ಯನನ್ನು ನಿಲ್ಲಿಸಿ ಅವನಮೇಲೆ 25 ಲಕ್ಷಜನ ಕಲ್ಲು ಎಸೆದರೆ, ಆಕಲ್ಲುಗಳ ಒಡೆತಕ್ಕೆ ಅವನು ಸಾಯುವುದಲ್ಲದೆ ಎಲ್ಲಾ ಕಲ್ಲಿನಲ್ಲಿ ಪೂರ್ತಿಯಾಗಿ ಮುಳುಗಿಹೋಗಿ ಉಸಿರಾಡದೆ ಸಾಯುತ್ತಾನೆ.

ಸೈತಾನ್ ಅನ್ನುವುದು ಭೌತಿಕವಾಗಿ ಇಲ್ಲ, ಅದೊಂದು ಭ್ರಮೆ. ಮತ ಕಲ್ಪಿಸಿದ ಭ್ರಮೆಗಳ ವಂಚನೆ ಸಮೂಹಗಳೇ ಈ ಮೂಢನಂಬಿಕೆಗಳು, ಮೂಢ ವಿಶ್ವಾಸಗಳು. ಭ್ರಮೆಗಳಿಗೆ ಅಸ್ತಿತ್ವವಿಲ್ಲ ಅವು ಅಶಾಸ್ತ್ರೀಯ ಊಹಕಲ್ಪನೆಗಳೆ" ಎಂದು ಹೇತುವಾದಿ ಯೆಂದು ಹೆಸರು ಇಟ್ಟುಕೊಂಡ ಒಬ್ಬ ನಾಸ್ತಿಕವಾದಿ ಮುಸ್ಲೀಮರನ್ನೇ ಅಲ್ಲದೆ, ಹಿಂದುಗಳನ್ನೂ, ಕ್ರೈಸ್ತವರನ್ನೂ ಭ್ರಮೆಗಳ ಭಕ್ತಿಯಲ್ಲಿರುವವರಾಗಿ ಹೇಳುತ್ತಿದ್ದಾನೆ. ಹೇತುವಾದಿಯಾದವನು ಪ್ರಶ್ನಿಸಿ ಕಾರಣವಾದ ಉತ್ತರವನ್ನು ಸ್ವೀಕರಿಸಿ, ಹೇಳಲಾದ ಉತ್ತರ ಸರಿಯಾದುದಾದರೆ ಶಾಸ್ತ್ರಬದ್ಧವಾದುದೆಂದೋ, ಸರಿಯಿಲ್ಲದಿದ್ದರೆ ಶಾಸ್ತ್ರಬದ್ಧವು ಅಲ್ಲದಿರುವುದೆಂದೋ ಹೇಳಬಹುದು. ಅಶಾಸ್ತ್ರಬದ್ದವಾದ ಉತ್ತರವನ್ನು ಮೂಢನಂಬಿಕೆ ಅಥವಾ ಮೂಢವಿಶ್ವಾಸ ಎಂದು ಹೇಳಬಹುದು. ಹಾಗಲ್ಲದೆ ಪ್ರಶ್ನಿಸದೆಯೇ, ಉತ್ತರವನ್ನು ನೋಡದೆಯೇ, ತನಗೆ ತಿಳಿಯದಿರುವುದೆಲ್ಲ ವನ್ನು ಅಶಾಸ್ತ್ರೀಯವೆಂದರೆ, ಹಾಗೆ ಅನ್ನುವವರದೇ ಮೂಢನಂಬಿಕೆಯಾಗುತ್ತದೆ.

ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ, ಹಾಗೆಯೆ ಒಂದು ವಿಷಯವನ್ನು ವಿಮರ್ಶಿಸುವುದಕ್ಕು ಸಹಾ ಶಾಸ್ತ್ರ ಅಷ್ಟೇ ಅಗತ್ಯವೆಂದು ತಿಳಿಯದವರು, ಒಂದು ವಿಷಯವನ್ನು ಶಾಸ್ತ್ರವನ್ನು ಉಪಯೋಗಿಸಿ ವಿಮರ್ಶಿಸದಂತೆ, ಶಾಸ್ತ್ರಬದ್ಧವಾಗಿ ಕೇಳದಂತೆ, ಅಶಾಸ್ತ್ರೀಯವಾಗಿ ಖಂಡಿಸಿದರೆ ಅಂತಹವರನ್ನು ಮೂಢವಾಗಿ ಮಾತನಾಡುವವರೆಂದು ಮೂಢನಂಬಿಕೆ ಇರುವವರೆಂದು ಹೇಳಬಹುದು. ಮಕ್ಕಾಯಾತ್ರೆ ವಿವರವನ್ನು ಕುರಿತು ಮುಸ್ಲೀಮರೆಲ್ಲರಿಗೂ ತಿಳಿದಿದೆ ಎಂದು ಹೇಳಲಾರೆವು. ಎಲ್ಲಿಯಾದರೂ ತಿಳಿಯದ ವ್ಯಕ್ತಿ ಶಾಸ್ತ್ರಬದ್ದವಾದ ಉತ್ತರ ಹೇಳಲಾರದೆಹೋದರೆ, ಅಷ್ಟುಮಾತ್ರಕ್ಕೆ ಆ ವಿಷಯವನ್ನು ಅಶಾಸ್ತ್ರೀಯ ಅನ್ನಬಾರದು. ಪೂರ್ತಿ ಪರಿಶೀಲಿಸಿ ಯಾವು ದಾದರೂ ಒಂದು ನಿರ್ಣಯಕ್ಕೆ ಬರುವವನು ವಿವೇಕವಂತನಾಗುತ್ತಾನೆ. ಶಾಸ್ತ್ರಕ್ಕೆ ಮತ ಇರುವುದಿಲ್ಲ. ಆದ್ದರಿಂದ ನಾನು ಹಿಂದುವೇ (ಇಂದೂವೇ) ಆದರೂ ನನಗೆ ಬ್ರಹ್ಮವಿದ್ಯಾಶಾಸ್ತ್ರ ಚೆನ್ನಾಗಿ ತಿಳಿದಿದೆ. ಆದ್ದರಿಂದ ನಾನು ಯಾವ ಮತದಲ್ಲಿನ ಆಧ್ಯಾತ್ಮಿಕ ವಿಷಯವನ್ನಾದರೂ ಸುಲಭವಾಗಿ ಗ್ರಹಿಸುತ್ತೇನೆ. ನನಗೆ ತಿಳಿದ

ಶಾಸ್ತ್ರದಿಂದ ಮುಸ್ಲೀಮರ ಯಾತ್ರೆಯಲ್ಲಿನ ಆಚಾರಗಳಿಗೆ ಶಾಸ್ತ್ರಬದ್ಧವಾದ ಅರ್ಥವನ್ನು ತಿಳಿಯುತ್ತೇನೆ. ಮಕ್ಕಾದಲ್ಲಿನ ಆಚಾರಗಳೆಲ್ಲವುಗಳಿಗೂ ಮುಸ್ಲೀಮ್‌ರಿಗೆ ಅರ್ಥ ತಿಳಿದಿದೆಯೋ, ಇಲ್ಲವೋ ನನಗೆ ತಿಳಿದಿಲ್ಲ ಆದರೇ, ನನಗೆ ತಿಳಿದ ಶಾಸ್ತ್ರಬದ್ಧವಾದ ಅರ್ಥವನ್ನು ಹೇಳುತ್ತೇನೆ. ಪೂರ್ವದಲ್ಲಿ ಮುಸ್ಲೀಮ್ ಹಿರಿಯರು ಇಟ್ಟಿರುವ ಆಚಾರಗಳು ಶಾಸ್ತ್ರಬದ್ಧವಾದವೇ ಎಂದು, ಅಶಾಸ್ತ್ರೀಯವಾದ ಕಲ್ಪನೆಗಳಲ್ಲವೆಂದು ಹೇಳುತ್ತೇನೆ.

ಒಂದು ವಿಷಯವನ್ನು ಕುರಿತು ಮಾತನಾಡುವಾಗ, ಆ ವಿಷಯ ಅರ್ಥವಾಗುವುದಕ್ಕೆ ಒಂದು ಹೋಲಿಕೆಯನ್ನು ಹೋಲಿಸಿ, ಅದನ್ನು ಉದಾಹರಣೆಯಾಗಿ ಹೇಳುತ್ತೇವೆ. ಒಂದು ಬಟ್ಟೆಯನ್ನು ಕುರಿತು ಹೇಳುವಾಗ ಅದು ಮೆತ್ತನೆ ಬಟ್ಟೆ ಎಂದು ಹೇಳುವುದಕ್ಕೆ ರೇಷ್ಮೆ ಬಟ್ಟೆಯನ್ನು ತೋರಿಸಿ ಇದರಂತಿರುವ ಮೆತ್ತನೆಯ ಬಟ್ಟೆಯೆಂದು ಹೇಳುತ್ತಿರುತ್ತಾರೆ. ಪ್ರತ್ಯಕ್ಷವಾಗಿ ಇಲ್ಲದ ಬಟ್ಟೆಯನ್ನು ಕುರಿತು ತಿಳಿಸುವಾಗ ಪ್ರತ್ಯಕ್ಷವಾಗಿರುವ ಮತ್ತೊಂದು ಬಟ್ಟೆಯನ್ನು ತೋರಿಸುತ್ತೇವೆ. ಪ್ರತ್ಯಕ್ಷವಾಗಿ ರೇಷ್ಮೆಬಟ್ಟೆ ಸ್ಥೂಲವಾಗಿ ಕಾಣಿಸುವುದಾಗಿದೆ. ಪ್ರತ್ಯಕ್ಷವಾಗಿ ಇಲ್ಲದ ಮೆತ್ತನೆಯ ಬಟ್ಟೆ ಸೂಕ್ಷ್ಮವಾಗಿ ಕಾಣಿಸದಂತೆ ಇದೆ. ಆಗ ಅಲ್ಲಿ ಪ್ರತ್ಯಕ್ಷವಾಗಿ ಇಲ್ಲದ ಬಟ್ಟೆಯನ್ನು ಅಶಾಸ್ತ್ರ, ಅಸತ್ಯ ಎಂದು ಅನ್ನಲಾರೆವಲ್ಲ! ಪ್ರತ್ಯಕ್ಷವಾಗಿ ಇಲ್ಲದಿದ್ದರೂ ಅದು ಹೇಗಿದೆಯೋ ತಿಳಿಸುವುದಕ್ಕೆ ಪ್ರತ್ಯಕ್ಷವಾಗಿರುವ ಬಟ್ಟೆಯನ್ನು ತೋರಿಸುತ್ತಿದ್ದೇವೆ ಅಲ್ಲವೇ! ಅಸಲು ಇಲ್ಲದಿರುವುದನ್ನು ಕುರಿತು ಯಾರೂ ಉದಹಾರಣೆಯಾಗಿ ತೋರಿಸಲಾರರು. ಮನಸ್ಸು ಅಧಿಕ ಚಂಚಲವಾದುದು, ಮನಸ್ಸೆನ್ನುವುದು ಇದ್ದರೂ ಅದು ಕಾಣಿಸುವುದಿಲ್ಲ. ಸೂಕ್ಷ್ಮವಾದ ಮನಸ್ಸು ಹೇಗೆ ಚಲನೆ ಹೊಂದಿದೆಯೋ ಅದನ್ನು ಕುರಿತು ತಿಳಿದವರು. ಮನಸ್ಸನ್ನು ಕಾಣಿಸುವ ನಾಯಿಗೆ ಸಮಾನವಾಗಿ ಹೋಲಿಸಿ ಹೇಳಿದ್ದಾರೆ. ಹಾಗೆ ಹೇಳುವುದರಿಂದ ನಾಯಿಯನ್ನು ಸತ್ಯವೆಂದು, ಮನಸ್ಸನ್ನು ಅಸತ್ಯವೆಂದು ಹೇಳಬಹುದಾ? ಕಾಣಿಸದ ಮನಸ್ಸು ಸತ್ಯವೇ, ಕಾಣಿಸುವ ನಾಯಿ ಸತ್ಯವೇ ಉದಾಹರಣೆಯಾಗಲಿ, ಹೋಲಿಕೆಯಾಗಲಿ ತಿಳಿಯದಿರುವುದನ್ನು ಕುರಿತು ತಿಳಿದವರು ಇತರರಿಗೆ ತಿಳಿಯುವಂತೆ ಅವರಿಗೆ ತಿಳಿದಿರುವುದನ್ನು ಹೋಲಿಸಿ

ತೋರಿಸುವುದೇ ಆಗುತ್ತದೆ. ಅಂತಹದರಲ್ಲಿ ಸ್ಥೂಲವಾಗಿ ತಿಳಿಯುವುದು ಎಷ್ಟು ಸತ್ಯವೋ ಸೂಕ್ಷ್ಮವಾಗಿ ತಿಳಿಯದಿರುವುದು ಸಹಾ ಅಷ್ಟೇ ಸತ್ಯವಾಗುತ್ತದೆ.

ಮನುಷ್ಯನಿಗೆ ಪ್ರಪಂಚ ಜ್ಞಾನೇಂದ್ರಿಯಗಳು ಐದು ಇವೆ. ಅವು ಕ್ರಮವಾಗಿ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ. ದೃಶ್ಯವನ್ನು ಕಣ್ಣಿನಿಂದ ನೋಡುತ್ತೇವೆ. ಶಬ್ದವನ್ನು ಕಿವಿಯಿಂದ ಕೇಳಿ ತಿಳಿಯುತ್ತೇವೆ. ವಾಸನೆಯನ್ನು ವಾಸನೆ ಶಕ್ತಿ (ಘ್ರೂಣಶಕ್ತಿ) ಮೂಲಕ ತಿಳಿಯುತ್ತೇವೆ. ಹಾಗೆಯೇ ಸ್ಪರ್ಶವನ್ನು ಚರ್ಮದ ಮುಖಾಂತರ  ರುಚಿಯನ್ನು ನಾಲಿಗೆ ಮೂಲಕ ತಿಳಿಯುತ್ತೇವೆ. ಕಣ್ಣು ಮಾತ್ರ ನೋಡುತ್ತದೆ. ಉಳಿದ ನಾಲ್ಕು ಅವುಗಳ ವಿಷಯಗಳನ್ನು ಅವು ನೋಡಲಾರೆವು ಆದರೆ ತಿಳಿಯುತ್ತವೆ. ಪ್ರಪಂಚ ವಿಷಯಗಳೆಂಬ ಐದನ್ನು ಶರೀರದ ಮೇಲಿರುವ ಐದು ಅವಯವಗಳ ಮೂಲಕ ಗ್ರಹಿಸುತ್ತಿದ್ದೇವೆ. ದೃಶ್ಯವನ್ನು ನೋಡಿ, ಶಬ್ಧ, ವಾಸನೆ, ರುಚಿ, ಸ್ಪರ್ಶಗಳನ್ನು ತಿಳಿದು ಗ್ರಹಿಸುತ್ತಿದ್ದೇವೆ. ಹಾಗೆ ಪ್ರಪಂಚ್ಕೆ ವಿಷಯಗಳನ್ನು ಅಲ್ಲದೆ ಪ್ರಪಂಚ ನಮಗೆ ಅತೀತವಾದ ಪರಮಾತ್ಮ, ಆತ್ಮ, ಜೀವಾತ್ಮ ವಿಷಯಗಳನ್ನು ಮೇಲಿಂದ ಐದು ಇಂದ್ರಿಯಗಳಿಂದ ತಿಳಿಯಲಾರೆವು. ಪರಮಾತ್ಮ ವಿಷಯ ತಿಳಿಯುವುದಕ್ಕೆ ಬುದ್ಧಿಗಿರುವ ಗ್ರಾಹಿತಶಕ್ತಿ ಕಲಸಕ್ಕೆಬರುತ್ತದೆ. ಬುದ್ಧಿಗಿರುವ ಗ್ರಹಿತಶಕ್ತಿಯನ್ನು ಜ್ಞಾನದೃಷ್ಠಿ ಅನ್ನುತ್ತೇವೆ. ಹೊರಗಿನ ಐದು ಇಂದ್ರಿಯಗಳ ಮೂಲಕ ಪ್ರಪಂಚ ವಿಷಯಗಳು ಮನಸ್ಸಿಗೆ ಸೇರಿ ಅದರ ಜ್ಞಾಪಕದಲ್ಲಿರುವಂತೆ ಬುದ್ಧಿ ಮೂಲಕ ಗ್ರಹಿಸಲ್ಪಡುವ ಸೂಕ್ಷ್ಮ ವಿಷಯವಾದ ದೈವಜ್ಞಾನ ವಿಷಯಗಳು ಆತ್ಮನಲ್ಲಿ ಸೇರಿಹೋಗುತ್ತವೆ. ಕಾಣಿಸುವ ಪ್ರಪಂಚ ಜ್ಞಾನವಿಷಯಗಳು ಐದು ಜ್ಞಾನೇಂದ್ರಿಯಗಳ ಮೂಲಕ ಗ್ರಹಿಸಲ್ಪಟ್ಟು ಮನಸ್ಸು ಅನ್ನುವ ಬ್ಯಾಂಕಿನಲ್ಲಿ ನಿಂತುಹೋದಂತೆ, ಕಾಣಿಸದ ದೈವಜ್ಞಾನ ವಿಷಯಗಳು ಬುದ್ಧಿ ಮೂಲಕ ಗ್ರಹಿಸಲ್ಪಟ್ಟು ಆತ್ಮ ಅನ್ನುವ ಬ್ಯಾಂಕಿನಲ್ಲಿ ನೆಲೆಸಿಡಲಾಗುತ್ತದೆ. ಪ್ರಪಂಚ ವಿಷಯಗಳು ಮನಸ್ಸಿನಿಂದ ಪುನಃ ಜ್ಞಾಪಕಬರುತ್ತವೆ. ಹಾಗೆಯೇ ಪರಮಾತ್ಮ ವಿಷಯಗಳು ಆತ್ಮದಿಂದ ಜ್ಞಾಪಕಬರುತ್ತವೆ. ಬುದ್ಧಿಗಿರುವ ಗ್ರಾಹಿತಶಕ್ತಿಯನ್ನು ಜ್ಞಾನದೃಷ್ಟಿ ಎಂದು ಹೇಳಬಹುದು. ಕೆಲವರು ಬುದ್ದಿಗಿರುವ ಜ್ಞಾನದೃಷ್ಟಿಯನ್ನು ಮನೊದೃಷ್ಠಿ ಎಂದು ಸಹಾ ಹೇಳುತ್ತಾರೆ.

ಕೆಲವರು ಜ್ಞಾನಿಗಳು ಚಂಚಲವಾದ ಮನಸ್ಸನ್ನು ನಾಯಿಗೆ ಸಮಾನವಾಗಿ ಹೋಲಿಸುತ್ತಿರುತ್ತಾರೆ. ಹಾಗೆಯೇ ಚುರುಕಾದ ಬುದ್ಧಿಯನ್ನು ಹರಿತವಾದ ಕತ್ತಿಗೆ ಹೋಲಿಸುತ್ತಿರುತ್ತಾರೆ. ಈ ಹೋಲಿಕೆಗಳು ಸೂಕ್ಷ್ಮವಾಗಿರುವ ಮನೋಬುದ್ಧಿಗಳ ಸಹಜತ್ವವನ್ನು ತಿಳಿಸುತ್ತಿವೆ. ಐದು ಪ್ರಪಂಚ ವಿಷಯಗಳನ್ನು ತಿಳಿಸುವ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ ಅನ್ನುವ ಐದು ಇಂದ್ರಿಯಗಳು ಅವುಗಳ ಶಕ್ತಿಗಳು ವಿಜ್ಞಾನ (ಜನರಲ್ ಸೈನ್ಸಿ)ಗೆ ತಿಳಿಯುತ್ತದೆ. ಒಂದು ಪರಮಾತ್ಮ ವಿಷಯವನ್ನು ತಿಳಿಸುವ ಬುದ್ಧಿ ಮತ್ತು ಅದರಶಕ್ತಿಯನ್ನು ತಿಳಿಸುವುದು ಸುಜ್ಞಾನ (ಸೂಪರ್ ಸೈನ್ಸು) ವಿಜ್ಞಾನವನ್ನು ಮಾತ್ರ ತಿಳಿದವರು ಗಣಿತ, ಖಗೋಳ, ರಸಾಯನಿಕ, ಭೌತಿಕ ಶಾಸ್ತ್ರಗಳನ್ನು ಮಾತ್ರ ತಿಳಿದಿರುತ್ತಾರೆ. ಸುಜ್ಞಾನವನ್ನು ತಿಳಿದವರು ಸೂಪರ್ ಸೈನ್ಸಾದ ಬ್ರಹ್ಮವಿದ್ಯಾಶಾಸ್ತ್ರವನ್ನು ಕುರಿತು ತಿಳಿದಿರುತ್ತಾರೆ. ದೈವ ಜ್ಞಾನವನ್ನು ಸಂಪೂರ್ಣವಾಗಿ ತಿಳಿದಿರುವ, ಖಗೋಳದಲ್ಲಿನ ಕಾಣಿಸದ ಒಂದು ಗ್ರಹವಾದ ಜಿಬ್ರಯೇಲ್ ಎನ್ನುವಾತನು ಸುಮಾರು 1400 ವರ್ಷಗಳ ಪೂರ್ವದಲ್ಲಿ ಮಹಮ್ಮದ್ ಪ್ರವಕ್ತ ಎಂಬ ವ್ಯಕ್ತಿಗೆ ತನಗೆ ತಿಳಿದ ದೈವಜ್ಞಾನವನ್ನು ಹೇಳುವುದು ನಡೆದಿದೆ. ಹಾಗೆ ಹೇಳಿದ ಜ್ಞಾನ ಈದಿನ ಖುರ್‌ಆನ್ ಗ್ರಂಥ ರೂಪದಲ್ಲಿದೆ ಆ ದಿನಗಳಲ್ಲಿ ದೈವ ಜ್ಞಾನಿ ಅಥವಾ ದೈವದೂತನಾದ ಜಿಬ್ರಯೇಲ್ ಹೇಳಿದ ಜ್ಞಾನದ ಪ್ರಕಾರ ಮಹಮ್ಮದ್ ಪ್ರವಕ್ತ ಪ್ರವರ್ತಿಸಿದ್ದಾನೆ. ದೇವರಜ್ಞಾನವನ್ನು ತಿಳಿಯುವುದಕ್ಕು, ದೇವರನ್ನು ಪ್ರಾರ್ಥನೆ ಮಾಡುವುದಕ್ಕು, ಆ ದಿನ ಮಕ್ಕಾದಲ್ಲಿ ಕಾಬಾ ಗೃಹ, ಏಳು ಪ್ರದಕ್ಷಿಣೆಗಳು ಮೂರು ಸಾತಾನ್ ಸ್ಥಂಭಗಳು, ಏಳು ಹರಳುಕಲ್ಲುಗಳು ಎಸೆಯುವುದನ್ನು ಆಚರಿಸಿದ್ದಾರೆ.

ಪ್ರಪಂಚಕ್ಕೆಲ್ಲಾ ದೇವರು ಒಬ್ಬನೇ, ಆತನ ಶಾಸ್ತ್ರವು ಒಂದೇ, ಆತನ ಜ್ಞಾನ ಒಂದೇ. ದೇವರ ಜ್ಞಾನ ಗೀತೆಯಾಗಾಗಲಿ, ಬೈಬಲಾಗಾಗಲಿ, ಖುರಾನ್‌ಗಾಗಲಿ ಯಾವ ಗ್ರಂಥರೂಪದಲ್ಲಾದರೂ ಇರಬಹುದು. ಗ್ರಂಥಗಳ ಹೆಸರುಗಳು ಬೇರೆಯಾದಷ್ಟು ಮಾತ್ರಕ್ಕೆ ಅವುಗಳಲ್ಲಿನ  ಜ್ಞಾನ ಬೇರೆಯಲ್ಲವೆಂದು, ಎಲ್ಲಾ ಗ್ರಂಥಗಳ ಜ್ಞಾನಗಳು ಒಂದೇ ದೇವರನ್ನು ಕುರಿತು ತಿಳಿಸುತ್ತಿವೆಯೆಂದು ನಮಗೆ

ಚೆನ್ನಾಗಿ ತಿಳಿದಿದೆ. ಅಂತಹದರಲ್ಲಿ ಯಾವ ಮತದಲ್ಲಿರುವ ಜ್ಞಾನವಾದರೂ, ಯಾವ ಗ್ರಂಥದಲ್ಲಿರುವ ಜ್ಞಾನವಾದರೂ ಸುಲಭವಾಗಿ ಅರ್ಥ ಮಾಡಿಕೊಳ್ಳುತ್ತೇವೆ. 1400 ವರ್ಷಗಳ ಪೂರ್ವದಲ್ಲಿ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತಗೆ ಹೇಳಿದ ಜ್ಞಾನವೂ, 2000 ವರ್ಷಗಳ ಪೂರ್ವದಲ್ಲಿ ಏಸು ಹೇಳಿದ ಜ್ಞಾನವೂ, 5000 ವರ್ಷಗಳ ಪೂರ್ವದಲ್ಲಿ ಕೃಷ್ಣನು ಹೇಳಿದ ಜ್ಞಾನವೂ ಒಂದೇ ದೇವರಿಗೆ ಸಂಬಂಧಿಸಿರುವವು ಆಗಿರುವುದರಿಂದ, ಗೀತೆಯನ್ನು ತಿಳಿದ ನನಗೆ ಉಳಿದ ಗ್ರಂಥಗಳ ಜ್ಞಾನ ಸುಲಭವಾಗಿ ಅರ್ಥವಾಗಿದೆ. ಆದ್ದರಿಂದ ಕಾಬಾ ಗೃಹದ ಹತ್ತಿರ ಕಪ್ಪನೆಯ ಕಲ್ಲಿಗಿರುವ ಅರ್ಥವಾಗಲಿ, ಏಳು ಪ್ರದಕ್ಷಿಣೆಗಳ ಅರ್ಥವಾಗಲಿ, ಮೂರು ಸಾತಾನು ಸ್ಥಂಭಗಳ ವಿವರವಾಗಲಿ, ಏಳು ಕಲ್ಲುಗಳಿಂದ ಹೊಡೆಯುವು ದರ ಉದ್ದೇಶವಾಗಲಿ, ಪ್ರತ್ಯಕ್ಷವಾಗಿ ಕಾಣಿಸುವಂತೆ ತಿಳಿಯುತ್ತಿದೆ. ಮಕ್ಕಾದಲ್ಲಿನ ಅವುಗಳ ವಿವರ ಮುಸ್ಲೀಮರಿಗೆ ಯಾವ ವಿಧವಾಗಿ ತಿಳಿದಿದೆಯೋ ನನಗೆ ತಿಳಿಯದು. ಆದರೆ ನನಗೆ ತಿಳಿದ ಜ್ಞಾನಾರ್ಥವನ್ನು ನಾನು ಹೇತುಬದ್ಧವಾಗಿ, ಶಾಸ್ತ್ರಬದ್ಧವಾಗಿ ಹೇಳುತ್ತಿದ್ದೇನೆ. ನಾವು ಹೇಳುವ ವಿಧಾನ ನಿಮಗೆ ನಂಬಿಕೆಯಾದರೆ ನಂಬಿರಿ, ನಿಮಗೆ ಸಮ್ಮತವಲ್ಲದಿದ್ದರೆ ನನ್ನ ಉದ್ದೇಶವನ್ನು ನನಗೇ ಬಿಟ್ಟುಬಿಡಿರೆಂದು ಮೊದಲೇ ಹೇಳುತ್ತಿದ್ದೇನೆ.

ಸೃಷ್ಠಿ ತಯಾರಾದ ನಂತರ ಮಹಾಭೂತವಾದ ಆಕಾಶದಿಂದ ಶಬ್ದದ ಮೂಲಕ ಸೂರ್ಯಗ್ರಹಕ್ಕೆ ದೇವರಜ್ಞಾನ ಮೊಟ್ಟಮೊದಲು ಹೇಳಲಾಗಿದೆ. ಸೂರ್ಯಗ್ರಹದಿಂದ ಭೂಮಿಮೇಲೆ ಪ್ರಜೆಗಳಿಗೆ ದೈವಜ್ಞಾನ ಸೇರಿದೆ. ಸೂರ್ಯಗ್ರಹ ಕೇಳಿದ ನಂತರ ಸೂರ್ಯನ ಮೂಲಕ ಜಿಬ್ರಯೇಲ್ ಗ್ರಹ ಸಹಾ ಕೇಳಿಸಿಕೊಂಡು ದೇವರಜ್ಞಾನ ತಿಳಿದಿದೆ. ಕಲಿಯುಗದಲ್ಲಿ 1400 ವರ್ಷಗಳ ಪೂರ್ವದಲ್ಲಿ ಮುಹಮ್ಮದ್ ಪ್ರವಕ್ತರಿಗೆ ಕಾಣಿಸದಂತೆ ಜಿಬ್ರಯೇಲ್ ದೈವಜ್ಞಾನವನ್ನು ಬೋಧಿಸಿದ್ದಾನೆ. ಸೂರ್ಯನು ಖಗೋಳದಲ್ಲಿ ಇರುತ್ತಾ, ಅಲ್ಲಿ ಖಗೋಳದಲ್ಲಿರುವ ಗ್ರಹಗಳಿಗೂ ಇಲ್ಲಿ ಭೂಮಿಮೇಲಿರುವ ಮನುಷ್ಯರಿಗೂ ದೇವರಜ್ಞಾನವನ್ನು ತಿಳಿಸಿದ್ದಾನೆ. ಒಂದು ಅಗ್ನಿಗೋಳವಾದ ಸೂರ್ಯಗ್ರಹ ಹೇಗೆ ಹೇಳಿದೆಯೆಂಬ

ಪ್ರಶ್ನೆಗೆ ನಾವು ಬರೆದ **"ತ್ರೈತಸಿದ್ಧಾಂತ ಭಗವದ್ಗೀತೆ"** ಗ್ರಂಥದಲ್ಲಿ ಸಂಪೂರ್ಣವಾದ ಉತ್ತರ ಇದೆ. ಮಹಾಜ್ಞಾನಿಯಾದ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ, 23 ವರ್ಷಗಳು ಆಗಾಗ ಜ್ಞಾನವನ್ನು ತಿಳಿಸುತ್ತಾಬಂದಿದ್ದಾನೆ. ಮೊದಲು ಮಹಾಭೂತವಾದ ಆಕಾಶವಾಣಿಯಿಂದ ಬಂದಿರುವ ಜ್ಞಾನ ಸೂರ್ಯಗ್ರಹಕ್ಕೂ, ಸೂರ್ಯಗ್ರಹದಿಂದ ಭೂಮಿಮೇಲೆ ಮನುವಿಗೂ ತಿಳಿಸಲಾದ ಜ್ಞಾನ, ಖಗೋಳದಲ್ಲಿನ ಜಿಬ್ರಯೇಲ್‌ಗು ಸಹಾ ತಿಳಿಸಲಾಗಿದೆ. ಮೊದಲು ಸೂರ್ಯನ ಮೂಲಕ ಬಂದಿರುವ ಜ್ಞಾನವೇ ಈದಿನ ಪ್ರಪಂಚವ್ಯಾಪ್ತವಾಗಿ ಅನೇಕ ಮತಗಳಲ್ಲಿಯೂ, ಅವುಗಳ ಮೂಲ ಗ್ರಂಥಗಳಲ್ಲಿಯೂ ಕಾಣಿಸುತ್ತಿದೆ. ಸೂರ್ಯನಿಂದ ಬಂದ ಜ್ಞಾನವನ್ನೇ ಪುನಃ ಹೇಳುತ್ತಿದ್ದೇನೆಂದು ಶ್ರೀಕೃಷ್ಣನು ಭಗವದ್ಗೀತೆ ರೂಪದಲ್ಲಿ ಹೇಳಿದ್ದಾನೆ. ಹಾಗೆ ಹೇಳಿದ ಭಗವದ್ಗೀತೆಯನ್ನು ಓದುವುದರಿಂದ, ಅದನ್ನು ನಾವು ಸಿದ್ಧಾಂತ ರೂಪವಾಗಿ ಬರೆಯುವುದರಿಂದ, ಎಲ್ಲಾ ಗ್ರಂಥಗಳ ಜ್ಞಾನ ಪೂರ್ತಿಯಾಗಿ ನಮಗೆ ಅರ್ಥವಾಗಿದೆ. ನಮಗೆ ಅರ್ಥವಾದ ಜ್ಞಾನದ ಪ್ರಕಾರ ದೇವರಿಗೆ ರೂಪ, ನಾಮ, ಕ್ರಿಯೆಗಳು ಇಲ್ಲವೆನ್ನುವುದು ಮುಖ್ಯ ಸೂತ್ರವಾಗಿ ಇದೆ. ಈ ಸೂತ್ರ ದೇವರ ಜ್ಞಾನದಲ್ಲಿ ಮುಖ್ಯವಾದುದು.

ರೂಪ, ನಾಮ, ಕ್ರಿಯಾರಹಿತನು ದೇವರು ಎಂದು ತಿಳಿಯದವರಿಗೆ ತಿಳಿಸುವುದಕ್ಕೋಸ್ಕರ, ಕೃತಯುಗದಲ್ಲಿ ಮೊದಲು ಮೂಗು ಮುಖ ಎನ್ನುವ ಆಕಾರವಿಲ್ಲದ ಒಂದು ಕಲ್ಲನ್ನು ಉದಾಹರಣೆಯಾಗಿ ತೋರಿಸಿ, ದೇವರು ಈ ವಿಧವಾಗಿ ಆಕಾರ ಇಲ್ಲದಂತೆ ಇದ್ದಾನೆಂದು ತಿಳಿಸಿದ್ದಾರೆ. ಅದೇ ಜ್ಞಾನದ ಪ್ರಕಾರವೇ ದೇವರ ಗುರುತಾಗಿ ಕಾಬಾ ಗೃಹದ ಹತ್ತಿರ ಮೂಗು, ಮುಖ ಆಕಾರವಿಲ್ಲದ ಕಪ್ಪನೆಕಲ್ಲನ್ನು ಇಡಲಾಗಿದೆ. ಅಲ್ಲಿರುವ ಕಪ್ಪನೆಕಲ್ಲು ಕಲ್ಲು ದೇವರಲ್ಲ ಆದರೆ, ದೇವರಿಗೆ ಉದಾಹರಣೆಯಾಗಿ ಇಟ್ಟಿರುವುದೆಂದು ತಿಳಿಯಬೇಕು. ದೇವರಿಂದ ಸೃಷ್ಟಿಸಲ್ಪಟ್ಟು ದೇವರ ಪಾಲನೆಯಲ್ಲಿರುವ ಭೂಮಂಡಲ ಪ್ರಾಂಗಣದಲ್ಲಿ ಪ್ರಜೆಗಳು ಕೆಲವರು ಧರ್ಮಮಾರ್ಗದಲ್ಲಿಯೂ, ಕೆಲವರು ಅಧರ್ಮಮಾರ್ಗ

ದಲ್ಲಿಯೂ, ಎರಡು ವಿಧಗಳಾಗಿ ಇದ್ದಾರೆಂಬುವುದಕ್ಕೆ ಉದಾಹರಣೆಯಾಗಿ, ಕಾಬಾ ಗೃಹ ಪ್ರಾಂಗಣದಲ್ಲಿ ನಾಲ್ಕು ಪ್ರದಕ್ಷಿಣೆಗಳು ಸ್ವಲ್ಪ ವೇಗವಾಗಿ, ಮೂರು ಪ್ರದಕ್ಷಿಣೆಗಳು ನಿಧಾನವಾಗಿ ತಿರುಗುವುದು ನಡೆಯುತ್ತಿದೆ. ಭೂಮಿಮೇಲೆ ನಾಲ್ಕು ಅಧರ್ಮಗಳು, ಮೂರು ಧರ್ಮಗಳು ಇವೆ. ಸಹಜವಾಗಿ ಅಧರ್ಮಮಾರ್ಗದಲ್ಲಿನ ಪ್ರಜೆಗಳು ವೇಗವಾಗಿ, ಆಂತಕವಿಲ್ಲದೆ ಚಲಾವಣೆಯಾಗುತ್ತಿದ್ದಾರೆ. ಧರ್ಮ ಮಾರ್ಗಗಳಲ್ಲಿ ಪ್ರಯಾಣಿಸುವವರು ಅನೇಕ ಆಂತಕಗಳಿಂದ ನಿದಾನವಾಗಿ ಸಾಗುತ್ತಿದ್ದಾರೆಂಬುವುದಕ್ಕೆ ಉದಾಹರಣೆಯಾಗಿ, ನಾಲ್ಕು ಪ್ರದಕ್ಷಣೆಗಳು ವೇಗವಾಗಿ, ಮೂರು ಪ್ರದಕ್ಷಣೆಗಳು ನಿದಾನವಾಗಿ ತಿರುಗುವುದು ನಡೆಯುತ್ತಿದೆ. ಇದರಿಂದ ನಾಲ್ಕು ಅಧರ್ಮಗಳು, ಮೂರು ಧರ್ಮಗಳು ಇವೆಯೆಂದು, ಅಧರ್ಮಗಳು ವೇಗವಾಗಿ ಸಾಗುತ್ತಿರುವಾಗ, ಮೂರು ಧರ್ಮಗಳ ಮಾರ್ಗಗಳು ನಿಧಾನವಾಗಿ ಸಾಗುತ್ತಿವೆಂದು ತಿಳಿಯುತ್ತಿದೆ. ಕಾಬಾ ಗೃಹದ ಹತ್ತಿರವಿರುವ ಆಕಾರವಿಲ್ಲದ ಕಪ್ಪನೆಯ ಕಲ್ಲು ಆಕಾರವಿಲ್ಲದ ದೇವರಿಗೆ ಗುರುತಾಗಿರುವಾಗ, ದೇವರ ದೃಷ್ಠಿಯಲ್ಲಿನ ನಾಲ್ಕು ಅಧರ್ಮಗಳು, ಮೂರು ಧರ್ಮಗಳು ತಿಳಿಯುವಂತೆ ಉದಾಹರಣೆಗೆ ನಾಲ್ಕು ಒಂದು ವಿಧವಾಗಿ, ಮೂರು ಮತ್ತೊಂದು ವಿಧವಾಗಿ ಪ್ರದಕ್ಷಿಣೆಗಳು ಇವೆಯೆಂದು ತಿಳಿಯುತ್ತಿದೆ.

ಇನ್ನು ಮಕ್ಕಾದಲ್ಲಿ ಕಾಬಾ ಗೃಹಕ್ಕೆ ಎಂಟು ಕಿಲೋಮೀಟರ್‌ಗಳ ದೂರದಲ್ಲಿ (ಐದು ಮೈಲಿಗಳ ದೂರದಲ್ಲಿ) ರುವ ಸೈತಾನ್ ಗೋಡೆಗಳು ಅಥವಾ ಸ್ಥಂಭಗಳು ಮೂರು ಇವೆ. ಇಸ್ಲಾಮ್‌ನಲ್ಲಿ ಸೈತಾನ್, ಕ್ರೈಸ್ತರಲ್ಲಿ ಸಾತಾನ್ ಎಂದೂ ಇಂದೂತ್ವ (ಹಿಂದೂತ್ವ)ದಲ್ಲಿ ಮಾಯೆ ಎಂದೂ ಅನ್ನುವುದು ಒಂದೇಯೆಂದು ತಿಳಿಯಬೇಕು. ಮಾಯೆ ಮೂರು ವಿಧಗಳಾಗಿ ಇದೆ. ಪ್ರಕೃತಿಯಿಂದ ತಯಾರು ಮಾಡಲಾದ ಗುಣಗಳು ಮನುಷ್ಯನ ಶರೀರದಲ್ಲಿವೆ. ಗುಣಗಳು ಮೂರು ತರಗತಿಗಳಾಗಿವೆ. ತಾಮಸ, ರಾಜಸ, ಸಾತ್ತ್ವಿಕ ಎಂಬ ಮೂರು ಗುಣ ಭಾಗಗಳು ನಮ್ಮ ತಲೆಯಲ್ಲಿ ಇವೆ. ಒಂದೊಂದು ಗುಣಭಾಗದಲ್ಲಿ

12 ಗುಣಗಳು ಇವೆ. ಒಂದು ಭಾಗದಲ್ಲಿರುವ 12 ಗುಣಗಳಲ್ಲಿ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು ಇವೆ. ಮೂರು ಭಾಗಗಳಲ್ಲಿ ಒಟ್ಟು 36 ಗುಣಗಳು ಇವೆ. ತಾಮಸ, ರಾಜಸ, ಸಾತ್ತ್ವಿಕ ಅನ್ನುವ ಮೂರು ಭಾಗಗಳಲ್ಲಿನ ಗುಣಗಳನ್ನು ಸೇರಿಸಿ ಮಾಯೆ ಅನ್ನುತ್ತಿದ್ದೇವೆ. ಇದೇ ಮಾತನ್ನೇ ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿ "ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ" ಎಂದೂ ಸಹ ಅಂದಿದ್ದಾರೆ. "ದೇವರಾದ ನಾನು ತಯಾರುಮಾಡಿದ ಗುಣಗಳಿಂದ ಕೂಡಿಕೊಂಡ ನನ್ನ ಮಾಯೆಯನ್ನು ಜಯಿಸುವುದು ಅಸಾಧ್ಯ" ಎಂದು ಇದರ ಅರ್ಥ. ಮೂರು ಗುಣಗಳನ್ನೆ ಮಾಯೆ ಅನ್ನುವುದು ನಡೆಯುತ್ತಿದೆ. ಮಾಯೆ ಮನುಷ್ಯರ ತಲೆ ಭಾಗದಲ್ಲಿರುವ ಗುಣಚಕ್ರದಲ್ಲಿ ಇದೆ. ಗುಣಚಕ್ರ ಮನುಷ್ಯನ ತಲೆಯಲ್ಲಿ ಹೇಗೆ ಇರುವುದು ನಂತರ ಪೇಜಿನಲ್ಲಿನ ಚಿತ್ರಪಟಗಳಲ್ಲಿ ನೋಡಬಹುದು.

ಮನುಷ್ಯನ ತಲೆಯಲ್ಲಿಯೇ ಮಾಯೆ ಇದೆ. ತಲೆಯಲ್ಲಿನ ಗುಣ ಚಕ್ರದಲ್ಲಿರುವ ಮೂರು ಭಾಗಗಳಲ್ಲಿ ಜೀವಾತ್ಮ ಯಾವುದೋ ಒಂದು ಭಾಗದಲ್ಲಿ ಇದ್ದಾನೆ. ಇದರಿಂದ ಮಾನವನು ಯಾವಾಗಲೂ ಮಾಯೆಕೈಯಲ್ಲಿ ಬಂಧಿಸಲ್ಪಟ್ಟಿದ್ದು, ದೇವರಕಡೆ ಹೋಗದಂತ್ತಿದ್ದಾನೆಂದು ತಿಳಿಯುತ್ತಿದೆ. ದೇವರಕಡೆ ಮನುಷ್ಯ ಹೋಗದಂತೆ ಆತಂಕ ಪಡಿಸುವುದು ಮಾಯೆ, ಅಥವಾ ಸಾತಾನ್, ಅಥಾವ ಸೈತಾನ್. ಮೂರು ಮತಗಳಲ್ಲಿ ಮೂರು ಹೆಸರುಗಳಿಂದ ಕರೆಯುವ ಮಾಯೆಯನ್ನು ಜಯಿಸುವುದು ದುಸ್ಸಾಧ್ಯವೇ ಎಂದು "ದುರತ್ಯಯಾ" ಎಂದು ಹೇಳಿದ ದೇವರು ಅದನ್ನು ಜಯಿಸುವುದಕ್ಕೆ ಉಪಾಯವಾಗಿ ಅದೇ ಶ್ಲೋಕದಲ್ಲಿಯೇ "ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿತೆ" ಎಂದೂ ಸಹ ಅಂದಿದ್ದಾನೆ. "ಯಾರಾದರೆ ನನ್ನನ್ನು ಆರಾಧಿಸುತ್ತಿದ್ದಾನೋ, ಅವನು ಮಾಯೆಯನ್ನು ಸುಲಭವಾಗಿ ದಾಟಿಹೋಗುತ್ತಾನೆ" ಎಂದು ಅದರ ಅರ್ಥ.

ವಿಜ್ಞಾನಯೋಗ :-

**ಶ್ಲೋ॥ 14. ದೈವೀಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ,**
**ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿ ತೇ.**

ಈ ಶ್ಲೋಕದ ಪ್ರಕಾರ ಮಾಯೆಯನ್ನು ತಯಾರು ಮಾಡಿದ ದೇವರನ್ನು ತಿಳಿಯುವುದಕ್ಕೆ ಮಾಯೆ ಆತಂಕವಾಗಿದೆ ಎಂದು, ಅಂತಹ ಮಾಯೆಯನ್ನು ಜಯಿಸುವುದು ದುಸ್ಸಾಧ್ಯವೆಂದು, ಹೇಳಿದ ದೇವರು ತನ್ನ ಜ್ಞಾನದಿಂದ ಮಾಯೆಯನ್ನು ಸುಲಭವಾಗಿ ದಾಟಬಹುದೆಂದು ಹೇಳಿದ್ದಾನೆ. ಆತನ ಜ್ಞಾನ ಏನು? ಎಲ್ಲಿರುವುದು? ಹೇಗೆ ಇದೆಯೆಂಬುವುದಕ್ಕೆ ಸಮಾಧಾನವಾಗಿ ಗೀತೆಯಲ್ಲಿ ಮನುಷ್ಯನ ಶರೀರದಲ್ಲಿಯೇ ತನ್ನ ಜ್ಞಾನವೆಲ್ಲಾ ಅಡಕವಾಗಿದೆಯೆಂದು, ಒಂದು ವಿಧವಾಗಿ ಏಳು ನಾಡಿಕೇಂದ್ರಗಳಲ್ಲಿ ಶಕ್ತಿಯಾಗಿಯೂ, ಮತ್ತೊಂದು ವಿಧವಾಗಿ ಏಳು ಗ್ರಂಥಿಗಳಲ್ಲಿ ಶಕ್ತಿಯಾಗಿರುವ ಶಕ್ತಿಯನ್ನು ತಿಳಿದರೆ, ಮೂರು ಗುಣ ಭಾಗಗಳಾಗಿರುವ ಮಾಯೆಯನ್ನು ಸುಲಭವಾಗಿ ಜಯಿಸಬಹುದೆಂದು ತಿಳಿಸಿದ್ದಾನೆ. ಈಕಡೆ ಏಳು ನಾಡಿಕೇಂದ್ರಗಳಲ್ಲಿನ ಶಕ್ತಿ, ಆಕಡೆ ಏಳು ಗ್ರಂಥಿಗಳಲ್ಲಿನ ಶಕ್ತಿ ಒಂದೇಯೆಂದು ತಿಳಿದರೆ ಮೂರು ಗುಣಗಳ ಮಾಯೆಯನ್ನು ಸುಲಭವಾಗಿ ಜಯಿಸಬಹುದು. ನಾಡಿಕೇಂದ್ರಗಳಾಗಿ, ಗ್ರಂಥಿಗಳಾಗಿದ್ದು ಮನುಷ್ಯನನ್ನು ನಡೆಸುವ ಚೈತನ್ಯಶಕ್ತಿಯನ್ನು ತಿಳಿಯದವರೆಗು ಮಾಯೆ ಜಯಿಸಲ್ಪಡುವುದಿಲ್ಲ. ಚೈತನ್ಯಶಕ್ತಿ ಏಳು ಭಾಗಗಳಾಗಿ ಪ್ರತಿ ಮನುಷ್ಯನ ಶರೀರದಲ್ಲಿ ಇದೆ. ಏಳು ಭಾಗಗಳಾಗಿರುವ ಆತ್ಮಶಕ್ತಿಯಿಂದ ಮೂರು ಭಾಗಗಳಾಗಿರುವ ಮಾಯೆಯನ್ನು ಜಯಿಸಬಹುದೆಂದು ತಿಳಿಸುವುದಕ್ಕಾಗಿ, ಮೂರು ಸೈತಾನ್ (ಮಾಯೆ) ಗೋಡೆಗಳನ್ನು (ಸ್ಥಂಭಗಳನ್ನು), ಮಾಯೆಗೆ ಗುರುತಾಗಿ ಇಡುವುದು ನಡೆದಿದೆ. ಮೂರು ಭಾಗಗಳಾಗಿರುವ ಮಾಯೆಯನ್ನು, ಏಳು ಭಾಗಗಳಾಗಿರುವ ಚೈತನ್ಯಶಕ್ತಿಯನ್ನು ತಿಳಿಯುವುದರಿಂದ ಜಯಿಸಬಹುದೆಂಬುವುದಕ್ಕೆ ಗುರುತಾಗಿ, ಏಳು ಕಲ್ಲುಗಳನ್ನು ಮೂರು ಸ್ಥಂಭಗಳ ಮೇಲಕ್ಕೆ ಎಸೆಯುವಂತೆ ಮಾಡಿಸಿದ್ದಾರೆ. ಇದೆಲ್ಲವೂ ಮುಹಮ್ಮದ್ ಪ್ರವಕ್ತಗೆ ದೇವರ ಜ್ಞಾನವನ್ನು ತಿಳಿಸಿದ ಜಿಬ್ರಯೇಲ್ ಹೇಳಿರುವುದರಿಂದ, ಮ್ಮಹಮ್ಮದ್




ನಾಲ್ಕು ಚಕ್ರಗಳ ಸಮುದಾಯ




ಗುಣಚಕ್ರದಲ್ಲಿನ ಮೂರು ಭಾಗಗಳು

ಪ್ರವಕ್ತನಿಂದ ಕಾಬಾ ಗೃಹವೂ ಮತ್ತು ಸೈತಾನ್ ಸ್ಥಂಭಗಳು ನಿರ್ಮಿಸಲ್ಪಟ್ಟಿವೆ ಎಂದು ಅರ್ಥವಾಗುತ್ತಿದೆ.

ಇಲ್ಲಿಯವರೆಗೂ ನಾನು ಹೇಳಿದ ಉತ್ತರ ಪೂರ್ತಿಯಾಗಿ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವುದು. ಭೂಮಿಮೇಲೆ ಇರುವವು ಆರು ಶಾಸ್ತ್ರಗಳೆ, ಅದರಲ್ಲಿ ಎಲ್ಲದಕ್ಕಿಂತ ಮೊದಲನೆಯದು ಮತ್ತು ದೊಡ್ಡದು ಬ್ರಹ್ಮವಿದ್ಯಾ ಶಾಸ್ತ್ರ. ನಂತರ ಬಂದಿರುವವು ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯ ಅನ್ನುವವು ಕ್ರಮವಾಗಿ ಐದು ಇವೆ. ಈ ಷಟ್‌ಶಾಸ್ತ್ರಗಳ ವಿನಃ ಪ್ರಪಂಚದಲ್ಲಿ ಯಾವ ಶಾಸ್ತ್ರಗಳು ಇಲ್ಲ. ವಾಸ್ತುಶಾಸ್ತ್ರ, ಮಳೆಶಾಸ್ತ್ರ, ಹಲ್ಲಿಶಾಸ್ತ್ರ, ಹುಟ್ಟುಮಚ್ಚೆಗಳ ಶಾಸ್ತ್ರ, ಪಾಕಶಾಸ್ತ್ರ, ನಾಡಿಶಾಸ್ತ್ರ, ಪ್ರೇಮಶಾಸ್ತ್ರ, ಕಾಮಶಾಸ್ತ್ರ, ನೀತಿಶಾಸ್ತ್ರ, ನ್ಯಾಯಶಾಸ್ತ್ರ ಎಂದು ಹೇಳುವವು ಅನೇಕ ಇವೆ. ಅವೆಲ್ಲವೂ ಪೂರ್ತಿ ಅಸತ್ಯವಾದವುಗಳೆಂದು, ಆರು ಶಾಸ್ತ್ರಗಳು ಹೊರತು ಯಾವ ಶಾಸ್ತ್ರವು ಇಲ್ಲವೆಂದು ಹೇಳುತ್ತಿದ್ದೇವೆ. ಪ್ರಸ್ತುತ ಕಾಲದಲ್ಲಿ ಗಣಿತ, ಖಗೋಳ, ರಸಾಯನ, ಭೌತಿಕವೆಂಬ ನಾಲ್ಕು ಶಾಸ್ತ್ರಗಳು ಹೆಚ್ಚಾಗಿ ಪ್ರಚಾರವಾಗಿವೆ. ಜ್ಯೋತಿಷ್ಯ ಶಾಸ್ತ್ರವೆಂಬುದು ಅಲ್ಲಲ್ಲಿ ಕೇಳಿಸಿದರೂ ಅದು ಹೆಸರಿಗೆಮಾತ್ರ ಇದೆ. ಗಣಿತ, ಖಗೋಳ, ರಸಾಯನ, ಭೌತಿಕಶಾಸ್ತ್ರಗಳ ಮೇಲೆ ಪರಿಶೋಧನೆ ನಡೆದಂತೆ, ಜ್ಯೋತಿಷ್ಯಶಾಸ್ತ್ರದ ಮೇಲೆ ಪರಿಶೋಧನೆಗಳು ನಡೆಯಲಿಲ್ಲ. ಆದ್ದರಿಂದ ಅದು ಗಣಿತ, ಖಗೋಳ, ರಸಾಯನ, ಭೌತಿಕ ಶಾಸ್ತ್ರಗಳಂತೆ ಅಭಿವೃದ್ಧಿ ಆಗದಿರುವುದರಿಂದ, ಜ್ಯೋತಿಷ್ಯವು ಶಾಸ್ತ್ರವಾ ಅಲ್ಲವಾ! ಎಂಬ ಅನುಮಾನ ಏರ್ಪಟ್ಟಿದೆ. ಕೆಲವರಾದರೆ ಏಕವಾಗಿ ಜ್ಯೋತಿಷ್ಯ ಮೂಢನಂಬಿಕೆ, ಶಾಸ್ತ್ರವಲ್ಲ ಎಂದು ಹೇಳುತ್ತಿದ್ದಾರೆ. ಇನ್ನೂ ಬ್ರಹ್ಮವಿದ್ಯಾ ಶಾಸ್ತ್ರ ಸೃಷ್ಟಿಆದಿಯಲ್ಲಿಯೇ ತಿಳಿಸಿದಲ್ಲಿಯೂ, ಅದರ ಮೇಲೆ ಯಾರಿಗೂ ಶ್ರದ್ಧೆ ಇಲ್ಲದಿರುವುದರಿಂದ, ಅದೊಂದು ಶಾಸ್ತ್ರಇದೆಯೆಂಬ ವಿಷಯವೇ ಪ್ರಸ್ತುತ ಕಾಲದಲ್ಲಿ ತಿಳಿಯದಂತೆ ಹೋಗಿದೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಸ್ವತಃವಾಗಿ ದೇವರೆ ಸೃಷ್ಟಿ ಆದಿಯಲ್ಲಿಯೇ ತನ್ನ ಭೂತದಿಂದ ಹೇಳಿಸಿದ್ದಾನೆ. ಮೊದಲ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರ ದೇವರಿಗೆ ಸಂಬಂಧಿಸಿದ ವಿವರ ಇದೆ. ದೇವರೊಂದರ ಶಾಸನಗಳಿರುವುದು ದೇವರ ಶಾಸ್ತ್ರ. ಅದು ಎಲ್ಲದಕ್ಕಿಂತ ದೊಡ್ಡ ವಿದ್ಯಾಶಾಸ್ತ್ರ ವಾಗಿರುವುದರಿಂದ ಅದನ್ನು ಬ್ರಹ್ಮವಿದ್ಯಾಶಾಸ್ತ್ರ ಎಂದು ಹೇಳುತ್ತಿದ್ದಾರೆ.

ಬ್ರಹ್ಮವಿದ್ಯಾ ಶಾಸ್ತ್ರ ಹೆಚ್ಚಾಗಿ ಸೂಕ್ಷ್ಮ ವಿಷಯಗಳನ್ನೂ, ಕಡಿಮೆಯಾಗಿ ಸ್ಥೂಲ ವಿಷಯಗಳನ್ನು ತಿಳಿಸುತ್ತದೆ. ಒಂದು ಸಜೀವ ಶರೀರವನ್ನು ತೆಗೆದುಕೊಂಡು ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ನೋಡಿದರೆ ಸ್ಥೂಲ ಸ್ವಲ್ಪ, ಸೂಕ್ಷ್ಮ ಸ್ವಲ್ಪ, ಎರಡು ಭಾಗಗಳಾಗಿ ಇದೆ. ಸ್ಥೂಲ ಎಷ್ಟು ಭಾಗವೋ, ಸೂಕ್ಷ್ಮವು ಎಷ್ಟು ಭಾಗವಿದೆಯೆಂದು ನೋಡಿದಂತಾದರೆ 10 ಭಾಗಗಳು ಸ್ಥೂಲವೆಂದು, 33 ಭಾಗಗಳು ಸೂಕ್ಷ್ಮವೆಂದು ತಿಳಿಯುತ್ತಿದೆ. ಶರೀರದಲ್ಲಿ ಪ್ರತ್ಯೇಕಿಸಿ ಒಂದು ಕೆಲಸವನ್ನು ಮಾಡುವುದನ್ನು ಒಂದು ಭಾಗವೆಂದು ಹೇಳುತ್ತೇವೆ. ಒಂದು ಭಾಗ ಕೆಲಸ ಮಾಡುವುದಕ್ಕೆ ಅನುಬಂಧವಾಗಿರುವ ಅವಯವ ಭಾಗಗಳು ಎಷ್ಟಿದ್ದರೂ ಅವೆಲ್ಲವೂ ಒಂದು ಭಾಗದಕೆಳಗೆಯೆ ಲೆಕ್ಕಿಸಬಹುದು. ಉದಾಹರಣೆಗೆ ಮೂಗು ವಾಸನೆ ನೋಡುವ ಕೆಲಸವನ್ನು ಮಾಡುವ ಒಂದು ಭಾಗವಾಗಿ ಇದ್ದರೂ, ಅದಕ್ಕೆ ಅನುಬಂಧವಾಗಿರುವ ಶ್ವಾಸಕೋಶಗಳು, ಗುಂಡಿಗೆ ಮೊದಲಾದವೆಲ್ಲವೂ ಒಂದು ಭಾಗಕೆಳಗೆ ಲೆಕ್ಕಿಸಲಾಗುತ್ತದೆ. ಈ ವಿಧವಾಗಿ ಸ್ಥೂಲವಾಗಿರುವ ಶರೀರವೆಲ್ಲಾ ಕೇವಲ ಹತ್ತು ಭಾಗಗಳಾಗಿ ಲೆಕ್ಕಕ್ಕೆ ಬರುತ್ತಿದೆ. ನಂತರ ಸೂಕ್ಷ್ಮವಾಗಿ ಕಾಣಿಸದಂತಿರುವ ಹದಿನೈದು ಭಾಗಗಳಾಗಿ ಲೆಕ್ಕಿಸಲ್ಪಡುತ್ತಿವೆ. ಸೂಕ್ಷ್ಮವಾಗಿ ಇನ್ನೂ ಆಳವಾಗಿ ಕೇವಲ ಜ್ಞಾನದಿಂದ ಮಾತ್ರ ತಿಳಿಯುವವು ಎಂಟು ಇವೆ. ಕೊನೆಗೆ ಒಟ್ಟು 43 ಭಾಗಗಳಾಗಿ ಲೆಕ್ಕಿಸಲ್ಪಡುತ್ತಿದೆ. ಅವುಗಳ ವಿವರವನ್ನು ಕೆಳಗೆ ನೋಡಿರಿ.

| | | | | |
|---|---|---|---|---|
| ಜನ್ಮ ಜನ್ಮಕ್ಕೆ ಬದಲಾಗುವವು | **ಕರ್ಮೇಂದ್ರಿಯಗಳು** | – | **5** | **ಸ್ಥೂಲವಾದವು** |
| | **ಜ್ಞಾನೇಂದ್ರಿಯಗಳು** | – | **5** | |
| | **ಜ್ಞಾನೇಂದ್ರಿಯ ಶಕ್ತಿಗಳು** | – | **5** | **ಸೂಕ್ಷ್ಮವಾದವು** |
| | **ಪ್ರಾಣಾದಿ ವಾಯುವುಗಳು** | – | **5** | |
| | **ಅಂತಃಕರಣಗಳು** | – | **4** | |

| | | | | |
|---|---|---|---|---|
| ಎಂದಿಗೂ ಶಾಶ್ವತ ವಾಗಿ ಜತೆ ಇರು ವವು | ಕೆಟ್ಟ ಗುಣಗಳು | – | 6 | ಕೇವಲ ತಲೆಯಲ್ಲಿ ಮಾತ್ರ ನಿವಾಸವಿರುವ |
| | ಒಳ್ಳೆಯ ಗುಣಗಳು | – | 6 | |
| | ಧೈರ್ಯ | – | 1 | |
| | ಅಧೈರ್ಯ | – | 1 | |
| | ಶ್ರದ್ಧೆ | – | 1 | |
| | ನಾಚಿಕೆ | – | 1 | |
| | ಜೀವಾತ್ಮ | – | 1 | ಕ್ಷರಾತ್ಮ |
| | ಆತ್ಮ | – | 1 | ಅಕ್ಷರಾತ್ಮ |
| | ಪರಮಾತ್ಮ | – | 1 | ಪರಮಾತ್ಮ |
| | ಒಟ್ಟು | – | 43 | |

ಇದಕ್ಕು ಮುಂದಿನ ಗ್ರಂಥಗಳಲ್ಲಿ ಶರೀರವನ್ನು ಸ್ಥೂಲ ಸೂಕ್ಷ್ಮಗಳಾಗಿ ವಿಭಜಿಸಿ ಒಟ್ಟು 25 ಭಾಗಗಳಾಗಿ ಹೇಳಿಕೊಂಡಿದ್ದೇವೆ. ಸರ್ವಸಾಧಾರಣವಾಗಿ ಅಲ್ಲಿಯವರೆಗು ಹೇಳಿಕೊಳ್ಳುವುದೇ ಒಳ್ಳೆಯದು. ಈಗ ಸಾಧಾರಣ ಸೈನ್ಸ್ ಮುಂದೆ ಸೂಪರ್‌ಸೈನ್ಸು ಹೇಗಿರುತ್ತದೊ ಹೇಳಬೇಕೆಂದರೆ, ಶರೀರವನ್ನು ಪೂರ್ತಿಯಾಗಿ ಸೂಕ್ಷ್ಮಾತಿ ಸೂಕ್ಷ್ಮವಾಗಿ ವಿಭಜಿಸಿ ಹೇಳಬೇಕಾಗಿದೆ. ಹಾಗೆ ಹೇಳಿದರೆ ಕಾಣಿಸದಿರುವವು ಒಟ್ಟು 33 ಇವೆಯೆಂದು, ಕಾಣಿಸುವ 10 ಭಾಗಗಳೊಂದಿಗೆ ಸೇರಿಸಿ ಒಂದು ಸಜೀವ ಮಾನವ ಶರೀರ ಒಟ್ಟು 43 ಭಾಗಗಳಾಗಿ ಹೇಳಬಹುದು. 43 ಅನ್ನುವ ಮೊತ್ತದಲ್ಲಿ ಎರಡು ಸಂಖ್ಯೆಗಳು ಇವೆ ಅಲ್ಲವೇ! ಅದರಲ್ಲಿ ಮೊದಲನೆಯದು 4, (ನಾಲ್ಕು). ನಂತರದ 3 (ಮೂರು). ಈ ಎರಡು ಸಂಖ್ಯೆಗಳನ್ನು ಸೇರಿಸಿದರೆ 4+3=7 ಆಗುತ್ತದೆ. ಒಬ್ಬ ಮನುಷ್ಯನಲ್ಲಿನ ಶರೀರ ಭಾಗಗಳನ್ನು ಆಧಾರ ಮಾಡಿಕೊಂಡು ಏರ್ಪಡಿಸಿದ ಸಂಖ್ಯೆ ಏಳು (7). ಏಳು ಅನ್ನುವ ಸಂಖ್ಯೆ ಆಧ್ಯಾತ್ಮಿಕ ರಂಗದಲ್ಲಿ ಮುಖ್ಯ ಪಾತ್ರಪೋಷಿಸುತ್ತಿದೆ. ಶರೀರದಲ್ಲಿ ನಾಡಿಕೇಂದ್ರಗಳು ಏಳು ಇವೆ. ಹಾಗೆಯೇ ಗ್ರಂಥಿಗಳು ಏಳಾಗಿಯೇ ಇವೆ. ಏಳನ್ನು ವಿಭಜಿಸಿದರೆ ನಾಲ್ಕು (4) ಮತ್ತು ಮೂರು (3) ಆಗಿಯೇ ವಿಭಜಿಸಬೇಕು.

ನಾಲ್ಕು ಸಂಖ್ಯೆ ಅಧರ್ಮಗಳಿಗೂ, ಮೂರು ಸಂಖ್ಯೆ ಧರ್ಮಗಳಿಗೂ ಪ್ರತೀಕವಾಗಿವೆ. ಆದ್ದರಿಂದ ಸುಲಭವಾಗಿ ನಾಲ್ಕು ಅಧರ್ಮಗಳು, ಮೂರು ಧರ್ಮಗಳು ಎಂದು ಹೇಳಬಹುದು. ಇವೆಲ್ಲವೂ ಯಾರ ಇಷ್ಟಬಂದಂತೆ ಅವರು ಕಲ್ಪಿತಮಾಡಿ ಹೇಳಿರುವವು ಅಲ್ಲ. ಇವೆಲ್ಲವೂ ಪೂರ್ತಿಯಾಗಿ ಶಾಸ್ತ್ರವನ್ನು ಅನುಸರಿಸಿ ಇರುವವೆಂದು ತಿಳಿಯಬೇಕು. ಆಧ್ಯಾತ್ಮಿಕ ಶಾಸ್ತ್ರಬದ್ಧವಾದುದೆಂದು, ಅದಕ್ಕೂ ಸಹ ಒಂದು ಶಾಸ್ತ್ರವಿದೆಯೆಂದು ತಿಳಿದ ದಿನ ನಾಸ್ತಿಕವಾದ ಇರುವುದಿಲ್ಲ. ಅಲ್ಲಿಗೂ ಯಾವುದಕ್ಕೂ ಒಪ್ಪಿಕೊಳ್ಳದ ಅತಿವಾದಿಗಳು ಹೊರಗೆ ಒಪ್ಪಿಕೊಳ್ಳದೆ ಹೋದರೂ ಅವರ ಅಂತರಂಗಗಳಲ್ಲಿ ಒಪ್ಪಿಕೊಂಡು ತೀರುತ್ತಾರೆ. ಆದ್ದರಿಂದ ಅವರ ಪ್ರಭಾವದಿಂದ ತಯಾರಾಗುವ ತೀವ್ರವಾದವಾಗಲಿ, ಉಗ್ರ ವಾದವಾಗಲಿ ಇಲ್ಲದಂತೆ ಹೋಗುತ್ತದೆ.

ತನ್ನ ಮತ ದೊಡ್ಡದೆಂದು, ತನ್ನ ಮತದಲ್ಲಿನ ಜ್ಞಾನ ಹೊರತು ಮತ್ತ್ಯಾವ ಇತರ ಮತದಲ್ಲಿನ ಜ್ಞಾನವೂ ಶ್ರೇಷ್ಠವಲ್ಲವೆಂದು, ಅಂದುಕೊಂಡು ಇತರ ಜ್ಞಾನಗಳನ್ನು ಸ್ವಲ್ಪವೂ ಒಪ್ಪಿಕೊಳ್ಳದವನು ಅತಿವಾದಿ ಆಗುತ್ತಾನೆ ಅಲ್ಲವೆ! ಅಂತಹ ಅತಿವಾದಿ ನನ್ನನ್ನು ಒಂದು ಪ್ರಶ್ನೆ ಕೇಳಿದನು. ಆತನು ಅತಿವಾದಿ ಎಂದು ತಿಳಿದರೂ ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳುವುದು ನಮ್ಮ ಕರ್ತವ್ಯ. ಆದ್ದರಿಂದ ಆತನಿಗೆ ಸೂತ್ರಬದ್ಧವಾದ ಉತ್ತರವನ್ನು ಹೇಳಿದ್ದೇವೆ. ಮತವಾದಿಯಾದ ಅತಿವಾದಿ ಕೇಳಿದ ಪ್ರಶ್ನೆ ಹೀಗೆ ಇದೆ.

**ಮತವಾದಿ :–** ಹಿಂದೂಮತಕ್ಕೆ ನಾನು ಪ್ರವಕ್ತನೆಂದು ಹೇಳಿಕೊಳ್ಳುವವನಾಗಲಿ, ಇಲ್ಲವೆ ಈತನು ಪ್ರವಕ್ತ ಎಂದು ಹೇಳುವವನಾಗಲಿ ಇಲ್ಲ. ಕ್ರೈಸ್ತರಲ್ಲಿ ಏಸು ದೇವರ ಕುಮಾರನಾಗಿ ಹೇಳಲ್ಪಟ್ಟಿದ್ದಾನೆ ಆದರೆ,ಪ್ರವಕ್ತನಾಗಿ ಹೇಳಲ್ಪಡಲಿಲ್ಲ. ನಮ್ಮ ಮತದಲ್ಲಿ ಮಾತ್ರವೇ ಪ್ರವಕ್ತ ಇದ್ದಾನೆ. ಈತನೆ ಪ್ರವಕ್ತ ಎಂದು ಎಲ್ಲರಿಂದ ಹೇಳಲ್ಪಟ್ಟಿದ್ದಾನೆ. ನಮ್ಮ ಮತದಲ್ಲಿ ಇಂತಹ ವ್ಯಕ್ತಿ ಪ್ರವಕ್ತ ಎಂದು ಎಲ್ಲರಿಗೂ ತಿಳಿದಿದೆ. ಪ್ರವಕ್ತಇರುವುದು ಸರಿಯಾದ ಮತವಾಗುತ್ತದೆ. ಪ್ರವಕ್ತಯಿಲ್ಲದ ಮತ ಮತವೇ ಅಲ್ಲ. ಆದ ಕಾರಣ ನಾವು ಹಿಂದೂಮತವನ್ನಾಗಲಿ, ಕ್ರೈಸ್ತವಮತ

ವನ್ನಾಗಲಿ ಒಪ್ಪಿಕೊಳ್ಳುವುದಿಲ್ಲ. ನಮ್ಮ ಮತವೊಂದೇ ದೇವರನ್ನು ಪ್ರಾರ್ಥಿಸುತ್ತಿದೆಯೆಂದು, ಉಳಿದ ಪ್ರವಕ್ತಯಿಲ್ಲದ ಮತಗಳೆಲ್ಲವುಗಳಲ್ಲಿ ಪ್ರಜೆಗಳು ಸೈತಾನನ್ನು ಆಶ್ರಯಿಸುತ್ತಿದ್ದಾರೆಂದು ಅನ್ನುತ್ತೇನೆ. ಇದಕ್ಕೆ ನೀವೇನನ್ನುತ್ತೀರಾ?

**ನಾವು :–** ಒಂದು ವಿಷಯವನ್ನು ಅಲ್ಲ ಎನ್ನುವುದಕ್ಕಾಗಲಿ, ಹಾಗೆ ಒಂದು ವಿಷಯವನ್ನು ಹೌದು ಎನ್ನುವುದಕ್ಕಾಗಲಿ, ಎಷ್ಟೋ ಆಧಾರಗಳಿರಬೇಕು. ಏನನ್ನಾದರೂ ಸಮರ್ಥಿಸುವುದಕ್ಕು, ಹಾಗೆ ಯಾವುದನ್ನಾದರೂ ವಿಮರ್ಶಿಸುವುದಕ್ಕು ಖಂಡಿಸುವುದಕ್ಕು ಸಹ ಶಾಸ್ತ್ರದಲ್ಲಿನ ಸೂತ್ರಗಳು ಅಗತ್ಯ. ಪದ್ಧತಿಯಾಗಿ ಪ್ರವಕ್ತನನ್ನು ಕುರಿತು ಹೇಳಿಕೊಂಡರೆ, ವಕ್ತ ಎಂದರೆ ಹೇಳುವವನು, ಬೋಧಿಸುವವನೆಂದು ಅರ್ಥ. ಪ್ರಾಮುಖ್ಯವಾದ ವಿಷಯಗಳನ್ನು ಬೋಧಿಸುವ ವನು ಯಾರಾದರಾಗಲಿ ಪ್ರವಕ್ತ ಎಂದು ಕರೆಯಲ್ಪಡುವನು. ಮಾನವನ ಜೀವನದಲ್ಲಿ ಎಲ್ಲದಕ್ಕಿಂತ ಮುಖ್ಯವಾದುದು. ದೇವರು. ದೇವರನ್ನು ಕುರಿತು ಹೇಳುವ ಯಾವ ವಿಷಯವಾದರೂ ಮುಖ್ಯವಾದುದೇ. ಆದ್ದರಿಂದ ದೇವರನ್ನು ಕುರಿತು ತಿಳಿಸುವ ಜ್ಞಾನವನ್ನು ಬೋಧಿಸುವವನು ಯಾರಾದರೂ ಪ್ರವಕ್ತನೇ ಆಗುತ್ತಾನೆ. ವಕ್ತ ಎಂದರೆ ಬೋಧಿಸುವವನೆಂದು ಅರ್ಥಬರುವಾಗ, ಪ್ರವಕ್ತ ಎಂದರೆ ಮುಖ್ಯವಾದ ವಿಷಯವನ್ನು ಹೇಳುವವನೆಂದು ಅರ್ಥ. ಒಂದು ಸಭೆಯಲ್ಲಿ ಚೆನ್ನಾಗಿ ಮಾತನಾಡುವವನನ್ನು ಒಳ್ಳೆಯವಕ್ತ ಅನ್ನುತ್ತಾರೆ. ಹಾಗೆಯೇ ಬಹಳಮುಖ್ಯವಾದ ವಿಷಯಗಳನ್ನು ಕುರಿತು ಮಾತನಾಡುವವನನ್ನು "ಪ್ರವಕ್ತ" ಎಂದು ಅನ್ನಬಹುದು. ಯಾವ ವಿಷಯದಲ್ಲಾದರೂ ಒಳ್ಳೆಯ ವಕ್ತರಿರಬಹುದು. ಆದರೆ ಈಗ ನಾವು ಆಧ್ಯಾತ್ಮಿಕ ವಿಷಯವನ್ನು ಅಥವಾ ಮತ ವಿಷಯವನ್ನು ಕುರಿತು ಮಾತನಾಡುತ್ತಿದ್ದೇವೆ. ಆದ್ದರಿಂದ ಈ ವಿಷಯಗಳನ್ನು ಬೋಧಿಸುವವ ನನ್ನು ಪ್ರವಕ್ತ ಎಂದು ಅನ್ನಬಹುದು. ಯಾರನ್ನು ಪ್ರವಕ್ತ ಅನ್ನಬೇಕು? ಯಾರನ್ನು ಪ್ರವಕ್ತ ಎಂದು ಅನ್ನಬಾರದು? ಅನ್ನುವ ವಿಷಯ ಎಲ್ಲರಿಗೂ ಚೆನ್ನಾಗಿ ಅರ್ಥ ವಾಗುವುದಕ್ಕೆ, ಸ್ವಲ್ಪ ಪಕ್ಕದ ದಾರಿಯೊಳಗೆ ಹೋಗಿ ಒಂದು ಕಥೆಯನ್ನು ಹೇಳಿಕೊಳ್ಳೋಣ.

ಸಾವಿರ ಜನಸಂಖ್ಯೆಯಿರುವ ಕರ್ಮಪಟ್ಟು ಅನ್ನುವ ಒಂದುಊರಿನಲ್ಲಿ ಮೂವರು ಧನಿಕರಿದ್ದರೂ, 997 ಜನರು ಬಡವರೇ ಇದ್ದಾರೆ. ಮೂವರು ಧನಿಕರು ಕಾಲ್ ಎಂಬ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಆ ಕಂಪನಿಯ ಯಜಮಾನ ತನಗೆ ಬಂದ ಲಾಭವನ್ನು ಸಹ ತನ್ನ ಹತ್ತಿರ ಕೆಲಸ ಮಾಡುವವರಿಗೆ ಭಾಗವಾಗಿ ಕೊಡುವುದರಿಂದ, ಆ ಕಂಪನಿಯಲ್ಲಿ ಕೆಲಸ ಮಾಡುವ ಮೂವರು ವ್ಯಕ್ತಿಗಳು ಧನಿಕರಾಗಿ ಬದಲಾಗಿದ್ದಾರೆ. ಕಾಲ್ ಕಂಪನಿಯ ಓನರನ್ನು (ಯಜಮಾನನ್ನು) ಯಾರೂ ನೋಡಲಿಲ್ಲ. ಆತನ ಎಲ್ಲಿರುತ್ತಾನೊ ಸಹಾ ತಿಳಿಯದು. ಆತನ ಹೆಸರು ಸಹಾ ಯಾರಿಗೂ ತಿಳಿಯದು. ಕಂಪನಿ ಯಜಮಾನ ಕಾಣಿಸದಂತೆ ಎಲ್ಲಿಯೋ ಇದ್ದರೂ, ಆತನ ಹೆಸರು ಏನೊ ತಿಳಿಯದಿದ್ದರೂ, ಆತನು ಏನು ಮಾಡುತ್ತಿದ್ದಾನೊ ಸಹಾ ತಿಳಿಯದಿದ್ದರೂ, ಆ ಯಜಮಾನನ ಕೆಳಗೆ ಕೆಲಸ ಮಾಡುವವರು ತಮ್ಮ ಯಜಮಾನನ ಮೇಲೆ ಪೂರ್ತಿ ವಿಶ್ವಾಸಹೊಂದಿ ಕೆಲಸ ಮಾಡುತ್ತಿದ್ದರು. ಕಂಪನಿ ಯಜಮಾನನಾದ ಆತನು ತಾನು ಪ್ರತ್ಯಕ್ಷವಾಗಿ ಇಲ್ಲದಿದ್ದರೂ ತನ್ನ ಉದ್ಯೋಗಿಗಳು ತನ್ನಮೇಲಿನ ವಿಶ್ವಾಸದಿಂದ, ಎಷ್ಟೊ ಶ್ರದ್ಧೆಯಿಂದ ಕೆಲಸ ಮಾಡುವುದರಿಂದ ಯಜಮಾನನಾದವನು (ನನಗೂ ಸಹಾ ಆತನ ಹೆಸರು ತಿಳಿಯದು. ಆದ್ದರಿಂದ ನಾನೂ ಸಹಾ ಯಜಮಾನ ಎಂದೇ ಹೇಳುತ್ತಿದ್ದೇನೆ.) ತನ್ನ ಕೆಲಸದವರನ್ನು ತನಗೆ ಬಂದಿರುವ ಲಾಭದಲ್ಲಿ ಭಾಗಸ್ವಾಮಿಗಳಾಗಿ ಮಾಡಿ, ಮೂವರು ವ್ಯಕ್ತಿಗಳಿಗೆ ಕಂಪನಿ ಲಾಭವನ್ನು ಕೊಡುವುದರಿಂದ, ಕರ್ಮಪಟ್ಟು ಗ್ರಾಮಸ್ಥರು ಮೂವರು ಧನಿಕರಾಗಿ ಮಾರ್ಪಟ್ಟಿದ್ದಾರೆ.

ಕರ್ಮಪಟ್ಟು ಗ್ರಾಮದಲ್ಲಿನ ಮೂವರು ಧನಿಕರು ಮೂರು ಕುಲದವರಾಗಿದ್ದಾರೆ. ಒಬ್ಬರ ಹೆಸರು ತಿಟ್ಟುಚೌದರಿ, ಎರಡನೆಯವನ ಹೆಸರು ಪಟ್ಟುಜಾನ್, ಮೂರನೆಯವನ ಹೆಸರು ಕೊಟ್ಟು ಸಾಯಬ್ ಎಂದು ಇದೆ. ಕರ್ಮಪಟ್ಟು ಗ್ರಾಮಕ್ಕೆ ಸ್ವಲ್ಪ ದೂರದಲ್ಲಿರುವ ಕಾಲ್ ಕಂಪನಿಯಲ್ಲಿ ಕೆಲಸ ಮಾಡುವ ಮೂವರು ಕಂಪನಿಕೊಡುವ ಹಣದಿಂದ ಆ ಊರಿನಲ್ಲಿ ಅವರು

ಧನಿಕರಾಗಿ ಕರೆಯಲ್ಪಡುತ್ತಿದ್ದಾರೆ. ಕರ್ಮಪಟ್ಟು ಗ್ರಾಮದಲ್ಲಿ ಅನೇಕ ಕುಲದವರಿದ್ದಾರೆ. ಅವರೆಲ್ಲರು ಬಡವರೇ ಆಗಿರುವುದರಿಂದ ಅನೇಕ ಕಷ್ಟಗಳು ಅನುಭವಿಸುತ್ತಿದ್ದರು. ಕರ್ಮಪಟ್ಟು ಊರಿನಲ್ಲಿನ ಪ್ರಜೆಗಳ ಕಷ್ಟಗಳನ್ನು ನೋಡಿದ ತಿಟ್ಟುಚೌದರಿ, ಊರಿನ ಪ್ರಜೆಗಳ ಕಷ್ಟಗಳನ್ನು ತೀರಿಸುವುದಕ್ಕೆ ತನ್ನ ಹತ್ತಿರವಿರುವ ಹಣವನ್ನು ಅವರಿಗೆಕೊಡಬೇಕೆಂದು ಅಂದುಕೊಂಡಿದ್ದಾನೆ. ಅಂದುಕೊಂಡ ತಕ್ಷಣ ತನಗೆ ಸಮೀಪ ಬಂಧುವಾದ ತನ್ನ ಬಾವನನ್ನು ಕರೆದು "ನಾನು ನಿನಗೆ ಸ್ವಲ್ಪ ಧನವನ್ನು ಕೊಡುತ್ತೇನೆ, ನೀನು ಅದನ್ನು ತೆಗೆದುಕೊಂಡು ಹೋಗಿ ಊರಿನಲ್ಲಿನ ಎಲ್ಲಾ ಕುಲದವರಿಗೂ ಸಮಾನವಾಗಿ ಹಂಚು" ಎಂದು ಹೇಳಿ ತನ್ನ ಬಾವನನ್ನು ಒಪ್ಪಿಸಿ, ಕೋಟಿ ರೂಪಾಯಿಗಳ ಹಣವನ್ನು ಕೊಟ್ಟು ಕಳುಹಿಸಿದನು.

ಆ ವಿಧವಾಗಿ ತಿಟ್ಟುಚೌದರಿ ಧನವನ್ನು ತನ್ನ ಬಾವನಿಗೆ ಕೊಟ್ಟು ಕಳಿಸಿದಾಗ, ಆತನು ಊರಿನಲ್ಲಿ ಎಲ್ಲಾ ಕುಲದವರಿಗೂ ಸಮಾನವಾಗಿ ಹಂಚುವುದಕ್ಕೋಸ್ಕರ ತನ್ನ ಸಂಬಂಧಿಕರನ್ನು ಕೆಲವರನ್ನು ಕರೆದು, ಇದು ನನ್ನ ಬಾವನವರಾದ ತಿಟ್ಟುಚೌದರಿ ಕೊಟ್ಟಿರುವ ಧನವೆಂದು, ಇದನ್ನು ಊರಿನಲ್ಲಿನ ಪ್ರಜೆಗಳೆಲ್ಲರಿಗೂ ಕುಲಬೇಧ ಇಲ್ಲದಂತೆ ಹಂಚಬೇಕೆಂದು ಹೇಳಿ, ಕೋಟಿ ರೂಪಾಯಿಗಳನ್ನು ಕೊಟ್ಟು ಕಳಿಸಿದ್ದಾನೆ. ಆದರೆ ಅಲ್ಲಿಂದ ಧನವನ್ನು ತೆಗೆದುಕೊಂಡುಹೋದ ತಿಟ್ಟುಚೌದರಿಯ ಭಾವನ ಸಂಬಂಧಿಕರು, ಊರಿನಲ್ಲಿನ ಎಲ್ಲಾ ಕುಲಗಳ ಪ್ರಜೆಗಳಿಗೆ ಸಮಾನವಾಗಿ ಹಂಚದಂತೆ, ತಮ್ಮ ಕುಲದವರಿಗೆ ಮಾತ್ರ ಹಂಚಿದ್ದಾರೆ. ಹಾಗೆ ಒಂದು ಕುಲದವರಿಗೇ ಹಂಚಿದರೂ ಆ ಧನವನ್ನು ಕೊಟ್ಟವನು ತಿಟ್ಟುಚೌದರಿಯೆಂದೇ ಹೇಳಿದ್ದಾರೆ.ಆದರೇ ತಿಟ್ಟುಚೌದರಿ ಧನ ಸಹಾಯ ಮಾಡಿದರೂ, ಆತನು ಅಂದುಕೊಂಡಂತೆ ಅದು ಊರಿನವರಿಗೆಲ್ಲ ಸಮಾನವಾಗಿ ಹಂಚಲ್ಪಡಲಿಲ್ಲ. ಕೋಟಿ ರೂಪಾಯಿಗಳು ತಮ್ಮ ಚೌದರಿ ಕುಲದವರಿಗೇ ಸೇರಬೇಕೆಂಬ ಉದ್ದೇಶದಿಂದ, ಚೌದರಿ ಸಂಬಂಧಿಕರು ಹಾಗೆ ಮಾಡಿದ್ದಾರೆ. ತಿಟ್ಟುಚೌದರಿ ನಿಸ್ವಾರ್ಥದಿಂದ ಎಲ್ಲರಿಗೂ ಸಮಾನವಾಗಿ ಹಣವನ್ನು ಹಂಚಬೇಕೆಂಬ ಉದ್ದೇಶದಿಂದ ಕೊಟ್ಟಿರುವ ಕೋಟಿರೂಪಾಯಿಗಳು, ಕೆಲವರಿಗೆ ಮಾತ್ರವೇ ಲಭಿಸಿವೆ. ಆ ವಿಷಯವನ್ನು 20 ದಿನಗಳ ನಂತರ ತೆಗೆದುಕೊಂಡ

ಪಟ್ಟುಜಾನ್ ತನ್ನಹತ್ತಿರವಿರುವ ಹಣವನ್ನು ಊರಿನವರಿಗೆಲ್ಲ ಸಮಾನವಾಗಿ ಕೊಟ್ಟು ಸಹಾಯ ಆಗಬೇಕೆಂದುಕೊಂಡನು. ಪಟ್ಟುಜಾನ್ ತಾನೇ ಸ್ವತಃವಾಗಿ ಕರ್ಮಪಟ್ಟು ಊರಿನಲ್ಲಿನ ಪ್ರಜೆಗಳಿಗೆ ಧನವನ್ನು ಹಂಚಬೇಕೆಂದುಕೊಂಡನು. ಹಾಗೆಯೇ ಕೆಲವು ತಿಂಗಳುಗಳ ಕಾಲ ಕಳೆದುಹೋಗಿ, ಕೊನೆಗೆ ತನಗೆ ತಿಳಿದ ತನ್ನ ಸಂಬಂಧಿಕರನ್ನು ಹತ್ತುಜನರನ್ನು ಕರೆದು, ಕೋಟಿರೂಪಾಯಿಗಳು ಕೊಟ್ಟು, ತಮ್ಮ ಉದ್ದೇಶವನ್ನು ತಿಳಿಸಿ, ಇದು ಒಂದು ಕುಲಕ್ಕೆ ಸಂಬಂಧಿಸಿದ ಹಣವಲ್ಲ. ಎಲ್ಲಾ ಕುಲದವರಿಗೆ ಸಮಾನವಾಗಿ ಸೇರಬೇಕಾದ ಹಣ ಎಂದು ಹೇಳಿ ಕಳಿಸಿದಾಗ, ಕೊನೆಗೆ ಆ ಹಣ ಎಲ್ಲಾ ಕುಲದವರಿಗೆ ಸೇರಿದರೂ, ಅದು ಮೋಸಪೂರಿತವಾಗಿ ಸೇರಿದೆ. ಈ ಹಣ ಪಟ್ಟುಜಾನ್ ಹಣವೆಂದು ಎಲ್ಲರಿಗೂ ಹೇಳಿ ಹಂಚಿದ ಹತ್ತುಜನ ಹೀಗೆ ಹೇಳಿದ್ದಾರೆ. ಯಾವ ಕುಲದವರಾದರೂ ಫರವಾಗಿಲ್ಲ, ಅವರಿಗೆ ನಾವು ಹಣ ಕೊಡುತ್ತೇವೆ, ಆದರೆ ತಮತಮ್ಮ ಕುಲವನ್ನು ಬಿಟ್ಟು ಪಟ್ಟುಜಾನ್ ಕುಲದೊಳಗೆ ಬಂದವರಿಗೆ ಕೊಡುತ್ತೇವೆಂದು ನಿಯಮವನ್ನು ಇಟ್ಟಿರುವಾಗ, ಹಣದ ಆಸೆಗೆ ಬಹಳಜನ ಬಡವರು ತಮ್ಮ ಕುಲವನ್ನು ಬಿಟ್ಟು ಹಣ ತೆಗೆದುಕೊಂಡು ಪಟ್ಟುಜಾನ್ ಕುಲದಲ್ಲಿ ಸೇರಿಹೋಗಿದ್ದಾರೆ.

ತಿಟ್ಟುಚೌದರಿ ಕೊಟ್ಟಿರುವ ಹಣ ಎಲ್ಲರಿಗೂ ಸೇರಬೇಕಿದ್ದರೂ, ಅದು ಅವರ ಕುಲದವರಿಗೆ ಸೇರಿಹೋಗಿದೆ. ಹಾಗೆ ಒಂದೇ ಕುಲಕ್ಕೆ ಸೇರಬಾರದೆಂಬ ಉದ್ದೇಶದಿಂದ ಪಟ್ಟುಜಾನ್ ಕೊಟ್ಟಿರುವ ಹಣ ಇತರ ಕುಲದವರಿಗೆ ಸೇರಿದರ ಅವರನ್ನು ಜಾನ್ ಕುಲದೊಳಗೇ ಸೇರಿಸಿದೆ. ಮೊದಲು ಧನಿಕರಾದ ತಿಟ್ಟು ಚೌದರಿಯವರು ಕೊಟ್ಟಿರುವ ಹಣವಾಗಲಿ, ಎರಡನೆಬಾರಿ ಕೊಟ್ಟಿರುವ ಪಟ್ಟುಜಾನ್‌ರವರ ಹಣವಾಗಲಿ, ಅವರ ಭಾವನೆಗೆ ವಿರುದ್ಧವಾಗಿ ಹಂಚಲಾಗಿದೆ. ಧನಿಕರ ಉದ್ದೇಶದ ಪ್ರಕಾರ ಅಲ್ಲದಿದ್ದರೂ, ಬೇರೆ ವಿಧವಾಗಿ ಹಂಚಲ್ಪಟ್ಟರೂ, ಹಂಚಲ್ಪಟ್ಟ ಹಣ ಇಂತಹ ತಿಟ್ಟುಚೌದರಿಯದೆಂದು, ಹಾಗೆಯೇ ಇಂತಹ ಪಟ್ಟುಜಾನಿದೆಂದು ಎಲ್ಲರಿಗೂ ತಿಳಿದಿದೆ. ತಿಟ್ಟುಚೌದರಿ, ಪಟ್ಟುಜಾನಿಯವರು ಒಬ್ಬೊಬ್ಬರು ಒಂದೊಂದು ಕೋಟಿರೂಪಾಯಿಗಳು ಹಂಚಿದ್ದಾರೆ. ಚೌದರಿಯವರ ಹಣ ಎಷ್ಟು ಬೆಲೆ, ಎಷ್ಟು ಸಂಖ್ಯೆ ಹೊಂದಿದೆಯೋ ಅಷ್ಟೇ ಬೆಲೆ, ಅಷ್ಟೇ

ಸಂಖ್ಯೆಯಿರುವ ಜಾನ್‌ರವರ ಹಣವನ್ನು ಸಹಾ ಕೊಡುವುದು ನಡೆದಿದೆ. ಚೌದರಿಯವರ ಹಣ ಬಿಳಿಧನವೆಂದು (ವೈಟ್‌ಮನಿ) ಎಂದಾಗಲಿ, ಜಾನ್‌ನವರ ಹಣ ಕಪ್ಪುಹಣ (ಬ್ಲಾಕ್‌ಮನಿ) ಎಂದಾಗಲಿ ಏನು ವ್ಯತ್ಯಾಸವಿಲ್ಲ. ಚೌದರಿಯ ವರದು ಕೋಟಿಯಾಗಿದ್ದರೆ, ಜಾನ್‌ನವರದು ಸಹಾ ಕೋಟಿಯೆ. ಈ ವಿಷಯವೆಲ್ಲವನ್ನು 14 ದಿನಗಳ ನಂತರ ಅಂಗಡಿಸಾಯಬ್ ತಿಳಿದುಕೊಂಡು, ನಡೆದ ಮೋಸದ ಬಗ್ಗೆ ಚಿಂತಿಸಿ, ತಾನೂ ಸಹಾ ಸಂಪಾದಿಸಿಕೊಂಡ ಹಣದಲ್ಲಿ ಕೋಟಿರೂಪಾಯಿಗಳನ್ನು ಕರ್ಮಪಟ್ಟು ಗ್ರಾಮ ಪ್ರಜೆಗಳಿಗೆ ಕೊಟ್ಟು, ಅವರ ಕಷ್ಟ ಕರ್ಮಗಳಿಂದ ಅಥವಾ ಕರ್ಮಕಷ್ಟಗಳಿಗೆ ಸಹಾಯ ವಾಗಬೇಕೆಂದು ಕೊಂಡನು. ಹಾಗೆ ಅಂದುಕೊಂಡ ತಕ್ಷಣ ತಾನು ಕೂಡಾ ಹಣವನ್ನು ತಯಾರಾಗಿಟ್ಟುಕೊಂಡು ಈಸಲ ಮೋಸ ನಡೆಯದಂತೆ ತಾನೆ ಸ್ವತಃವಾಗಿ ಹಂಚಬೇಕೆಂದುಕೊಂಡನು. ಆದರೆ ಕೊಟ್ಟುಸಾಯಬ್‌ರಿಗೆ ಒಂದು ಸಮಸ್ಯೆ ಬಂದು ಬಿದ್ದಿದೆ. ಅದು ಏನೆಂದರೆ! ಹಗಲುಹೊತ್ತು ತನಗೆ ಕಾಲ್ ಕಂಪನಿಯಲ್ಲಿ ಕೆಲಸ ಇರುತ್ತದೆ. ಸಾಯಂಕಾಲ ಆರು ಗಂಟೆಗಳಿಗೆ ಕೆಲಸ ಮುಗಿದುಹೋದ ನಂತರ, ರಾತ್ರಿಸಮಯ ತಾನೇ ಸ್ವತಃವಾಗಿ ಊರಿನೊಳಗೆ ಹೋಗಿ, ಎಲ್ಲರಿಗೂ ಹಂಚುವುದಕ್ಕೆ ಅಂಗಡಿಸಾಯಬ್ ನವರಿಗೆ ರಾತ್ರಿಕಣ್ಣುಕಾಣದ(ಇರುಳುಗಣ್ಣು) ರೋಗವಿದೆ. ಅದರಿಂದ ರಾತ್ರಿಹೊತ್ತು ಕಣ್ಣು ಕಾಣಿಸುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ತಾನು ಮಾಡುವುದೇನಿಲ್ಲದೆ, ತನಗೆ ಇಷ್ಟವಿಲ್ಲದಿದ್ದರೂ, ಹಣವನ್ನು ಹಂಚುವ ಕಾರ್ಯವನ್ನು ಇತರರಿಗೆ ಒಪ್ಪಿಸಬೇಕಾಗಿ ಬಂದಿದೆ.

ತನ್ನ ಹಣದ ವಿಷಯದಲ್ಲಿ ಈಬಾರಿ ಎಂತಹ ಮೋಸ ನಡೆಯ ದಂತಿರುವುದಕ್ಕೆ, ನೀತವಂತನಾದ ಒಬ್ಬ ವ್ಯಕ್ತಿಯನ್ನು ಆಯ್ಕೆಮಾಡಿಕೊಂಡು, ಈ ವಿಷಯದಲ್ಲಿ ಎಂತಹ ಮೋಸ ನಡೆಯಬಾರದೆಂದು ಎಚ್ಚರಿಸಿ ಹೇಳುವು ದಲ್ಲದೆ, ಈ ಹಣ ನಿನ್ನದಲ್ಲ ನೀನು ನಿಮಿತ್ತಮಾತ್ರನಾಗಿ ಹಂಚು ಎಂದು ಮತ್ತೆ ಮತ್ತೆ ಹೇಳಿಕಳಿಸಿದನು. ಎಲ್ಲದಕ್ಕೂ ತಲೆಯಾಡಿಸಿದ ಆತನು ಹಣವನ್ನು ನೋಡದ ಮೊದಲಿದ್ದಂತೆ ಹಣವನ್ನು ನೋಡಿದ ನಂತರ ಇರದೆ, ಹಣವೆಲ್ಲ ತನ್ನದೇ

ಎಂಬ ಭಾವನೆಯು ಸಹಾ ಬಂದಿದೆ. ಹಾಗೆನಿಸಿದ ನಂತರ ತನ್ನ ಹಣ ತನ್ನ ಇಷ್ಟ ಎಂಬ ಭಾವನೆ ಸಹ ಬಂದಿದೆ. ಅಂಗಡಿಸಾಯಬ್ ಕೋಟಿರೂಪಾಯಿಗಳ ಹಣವನ್ನು ಆ ವ್ಯಕ್ತಿಗೆ ಕೊಟ್ಟಿರುವುದು ಯಾರೂ ನೋಡಲಿಲ್ಲ. ಆದ್ದರಿಂದ ಹಣವನ್ನು ತೆಗೆದುಕೊಂಡ ಆ ವ್ಯಕ್ತಿ ಆ ಹಣವನ್ನು ಇತರರಿಗೆ ಕೊಟ್ಟರೂ, ಅದೆಲ್ಲವು ತನ್ನ ಹಣವೆನ್ನುವಂತೆ, ತಾನೇ ಸ್ವತಃವಾಗಿ ಕೊಡುತ್ತಿರುವಂತೆ ಇತರರಿಗೆ ಕಾಣಿಸಿದ್ದಾನೆ. ಅದರಿಂದ ಆ ವ್ಯಕ್ತಿಯಿಂದ ಹಣವನ್ನು ತೆಗೆದುಕೊಂಡವರೆಲ್ಲರು, ಆತನ ಹಣವನ್ನೇ ಕೊಟ್ಟಿದ್ದಾನೆಂದು ಅಂದುಕೊಳ್ಳುತ್ತಿದ್ದಾರಾಗಲಿ, ಆ ಹಣ ಅಂಗಡಿಸಾಯಬ್ ಎಂದು ಯಾರಿಗೂ ತಿಳಿಯದಂತೆ ಹೋಗಿದೆ. ಯಾರಾದರೂ ಅಂಗಡಿಸಾಯಬ್‌ನನ್ನು ಭೇಟಿಮಾಡಿ ಬಂದವರಿಗೆ ಹಣದ ವಿಷಯವೆಲ್ಲಾ ತಿಳಿದು, ಈ ಹಣ ನಿಮಗೆ ಕೊಟ್ಟಿರುವ ವ್ಯಕ್ತಿದಲ್ಲ, ಇದು ಅಂಗಡಿಸಾಯಬ್‌ದೆಂದು ಹೇಳಿದರೆ, ಹೇಳಿದವನದೆ ತಪ್ಪೆನ್ನುವಂತೆ ನೋಡುವವರು ಇದ್ದಾರೆ. ಅಂತಹವರು ನಂಬದೆಹೋದರು ಫರವಾಗಿಲ್ಲ ಆದರೆ, ನಮಗೆ ಹಣಕೊಟ್ಟ ವ್ಯಕ್ತಿಯ ಮೇಲೆ ಅಸತ್ಯ ಹೇಳುತ್ತಿಯಾ ಎಂದು ದಾಳಿ ಮಾಡುವುದಕ್ಕೆ ಸಹಾ ಸಿದ್ಧವಾಗುತ್ತಿದ್ದಾರೆ. ಹಣವನ್ನು ತೆಗೆದುಕೊಂಡ ಪ್ರಜೆಗಳು ಮೊದಲಿಗೆ ಹಣಕೊಟ್ಟ ಅಂಗಡಿಸಾಯಬ್ ಮೇಲೆ ಅಭಿಮಾನ ಬೆಳೆಸಿಕೊಳ್ಳದೆ, ಮಧ್ಯದಲ್ಲಿ ಹಣವನ್ನು ಕೊಟ್ಟಿರುವ ವ್ಯಕ್ತಿ ಮೇಲೆಯೇ ಗೌರವವನ್ನು ಅಭಿಮಾನವನ್ನು ಬೆಳೆಸಿಕೊಂಡಿದ್ದಾರೆ.

ಇದೆಲ್ಲವೂ ಗಮನಿಸಿದರೆ ಮೂವರು ಧನಿಕರು ಸಮಾನವಾಗಿ ಒಬ್ಬೊಬ್ಬರು ಕೋಟಿ ರೂಪಾಯಿಗಳನ್ನು ಪ್ರಜೆಗಳಿಗೆ ಕೊಡಬೇಕೆಂಬ ಒಳ್ಳೆಯ ಉದ್ದೇಶದಿಂದ ಕೊಟ್ಟರೂ ಅವರ ಉದ್ದೇಶ ಪೂರ್ತಿ ನೆರವೇರದಂತೆ ಹೋಗಿದೆ. ಮೊದಲ ಧನಿಕನಾದ ತಿಟ್ಟುಚೌದರಿ, ಎರಡನೆ ಧನಿಕನಾದ ಪಟ್ಟುಜಾನ್‌ನವರ ಉದ್ದೇಶ ನೆರವೇರದಿದ್ದರೂ, ಕೊಟ್ಟಿರುವ ಹಣ ಇಂತಹ ಧನಿಕರದೆಂದು ಪ್ರಜೆಗಳಿಗೆಲ್ಲಾ ತಿಳಿದಿದೆ. ಆದರೆ ಮೂರನೆ ಧನಿಕನಾದ ಅಂಗಡಿಸಾಯಬ್ ಕೊಟ್ಟಿರುವ ಧನ ಇಂತಹವರಿದೆಂಬ ವಿಷಯ ಪೂರ್ತಿಯಾಗಿ ಯಾರಿಗೂ ತಿಳಿಯದಂತೆ ಹೋಗಿದೆ. ಆದ್ದರಿಂದ ತಿಟ್ಟುಚೌದರಿಗಿಂತ, ಪಟ್ಟುಜಾನ್‌ನವರಿಗಿಂತ, ಕೊಟ್ಟುಸಾಯಬ್‌ನವರ ವಿಷಯದಲ್ಲಿ ಪೂರ್ತಿ ಅನ್ಯಾಯ ನಡೆದಿದೆ ಎಂದು

ಹೇಳಬಹುದು. ಧನಿಕರದು ಒಳ್ಳೆಯ ಉದ್ದೇಶವೇ, ಆದ ಕಾರಣ ಪ್ರಜೆಗಳು ಸ್ವಲ್ಪ ಲಾಭ ಹೊಂದಿದ್ದಾರೆ. ಆದರೆ ಮಧ್ಯದಲ್ಲಿ ಹಣವನ್ನು ಹಂಚಿದವರ ವಂಚನೆ ಬಹಳ ಇದೆಯೆಂದು ತಿಳಿಯುತ್ತಿದೆ. ಇಲ್ಲಿ ಯಾರಿಗೂ ತಿಳಿಯದ ವಿಷಯವೊಂದಿದೆ. ಅದು ಏನೆಂದರೆ! ಮೂವರು ಧನಿಕರ ಹತ್ತಿರವಿರುವ ಹಣವಾಗಲಿ, ತಮಗೆ ಕೊಟ್ಟಿರುವ ಹಣವಾಗಲಿ ಎಲ್ಲವೂ ಊರುಹೆಸರು ತಿಳಿಯದ ಯಜಮಾನದೆಂದು, ಆತನು ದಯೆತೋರಿಸಿ ಕೊಟ್ಟಿರುವ ಹಣವನ್ನೆ ತಮ್ಮ ಮೇಲೆ ದಯೆತೋರಿಸಿದ ಧನಿಕರು ಕೊಟ್ಟಿದ್ದಾರೆಂದು, ಮೂವರು ಕೊಟ್ಟಿರುವ ಮೂರು ಕೋಟಿಗಳ ಹಣ ಮೊದಲಿಗೆ ಕಾಲ್ ಕಂಪನಿ ಯಜಮಾನನದೇ ಎಂದು ಯಾರಿಗೂ ತಿಳಿಯದು.

ತಿಟ್ಟುಚೌದರಿ, ಪಟ್ಟುಜಾನ್, ಕೊಟ್ಟುಸಾಯಬ್‌ನವರ ಮೂವರ ಕಥೆಯನ್ನು ನೋಡಿದರೆ ಈ ಕಥೆ ಎಲ್ಲವೂ ಇಂದಿನ ಮೂರು ಮತಗಳಿಗೆ ಸಮ ಭಾವವಾಗಿರುವಂತೆ ತಿಳಿಯುತ್ತಿದೆ. ಕಥೆಗು ಇಂದಿನ ಮತಗಳಿಗಿರುವ ಸಮತ್ವವನ್ನು ನೋಡೋಣ. ಕರ್ಮದಿಂದ ಕೂಡಿಕೊಂಡು ಅನೇಕ ವಿಧ ಕರ್ಮಗಳನ್ನು ಅನುಭವಿಸುತ್ತಿರುವ ಈ ವಿಶ್ವವೆಲ್ಲವನ್ನು ಕರ್ಮಪಟ್ಟು ಗ್ರಾಮವಾಗಿ ಹೋಲಿಸಿ ಹೇಳಿಕೊಳ್ಳಬಹುದು. ಕಾಲವನ್ನು ನಡೆಸುವ ದೇವರೇ ಕಾಲ್ ಕಂಪನಿ ಯಜಮಾನ, ಯಜಮಾನನ ಹೆಸರು, ಊರು ಕರ್ಮಪಟ್ಟು ಗ್ರಾಮದವರಿಗೆ ಯಾರಿಗೂ ತಿಳಿಯದಂತೆ, ದೇವರ ಹೆಸರು ಅಡ್ರಸ್ (ನಾಮ, ವಿಳಾಸ) ವಿಶ್ವದಲ್ಲಿ ಯಾರಿಗೂ ತಿಳಿಯದು. ದೇವರ ಜ್ಞಾನ ಭೂಮಿಮೇಲೆ ಪ್ರಜೆಗಳಿಗೆ ಮೂರು ವಿಧಗಳು ತಿಳಿಯಲ್ಪಡುತ್ತದೆಂದು ಖುರಾನ್ ಗ್ರಂಥದಲ್ಲಿ 42ನೇ ಸುರಾ51ನೇ ಆಯತ್‌ನಲ್ಲಿ ಹೇಳಿದಂತೆ, ಯಾರಿಗೂ ತಿಳಿಯದ ಕಾಲ್ ಕಂಪನಿ ಯಜಮಾನನ ಧನವನ್ನು ಮೂವರು ಧನಿಕರ ಮೂಲಕ ಹಂಚಲ್ಪಟ್ಟಿದೆ. ಇಲ್ಲಿ ಧನವನ್ನು ಜ್ಞಾನವಾಗಿ, ಯಜಮಾನನನ್ನು ದೇವರಾಗಿ, ಮೂವರು ಧನಿಕರನ್ನು ಮೂವರು ಪ್ರವಕ್ತರಾಗಿ ಹೋಲಿಸಿಕೊಳ್ಳಬಹುದು. ಮೂವರು ಧನಿಕರ ಧನವನ್ನು ಮೂರು ಕುಲದವರಿಗೇ ಪರಿಮಿತವಾದಂತೆ. ಮೂವರು ಪ್ರವಕ್ತರು ಹೇಳಿದ ಜ್ಞಾನ ಮೂರು ಮತಗಳಿಗೆ ಪರಿಮಿತವಾಗಿಹೋಗಿದೆ. ತಿಟ್ಟುಚೌದರಿ ಮೊದಲು ತನ್ನ ಭಾವನಿಗೆ

ಧನವನ್ನು ಕೊಟ್ಟು ಪ್ರಜೆಗಳಿಗೆ ಹಂಚಿರೆಂದು ಹೇಳಿದಂತೆ, ಮೊದಲು ಕೃಷ್ಣನು ಗೀತಾಜ್ಞಾನವನ್ನು ತನ್ನ ಭಾವನವರಾದ ಅರ್ಜುನನಿಗೆ ಹೇಳಿದ್ದಾನೆ. ತಿಟ್ಟುಚೌದರಿ ಧನ ಒಂದು ಕುಲಕ್ಕೇ ಪರಿಮಿತವಾದಂತೆ, ಮಾನವರಿಗೆಲ್ಲ ಸೇರಬೇಕೆಂದು ಹೇಳಿದ ಕೃಷ್ಣನ ಗೀತಾ ಜ್ಞಾನ, ಒಂದು ಹಿಂದೂ (ಇಂದೂ) ಮತಕ್ಕೆ ಮಾತ್ರ ಪರಿಮಿತವಾಗಿ ಹೋಗಿದೆ. ಪಟ್ಟುಜಾನ್ ತನ್ನ ಧನವನ್ನು ಹತ್ತುಜನ ಅನುಚರರಿಗೆ ಕೊಟ್ಟು ಊರಿನಲ್ಲಿರುವವರಿಗೆ ಹಂಚಿರೆಂದು ಹೇಳಿದಂತೆ, ಏಸು ತನ್ನ ಜ್ಞಾನವನ್ನು ತನ್ನ ಹತ್ತುಜನ ಶಿಷ್ಯರಿಗೆ ಹೇಳುವುದು ನಡೆದಿದೆ. ಜಾನ್‌ನವರ ಧನದಿಂದ ಆತನ ಅನುಚರರು ತಮ್ಮ ಕುಲವನ್ನು ಅಭಿವೃದ್ಧಿ ಮಾಡಿಕೊಂಡಂತೆ, ಏಸುಪ್ರಭುವಿನ ಜ್ಞಾನದಿಂದ ಕ್ರೈಸ್ತರು ಅವರ ಮತದೊಳಗೆ ಇತರಮತಗಳನ್ನು ಸೇರಿಸಿಕೊಂಡು, ಅವರ ಮತವನ್ನು ಅಭಿವೃದ್ಧಿ ಮಾಡಿಕೊಂಡಿದ್ದಾರೆ. ಏಸುಪ್ರಭು ಜ್ಞಾನ ಕ್ರೈಸ್ತರಿಗೆ ಎಂದು ಹೇಳಿದ್ದಾರೆ.

ತಿಟ್ಟುಚೌದರಿ ಕೊಟ್ಟಿರುವ ಧನವಾಗಲಿ, ಪಟ್ಟುಜಾನ್ ಕೊಟ್ಟಿರುವ ಧನವಾಗಲಿ ಊರಿನಲ್ಲಿನ ಎಲ್ಲರಿಗೂ ಸಮಾನವಾಗಿ ಹಂಚಲ್ಪಡದೆ, ಅವರವರ ಕುಲಗಳಿಗೆ ಎಂದು ಹೇಳಿಕೊಂಡು ಹಂಚಿಕೊಂಡಂತೆ, ಕೃಷ್ಣನ ಭಗವದ್ಗೀತೆ ಜ್ಞಾನವಾಗಲಿ, ಏಸು ಒಂದರ ಬೈಬಲ್ ಜ್ಞಾನವಾಗಲಿ ಮಾನವರಿಗೆಲ್ಲ ಎಂದು ಹೇಳದೆ, ಅವರವರ ಮತಗಳಿಗೆಂದು ಹೇಳಿಕೊಂಡಿದ್ದಾರೆ. ಯಾವುದು ಏನಾದರೂ ತಿಟ್ಟುಚೌದರಿ ಧನವೂ, ಪಟ್ಟುಜಾನ್‌ನವರ ಧನವು ಅವರವರ ಕುಲಗಳಿಗೆ ಪರಿಮಿತವಾದರೂ, ಕೊನೆಗದು ತಿಟ್ಟುಚೌದರಿದೆಂದು ಅವರ ಕುಲದವರಿಗೆ, ಪಟ್ಟುಜಾನ್‌ನವರದೆಂದು ಅವರ ಕುಲದವರಿಗೆ ತಿಳಿದಂತೆ, ಹಿಂದೂಗಳಿಗೆ ಭಗವದ್ಗೀತೆ ಕೃಷ್ಣನದೆಂದು, ಕ್ರೈಸ್ತರಿಗೆ ಬೈಬಲ್ ಏಸುಪ್ರಭುವುದೆಂದು ತಿಳಿದಿದೆ. ಕಥೆಯಲ್ಲಿ ಅಂಗಡಿಸಾಯಬ್ ಕೊಟ್ಟಿರುವ ಧನವನ್ನು ತೆಗೆದುಕೊಂಡ ವ್ಯಕ್ತಿ ಒಂದೇ ಕುಲದಲ್ಲಿ ಹಂಚಿದರೂ, ಆ ಧನವನ್ನು ತೆಗೆದುಕೊಂಡ ಪ್ರಜೆಗಳಿಗೆ ಅದು ಅಂಗಡಿಸಾಯಬ್‌ದೆಂದು ಯಾವ ಕಾರಣಕ್ಕೂ ತಿಳಿಯದು. ಧನವನ್ನು ತೆಗೆದುಕೊಂಡವರೆಲ್ಲರೂ ತಮ್ಮ ಕೈಗೆ ಕೊಟ್ಟಿರುವವನದೇ ಅಂದುಕೊಂಡಿದ್ದಾರಾ

ಗಲಿ, ಕೊಟ್ಟುಸಾಯಬ್‌ದೆಂದು ಯಾರು ಅಂದುಕೊಳ್ಳಲಿಲ್ಲ. ತಮಗೆ ಸೇರಿದ ಧನ ಕೊಟ್ಟುಸಾಯಬ್‌ದೆಂದು ಯಾರಾದರೂ ಹೇಳಿದರೂ, ಪ್ರಜೆಗಳು ಕೇಳುವ ಸ್ಥಿತಿಯಲ್ಲಿ ಇಲ್ಲವೆನ್ನುವಂತೆ, ಇಂದು ಮುಸ್ಲಿಮ್‌ರಿಗೆ ಹೇಳಿದ ಖುರ್‌ಆನ್ ಗ್ರಂಥ ಮುಸ್ಲಿಮ್‌ರೆಲ್ಲರು ಮುಹಮ್ಮದ್ ಪ್ರವಕ್ತದೇ ಅಂದುಕೊಂಡಿದ್ದಾರಾಗಲಿ, ಅದು ಜಿಬ್ರಯೇಲ್ ಕೊಟ್ಟಿರುವುದೆಂದು ಯಾರೂ ಹೇಳಿಕೊಳ್ಳುತ್ತಿಲ್ಲ. ಯಾರಾದರೂ ಖುರಾನ್ ಗ್ರಂಥ ಮುಹಮ್ಮದ್ ಪ್ರವಕ್ತದು ಅಲ್ಲವೆಂದು ಅಂದರೆ, ಮುಸ್ಲಿಮ್‌ರು ಕೇಳುವ ಸ್ಥಿತಿಯಲ್ಲಿ ಇಲ್ಲ.

ತಿಟ್ಟುಚೌದರಿ, ಪಟ್ಟುಜಾನ್, ಕೊಟ್ಟುಸಾಯಬ್ ಧನಿಕರಾಗಿದ್ದಾರೆಂದರೆ ಮೂವರ ಹತ್ತಿರ ಇರುವುದು ಯಜಮಾನನ ಹಣ ತಾನೆ! ಮೂವರು ಹತ್ತಿರವಿರುವ ಹಣದಲ್ಲಿ ಯಾವ ವ್ಯತ್ಯಾಸವಿಲ್ಲ. ತಿಟ್ಟುಚೌದರಿ ಹತ್ತಿರ ಯಾವ ನೋಟುಗಳಾದರೆ ಇವೆಯೋ ಅವೇ ನೋಟುಗಳೇ ಉಳಿದ ಪಟ್ಟುಜಾನ್, ಕೊಟ್ಟುಸಾಯಬ್ ಹತ್ತಿರ ಸಹಾ ಇವೆ. ಅದೇ ವಿಧವಾಗಿ ಕೃಷ್ಣನ ಹತ್ತಿರವಾಗಲಿ, ಏಸು ಹತ್ತಿರವಾಗಲಿ, ಜಿಬ್ರಯೇಲ್ ಹತ್ತಿರವಾಗಲಿ ಒಂದೇ ದೈವಜ್ಞಾನವಿದೆ. ಅವರ ಹತ್ತಿರವಿರುವ ಜ್ಞಾನದಲ್ಲಿ ಯಾವ ವ್ಯತ್ಯಾಸವಿಲ್ಲ., ಕೃಷ್ಣನ ಹೇಳಿದ ಜ್ಞಾನವನ್ನೆ ಉಳಿದ ಏಸು, ಜಿಬ್ರಯೇಲ್ ಇಬ್ಬರೂ ಹೇಳಿದ್ದಾರೆ. ಕಾಲ್ ಕಂಪನಿಯಲ್ಲಿ ಕೆಲಸ ಮಾಡುವುದರಿಂದ, ಕಾಲ್ ಕಂಪನಿ ಯಜಮಾನ ಕೊಟ್ಟಿರುವ ಧನದಿಂದಲೇ ತಿಟ್ಟುಚೌದರಿ, ಪಟ್ಟುಜಾನ್, ಕೊಟ್ಟುಸಾಯಬ್ ಮೂವರು ಧನಿಕರಾಗಿದ್ದಾರೆ. ಅದೇ ವಿಧವಾಗಿ ದೇವರ ಜ್ಞಾನರಾಜ್ಯದಲ್ಲಿರುವ ಮೂವರು (ಕೃಷ್ಣ, ಏಸು, ಜಿಬ್ರಯೇಲ್) ದೇವರ ಜ್ಞಾನವನ್ನು ಸಂಪೂರ್ಣವಾಗಿ ಹೊಂದಿದ್ದಾರೆ. ಅವರಹತ್ತಿರವಿರುವುದು ವಿಶ್ವಕ್ಕೆಲ್ಲಾ ಯಜಮಾನ, ಅಧಿಪತಿಯಾದ ಒಂದೇ ದೇವರ ಜ್ಞಾನವೆಂದು ತಿಳಿಯಬೇಕು. ಈದಿನ ಪ್ರಜೆಗಳ ಮುಂದಿರುವ ಕೃಷ್ಣನು ಹೇಳಿದ ಭಗವದ್ಗೀತೆಯಾಗಲಿ, ಏಸು ಬೈಬಲ್ ಆಗಲಿ, ಜಿಬ್ರಯೇಲ್ ಹೇಳಿದ ಖುರಾನ್ ಆಗಲಿ ಮೂರು ಒಂದೇ ದೇವರ ಜ್ಞಾನದಿಂದ ಕೂಡಿಕೊಂಡಿವೆ ಎಂದು ತಿಳಿಯುತ್ತಿದೆ. ಭಗವದ್ಗೀತೆಯನ್ನು ಕೃಷ್ಣನು ಹೇಳಿದ್ದಾನೆಂದು,

ಬೈಬಲ್‌ನಲ್ಲಿರುವುದು ಏಸು ಹೇಳಿರುವುದೆಂದು ಎಲ್ಲರಿಗೂ ತಿಳಿದಿದೆ. ಆದರೆ ಖುರ್‌ಆನ್‌ನನ್ನು ಹೇಳಿರುವುದು ಜಿಬ್ರಯೇಲ್ ಎಂದು ಬಹಳಜನರಿಗೆ ತಿಳಿಯದು. ಮುಹಮ್ಮದ್ ಪ್ರವಕ್ತ ಹೇಳಿರುವುದೇ ಖುರ್‌ಆನ್ ಎಂದು ಮುಸ್ಲಿಮ್‌ರೆಲ್ಲರೂ ಹೇಳಿಕೊಳ್ಳುವುದು ನಡೆಯುತ್ತಿದೆ.

ಈಗಿನ ಸಮಾಜದಲ್ಲಿ ಮನುಷ್ಯರು ಏಸುನನ್ನು ಕ್ರೈಸ್ತರ ಪ್ರವಕ್ತ ಅನ್ನುತ್ತಿದ್ದಾರೆ. ಮುಹಮ್ಮದ್ ಸಹಾ ಇಸ್ಲಾಮ್ ಪ್ರವಕ್ತ ಎಂದು ಕರೆಯುತ್ತಿದ್ದಾರೆ. ಕೃಷ್ಣನನ್ನು ಪ್ರವಕ್ತ ಎಂದು ಯಾರೂ ಅನ್ನಲಿಲ್ಲ. ಕೃಷ್ಣನು ಭವದ್ಗೀತೆಯನ್ನು ಹೇಳಿದರೂ ಆತನನ್ನು ಬಹಳಜನರು ತುಂಟನನ್ನಾಗಿ, ಜಾರನನ್ನಾಗಿ, ಚೋರನನ್ನಾಗಿ ಹೇಳುತ್ತಾರೆ. ಕ್ರೈಸ್ತರ ಸಮಾಜದಲ್ಲಿ ಏಸುಗು, ಇಸ್ಲಾಮ್ ಸಮಾಜದಲ್ಲಿ ಮುಹಮ್ಮದ್ ಪ್ರವಕ್ತಗು ಅವರು ಕೊಡುತ್ತಿರುವ ಗೌರವದಲ್ಲಿ ಸ್ವಲ್ಪಮಟ್ಟಿನ ಗೌರವವನ್ನು ಸಹಾ ಕೃಷ್ಣನಿಗೆ ಹಿಂದೂಗಳು ಕೊಡುತ್ತಿಲ್ಲ. ಯಾವುದು ಏನಾದರೂ ಕೃಷ್ಣನು ಪ್ರವಕ್ತರೊಳಗೆ ಲೆಕ್ಕಿಸಲ್ಪಡಲಿಲ್ಲ. ಗೀತೆಯನ್ನು ಹೇಳಿದ ಕೃಷ್ಣನು, ಬೈಬಲ್‌ನನ್ನು ಹೇಳಿದ ಏಸು ಸಮಕಾಲೀಕರು ಅಲ್ಲವಾಗಲಿ, ಸಮಬೋಧಕರೆಂದು ಒಂದೇ ಜ್ಞಾನವನ್ನು ಹೇಳಿದ್ದಾರೆಂದು ಹೇಳಬಹುದು. ಇಲ್ಲಿಗೆ ಐದುಸಾವಿರ ವರ್ಷಗಳ ಪೂರ್ವದಲ್ಲಿ ಕೃಷ್ಣನು ಗೀತೆಯನ್ನು ಹೇಳಿದಾಗ, ನಂತರ. ಮೂರು ಸಾವಿರ ವರ್ಷಗಳಿಗೆ ಅಂದರೆ ಇಲ್ಲಿಗೆ ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಏಸು ಬೈಬಲ್‌ನನ್ನು ಹೇಳಿದ್ದಾನೆ. ನಂತರ 600 ವರ್ಷಗಳಿಗೆ ಅಂದರೆ ಇಲ್ಲಿಗೆ 1400 ವರ್ಷಗಳ ಪೂರ್ವದಲ್ಲಿ ಖುರ್‌ಆನ್ ಗ್ರಂಥವನ್ನು ಜಿಬ್ರಯೇಲ್ ಹೇಳಿದ್ದಾನೆ. ಆದರೆ ಖುರಾಆನ್ ಗ್ರಂಥದಹತ್ತಿರ ಜಿಬ್ರಯೇಲ್‌ನ ಹೆಸರು ಇಲ್ಲದಂತೆಹೋಗಿ ಮುಹಮ್ಮದ್ ಪ್ರವಕ್ತರ ಹೆಸರುಬಂದು ಸೇರಿದೆ. ಈಗ ಪ್ರವಕ್ತರೆಂಬ ಹೆಸರಿನಲ್ಲಿ ಕೃಷ್ಣನ ಹೆಸರಾಗಲಿ, ಜಿಬ್ರಯೇಲ್ ಹೆಸರಾಗಲಿ ಇಲ್ಲ. ಏಸುನನ್ನು ಕೆಲವುಕಡೆ ಕೆಲವರು ಪ್ರವಕ್ತ ಎಂದರೂ, ಬಹಳಜನ ಆ ಮಾತನ್ನು ಒಪ್ಪಿಕೊಳ್ಳದೆ, ಏಸು ದೇವರ ಕುಮಾರನು ಎಂದು ಪ್ರಚಾರ ಮಾಡಿದ್ದಾರೆ. ಇನ್ನೂ ಎಲ್ಲಾ ವಿಧಗಳ ಮುಹಮ್ಮದ್‌ನವರನ್ನು ಪ್ರವಕ್ತ ಅನ್ನುತ್ತಿದ್ದಾರೆ.

ಅಷ್ಟೇಅಲ್ಲದೆ ಪ್ರವಕ್ತನಿರುವುದೇ ಸರಿಯಾದ ಮತವೆಂದು, ಕೊನೆಗೆ ಎಲ್ಲಾಸುತ್ತಿ ಎಲ್ಲದಕ್ಕಿಂತ ಮೀರಿರುವುದು ಇಸ್ಲಾಮ್ ಎಂದು ಉಳಿದವರು ಸಹಾ ಅದನ್ನೇ ಅನುಸರಿಸಿ ದೇವರ ದೃಷ್ಟಿಯಲ್ಲಿ ಮುಸ್ಲಿಮರಾಗಿ ಬದಲಾಗಿರೆಂದು ಕೆಲವರು ಮುಸ್ಲಿಮ್ ಪಂಡಿತರು ಹೇಳುತ್ತಿದ್ದಾರೆ. ಈ ವಿಷಯವನ್ನು ಕುರಿತು ಸ್ವಲ್ಪ ಬುದ್ಧಿಯಿಂದ ಆಲೋಚಿಸಿದರೂ, ಆತ್ಮದಿಂದ ಯೋಚಿಸಿದರೂ ತಿಳಿಯುತ್ತಿರುವುದು ಏನೆಂದರೆ!

ವಕ್ತ ಎಂದರೆ ಹೇಳುವವನೆಂದು, ಪ್ರವಕ್ತ ಎಂದರೆ ಮುಖ್ಯವಾದ ವಿಷಯವನ್ನು ಹೇಳುವವನೆಂದು, ಮೊದಲೇ ಹೇಳಿಕೊಂಡಿದ್ದೇವೆ. ದೈವಜ್ಞಾನ ಸಂಬಂಧ ವಿಷಯಗಳೇ ಅತ್ಯಂತ ಮುಖ್ಯವಾಗಿರುವುದರಿಂದ, ಆ ವಿಷಯಗಳನ್ನು ಹೇಳುವವನು ಯಾರಾದರೂ ಪ್ರವಕ್ತನೇ ಆಗುತ್ತಾನೆ. ಮುಖ್ಯವಾದ ದೈವಜ್ಞಾನವನ್ನು ಹೇಳಿದ ಕೃಷ್ಣನು, ಏಸು, ಜಿಬ್ರಯೇಲ್‌ರನ್ನು ಸಹ ಪ್ರವಕ್ತರೆಂದೇ ಹೇಳಬಹುದು. ಜಿಬ್ರಯೇಲ್ ಹೇಳಿದ ಜ್ಞಾನವನ್ನು ಪ್ರಜೆಗಳಿಗೆ ಹೇಳಿದ ಮುಹಮ್ಮದ್ ಸಹಾ ಪ್ರವಕ್ತನೇ ಆಗುತ್ತಾನೆ. ಮುಹಮ್ಮದ್ ನಂತರ ಜ್ಞಾನವನ್ನು ಪ್ರಜೆಗಳಿಗೆ ಬೋಧಿಸಿದವರನ್ನು ವಕ್ತರೆಂದೂ ಪ್ರವಕ್ತರೆಂದೂ ಹೇಳಬಹುದು. ಕೃಷ್ಣನಿಗಿಂತ ಮೊದಲು ಜ್ಞಾನವನ್ನು ಹೇಳಿದವರನ್ನು ಸಹಾ ಪ್ರವಕ್ತ ಎಂದು ಹೇಳಬಹುದು. ಕಾಷಾಯವನ್ನು ಧರಿಸಿದವನನ್ನು ಸನ್ಯಾಸಿ ಎಂದು ಹೇಗೆ ಅನ್ನುತ್ತಿದ್ದೇವೊ, ಹಾಗೆಯೇ ಮುಖ್ಯವಾದ ಜ್ಞಾನವನ್ನು ಹೇಳುವವನನ್ನು ಪ್ರವಕ್ತ ಅನ್ನುತ್ತಿದ್ದೇವೆ. ಅಷ್ಟೇ ಅಲ್ಲದೆ ಪ್ರವಕ್ತ ಹೇಳಿರುವುದೇ ಜ್ಞಾನವಾಗಲಿ, ಪ್ರವಕ್ತ ಹೇಳಿರುವುದೇ ಮತ ಅನ್ನುವುದಕ್ಕೆ ಸಾಧ್ಯವಿಲ್ಲ. ಜ್ಞಾನ ದೇವರದೆಯಾಗಲಿ ಮತದಲ್ಲ. ದೇವರ ಜ್ಞಾನಕ್ಕೆ ಎಲ್ಲೆಗಳಿಲ್ಲ. ಆದ್ದರಿಂದ ಜ್ಞಾನ ಸಮುದ್ರದಂತಹದೆಂದು, ಅನಂತವಾದುದೆಂದು ಅನ್ನುತ್ತಿರುತ್ತಾರೆ. ಅವಧಿ ಇಲ್ಲದಂತಹವನು ದೇವರು ಮತ್ತು ದೇವರ ಜ್ಞಾನ. ಅಂತಹ ಜ್ಞಾನವನ್ನು ತೆಗೆದುಕೊಂಡು ಬಂದವನನ್ನು ದೂತ ಅನ್ನುತ್ತೇವೆ. ದೂತ ಎಂದರೆ ಸಮಾಚಾರವನ್ನು ತರುವವನು. ಅವಧಿಯಿಲ್ಲದ ದೇವರ ಸಮಾಚಾರವನ್ನು ತಿಳಿಸುವವನನ್ನು ಅವದೂತ ಎನ್ನುತ್ತೇವೆ. ದೇವರು

ಎಲ್ಲಿದ್ದಾನೋ ಯಾರಿಗೂ ತಿಳಿಯದು, ಅಷ್ಟೇಯಲ್ಲದೆ ದೇವರ ಹೆಸರು ತಿಳಿಯದು, ಆತನು ಹೇಗಿರುತ್ತಾನೋ, ಏನು ಮಾಡುತ್ತಿರುತ್ತಾನೋ ಯಾರಿಗೂ ತಿಳಿಯದು. ಅಂತಹ ತಿಳಿಯದವನ ಸಮಾಚಾರವನ್ನು ಯಾರಾದರೆ ತಂದು ತಿಳಿಸುತ್ತಾನೋ ಅವನನ್ನು ಅವಧೂತಯೆಂದು ಅನ್ನಬಹುದು. ಒಂದು ವಿಧವಾಗಿ ಅಂತಹವರು ಯಾರಿದ್ದಾರೆಂದು ಆಲೋಚಿಸಿದರು, ಐದುಸಾವಿರ ವರ್ಷಗಳ ಪೂರ್ವದಲ್ಲಿ ಭಗವದ್ಗೀತೆ ರೂಪದಲ್ಲಿ ದೇವರ ಸಮಾಚಾರವನ್ನು ತಿಳಿಸಿದ ಕೃಷ್ಣನನ್ನು ಅವದೂತ ಅನ್ನಬಹುದು. ಹಾಗೆಯೇ ಏಸುನನ್ನು, ಜಿಬ್ರಯೇಲ್‌ನನ್ನು ಅವದೂತರೆಂದು ಹೇಳಬಹುದು. ಮೊದಲು ಅವದೂತರು ತಿಳಿಸಿದ ಸಮಾಚಾರವನ್ನು ತಿಳಿದುಕೊಂಡು ಅದನ್ನು ಇತರರಿಗೆ ಹೇಳುವವರು ಪ್ರವಕ್ತರು ಆಗಬಹುದು. ಮುಹಮ್ಮದ್ ಜಿಬ್ರಯೇಲ್ ಹೇಳಿದ ಜ್ಞಾನವನ್ನು ಕೇಳಿ ಪ್ರವಕ್ತ ಆಗಿದ್ದಾನೆ. ಇದರ ಪ್ರಕಾರ ಪ್ರವಕ್ತ ದೊಡ್ಡವನಾ? ಅವದೂತ ದೊಡ್ಡವನಾ ಎಂದು ಅಂದರೆ ನಿಜಕ್ಕೂ ಅವಧೂತಯೇ ದೊಡ್ಡವನೆಂದು ಹೇಳಬಹುದು. ನಂತರ ಎರಡನೆಯವನಾಗಿ ಪ್ರವಕ್ತನು ಹೇಳಬಹುದು. ದೇವರ ಜ್ಞಾನ ಭೂಮಿಮೇಲೆ ಪ್ರಜೆಗಳಿಗೆ ಅವಧೂತರ ಮೂಲಕವೇ ಸೇರುತ್ತಿದೆ. ನಂತರ ಅದು ಪ್ರವಕ್ತರ ಮೂಲಕ ಹಂಚಲ್ಪಡುತ್ತಿದೆ.

ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಒಂದು ಮುಖ್ಯವಾದ ಸೂತ್ರ ಇದೆ. ಅದು ಏನೆಂದರೆ! ದೇವರನ್ನು ತಿಳಿಸುವ, ದೇವರ ಜ್ಞಾನ, ದೇವರಿಗೆ ಹೊರತು, ಮನುಷ್ಯರ್ಯಾರಿಗೂ ತಿಳಿಯದು ಅನ್ನುವುದು ಮುಖ್ಯಸೂತ್ರ. ಮನುಷ್ಯನಾದವನು ಯಾರೂ ದೇವರ ಜ್ಞಾನವನ್ನು ಸ್ವತಃವಾಗಿ ತಿಳಿಸಲಾರನು. ಆ ಲೆಕ್ಕ ಪ್ರಕಾರ ಮುಹಮ್ಮದ್ ಪ್ರವಕ್ತರು ಸಹಾ ಜಿಬ್ರಯೇಲ್ ಹೇಳಿದ ದೇವರ ಜ್ಞಾನವನು ಹೇಳಿದ್ದಾನಾಗಲಿ, ತಾನು ಸ್ವತಃ ಹೇಳಿಲಲ್ಲ. ಇಲ್ಲಿ ಚೆನ್ನಾಗಿ ಆಲೋಚಿಸಿದರೆ ದೇವರ ಜ್ಞಾನ ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದಿರುವಾಗ ಕೃಷ್ಣನು ದೇವರ ಜ್ಞಾನವನ್ನು ಹೇಗೆ ಹೇಳಿದ್ದಾನೆ? ಉಳಿದ ಏಸು, ಜಿಬ್ರಯೇಲ್ ಹೇಗೆ ಹೇಳಿದ್ದಾರೆ? ಕೃಷ್ಣನು, ಏಸು ಸಾಧಾರಣ ಮನುಷ್ಯರಾದಾಗ ಅವರಿಗೆ ದೇವರ ಜ್ಞಾನ ತಿಳಿದಿಲ್ಲವೆಂದು ಹೇಳಬಹುದು. ಆದರೆ ಇಲ್ಲಿ ಆ ಮೂವರು

ಹೇಳಿದ ಗೀತೆ, ಬೈಬಲ್. ಖುರಾನ್ ಗ್ರಂಥಗಳು ಮೂರು ದೇವರ ಜ್ಞಾನವನ್ನು ತಿಳಿಸುವ ಮೂಲ ಗ್ರಂಥಗಳಾಗಿ ದೇವರೇ ತಿಳಿಸಿದ್ದಾನೆ. ಒಂದುವೇಳೆ ಆ ಮೂರು ಗ್ರಂಥಗಳಲ್ಲಿ ದೇವರ ಜ್ಞಾನ ನಿಕ್ಷಿಪ್ತವಾಗಿದ್ದರೆ, ಅವುಗಳನ್ನು ಹೇಳಿದ ಮೂವರೂ ಸಾಧಾರಣ ಮನುಷ್ಯರು ಅಲ್ಲವೆಂದು ಹೇಳಬೇಕು. ಕೃಷ್ಣನು, ಏಸು ಇಬ್ಬರೂ ಪ್ರತ್ಯಕ್ಷವಾಗಿ ಎಲ್ಲರಿಗೂ ಕಾಣಿಸುವ ವ್ಯಕ್ತಿಗಳಾಗಿ ಇದ್ದಾರೆ. ಜಿಬ್ರಯೇಲ್ ಮಾತ್ರ ಸಾಧಾರಣ ಮನುಷ್ಯನಂತೆ ಕಾಣಿಸದಂತೆ ಎಲ್ಲಿಯೋ ತೆರೆಮರೆಯಿಂದ ಮಾತನಾಡಿದಂತೆ ಚರಿತ್ರೆ ಇದೆ. ಆದ್ದರಿಂದ ಆತನನ್ನು ಒಬ್ಬ ಮನುಷ್ಯನಾಗಿ ಲೆಕ್ಕಿಸಬಾರದು. ದೇವರ ಜ್ಞಾನವನ್ನು ಗ್ರಹಿಸಿದ ಒಂದು ಗ್ರಹವಾಗಿ ಜಿಬ್ರಯೇಲ್‌ನನ್ನು ಕುರಿತು ಹೇಳಬಹುದು. ಕೃಷ್ಣನು, ಏಸು, ಜಿಬ್ರಯೇಲ್ ಅನ್ನುವ ಮೂವರಲ್ಲಿ ಜಿಬ್ರಯೇಲ್ ಸಾಧಾರಣ ಮನುಷ್ಯ ಅಲ್ಲವೆಂದು ತಿಳಿದುಹೋಗಿದೆ. ಈಗ ಕೃಷ್ಣನು, ಏಸು ಅನ್ನುವ ಇಬ್ಬರೂ ಕಾಣಿಸುವ ವ್ಯಕ್ತಿಗಳಾಗಿ ಇದ್ದಾರೆ ಅಲ್ಲವೇ! ಹಾಗಿರುವಾಗ ದೇವರ ಜ್ಞಾನ ದೇವರಿಗೆ ಹೊರೆತು ಯಾವ ಮನುಷ್ಯನಿಗು ತಿಳಿಯದೆಂಬ ದೇವರಮಾತಿಗೆ ವಿರುದ್ಧವಾಗಿ ಮನುಷ್ಯರಾದ ಕೃಷ್ಣನು, ಏಸು ಹೇಗೆ ಮೂಲ ಗ್ರಂಥರೂಪಗಳಲ್ಲಿ ಜ್ಞಾನವನ್ನು ತಿಳಿಸಿದ್ದಾರೆ? ಎಂಬ ಪ್ರಶ್ನೆಬರುತ್ತದೆ. ಈ ಪ್ರಶ್ನೆಗೆ ನಮ್ಮ ಉತ್ತರ ಏನೆಂದರೆ!

ಕೃಷ್ಣನು ಸಾಧಾರಣ ಮನುಷ್ಯನಾಗಿ ಕಾಣಿಸಿದರೂ, ಆತನು ಮನುಷ್ಯನಲ್ಲ. ಕೃಷ್ಣನು ತಾಯಿಗರ್ಭದಿಂದ ಸಜೀವವಾಗಿ ಹುಟ್ಟಿದವನು. ಆದ್ದರಿಂದ ಆತನನ್ನು ಭಗವಂತನು ಅನ್ನಬಹುದೆಂದು ಇದಕ್ಕುಮೊದಲು ಸಹಾ ಬಹಳ ಗ್ರಂಥಗಳಲ್ಲಿ ಹೇಳಿದ್ದೇವೆ. ಪ್ರತ್ಯೇಕಿಸಿ ಶ್ರೀಕೃಷ್ಣನು ದೇವರಾ? ಭಗವಂತನಾ? ಎಂಬ ಗ್ರಂಥದಲ್ಲಿ ಕೃಷ್ಣನು ಹೇಗೆ ಭಗವಂತನಾಗಿದ್ದಾನೋ ವಿವರವಾಗಿ ಹೇಳಿದ್ದೇವೆ. ಕೃಷ್ಣನು ಭಗವಂತನಾದ್ದರಿಂದ ಆತನು ಸಾಧಾರಣ ಮನುಷ್ಯನಲ್ಲವೆಂದು ಹೇಳಬಹುದು. ಮನುಷ್ಯ ಅಲ್ಲದವನು ಭಗವಂತನಾಗುತ್ತಾನೆ. ಭಗವಂತನಾದವನು ದೇವರ ಅಂಶದಿಂದ ಕೂಡಿಕೊಂಡಿದ್ದಾನೆ. ಆದ್ದರಿಂದ ಅವನು ಕೆಲವು ಸಮಯಗಳಲ್ಲಿ ದೇವರು ಸಹಾ ಆಗುತ್ತಾನೆ. ಸಾಧಾರಣ ಮನುಷ್ಯ ಹುಟ್ಟಿದಾಗಿನಿಂದ ಮರಣಿಸುವವರೆಗು ಮನುಷ್ಯನಾಗಿಯೇ ಇದ್ದು, ಮನುಷ್ಯನಾಗಿಯೇ ಜೀವಿಸಿ,

ಮನುಷ್ಯನಾಗಿಯೇ ಮರಣಿಸುತ್ತಾನೆ. ಆದರೆ ಭಗವಂತನಾಗಿ ಹುಟ್ಟಿದವನು ಮನುಷ್ಯನಾಗಿಯೇ ಇರುತ್ತಾನೆ, ಆದರೂ ಮನುಷ್ಯನಲ್ಲ. ಭಗವಂತನಾದ ಮನುಷ್ಯ ಕೆಲವು ಸಮಯಗಳಲ್ಲಿ ದೇವರಾಗಿರುತ್ತಾನೆ, ಆದರೂ ದೇವರು ಅಲ್ಲ. ದೇವರೂ ಅಲ್ಲವೆಂದು, ಮನುಷ್ಯ ಅಲ್ಲವೆಂದು ಹೇಳಲ್ಪಡುವ ಭಗವಂತನು ಪ್ರತ್ಯೇಕಿಸಿ ಭಗವಂತನಾಗಿ ಕಾಣಿಸುತ್ತಾನಾ ಎಂದರೆ, ಭಗವಂತನಾಗಿ ಎಂತಹ ಗುರುತು ಇರುವುದಿಲ್ಲವಾದ್ದರಿಂದ, ಆತನು ಭಗವಂತನಾಗಿ ಸಹ ಕಾಣಿಸದೆ ಸಾಧಾರಣ ಮನುಷ್ಯನಂತೆ ಕಾಣಿಸುತ್ತಾನೆ. ಇವೆಲ್ಲ ನೀನಗೇಗೆ ತಿಳಿಯುತ್ತದೆ? ನಿನ್ನ ಮಾತನ್ನು ನಾವೇಕೆ ನಂಬಬೇಕು? ಎಂದು ಯಾರಾದರೂ ನನ್ನನ್ನು ಕೇಳಿದರೆ ಅದಕ್ಕೆ ನೇರವಾಗಿ ನಾನು ಹೇಳುವ ಉತ್ತರ ಏನೆಂದರೆ! ನನಗೆ ತಿಳಿದಿದೆಯಾದ್ದರಿಂದ ಹೇಳುತ್ತಿದ್ದೇನೆ. ನಿನಗೇಗೆ ತಿಳಿದಿದೆ ಎಂಬ ಪ್ರಶ್ನೆಗೆ ನಾನು ಉತ್ತರವನ್ನು ಹೇಳಿದರೂ, ನೀವು ನಂಬುವುದಿಲ್ಲ. ಆದರೂ ನಾನು ಹೇಳುವ ಮಾತುಗಳು ಗತಕಾಲದಲ್ಲಿ ನಡೆದಿವೆಯೊ ಇಲ್ಲವೊ ನೋಡಿಕೊಳ್ಳಿ. ಹಾಗೆ ನೆರವೇರಿ ಸತ್ಯವೆಂದು ರುಜುವಾದಾಗ ನನ್ನ ಮಾತುಗಳು ಶಾಸ್ತ್ರಬದ್ಧವಾದವುಗಳೆಂದು ತಿಳಿದುಕೊಳ್ಳಿ. ಈಗ ಇನ್ನೂ ಕೆಲವು ಹೊಸ ವಿಷಯಗಳನ್ನು ವಿವರಿಸಿಕೊಳ್ಳೋಣ.

ಸಾಧಾರಣ ಮನುಷ್ಯನನ್ನು ಜೀವಾತ್ಮನಾಗಿ, ಭಗವಂತನನ್ನು ಆತ್ಮವಾಗಿ, ದೇವರನ್ನು ಪರಮಾತ್ಮನಾಗಿ ಹೇಳಬಹುದು. ಭಗವಂತನು ಭೂಮಿಮೇಲೆ ಹುಟ್ಟಿದಾಗ ಆತನು ಎಲ್ಲರಿಗೂ ಸಾಧಾರಣ ಮನುಷ್ಯನಂತೆ ಕಾಣಿಸುತ್ತಾನೆ. ಅಷ್ಟೇ ಅಲ್ಲದೆ ಭಗವಂತನ ಶರೀರದಲ್ಲಿ ಸಹಾ ಜೀವಾತ್ಮ, ಆತ್ಮ, ಪರಮಾತ್ಮ ಅನ್ನುವ ಮೂರು ಆತ್ಮಗಳು ಇರುತ್ತವೆ. ಭಗವಂತನು ತನ್ನ ಜೀವನದಲ್ಲಿ ಹೆಚ್ಚಾಗಿ ಜೀವಾತ್ಮವಾಗಿ ಕಳೆಯುತ್ತಾನೆ. ಅದರಿಂದ ಜೀವಾತ್ಮರೆಲ್ಲರು ಸುಖದುಃಖಗಳನ್ನನುಭವಿಸಿದಂತೆ ಭಗವಂತನು ಸಹಾ ಸುಖದುಃಖಗಳನ್ನು ಅನುಭವಿಸುತ್ತಿರುತ್ತಾನೆ. ಭಗವಂತನ ಜೀವನದಲ್ಲಿ ಸುಮಾರು ಮೂರರಷ್ಟು ಕಾಲವು ಜೀವಾತ್ಮನಾಗಿ ಕಳೆದು ಉಳಿದ ಸ್ವಲ್ಪ ಕಾಲವು ಆತ್ಮನಾಗಿ ಕಳೆಯುತ್ತಾನೆ. ಹಾಗೆ ಆತ್ಮನಾಗಿ ಕಳೆಯುವ ಸಮಯದಲ್ಲಿ ಆತನು ಭಗವಂತನಾಗಿ ಪ್ರವರ್ತಿಸುತ್ತಾ, ಆತ್ಮಜ್ಞಾನವನ್ನು ಹೇಳುತ್ತಾನೆ. ಸಾಧಾರಣ ಮನುಷ್ಯನಾಗಿ, ಜೀವಾತ್ಮನಾಗಿ

ಸುಮಾರು ಮೂರರಷ್ಟು ಕಾಲವೆಂದು ಇಲ್ಲಿ ಹೇಳಿದಂತೆ ಖಚ್ಚಿತವಾಗಿ ಅಲ್ಲದೆ ಅವಶ್ಯಕತೆಯನ್ನನುಸರಿಸಿ ಸ್ವಲ್ಪ ಹೆಚ್ಚಾಗಿ ಇರಬಹುದು. ಅಥವಾ ಸ್ವಲ್ಪ ಕಡಿಮೆ ಇರಬಹುದು. ಹಾಗೆಯೇ ಭಗವಂತನಾಗಿ ಜೀವಿಸುವುದು ಸಹಾ ಆತನ ಜೀವನದಲ್ಲಿ ಅಗತ್ಯವನ್ನನುಸರಿಸಿ ಇರುತ್ತದೆ. ಮನುಷ್ಯನ ಜೀವನ ಮೊದಲು ಕಳೆದುಹೋಗಿ ನಂತರ ಭಗವಂತನ ಜೀವನ ಕಳೆಯುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಚಿಕ್ಕವಯಸ್ಸಿನಿಂದಲೇ ಯಾವುದು ಯಾವಾಗ ಕಳೆಯುತ್ತದೊ ಹೇಳುವುದಕ್ಕೆ ಸಾಧ್ಯವಿಲ್ಲ. ಉದಾಹರಣೆಗೆ ಒಂದು ದಿನದಲ್ಲಿ ನಾಲ್ಕುಗಂಟೆಗಳು ಮನುಷ್ಯನಾಗಿದ್ದು ಜೀವಾತ್ಮನಾಗಿ ಕಷ್ಟಸುಖಗಳನ್ನು ಅನುಭವಿಸಿದವನು, ನಂತರ ಒಂದು ಗಂಟೆಸಮಯ ಆತ್ಮಪಾತ್ರದಲ್ಲಿರುತ್ತಾ ಭಗವಂತನಾಗಿ ಚಲಾವಣೆಯಾ ಗುತ್ತಾ, ಆ ಸಮಯದಲ್ಲಿ ಆತ್ಮಜ್ಞಾನವನ್ನು ಬೋಧಿಸಿ ಮತ್ತೆ ತಕ್ಷಣ ಜೀವಾತ್ಮನಾಗಿ ಚಲಾವಣೆಯಾಗುತ್ತಾನೆ. ಹೀಗೆ ಜೀವನದಲ್ಲಿ ಆತ್ಮಪಾತ್ರವನ್ನು ಯಾವಾಗದರೂ, ಎಷ್ಟು ಕಾಲವಾದರೂ ಅವಶ್ಯಕತೆಯನ್ನನುಸರಿಸಿ ಪೋಷಿಸುತ್ತಾನೆ. ಭಗವಂತನಾಗಿ ಹುಟ್ಟಿದವನು ತನ್ನ ಜೀವನಕಾಲದಲ್ಲಿ ಯಾವ ಪಾತ್ರವನ್ನು ಯಾವಾಗ ಪೋಷಿಸುತ್ತಾನೊ, ಎಷ್ಟು ಕಾಲ ಪೋಷಿಸುತ್ತಾನೋ ಖಚ್ಚಿತವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಭೂಮಿಮೇಲೆ ಯಾರಿಗೂ ತಿಳಿಯದ ಮತ್ತೊಂದು ವಿಚಿತ್ರವೆನೆಂದರೆ! ಭಗವಂತನು ತನ್ನ ಜೀವನದಲ್ಲಿ ಹೆಚ್ಚು ಕಾಲ ಜೀವಾತ್ಮನಾಗಿ, ಸ್ವಲ್ಪ ಕಾಲ ಆತ್ಮನಾಗಿ ಚಲಾವಣೆ ಆಗುತ್ತಾ, ಜೀವನದಲ್ಲಿ ಒಂದುಬಾರಿಯಾಗಲಿ, ಎರಡು ಬಾರಿಯಾಗಲಿ, ಅವಶ್ಯಕತೆಯನ್ನನುಸರಿಸಿ ಒಂದು ನಿಮಿಷವಾಗಲಿ, ಎರಡು ನಿಮಿಷಗಳಾಗಲಿ ಅದಕ್ಕಿಂತ ಹೆಚ್ಚುಕಾಲವಾಗಲಿ ಪರಮಾತ್ಮನಾಗಿ ಬದಲಾಗಿಹೋ ಗುತ್ತಾನೆ. ಭಗವಂತನ ಜೀವನದಲ್ಲಿ ಮೂರನೆ ಆತ್ಮನಾಗಿ (ಪರಮಾತ್ಮನಾಗಿ) ಬದಲಾಗಬಹುದು, ಅಥವಾ ಬದಲಾಗದಿರಬಹುದು. ಅದೂ ಅವಶ್ಯಕತೆಯನ್ನನು ಸರಿಯೇ ಆಗಲಿ, ತಪ್ಪದೆ ಎಂದು ಹೇಳಲಾರೆವು. ಭಗವಂತನು ಜೀವಾತ್ಮನಾಗಿರು ವಾಗ ಕಷ್ಟಸುಖಗಳನ್ನು ಅನುಭವಿಸಿದವನು ಆತ್ಮನಾಗಿರುವಾಗ ಆತ್ಮಜ್ಞಾನವನ್ನು ಹೇಳುತ್ತಾನೆ, ಒಂದುವೇಳೆ ಯಾವಾಗಾದರೂ ಭಗವಂತನ ಶರೀರದಲ್ಲಿನ ಆತ್ಮ ಪರಮಾತ್ಮನಾಗಿ ಚಲಾವಣೆ ಆದರೆ, ಅದು ಅಧಿಕಾರಪೂರ್ವಕವಾಗಿ ಇರುತ್ತದೆ.

ಪ್ರಕೃತಿಯನ್ನೇ ಶಾಸಿಸುವುದಾಗಿರುತ್ತದೆ. ಭಗವಂತನ ಶರೀರದಲ್ಲಿರುವ ಆತ್ಮ ಮೂರನೆ ಆತ್ಮನಾಗಿ ಅಂದರೆ ಪರಮಾತ್ಮನಾಗಿ ಬದಲಾಗಬಹುದು, ಅಥವಾ ಅಂತಹ ಅವಶ್ಯಕತೆಯಿಲ್ಲದಿರುವಾಗ ಪರಮಾತ್ಮನಾಗಿ ಬದಲಾಗದಿರಬಹುದು.

ಇಲ್ಲಿ ತಿಳಿವಳಿಕೆಯುಳ್ಳವರು ಯಾರಾದರೂ ನನ್ನನ್ನು ಒಂದು ಪ್ರಶ್ನೆಹಾಕಬಹುದು, ಅದೇನೆಂದರೆ! ಮೊದಲು ನೀವೆ ಒಂದುಮಾತನ್ನು ಹೇಳಿ ಇದನ್ನು ಮರೆಯಬಾರದೆಂದು ಸಹ ಹೇಳಿದ್ದೀರ. ದೇವರು ರೂಪ, ನಾಮ, ಕ್ರಿಯಾರಹಿತನು ಅನ್ನುವುದು ಮೊದಲು ನೀವು ಹೇಳಿದಮಾತು. ಆ ಮಾತಿನ ಪ್ರಕಾರ ದೇವರು ಕ್ರಿಯಾರಹಿತನು ಅಂದರೆ ಕೆಲಸ ಮಾಡುವುದಿಲ್ಲ ಅನ್ನುವಮಾತಿಗೆ ವಿರುದ್ಧವಾಗಿ ಭಗವಂತನ ಶರೀರದಲ್ಲಿ ಪರಮಾತ್ಮ (ದೇವರು) ಕೆಲವು ಸಮಯಗಳಲ್ಲಿ ಇರುತ್ತಾನೆಂದು, ಮಾತನಾಡುತ್ತಾನೆಂದು, ಆ ಮಾತುಗಳು ಅಧಿಕಾರಪೂರ್ವಕವಾಗಿ ಇರುತ್ತವೆಂದು, ಪ್ರಕೃತಿಯನ್ನೆ ಶಾಶಿಸುವವಾಗಿ ಇರುತ್ತವೆಂದು ಹೇಳುತ್ತಿದ್ದೀರಿ ಅಲ್ಲವೇ! ಅದು ಸಾಧ್ಯವಾ? ಹಾಗಾದರೆ ನೀವು ಹೇಳಿದ ದೇವರ ಸೂತ್ರಕ್ಕೇ ಭಂಗ ಏರ್ಪಡುತ್ತದೆ ಅಲ್ಲವೇ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನೀವು ಜ್ಞಾಪಕಶಕ್ತಿ ಇರುವವರಾಗಿ ಜಾಣ್ಮೆಯಿಂದ ಪ್ರಶ್ನಿಸಿದರೂ, ನಾವು ತಿಳಿವಳಿಕೆ ಇಲ್ಲದವರಾಗೆ ಉತ್ತರ ಹೇಳುತ್ತಿಲ್ಲ ಅಲ್ಲವೇ! ಈಗ ನಮ್ಮ ಉತ್ತರವನ್ನು ನೋಡಿರಿ. ಒಬ್ಬ ಮನುಷ್ಯ ತಾನು ಪುರುಷನಾಗಿರುವು ದರಿಂದ ಸಮಾಜದಲ್ಲಿ ಪುರುಷನಾಗಿ ಚಲಾವಣೆಯಾಗುತ್ತಾನೆ. ಪುರುಷನಾದ ಆತನು ತನ್ನ ಮೇಲಿನ ವೇಷವನ್ನು ಬದಲಿಸಿಕೊಂಡು ನಪುಂಸಕನಾಗಿ ಕಾಣಿಸಬಹುದು. ವೇಷವನ್ನು ಬದಲಾಯಿಸಿ ನೋಡುವವರಿಗೆ ನಪುಂಸಕನಾಗಿ ಕಾಣಿಸಿದಷ್ಟುಮಾತ್ರಕ್ಕೆ ಆತನು ಪೂರ್ತಿಯಾಗಿ ನಪುಂಸಕನು ಅಲ್ಲ ಅಲ್ಲವೇ! ಕಾಣಿಸುವುದರಲ್ಲಿ ನೋಡುವವರಿಗೆ ನಪುಂಸಕನನ್ನು ನೋಡಿದ ಅನುಭೂತಿ ಬಂದರೂ, ನಪುಂಸಕನಾಗಿ ಕಾಣಿಸುವವನು ವಾಸ್ತವಕ್ಕೆ ಪುಂಸಕನೇ (ಪುರುಷನೆ). ಹಾಗೆಯೇ ಅದೇ ಪುರುಷನು ಸ್ತ್ರೀವೇಷವನ್ನು ಧರಿಸಿದಾಗ ತಾನು ಸ್ತ್ರೀಯಾಗಿ ಎಲ್ಲರಿಗೂ ಅರ್ಥವಾಗುವುದಕ್ಕೆ ಕೆಲವು ಮಾತುಗಳನ್ನು ಮಾತನಾಡಬೇಕಾಗಿ

ಬರುತ್ತದೆ. ಆಗ ಮೇಲಿನ ವೇಷವನ್ನೇ ಬದಲಾಯಿಸಿಕೊಳ್ಳುವುದಲ್ಲದೆ, ಒಳಗಿನ ಮನೋಭಾವವನ್ನು ಸಹಾ ಬದಲಿಸಿಕೊಂಡು ತಾನು ಸ್ತ್ರೀಯೆಂಬ ಭಾವದಿಂದಲೇ ಮಾತನಾಡುತ್ತಾನೆ. ಆಗ ಎದುರಿಗಿರುವವನು ನಿಜವಾಗಲು ಸ್ತ್ರೀಯೊಂದಿಗೆ ಮಾತನಾಡಿದಂತೆ ಅನುಭವವನ್ನು ಕೆಲವು ಅನುಭೂತಿಗಳನ್ನು ಪಡೆಯುತ್ತಾನೆ. ಹೊರಗೆ ಇತರರು ಸ್ತ್ರೀಯನ್ನು ನೋಡಿದಷ್ಟು ಸಂತೋಷವನ್ನು ಹೊಂದಿದರೂ, ಸ್ತ್ರೀಯಾಗಿ ಕಾಣಿಸುವವನು, ಮಾತನಾಡುವವನು ನಿಜವಾಗಲು ಸ್ತ್ರೀ ಅಲ್ಲತಾನೆ! ಆತನು ಪುರುಷನೇ ತಾನೆ! ಅದೇ ವಿಧಾನದ ಪ್ರಕಾರವೇ ಭಗವಂತನು ಭೂಮಿಮೇಲೆ ಶರೀರದಿಂದ ಹುಟ್ಟಿದಾಗ ಆತನ ಶರೀರದಲ್ಲಿ ಜೀವಾತ್ಮ ಇರುವುದಿಲ್ಲ. ಆ ಶರೀರದಲ್ಲಿ ಆತ್ಮ ಒಂದೇ ಇರುತ್ತದೆ. ಎಲ್ಲರ ಶರೀರದಲ್ಲಿರುವ ಆತ್ಮವೇ ಎಲ್ಲಾ ಕೆಲಸಗಳು ಮಾಡುವಂತೆ, ಭಗವಂತನ ಶರೀರದಲ್ಲಿರುವ ಆತ್ಮ ಸಹಾ ಎಲ್ಲಾ ಕಾರ್ಯಗಳನ್ನು ಮಾಡುತ್ತಿದೆ. ಆದ್ದರಿಂದ ಭಗವಂತನನ್ನು ಯಾರೂ ಗುರುತಿಸುವುದಕ್ಕೆ ಎಷ್ಟುಮಾತ್ರ ಸಾಧ್ಯವಾಗುವುದಿಲ್ಲ. ಸಾಧಾರಣ ಮನುಷ್ಯನಂತಿರುವ ಭಗವಂತನ ಶರೀರದಲ್ಲಿ ಜೀವಾತ್ಮ ಇಲ್ಲದಿದ್ದರೂ, ಜೀವಿಯಂತೆ ಸುಖದುಃಖಗಳನ್ನು ಅನುಭವಿಸುತ್ತಾ, ಜೀವಿಯಪಾತ್ರವನ್ನು ಆತ್ಮ ಪೋಷಿಸುತ್ತಿದೆ. ಒಬ್ಬನು ಒಂದು ಪಾತ್ರವನ್ನು ಪೋಷಿಸಿದಷ್ಟುಮಾತ್ರಕ್ಕೆ ಆತನು ಮತ್ತೊಬ್ಬನು ಅಲ್ಲತಾನೆ! ಹಾಗೆಯೇ ಜೀವಾತ್ಮನಾಗಿ ನಟಿಸಿದಷ್ಟು ಮಾತ್ರಕ್ಕೆ ಆತ್ಮ, ಜೀವಾತ್ಮ ಅಲ್ಲತಾನೆ!

ಸಾಧಾರಣ ಮನುಷ್ಯನ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎಂದು ಮೂರು ಆತ್ಮಗಳು ಇವೆ. ಭಗವಂತನಾಗಿ ಹುಟ್ಟಿದ ಮನುಷ್ಯನ ಶರೀರದಲ್ಲಿ ಆತ್ಮ ಪರಮಾತ್ಮಗಳು ಎರಡು ಮಾತ್ರ ಇವೆ, ಜೀವಾತ್ಮ ಅನ್ನುವುದು ಭಗವಂತನ ಶರೀರದಲ್ಲಿ ಇರುವುದಿಲ್ಲ. ಭಗವಂತನ ಶರೀರದಲ್ಲಿ ಆತ್ಮ, ಶರೀರದಲ್ಲಿ ಇಲ್ಲದ ಜೀವಾತ್ಮನಾಗಿ, ಇರುವ ಪರಮಾತ್ಮನಾಗಿ ನಟಿಸುತ್ತಿದೆ. ಯಾವಾಗ ಜೀವಾತ್ಮ ಪಾತ್ರವನ್ನು ಪೋಷಿಸಬೇಕೊ ಆಗ ಜೀವಾತ್ಮನಾಗಿ, ಯಾವಾಗ ಪರಮಾತ್ಮ ಪಾತ್ರವನ್ನು ಪೋಷಿಸಬೇಕೊ ಆಗ ಪರಮಾತ್ಮನಾಗಿ ನಟಿಸುವುದಲ್ಲದೆ, ಅವರಿಬ್ಬರ ಅಗತ್ಯ ಇಲ್ಲದಿರುವಾಗ ಆತ್ಮನಾಗಿಯೇ ತನ್ನ ವಿಧಿಯನ್ನು ತಾನು ವರ್ತಿಸುತ್ತಿದೆ.

ಭಗವಂತನ ಶರೀರದಲ್ಲಿನ ಆತ್ಮ ಜೀವಾತ್ಮ, ಪರಮಾತ್ಮ ಪಾತ್ರಗಳನ್ನು ಪೋಷಿಸಿದಷ್ಟು ಮಾತ್ರಕ್ಕೆ ಆತ್ಮವನ್ನು ಜೀವಾತ್ಮ ಎಂದಾಗಲಿ, ಆತ್ಮನನ್ನು ಪರಮಾತ್ಮ ಎಂದಾಗಲಿ ಹೇಳಿಲಾರೆವು ಅಲ್ಲವೇ! ಆತ್ಮ ಪರಮಾತ್ಮನಾಗಿ ನಟಿಸಿದಾಗ ಅದೇ ಆ ಘನತೆಯಲ್ಲಿ ಹೊರಗಿನ ಕೆಲಸ ನಡೆದುಹೋಗುತ್ತಿದೆ. ಹಾಗೆ ಆದಾಗ ದೇವರು (ಪರಮಾತ್ಮ) ಮಾಡಲಿಲ್ಲ ಅಲ್ಲವೇ! ಆ ಕೆಲಸವನ್ನು ಮಾಡಿರುವುದು ಪರಮಾತ್ಮ ವೇಷದಲ್ಲಿರುವ (ಪಾತ್ರದಲ್ಲಿರುವ) ಆತ್ಮಯೆಂದು, ದೇವರು ಅಲ್ಲವೆಂದು ತಿಳಿಯಬೇಕು. ಭಗವಂತನು ಯಾವ ಯುಗದಲ್ಲಿ ಹುಟ್ಟಿದರೂ, ಯಾವಾಗ ಹುಟ್ಟಿದರೂ ಆತನು ಜೀವಾತ್ಮ ಅಲ್ಲ. ಆತ್ಮ ಪರಮಾತ್ಮರೊಂದಿಗೆ ಬರುವ ಶರೀರವನ್ನು ಭಗವಂತನು ಅನ್ನಬಹುದು. ಭಗವಂತನು ದೇವರಲ್ಲ, ಆದರೂ ದೇವರಂತೆ ಭಗವಂತನು ಕೆಲಸ ಮಾಡುತ್ತಿದ್ದಾನೆ. ಹಾಗೆಯೇ ಭಗವಂತನು ಜೀವಾತ್ಮನಲ್ಲ, ಆದರೂ ಜೀವಿಯಂತೆ ಕರ್ಮಗಳನ್ನು ಅನುಭವಿಸುತ್ತಿದ್ದಾನೆ. ಭಗವಂತನು ಜೀವಾತ್ಮ, ಪರಮಾತ್ಮ ಅಲ್ಲದ ಮಧ್ಯದಲ್ಲಿನ ಆತ್ಮವಾಗಿರುವುದರಿಂದ ಆತನಿಗೆ ಯಾವ ಕರ್ಮಗಳೂ ಅಂಟುವುದಿಲ್ಲ.

ಭಗವಂತನ ಶರೀರದಲ್ಲಿನ ಆತ್ಮ ಒಂದುಸಲ ಜೀವಾತ್ಮನಾಗಿ, ಮತ್ತೊಂದು ಸಲ ದೇವರಾಗಿ ನಟಿಸುತ್ತಾ, ಉಳಿದ ಸಮಯಗಳಲ್ಲಿ ಆತ್ಮನಾಗಿಯೇ ಇದ್ದು ತನ್ನ ಕೆಲಸವನ್ನು ತಾನು ಮಾಡುತ್ತಿದೆ. ಆದ್ದರಿಂದ ಭಗವಂತನಾದ ಕೃಷ್ಣನು ಈಕಡೆ ದೇವರೂ ಅಲ್ಲ, ಆಕಡೆ ಮನುಷ್ಯನು ಅಲ್ಲ. ದೇವರು ಮಾಡಲಾರದ ಕೆಲಸವನ್ನು ಮಾರುವೇಷದಲ್ಲಿರುವ ದೇವರಾಗಿ, ಮನುಷ್ಯ ಮಾಡಲಾರದ ಕೆಲಸಗಳನ್ನು ಮಾರುವೇಷದಲ್ಲಿರುವ ಮನುಷ್ಯನಾಗಿ ಮಾಡುತ್ತಾನೆ. ದೇವರ ಜ್ಞಾನ ಯಾವ ಮನುಷ್ಯನಿಗು ತಿಳಿಯದೆಂದು ಖುರ್‌ಆನ್ ಗ್ರಂಥದಲ್ಲಿ 3ನೇ ಸುರಾ 7ನೇ ಆಯತ್‌ನಲ್ಲಿ ಹೇಳಿರುವ ವಾಕ್ಯದ ಪ್ರಕಾರ ಇಲ್ಲಿ ದೇವರ ವಾಕ್ಯ ಮನುಷ್ಯನಿಗೆ ತಿಳಿದಿದೆ, ಮಾರುವೇಷದಲ್ಲಿರುವ ಭಗವಂತನಿಗೆ ತಿಳಿದಿದೆಯೆಂದು ಹೇಳುತ್ತಿದ್ದೇವೆ. ಭಗವಂತನಾದ ಮನುಷ್ಯ ಹೇಳಿದರೆ ಬುದ್ಧಿ ಶ್ರದ್ಧೆ ಇರುವವರು ಅದನ್ನು ಗ್ರಹಿಸುತ್ತಾರೆ ಎಂದು ಅದೇ ಸುರಾ, ಅದೇ ಆಯತ್‌ನಲ್ಲಿ ಹೇಳಲಾಗಿದೆ.

ಬುದ್ಧಿ ಶ್ರದ್ಧೆ ಇರುವ ಮನುಷ್ಯರು ದೇವರ ಜ್ಞಾನವನ್ನು ಗ್ರಹಿಸುವುದಕ್ಕೆ ಅವರಿಗೆ ಹೇಳುವವನಿರುವಾಗಲೇ ಅಲ್ಲವೇ! ಅವರು ತಿಳಿಯುವುದು. ಆದ್ದರಿಂದ ಸೃಷ್ಟ್ಯಾದಿಯಲ್ಲಿಯೇ ದೇವರು ತಾನು ಹೇಳದಿದ್ದರೂ ತನ್ನ ಜ್ಞಾನವನ್ನು ಪ್ರಜೆಗಳಿಗೆ ತಿಳಿಸುವುದಕ್ಕೆ ಭಗವಂತನೆಂಬ ಪಾತ್ರವನ್ನು ತಯಾರುಮಾಡಿದ್ದಾನೆ. ಭಗವಂತನು ದೇವರಿಗು ಮನುಷ್ಯನಿಗು ಮಧ್ಯವರ್ತಿಯಂತಹವನು. ಆದ್ದರಿಂದ ಭಗವಂತನನ್ನು ಮನುಷ್ಯ ಎಂದಾಗಲಿ, ದೇವರೆಂದಾಗಲಿ ಹೇಳಬಾರದು. ಭಗವಂತನಿಗೆ ಕರ್ಮ ಇರುವುದಿಲ್ಲ. ಜೀವಿಗೆ ಮಾತ್ರವೇ ಕರ್ಮ ಅನ್ನುವುದು ಇರುತ್ತದೆ. ಕರ್ಮ ಇಲ್ಲದಿರುವವನು ಭಗವಂತನು. ಆದ್ದರಿಂದ ಆತನಿಗೆ ಜಾತಕ (ಜಾಫತಕ) ಇರುವುದಿಲ್ಲ. ಕರ್ಮವಿಲ್ಲದ ಭಗವಂತನು ಭೂಮಿಮೇಲೆ ಜೀವಾತ್ಮನಾಗಿ ಏನು ಮಾಡಬೇಕೋ, ಏನು ಅನುಭವಿಸಬೇಕೊ ಮೊದಲೇ ನಿರ್ಣಯಿಸಿಕೊಂಡು ಬರುತ್ತಾನೆ. ಹಾಗೆ ತನ್ನ ನಿರ್ಣಯವಾದಂತೆ ತಾನು ಪ್ರಪಂಚದಲ್ಲಿ ನಡೆದುಕೊಳ್ಳುವು ದರಿಂದ, ಆತನನ್ನು ನೋಡಿದವರ್‍ಯಾರಾದರೂ ಮನುಷ್ಯನಂತೆ ಲೆಕ್ಕಿಸುತ್ತಾರಾಗಲಿ, ಭಗವಂತನೆಂದು ಯಾರೂ ಗುರುತಿಸಲಾರರು. ಒಂದುವೇಳೆ ಯಾರಾದರೂ ತಿಳಿದು ಈತನು ಭಗವಂತನೆಂದು ಹೇಳಿದರೆ, ಅವನನ್ನು ಬುದ್ಧಿ ಭ್ರಮಿಸಿದವನಾಗಿ ಲೆಕ್ಕಿಸಿ ಉಳಿದ ಪ್ರಜೆಗಳು ಸಾನುಭೂತಿಯಾಗಿ ನೋಡುತ್ತಾರೆ.

ಮನುಷ್ಯನ ಶರೀರದಲ್ಲಿ ಮೂರು ಆತ್ಮಗಳಿವೆಯೆಂದು ಮೂರು ಮತದವರಿಗೆ ತಿಳಿಯದು. ಎಲ್ಲರಿಗೂ ತಿಳಿಯುವುದಕ್ಕೆ ಗ್ರಂಥರೂಪವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಮೂವರು ಪುರುಷರನ್ನು ಕುರಿತು ಕ್ಷರ, ಅಕ್ಷರ, ಪುರುಷೋತ್ತಮ ಎಂದು ಹೇಳಿದ್ದಾರೆ. ಕ್ಷರ ಪುರುಷನೆಂದರೆ ಜೀವಿಯೆಂದು (ಜೀವಾತ್ಮನೆಂದು), ಅಕ್ಷರ ಪುರುಷನೆಂದರೆ ಆತ್ಮಯೆಂದು, ಪುರುಷೋತ್ತಮನೆಂದರೆ ಪರಮಾತ್ಮ ಯೆಂದು ಅಲ್ಲಿಯೇ ತಿಳಿದಿದೆ. ಭಗವದ್ಗೀತೆಯಲ್ಲಿ 5000 ವರ್ಷಗಳ ಪೂರ್ವ ದಲ್ಲಿಯೇ ಹೇಳಿದ ಅಕ್ಷರ ಪುರುಷನು ಅನ್ನುವವನು ಯಾರೊ ಮುಖ್ಯವಾದ ಆಧ್ಯಾತ್ಮಿಕತಜ್ಞರಿಗೂ ಸಹಾ ತಿಳಿಯದು. ಅಕ್ಷರ ಪುರುಷನೆಂದರೆ ಶರೀರದಲ್ಲಿ

ಆತ್ಮಯೆಂದು ಯಾರಿಗು ತಿಳಿಯದಂತೆಹೋಗಿದೆ. ಆತ್ಮ ಅನ್ನುವುದು ಎಲ್ಲರ ಶರೀರಗಳಲ್ಲಿ ಮುಖ್ಯವಾದ ಪಾತ್ರವಾಗಿದ್ದೂ ಶರೀರವನ್ನು ಆಡಿಸುತ್ತಿದೆಯೆಂದು, ಆತ್ಮವೇ ಭಗವಂತನ ಶರೀರದಲ್ಲಿ ಭಗವಂತನಾಗಿ ಇದೆಯೆಂದು ಯಾರಿಗೂ ತಿಳಿಯದು. ಆತ್ಮವೇ ಮನುಷ್ಯನಿಗು ದೇವರಿಗು ಮಧ್ಯದಲ್ಲಿದ್ದು ಸ್ವಲ್ಪ ಸಮಯ ದೇವರಾಗಿ, ಸ್ವಲ್ಪ ಸಮಯ ಜೀವಿಯಾಗಿ, ಸ್ವಲ್ಪ ಸಮಯ ಯಾರಿಗೂ ತಿಳಿಯದ ಆತ್ಮನಾಗಿ ಭಗವಂತನ ಶರೀರದಲ್ಲಿ ಕಾಲ ಕಳೆಯುತ್ತಿದೆ. ಇಲ್ಲಿಯವರೆಗು ನಾವು ನೋಡಿರುವುದರಲ್ಲಿ ಆಧ್ಯಾತ್ಮಿತಜ್ಞರಾದವರು, ಸ್ವಾಮೀಜಿಗಳೆಂದು ಕರೆಸಿಕೊಳ್ಳು ವವರು, ಗುರುಗಳೆಂದು ಹೆಸರುವಾಸಿಯಾದವರು, ಭಗವಂತನಿಗು ದೇವರಿಗು ವ್ಯತ್ಯಾಸ ತಿಳಿಯದೆ ಇಬ್ಬರೂ ಒಬ್ಬರೇ ಅಲ್ಲವೆ! ಎಂದು ಅನ್ನುತ್ತಿದ್ದಾರೆ. ಈಗ ಹೇಳಿದ ವಿಧಾನದ ಪ್ರಕಾರ ಭಗವಂತನೆಂದರೆ ಯಾರೊ ತಿಳಿಯದಿದ್ದರೂ, ಹೇಗಿರುತ್ತಾನೋ ಎಂಬ ವಿವರವಾದರೂ ತಿಳಿದಿದೆ ಎಂದು ಕೊಳ್ಳುತ್ತೇನೆ. ಆದರೂ ಈಗಲೂ ನಮ್ಮ ಮಾತನ್ನು ನಂಬದವರು ಬಹಳಜನ ಇರುವುದಲ್ಲದೆ, ನಿನ್ನ ಮಾತಿಗೆ ಶಾಸ್ತ್ರಪ್ರಮಾಣವೇನು ಎಂದು ಕೇಳಬಲ್ಲರು. ಅದಕ್ಕೆ ನಡೆದ ಸಂಘಟನೆಗಳನ್ನು ಚರಿತ್ರೆಯಲ್ಲಿ ತೋರಿಸುತ್ತಾ ವಿವರಿಸುತ್ತೇವೆ ಸ್ವಲ್ಪ ಸಹನೆಯಿಂದ ನೋಡಿರಿ.

ಸೃಷ್ಠಿ ಆದಿಯಿಂದ ಭಗವಂತನು ಕೆಲವುಬಾರಿ ಹುಟ್ಟಿ ದೇವರ ಜ್ಞಾನವನ್ನು ಧರ್ಮಗಳನ್ನು ತಿಳಿಸಿಹೋಗಿದ್ದಾನೆಂದು ಗೊತ್ತು. ಆದರೆ ಇಂತಹ ಹೆಸರಿರುವ ವ್ಯಕ್ತಿಯೆ ಭಗವಂತನೆಂದು ಹೇಳಲಾರೆವು. ಆದರೆ ದ್ವಾಪರಯುಗ ಕೊನೆಯಲ್ಲಿ ಸುಮಾರು ಐದುಸಾವಿರ ವರ್ಷಗಳ ಪೂರ್ವದಲ್ಲಿ ಶ್ರೀಕೃಷ್ಣನೆಂಬ ಹೆಸರಿನಿಂದ ಭಗವಂತನು ಬಂದಿದ್ದಾನೆಂದು ಹೇಳುತ್ತಿದ್ದೇವೆ. ಆದರೂ ಕೃಷ್ಣನನ್ನು ಭಗವಂತನಾಗಿ ಬಹಳಜನ ಒಪ್ಪಿಕೊಳ್ಳುತ್ತಿಲ್ಲ. ಭಗವದ್ಗೀತೆಯಲ್ಲಿ ದೇವರ ಜ್ಞಾನವನ್ನು ಕೃಷ್ಣನು ಭಗವಂತನಾಗಿ ಹೇಳಿದ್ದಾನೆ ಎಂದು ನಾವಂದರೆ, ನಮ್ಮ ಮಾತುಗಳನ್ನು ಖಂಡಿಸಿ, ಅರ್ಜುನನು ಯುದ್ಧ ಮಾಡುವುದಿಲ್ಲವೆಂದು ಮೊಂಡಿಗೆಹಾಕಿದರೆ, ಆತನನ್ನು ಪ್ರೇರೇಪಿಸಿ ಯುದ್ಧ ಮಾಡಿಸುವುದಕ್ಕೆ ಅವಶ್ಯಕತೆಯನ್ನನುಸರಿಸಿ ಹೇಳಿದ ಮಾತುಗಳು ಹೊರತು ಅದರಲ್ಲಿ ಜ್ಞಾನವೇನಿದೆ ಅನ್ನುವವರು ಸಹಾ ಇದ್ದಾರೆ.

ಕೃಷ್ಣನು ಭಗವಂತನೆಂಬ ವಿಷಯ ಯಾರಿಗೆ ತಿಳಿದರೂ, ತಿಳಿಯದೆಹೋದರೂ ಆತನು ಭಗವಂತನೆ ಎಂದು ನಮಗೆ ತಿಳಿದಿದೆ. ಭಗವಂತನು ಮನುಷ್ಯನಲ್ಲ, ಹಾಗೆ ದೇವರು ಅಲ್ಲ ಎಂದು ಹೇಳುವುದಕ್ಕೂ, ಹಾಗೆ ಭಗವಂತನು ಮನುಷ್ಯನಂತೆ ಇರುತ್ತಾನೆ ಮತ್ತು ದೇವರಂತೆ ಇರುತ್ತಾನೆ ಅನ್ನುವುದಕ್ಕೆ ಉದಾಹರಣೆಯಾಗಿ ಕೃಷ್ಣನ ಚರಿತ್ರೆಯನ್ನು ಹೇಳಿಕೊಳ್ಳಬಹುದು. ಕೃಷ್ಣನು ಜೀವಿಯಾಗಿ ಹೆಚ್ಚಾಗಿ ಸುಖಗಳನ್ನು, ಕಡಿಮೆ ದುಃಖಗಳನ್ನು ಅನುಭವಿಸಿದ್ದಾನೆ. ಕೃಷ್ಣನ ಜೀವನ ಸುಮಾರು ಶೇ.80 ರಿಂದ 90 ರಷ್ಟು ಜೀವಿಯಾಗಿಯೇ ಕಳೆದು ಹೋಗಿದೆ. 120 ವರ್ಷಗಳ ಆತನ ಜೀವಿತ ಕಾಲದಲ್ಲಿ 90 ವರ್ಷಗಳ ವಯಸ್ಸಿನವರೆಗೂ ಎಲ್ಲಿಯೂ ಆತನು ಜ್ಞಾನಿಯಾಗಿ ಸಹಾ ಕಾಣಿಸಲಿಲ್ಲ. 90 ವರ್ಷಗಳ ನಂತರ ಕೃಷ್ಣನು ತನ್ನ ಬೋಧನೆಯನ್ನು ತಿಳಿಸಿದ್ದಾನೆ. ಅದರಲ್ಲಿ ಕೃಷ್ಣನು ತನ್ನನ್ನು ಆತ್ಮವಾಗಿ ಕೆಲವುಕಡೆ ಹೇಳಿಕೊಳ್ಳುವುದೇ ಅಲ್ಲದೆ, ಪರಮಾತ್ಮನಾಗಿ ಬಹಳಕಡೆ ಹೇಳುವುದು ನಡೆದಿದೆ. ಒಂದುಸಲ ಜರಾಸಂಧನ ಕೈಯಲ್ಲಿ ಸೋತುಹೋಗಿ, ದೊರೆತರೆ ಸಾಯಿಸುತ್ತಾನೆಂಬ ಪ್ರಾಣಭಯದಿಂದ ಮಧುರೆಯನ್ನು ಬಿಟ್ಟು ದ್ವಾರಕಕ್ಕೆ ಹೋದ ಕೃಷ್ಣನನ್ನು ಜೀವಿಯಾಗಿಯೇ ಹೇಳಬೇಕು. ಯಾರಿಗೂ ತಿಳಿಯದ ಆತ್ಮ ಜ್ಞಾನವನ್ನು ಯುದ್ಧಸಮಯದಲ್ಲಿ ಅರ್ಜುನನಿಗೆ ಹೇಳಿದಾಗ ಕೃಷ್ಣನನ್ನು ಆತ್ಮವಾಗಿ ಹೇಳಬೇಕು. ಅಷ್ಟೆಅಲ್ಲದೆ ಭಗವದ್ಗೀತೆ ಪ್ರತಿ ಅಧ್ಯಾಯದ ಕೊನೆಯಲ್ಲಿಯೂ, ಗೀತೆ ಕೊನೆಯಲ್ಲಿಯೂ ನಾನೇ ದೇವರು, ನನ್ನನ್ನು ಮೀರಿದ ದೇವರು ಯಾರೂ ಇಲ್ಲವೆಂದು ನನ್ನನ್ನೇ ಪೂಜಿಸು, ನನ್ನನ್ನೇ ನಮಸ್ಕರಿಸು ಎಂದು ಹೇಳಿದಾಗ ಪರಮಾತ್ಮನಾಗಿ (ದೇವರಾಗಿ) ಕೃಷ್ಣನನ್ನು ಲೆಕ್ಕಿಸಬೇಕಾಗಿ ಬಂದಿದೆ. ಕೃಷ್ಣನ ಶರೀರದಲ್ಲಿರುವುದು ಕೇವಲ ಎರಡು ಆತ್ಮಗಳೇ ಎಂದು, ಆತನ ಶರೀರದಲ್ಲಿ ಜೀವಾತ್ಮ ಇಲ್ಲವೆಂದು ತಿಳಿದುಹೋಗಿದೆ. ಭಗವದ್ಗೀತೆ ಬೋಧನೆಯಿಂದ ಗ್ರಹಿಸಿಕೊಳ್ಳುವವನು ಎಷ್ಟಾದರೂ ಗ್ರಹಿಸಿಕೊಳ್ಳಬಹುದು. ಕೃಷ್ಣನ ಶರೀರದಲ್ಲಿರುವ ಆತ್ಮ ಜೀವಾತ್ಮವಾಗಿ ಎಷ್ಟೋ ಕಾಲ ನಟಿಸಿ, ಎಲ್ಲರಿಗೂ ಸಾಧಾರಣ ಮನುಷ್ಯನಾಗಿಯೇ ಕಾಣಿಸಿದೆಯೆಂದು ತಿಳಿಯುತ್ತದೆ. ಹಾಗೆ ನಟಿಸಿ ಬಹಳ ಜನರಿಗೆ ಮನುಷ್ಯನಂತೆ ಕಾಣಿಸಿದ ಆತ್ಮ, ಒಂದುಸಮಯದಲ್ಲಿ ತಾನು

ಆತ್ಮನಾಗಿಯೇ ಇರುತ್ತಾ ಆತ್ಮಗಳ ಜ್ಞಾನವನ್ನು ಕೂಡಾ ಹೇಳಿದೆ. ಆತ್ಮ ಆತ್ಮಗಳ ಜ್ಞಾನವನ್ನು ಹೇಳುವುದೇ ಅಲ್ಲದೆ, ಕೆಲವು ಸಂದರ್ಭಗಳಲ್ಲಿ ನಾನೇ ದೇವರೆಂದು, ನಾನು ಇಂತಹವನೆಂದು, ದೇವರ ವಿಷಯವನ್ನೆಲ್ಲಾ ಹೇಳುವುದು ನಡೆದಿದೆ. ಈ ವಿಧವಾಗಿ ಕೃಷ್ಣನ ಜೀವನದಲ್ಲಿರುವ ಆತ್ಮ ಜೀವಾತ್ಮನಾಗಿ, ಪರಮಾತ್ಮನಾಗಿ ನಟಿಸುವುದೆ ಅಲ್ಲದೆ ಆತ್ಮನಾಗಿ ಹೇಳುವುದು ಸಹಾ ನಡೆದಿದೆ. ಜ್ಞಾನಹೊಂದಿ ನೋಡುವವನಿಗೆ ಕೃಷ್ಣನ ಜೀವನದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಮೂರುಪಾತ್ರಗಳು ಇವೆ.

ಭೂಮಿಮೇಲೆ ದೇವರ ವಿಷಯಗಳನ್ನು ತಿಳಿಸುವುದಕ್ಕೆ ಭಗವಂತನು ಯಾವಾಗಾದರೂ ಬರಬಹುದು. ವಿದೇಶದಲ್ಲಿ ಒಂದುಕಡೆ ಆತ್ಮ ಭಗವಂತನಾಗಿ ಬಂದಂತೆ ನನಗೆ ಅರ್ಥವಾಗಿದೆ. ನಮ್ಮ ದೇಶದಲ್ಲಿ ಹುಟ್ಟಿದ ಭಗವಂತನನ್ನು ಕುರಿತು ಹೇಳಿದರೇನೆ ಅರ್ಥಮಾಡಿಕೊಳ್ಳದವರು, ವಿದೇಶದಲ್ಲಿ ಹುಟ್ಟಿದ ಭಗವಂತನನ್ನು ಕುರಿತು ಹೇಳಿದರೆ ಕೇಳುತ್ತಾರಾ? ಕೇಳಿ ಅರ್ಥ ಮಾಡಿಕೊಳ್ಳದವರು ಅತಿವಾದಿಗಳಾಗಿ ಕೊನೆಗೆ ತೀವ್ರವಾದಿಗಳಾಗಿ, ಉಗ್ರವಾದಿಗಳಾಗಿ ಬದಲಾಗುವ ಅವಕಾಶವಿದೆ. ಆದ್ದರಿಂದ ಆ ಭಗವಂತನ ಹೆಸರು ನನಗೆ ತಿಳಿದರೂ ನಾನು ಇಲ್ಲಿ ಹೇಳುತ್ತಿಲ್ಲ. ಭಗವಂತನಾದವನು ತಾಯಿಗರ್ಭದಲ್ಲಿ ಸಜೀವವಾಗಿ ಸ್ವದೇಶದಲ್ಲಾಗಲಿ, ವಿದೇಶದಲ್ಲಾಗಲಿ, ಎಲ್ಲಿಯಾದರೂ, ಯಾವಾಗಾದರೂ ಹುಟ್ಟಬಹುದು. ಹಾಗೆ ಒಂದು ದೇಶದಲ್ಲಿ ಹುಟ್ಟಿದ ಮನುಷ್ಯನನ್ನು, ಬಡವನಾದ ಮನುಷ್ಯನನ್ನು, ನಾನು ಭಗವಂತನನ್ನಾಗಿ ಗುರುತಿಸುವುದು ನಡೆದಿದೆ. ಆ ವ್ಯಕ್ತಿ ತನ್ನ ಜೀವನದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸುವಾಗ ಆತನನ್ನು ಭಗವಂತನಾಗಿ ಗುರ್ತಿಸುವುದಕ್ಕೆ ಅವಕಾಶವೇ ಇಲ್ಲ. ಅದೇ ವ್ಯಕ್ತಿ ಯಾರಿಗೂ ತಿಳಿಯದ ಆತ್ಮವನ್ನು ಕುರಿತು ಬೋಧಿಸುವಾಗ ಆತನ ಶರೀರದಲ್ಲಿ ಇರುವುದು ಆತ್ಮವೆಂದು ಇತರರು ಹೇಳದೆಯೇ ನಮಗೆ ಅರ್ಥವಾಗಿಹೋಗಿದೆ. ಆತನ ಭಕ್ತರಾದವರು ಸಹಾ ಆತನು ಜೀವಿಗು ದೇವರಿಗು ಮಧ್ಯವರ್ತಿಯಾದ ಆತ್ಮಯೆಂದು ತಿಳಿಯಲಾರದೆ ಹೋಗಿದ್ದಾರೆ. ಆತನ ಭಕ್ತರಾದವರು ಸಹಾ ಆತನನ್ನು ದೇವರ ವಾರಸನೆಂದು ಅಂದಿದ್ದಾರಾಗಲಿ, ಕೆಲವು ಸಮಯಗಳಲ್ಲಿ ಈತನೆ ದೇವರೆಂಬ

ಭಾವನೆಯೊಳಗೆ ಅವರು ಬರಲಿಲ್ಲ. ಕೆಲವು ಸಮಯಗಳಲ್ಲಿ ದೇವರಾಗಿ ಪ್ರವರ್ತಿಸುವ ಆತ್ಮವೇ ಭಗವಂತನ ರೂಪವಾಗಿರುವ ವ್ಯಕ್ತಿ ಈತನೆಂದು ಯಾರೂ ಆತನ ಬೋಧನೆಗಳನ್ನು ಕೇಳಿದ ನಂತರ ಸಹಾ ತಿಳಿದುಕೊಳ್ಳದೆಹೋಗಿದ್ದಾರೆ. ಕೆಲವು ಸಮಯಗಳಲ್ಲಿ ನಾನೆ ಜೀವವು ಎಂದು ತನ್ನನ್ನು ಜೀವಿಯಾಗಿ, ನಾನೇ ಮಾರ್ಗವೆಂದು ಮಧ್ಯವರ್ತಿಯಾದ ತನ್ನನ್ನು ಆತ್ಮವಾಗಿ, ನಾನೇ ಗಮ್ಯವು, ನಾನೇ ಸತ್ಯವು ಎಂದು ತನ್ನನ್ನು ದೇವರಾಗಿ ಹೇಳಿಕೊಂಡಾಗ ಸಹಾ ಆತನನ್ನು ಕುರಿತು ಯಾರೂ ಅರ್ಥಮಾಡಿಕೊಳ್ಳಲಿಲ್ಲ. ನಾನು ದೇವರೇಯೆಂದು ನೀವು ತಿಳಿಯಲಾರದೆ ಹೋದರೆ, ನಿಮ್ಮ ಪಾಪಗಳಿಂದ ನೀವು ಮರಣಿಸುತ್ತೀರೆಂದು ಒಂದು ವಾಕ್ಯದಲ್ಲಿ ಹೇಳುತ್ತಾ **"ನಾನು ಆತನೇಯೆಂದು ನೀವು ವಿಶ್ವಾಶಿಸದ ಪಕ್ಷದಲ್ಲಿ, ನೀವು ನಿಮ್ಮ ಪಾಪಗಳಿಂದ ಮರಣಿಸುತ್ತೀರಾ." "ನೀವು ಕೆಳಗಿನವರು ನಾನು ಮೇಲಿರುವವನು" "ನೀವು ಈ ಲೋಕ ಸಂಬಂಧಿಗಳು ನಾನು ಈ ಲೋಕ ಸಂಬಂಧಿಕನು ಅಲ್ಲ."** ಎಂದು ಹೇಳುವುದನ್ನು ನೋಡಿದರೆ ಮೂರನೆ ಆತ್ಮವಾದ ಪರಮಾತ್ಮ ಹೇಳಿದಹಾಗೆ ಇದೆ. ಕ್ಷರ, ಅಕ್ಷರ, ಪುರುಷೋತ್ತಮ ಅನ್ನುವ ಮೂವರು ಪುರುಷರಲ್ಲಿ ಮಧ್ಯದವನಾದ ಅಕ್ಷರ ಪುರುಷನು ಭಗವಂತನ ಶರೀರದಲ್ಲಿ ಒಂದುಬಾರಿ ಕ್ಷರಪುರುಷನಾದ ಜೀವಾತ್ಮನಾಗಿ ನಟಿಸುತ್ತಾನೆ. ಮತ್ತೊಂದುಬಾರಿ ಪುರುಷೋತ್ತಮನಾದ ದೇವರಾಗಿ ನಟಿಸುತ್ತಾನೆ. ಆತ್ಮ ತನ್ನ ಕೆಲಸವನ್ನು ತಾನು ಮಾಡಿಕೊಳ್ಳುತ್ತಾ ಅಗತ್ಯಬಂದಾಗ ಜೀವಿಯಾಗಿ ಮತ್ತು ದೇವರಾಗಿ ಪ್ರವರ್ತಿಸುತ್ತಿದೆ. ಒಂದೇ ಆತ್ಮ ಜೀವಾತ್ಮನಾಗಿ, ಪರಮಾತ್ಮನಾಗಿ ನಟಿಸುವುದು ಭಗವಂತನ ಶರೀರದಲ್ಲಿ ಮಾತ್ರ ನಡೆಯುತ್ತದೆಂದು ಜ್ಞಾಪಕವಿಟ್ಟು ಕೊಳ್ಳಬೇಕು.

ಪ್ರತಿ ಮನುಷ್ಯನ ಶರೀರದಲ್ಲಿಯೂ ಮೂರು ಆತ್ಮಗಳಿರುವಾಗ, ಅವುಗಳಲ್ಲಿ ಪರಮಾತ್ಮ ಕದಲುವುದಿಲ್ಲ, ಮೆದಲುವುದಿಲ್ಲ. ಯಾವ ಕೆಲಸ ಮಾಡುವುದಿಲ್ಲ. ಪರಮಾತ್ಮ ದೇವರು ಎಲ್ಲಾರ ಶರೀರಗಳಲ್ಲಿ ಎಲ್ಲಾಕಡೆ ವ್ಯಾಪಿಸಿದ್ದರೂ ತಾನು ಇದ್ದರೂ ಇಲ್ಲದಹಾಗೆ ಇದ್ದಾನೆ. ಜೀವಾತ್ಮ ತನವರೆಗು ಬಂದಿರುವ ವಿಷಯಗಳನ್ನು ಮಾತ್ರ ಅನುಭವಿಸುವುದು ಹೊರತು ಬೇರೆ

ಕೆಲಸವನ್ನು ಮಾಡುವುದು ಅಲ್ಲ. ಇನ್ನುಹೋದರೆ ಶರೀರದೊಳಗೆ ನಡೆಯುವ ಕೆಲಸಗಳೂ, ಹೊರಗಿನ ಭಾಗಗಳಿಂದ ನಡೆಯುವ ಪೂರ್ತಿ ಕೆಲಸಗಳೆಲ್ಲವನ್ನು ಆತ್ಮವೇ ಮಾಡುತ್ತಿದೆ. ಮನುಷ್ಯನಿಗಿರುವ ನಿದ್ರೆ, ಎಚ್ಚರ, ಸ್ವಪ್ನ ಎನ್ನುವ ಮೂರು ಅವಸ್ಥೆಗಳಲ್ಲಿ ಯಾವ ತಪ್ಪಿಲ್ಲದಂತೆ, ಒಂದು ಕ್ಷಣವೂ ಸಹಾ ಸುಮ್ಮನಿರದೆ ಆತ್ಮಕೆಲಸವನ್ನು ಮಾಡುತ್ತಲೇ ಇದೆ. ಮನುಷ್ಯರೆಲ್ಲರ ಶರೀರದಲ್ಲಿ ಎಲ್ಲಾ ವೇಳೆಯಲ್ಲಿ ತನ್ನ ಕೆಲಸವನ್ನು ಮಾಡುವ ಆತ್ಮ, ಭಗವಂತನ ಶರೀರದಲ್ಲಿ ತನ್ನ ಕೆಲಸವನ್ನು ತಾನು ಮಾಡುವುದಲ್ಲದೆ, ಜೀವಾತ್ಮನಂತೆ ಒಂದುಬಾರಿ, ಪರಮಾತ್ಮನಂತೆ ಒಂದುಬಾರಿ ನಟಿಸುತ್ತಿದೆ. ಆದ್ದರಿಂದ ಮೂರು ಆತ್ಮಗಳಲ್ಲಿ ಮಧ್ಯದಲ್ಲಿರುವ ಆತ್ಮವನ್ನು ಮಾತ್ರ ನಟಿಸುವ ಆತ್ಮ (ಆಕ್ಟಿಂಗ್ ಸೊಲೆ) ಎಂದು ಅನ್ನುತ್ತಿದ್ದೇನೆ. ಜೀವಿಯಂತೆ ಆತ್ಮನಟಿಸಿದರೂ ಅದು ಹೊರಗೆ ಕಾಣಿಸದ ವಿಷಯವಾಗಿ ಇದೆ. ಅದನ್ನು ಕುರಿತು ಯಾರೂ ಹಿಡಿಸಿಕೊಳ್ಳುವುದಿಲ್ಲ. ಆ ನಟನೆಯಲ್ಲಿ ದೊಡ್ಡ ವಿಶೇಷವೇನು ಇಲ್ಲ. ಆದರೆ ಆತ್ಮ ಪರಮಾತ್ಮನಾಗಿ ನಟಿಸುವುದು ಹೊರಗೆ ಕಾಣಿಸುವ ವಿಷಯವಾಗಿ ಇದೆ. ಹಾಗೆ ನಟಿಸುವುದು ದೊಡ್ಡ ವಿಶೇಷತೆಯಿಂದ ಕೂಡಿಕೊಂಡ ವಿಷಯವಾಗಿದೆ. ಆತ್ಮ ಆತ್ಮವಾಗಿ ಯಾವಾಗ ಇರುತ್ತದೊ, ಪರಮಾತ್ಮನಾಗಿ ಯಾವಾಗ ಇರುತ್ತದೊ ಯಾರಿಗೂ ಅರ್ಥ ವಾಗುವುದಿಲ್ಲ. ಆತ್ಮದ ಅವಶ್ಯಕತೆಯನ್ನನುಸರಿಸಿ ಭಗವಂತನ ಶರೀರದಲ್ಲಿ ಪರಮಾತ್ಮನಾಗಿ ಮಾತನಾಡಬಲ್ಲನು. ಆದ್ದರಿಂದ ಪ್ರತ್ಯೇಕಿಸಿ ಆತ್ಮ ಪರಮಾತ್ಮನಾಗಿ ಮಾರ್ಪಡುತ್ತದೆಂಬಂತೆ ಗಣಿತಶಾಸ್ತ್ರದಲ್ಲಿ ಸಂಖ್ಯೆಗಳನ್ನು ಸಹಾ ಆತ್ಮಕ್ಕೆ ಗುರುತಾಗಿ ಆರನ್ನು, ಪರಮಾತ್ಮಕ್ಕೆ ಗುರುತಾಗಿ ಒಂಭತ್ತನ್ನು ಇಡುವುದು ನಡೆದಿದೆ. ಮೊದಲು ಬ್ರಹ್ಮವಿದ್ಯಾಶಾಸ್ತ್ರ ಹುಟ್ಟಿದೆ, ನಂತರ ಗಣಿತಶಾಸ್ತ್ರ ಹುಟ್ಟಿದೆ. ಆದ್ದರಿಂದ ಜೀವಾತ್ಮ, ಆತ್ಮ ಪರಮಾತ್ಮರಿಗೆ ಗುರ್ತಾಗಿ ಸಂಖ್ಯೆಗಳನ್ನುನಿರ್ಮಿಸುವುದಕ್ಕೆ ಅವಕಾಶ ಏರ್ಪಟ್ಟಿದೆ.

ಗಣಿತ ಶಾಸ್ತ್ರದಲ್ಲಿ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಸಂಖ್ಯೆಗಳನ್ನು ನಿರ್ಮಿಸುವುದು ನಡೆದಿದೆ. ಚೆನ್ನಾಗಿ ಗಮನಿಸಿದರೆ ಗಣಿತಶಾಸ್ತ್ರಕ್ಕೆ ಬುನಾದಿ

ಬ್ರಹ್ಮವಿದ್ಯಾಶಾಸ್ತ್ರವೆಂದು ಹೇಳಬಹುದು. ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಗಣಿತಶಾಸ್ತ್ರದಲ್ಲಿನ ಏಕ ಸಂಖ್ಯೆಗಳು ತಯಾರು ಮಾಡಲ್ಪಟ್ಟಿವೆ. ಏಕ ಸಂಖ್ಯೆಗಳು ಪ್ರತಿಯೊಂದು ಆಧ್ಯಾತ್ಮಿಕ ಭಾವನೆಯಿಂದ ಕೂಡಿಕೊಂಡು ನಿರ್ಮಿಸಲ್ಪಟ್ಟಿವೆ. ಆ ಸಂಖ್ಯೆಗಳು ಒಟ್ಟು ಹತ್ತು ಇವೆ. ಅದರಲ್ಲಿ ಮೊದಲು ತಯಾರು ಮಾಡಲ್ಪಟ್ಟಿರುವುದು ಸೊನ್ನೆ (0). ಗಣಿತ ಬ್ರಹ್ಮವಿದ್ಯೆಯನ್ನು ಅನುಸರಿಸುವುದರಿಂದ ಎರಡನೆ ಶಾಸ್ತ್ರವಾಗಿ ಹುಟ್ಟಿದ ಗಣಿತ ಶಾಸ್ತ್ರದಲ್ಲಿ ಮೊದಲು ಸೊನ್ನೆ ನಿರ್ಮಿಸಲ್ಪಟ್ಟಿದೆ. ಅದರ ನಂತರ 1,2,3,4,5,6,7.8.9 ಅನ್ನುವ ಸಂಖ್ಯೆಗಳು ತಯಾರು ಮಾಡಲ್ಪಟ್ಟಿವೆ. ಆದಿ ಅಂತ್ಯೆ ಎರಡೂ ದೇವರೇ ಎನ್ನುವುದೆ ಬ್ರಹ್ಮವಿದ್ಯಾ ಶಾಸ್ತ್ರವಚನ. ಈಗ ಬ್ರಹ್ಮವಿದ್ಯೆಯನ್ನು ಅನುಸರಿಸಿ ಗಣಿತ ಶಾಸ್ತ್ರದಲ್ಲಿ ಆದಿಯಲ್ಲಿರುವ ಸೊನ್ನೆ (0) ಅಂತ್ಯದಲ್ಲಿರುವ ಒಂಭತ್ತು (9) ಅನ್ನುವ ಎರಡು ಸಂಖ್ಯೆಗಳು ದೇವರ ಗುರ್ತಾಗಿ ಹೋಲಿಸಲಾಗಿದೆ, ಆದಿಯಲ್ಲಿ ದೇವರನ್ನು ಯಾವಕಡೆ ಹೋಲಿಸಲಾರೆವು, ಇಂತಹದೆಂದು ಹೇಳಲಾರೆವು, ಆತನು ಯಾವ ಊಹೆಗೂ ಸಿಗದವನು, ಎಲ್ಲದಕ್ಕೂ ಅತೀತನು, ಯಾರಿಗೂ ತಿಳಿಯದವನು, ಅಜ್ಞಾನಿಗಳಿಗೆ ಯಾವ ಬೆಲೆ ಇಲ್ಲದವನಾಗಿ ಜ್ಞಾನಿಗಳಿಗೆ ಎಷ್ಟೋ ಬೆಲೆಯುಳ್ಳವನಾಗಿರುವ ದೇವರನ್ನು ಸೊನ್ನೆಗೆ ಹೋಲಿಸುವುದರಲ್ಲಿ ಎಷ್ಟೋ ಅರ್ಥವಿದೆ. ಒಂದು ಅಂಕೆಗೆ ಎಡಗಡೆ ಎಷ್ಟು ಸೊನ್ನೆಗಳು ಇಟ್ಟರೂ ಸ್ವಲ್ಪವೂ ಬೆಲೆ ಇಲ್ಲ. ಅಂಕೆ ಅಂಕೆಯಾಗಿಯೇ ಇರುತ್ತದೆ. ಅದೇ ಅಂಕೆಗೆ ಬಲಗಡೆ ಸೊನ್ನೆಗಳನ್ನಿಟ್ಟರೆ ಅಂಕೆ ಅಂಕೆಯಾಗಿರದೆ ಎಷ್ಟೊ ಬೆಲೆಯುಳ್ಳದಾಗಿ ಬದಲಾಗುತ್ತದೆ. ಉದಾಹರಣೆಗೆ ಒಂದಕ್ಕೆ (1) ಎಡಗಡೆ ಎಷ್ಟು ಸೊನ್ನೆಗಳನ್ನಿಟ್ಟರು ಒಂದು ಒಂದಾಗಿಯೇ ಇರುತ್ತದೆ. ಅದಕ್ಕೆ ಯಾವ ಬೆಲೆ ಹೆಚ್ಚುವುದಿಲ್ಲ. ಹಾಗೆ ಒಂದಕ್ಕೆ (1) ಬಲಗಡೆ ಸೊನ್ನೆಗಳಿಟ್ಟಂತೆಲ್ಲ ಅದರ ಬೆಲೆ ಮೊದಲ ಹತ್ತರಿಂದ ನೂರರವರೆಗೂ, ನೂರರಿಂದ ಸಾವಿರದ ವರೆಗೂ, ಸಾವಿರದಿಂದ ಹತ್ತುಸಾವಿರದ ವರೆಗೂ, ಹತ್ತುಸಾವಿರದಿಂದ ಲಕ್ಷದವರೆಗೂ ಲಕ್ಷದಿಂದ ಹತ್ತು ಲಕ್ಷದವರೆಗೂ, ಹತ್ತು ಲಕ್ಷಗಳಿಂದ ಕೋಟಿ ವರೆಗೂ ಹೆಚ್ಚುತ್ತಾ ಹೋಗುತ್ತದೆ. ಕೋಟಿ ನಂತರ ಕೋಟಿಯನ್ನು ವಿನಹ ಹೇಳುವುದಕ್ಕೆ ಯಾವ ಹೆಸರು ಇಲ್ಲ. ಆದ್ದರಿಂದ ಕೋಟಿಗಿಂತ ಬೆಲೆಯುಳ್ಳ ಮೊತ್ತವು ಇಲ್ಲವೆಂದು

ಹೇಳಬಹುದು. ಒಂದು ಅಂಕೆಪೂರ್ತಿ ಕೋಟಿ ಬೆಲೆಯವರೆಗು ಬದಲಾಗಬೇಕೆಂದರೆ ಅದರ ಪಕ್ಕದಲ್ಲಿ ಏಳು ಸೊನ್ನೆಗಳು ಇರಬೇಕು. ಅದನ್ನು ಕೆಳಗೆ ನೋಡಿರಿ.

**10 ದೇವರೊಂದರ ಒಂದು ಭಾಗ ಶಕ್ತಿಯನ್ನು ಇಲ್ಲವೆ ಸ್ವಲ್ಪ ಜ್ಞಾನವನ್ನು ತಿಳಿದವನು.**

**100 ದೇವರೊಂದರ ಎರಡು ಭಾಗಗಳ ಶಕ್ತಿಯನ್ನು ಇಲ್ಲವೆ ಎರಡರಷ್ಟು ಜ್ಞಾನವನ್ನು ತಿಳಿದವನು.**

**1,000 ದೇವರೊಂದರ ಮೂರು ಭಾಗಗಳ ಶಕ್ತಿಯನ್ನು ಇಲ್ಲವೆ ಮೂರರಷ್ಟು ಜ್ಞಾನವನ್ನು ತಿಳಿದವನು.**

**10,000 ದೇವರೊಂದರ ನಾಲ್ಕು ಭಾಗಗಳ ಶಕ್ತಿಯನ್ನು ಇಲ್ಲವೆ ನಾಲ್ಕರಷ್ಟು ಜ್ಞಾನವನ್ನು ತಿಳಿದವನು.**

**1,00,000 ದೇವರೊಂದರ ಐದು ಭಾಗಗಳ ಶಕ್ತಿಯನ್ನು ಇಲ್ಲವೆ ಐದರಷ್ಟು ಜ್ಞಾನವನ್ನು ತಿಳಿದವನು.**

**1,00,00,00 ದೇವರೊಂದರ ಆರು ಭಾಗಗಳ ಶಕ್ತಿಯನ್ನು ಇಲ್ಲವೆ ಆರರಷ್ಟು ಜ್ಞಾನವನ್ನು ತಿಳಿದವನು.**

**1,00,00,000 ದೇವರೊಂದರ ಏಳು ಭಾಗಗಳ ಶಕ್ತಿಯನ್ನು ಇಲ್ಲವೆ ಏಳರಷ್ಟು ಜ್ಞಾನವನ್ನು ತಿಳಿದವನು.**

ಸೊನ್ನೆಯನ್ನು ಬೆಲೆಯಿಲ್ಲದ, ಬೆಲೆಯುಳ್ಳ ದೇವರಾಗಿ ಹೋಲಿಸಿಕೊಂಡರೆ ಅದರ ನಂತರ ತಯಾರು ಮಾಡಲ್ಪಟ್ಟ ಒಂದನ್ನು ಜೀವಿಯಾಗಿ ಹೋಲಿಸಿಕೊಳ್ಳಬಹುದು. ಒಂದನ್ನು ಜೀವಿಯಾಗಿ ಹೋಲಿಸಿಕೊಂಡು ನೋಡಿದರೆ ಜೀವಿಯು ದೇವರನ್ನು ತನಗಿಂತ ಕಡಿಮೆಯವನಾಗಿ ಅಜ್ಞಾನಮಾರ್ಗದಲ್ಲಿ ಲೆಕ್ಕಿಸಿದರೆ ಜೀವಿಯು ಜೀವಿಯಾಗಿಯೆ ಇರುತ್ತಾನೆ. ಒಂದಕ್ಕೆ ಎಡಗಡೆ

ಸೊನ್ನೆಯನ್ನಿಟ್ಟರೆ ಒಂದಕ್ಕೆ ಯಾವ ಬೆಲೆ ಇಲ್ಲದೆ ಒಂದು ಒಂದಾಗಿಯೇ ಇದ್ದಂತೆ, ಒಬ್ಬ ಮನುಷ್ಯ ದೇವರನ್ನು ಅಜ್ಞಾನ ಮಾರ್ಗದಲ್ಲಿ ನೋಡಿದರೆ ದೇವರು ಏನು ಬೆಲೆ ಇಲ್ಲದವನಾಗಿ ಅವನಿಗೆ ಕಾಣಿಸುತ್ತಾನೆ. ಅಷ್ಟೇಯಲ್ಲದೆ. ಅವನು ಅವನಾಗಿಯೇ ಇರುತ್ತಾನೆ. ಅವನಿಗೆ ಸಹಾ ಅಜ್ಞಾನಮಾರ್ಗದಲ್ಲಿ ಯಾವ ಶಕ್ತಿಯಾಗಲಿ, ಯಾವ ಬೆಲೆಯಾಗಲಿ ಲಭಿಸುವುದಿಲ್ಲ. ಹಾಗೆ ಒಂದಕ್ಕೆ ಬಲಗಡೆಯಲ್ಲಿ ಸೊನ್ನೆಯನ್ನಿಟ್ಟರೆ ಒಂದರ ಬೆಲೆ ಬೆಳೆಯುತ್ತಾಹೋಗುತ್ತದೆ. ಕೊನೆಗೆ ಕೊನೆಯ ಮೊತ್ತವಾದ ಕೋಟಿವರೆಗು ಸೇರುತ್ತದೆ. ಅದೇ ವಿಧವಾಗಿ ಒಬ್ಬ ಮನುಷ್ಯ ದೇವರನ್ನು ಜ್ಞಾನಮಾರ್ಗದಲ್ಲಿ ನೋಡಿದರೆ ದೇವರು ಎಷ್ಟೊ ಬೆಲೆಯುಳ್ಳವನಾಗಿ ಕಾಣಿಸುತ್ತಾನೆ. ಕೊನೆಗೆ ಅವನು ಕೊನೆಯಸ್ಥಿತಿಯಾದ ಮೋಕ್ಷದವರೆಗು ಸೇರುತ್ತಾನೆ. ಈ ವಿಧವಾಗಿ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನ ದೇವರನ್ನು ಗಣಿತ ಶಾಸ್ತ್ರದಲ್ಲಿ ಸೊನ್ನೆಯಾಗಿ, ಜೀವಿಯನ್ನು ಒಂದಾಗಿ ಹೋಲಿಸುವುದಾಗಿದೆ. ಇದರಿಂದ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಗಣಿತಶಾಸ್ತ್ರ ಹುಟ್ಟಿದೆಂದು ಹೇಳಬಹುದು. ಗಣಿತಶಾಸ್ತ್ರದಲ್ಲಿರುವ ಸೊನ್ನೆಯನ್ನು ಸೃಷ್ಠಿಗಿಂತ ಮುಂದಿರುವ ದೇವರಾಗಿ ಹೋಲಿಸಿಕೊಂಡಿದ್ದೇವೆ. ಸೃಷ್ಠಿ ನಂತರ ದೇವರು ಎಲ್ಲದಕ್ಕಿಂತ ಶ್ರೇಷ್ಠನೆಂದು ಇಲ್ಲವೆ ದೊಡ್ಡವನೆಂದು(ಬ್ರಹ್ಮ ಎಂದು) ಹೇಳುವುದಕ್ಕೆ ದೇವರ ಸಂಖ್ಯೆಗಳಲ್ಲಿ ದೊಡ್ಡದಾದ ಒಂಭತ್ತಾಗಿ (9) ಹೋಲಿಸಿ ಹೇಳಿದ್ಧೇವೆ. ಒಂಭತ್ತನ್ನು ದೇವರಾಗಿ ಹೋಲಿಸಿದಾಗ ಉಳಿದ ಜೀವಾತ್ಮಕ್ಕು, ಆತ್ಮಕ್ಕು ಸಹಾ ಗುರ್ತಾಗಿ ಸಂಖ್ಯೆಗಳನ್ನು ಹಿರಿಯರು ಏರ್ಪಡಿಸಿದ್ದಾರೆ. ಅವರು ಹೇಗೆ ಏರ್ಪಡಿಸಿದ್ದಾರೆಂದರೆ! ಹೀಗೆ ಎಂದು ಹೇಳಬಹುದು. ಮೂರು ಆತ್ಮಗಳ ಸಿದ್ಧಾಂತ (ತ್ರೈತ ಸಿದ್ಧಾಂತ)ದ ಪ್ರಕಾರ ಒಂಭತ್ತು ಅಂಕೆಗಳನ್ನು ಮೂರು ಭಾಗಗಳು ಮಾಡಿದ್ದಾರೆ. ಸೊನ್ನೆ ಸೃಷ್ಠಿಗಿಂತ ಮುಂದಿರುವ ದೇವರಾಗಿ ಲೆಕ್ಕಿಸಿದಾಗ ಸೃಷ್ಠಿ ನಂತರ ಹುಟ್ಟಿದ ಅವುಗಳೆಲ್ಲವನ್ನು ಏಕ ಅನೇಕವಾಗಿ ಹೇಳಬಹುದು. ಸೊನ್ನೆಯನ್ನು ಏಕಾಗ್ರವಾಗಿ ಹೇಳಬಹುದು. ಏಕದಿಂದ ಅನೇಕದವರೆಗು ಸೊನ್ನೆ ಒಂಭತ್ತು ಅಂಕೆಗಳನ್ನು ಮೂರು ಭಾಗಗಳಾಗಿ ಮಾಡಿದ್ದಾರೆ.

| | | |
|---|---|---|
| **ಜೀವಿಯ ಭಾಗದ ಅಂಕೆಗಳು** | **1** | |
| | **2** | |
| | **3** | **ಜೀವಾತ್ಮ ಗುರ್ತು (ಜೀವಾತ್ಮಕೋಡ್)** |
| **ಆತ್ಮ ಭಾಗದ ಅಂಕೆಗಳು** | **4** | |
| | **5** | |
| | **6** | **ಆತ್ಮ ಗುರ್ತು (ಆತ್ಮ ಕೋಡ್)** |
| **ಪರಮಾತ್ಮ ಭಾಗದ ಅಂಕೆಗಳು** | **7** | |
| | **8** | |
| | **9** | **ಪರಮಾತ್ಮ ಗುರ್ತು (ದೇವರ ಕೋಡ್)** |

ಮೂರು ಭಾಗಗಳ ಕೊನೆಯಲ್ಲಿನ 3, 6, 9 ಜೀವಿಗು, ಆತ್ಮಕ್ಕು, ದೇವರಿಗು ಗುರ್ತಾಗಿ ಇವೆ. ಈ ಮೂರು ಭಾಗಗಳಲ್ಲಿ ಕೊನೆಯವಾದ 3,6,9 ಮೂರು ಆತ್ಮಗಳ ಗುರ್ತಾಗಿದ್ದು, ಮೂರು ಭಾಗಗಳಲ್ಲಿಯು ಉಳಿದ ಎರಡು ಅಂಕೆಗಳಿಗೆ ವಿಶೇಷ ಅರ್ಥವಿದೆ. ಮೂರು ಭಾಗಗಳ ಕೊನೆಯ ಅಂಕೆಗಳೊಂದರ ಗೂಢಾರ್ಥವನ್ನು ತಿಳಿಸುವಂತೆ ಉಳಿದ ಎರಡು ಅಂಕೆಗಳನ್ನು ತಯಾರು ಮಾಡಿದ್ದಾರೆ. ಅವುಗಳನ್ನು ಹೇಗೆ ಯಾವ ಉದ್ದೇಶದಿಂದ ನಿರ್ಮಿಸಿದ್ದಾರೊ ವಿವರಿಸಿಕೊಂಡು ನೋಡೋಣ. ಜೀವಿಯ ಭಾಗದಲ್ಲಿರುವ ಅಂಕೆಗಳು 1,2 ಇವೆ ಈ ಎರಡು ಅಂಕೆಗಳನ್ನು ಕೂಡಿದರೆ ಅವು ಮೂರಾಗಿ ಬದಲಾಗುತ್ತದೆ. ನಮ್ಮ ಶರೀರದಲ್ಲಿ ಮಾಯೆ ಮೂರು ಭಾಗಗಳಾಗಿ ಇದೆ. ಆದ್ದರಿಂದ ಎರಡನ್ನು ಕೂಡಿದಾಗ ಬಂದಿರುವ ಮೂರು, ಮೂರು ಭಾಗಗಳಾಗಿರುವ ಮಾಯೆಗೆ ಗುರುತು. ಮೊದಲ ಭಾಗದಲ್ಲಿ ಮೇಲಿನ ಎರಡು ಅಂಕೆಗಳು ಸೇರಿ ಮಾಯೆಯನ್ನು ಸೂಚಿಸುತ್ತಿವೆ. ಹಾಗೆ ಮಾಯೆಯನ್ನು ಸೂಚಿಸುವುದರಲ್ಲಿ ಅರ್ಥವೇನೆಂದರೆ! ಮೊದಲ ಭಾಗದಲ್ಲಿನ ಮೂರು ಅಂಕೆಗೆ ಗುರ್ತಾಗಿರುವ ಜೀವಾತ್ಮ ಮಾಯೆ ಧ್ಯಾಸದಲ್ಲಿಯೇ ಇದ್ದು ಮಾಯೆಯಲ್ಲಿ ಒಂದು ಭಾಗವಾಗಿ ನಡೆಯುತ್ತಿದೆಂದು ತಿಳಿಸಿದಂತಿದೆ. ಎರಡಂಕೆಗಳ ಒಟ್ಟು ಅರ್ಥ ತಿಳಿಸಿದಂತೆ ಜೀವಿಯು ಸಹಾ

ಮಾಯೆಯಲ್ಲಿ ನಿವಾಸಿಸುತ್ತಾ ಮಾಯೆಗೆ ಗುರುತಾಗಿ ಇದ್ದಾನೆ. ಒಂದನೆ ಭಾಗದಲ್ಲಿನ ಕೊನೆಯ ಸಂಖ್ಯೆ ಮೂರು ಜೀವಾತ್ಮಕ್ಕೆ ಗುರುತಾಗಿ ಇದೆ ಅಲ್ಲವೆ! ಅದೇ ಭಾಗದಲ್ಲಿ ಉಳಿದ ಎರಡು ಅಂಕೆಗಳು ಸೇರಿ ಮೂರು ಸಂಖ್ಯೆಯಾಗಿ ಇರುವುದರಿಂದ, ಎರಡೂ ಮೂರಾಗಿರುವುದರಿಂದ ಯಾವುದು ಮಾಯೆಯೊ, ಯಾವುದು ಜೀವಿಯೊ ಗುರ್ತಿಸಲಾರದ ವಿಧವಾಗಿ ಮನುಷ್ಯ ಇದ್ದಾನೆ. ಮಾಯೆ ಜೀವಿಯು ಸಮಾನವಾಗಿ ಇದ್ದುಹೋಗಿದ್ದಾರೆಂದು ಹೇಳಬಹುದು.

ಇನ್ನು ಎರಡನೆ ಭಾಗವಾದ ಆತ್ಮಭಾಗದಲ್ಲಿ ಕೊನೆಯದಾದ ಆರು (6) ಅಂಕೆ ಆತ್ಮಕ್ಕೆ ಗುರುತಾಗಿ, ಉಳಿದ ಎರಡು ಅಂಕೆಗಳು 4, 5 ಇವೆ. ಅವುಗಳೆರಡನ್ನು ಸೇರಿಸಿದರೆ ಒಂಭತ್ತು (4+5=9) ಆಗುತ್ತದೆ. ಒಂಭತ್ತು ದೇವರಿಗೆ ಗುರುತೆಂದು ಮೊದಲೆ ಹೇಳಿಕೊಂಡಿದ್ದೇವೆ. ಆದ್ದರಿಂದ ಆತ್ಮ ದೇವರಂತೆ ಸಹಾ ಪ್ರವರ್ತಿಸಬಲ್ಲದು. ಆತ್ಮ ದೇವರಹಾಗೆ ನಟಿಸಿ ದೇವರಾಗಿ ಎಲ್ಲರನ್ನು ನಂಬಿಸಬಲ್ಲದು. ಕೆಲವು ಸಮಯಗಳಲ್ಲಿ ತಾನೆ ದೇವರಾಗಿ, ದೇವರೆ ತಾನಾಗಿ ಇದ್ದಾನೆಂದು ಹೇಳಬಲ್ಲದು. ಎರಡನೆ ಭಾಗದಲ್ಲಿರುವ ಆರು ಆತ್ಮಕ್ಕೆ ಗುರುತಾಗಿದ್ದರೂ ಮೇಲಿನ ಎರಡು ಅಂಕೆಗಳ ಮೊತ್ತವು ಆತ್ಮವೊಂದರ ಬೆಲೆಯನ್ನು, ಅದರ ವಿಧಾನವನ್ನು ತಿಳಿಸುತ್ತಿದೆ. ದೇವರು ಏನು ಮಾಡದವನಾದರೂ ದೇವರಿಗೆ ಗುರುತಾಗಿ ಶರೀರದಲ್ಲಿರುವ ಆತ್ಮ ದೇವರು ಮಾಡಬೇಕಾಗಿರುವ ಕೆಲಸಗಳನ್ನು ಸಹಾ ಆಗಾಗ ಮಾಡುತ್ತಿದೆಯೆಂದು ನಾವು ಮೊದಲೇ ಹೇಳಿಕೊಂಡಿದ್ದೇವೆ. ಆದ್ದರಿಂದ ಶರೀರದಲ್ಲಿನ ಆತ್ಮವನ್ನು ತಿಳಿದುಕೊಂಡರೆ, ದೇವರನ್ನು ಸುಲಭವಾಗಿ ತಿಳಿಯಬಹುದೆಂದು ಹೇಳುತ್ತಿದ್ದೇವೆ. ಶರೀರದಲ್ಲಿನ ಆತ್ಮಶಕ್ತಿಯೇ ಏಳು ನಾಡಿಕೇಂದ್ರಗಳಲ್ಲಿಯೂ, ಏಳು ಗ್ರಂಥಗಳಲ್ಲಿಯೂ ಇದ್ದು ಶರೀರವನ್ನು ಎಲ್ಲಾ ವಿಧಗಳಲ್ಲಿ ನಡೆಸುತ್ತಿದೆ. ಒಂದಕ್ಕೆ ಬಲಗಡೆಯಲ್ಲಿ ಏಳು ಸೊನ್ನೆಗಳನ್ನು ಸೇರಿಸಿದರೆ ಕೊನೆಗೆ ದೊಡ್ಡ ಸಂಖ್ಯೆ ಕೋಟಿ ಆದಂತೆ ಶರೀರದಲ್ಲಿನ ಏಳು ಗ್ರಂಥಿಗಳ, ನಾಡಿ ಕೇಂದ್ರಗಳ ಶಕ್ತಿಯನ್ನು ತಿಳಿದುಕೊಂಡರೆ ಕೊನೆಗೆ ಮೋಕ್ಷವನ್ನು ಹೊಂದಬಹುದು. ಆದ್ದರಿಂದ ಎರಡನೆ ಭಾಗವಾದ ಆತ್ಮ ಭಾಗದಲ್ಲಿ

ಆರು ಮೋಕ್ಷಕ್ಕೆ ಗುರುತಾಗಿ ಸಹಾ ಇದೆಯೆಂದು ಹೇಳಬಹುದು. ಮೂರು ಜೀವಿಗೆ ಗುರುತಾದರೂ ಮಾಯೆಯಾಗಿ ಕಾಣಿಸುವಂತೆ, ಆರು ಆತ್ಮಕ್ಕೆ ಗುರುತಾದ ದೇವರಾಗಿ 4+5=9 ಒಂಭತ್ತಾಗಿ ಲೆಕ್ಕಿಸಲ್ಪಡುತ್ತಿದೆ.

ನಂತರ ಮೂರನೆ ಭಾಗವಾದ ಪರಮಾತ್ಮ ಭಾಗದಲ್ಲಿ ಕೊನೆಯಲ್ಲಿ ಒಂಭತ್ತು (9) ಇರುವಾಗ, ಉಳಿದ ಎರಡು ಅಂಕೆಗಳು 8, 7 ಇವೆ. ಏಳು ಎಂಟನ್ನು ಸೇರಿಸಿದರೆ (7+8=15) ಹದಿನೈದು ಆಗುತ್ತಿದೆ. ಅದರಲ್ಲಿ ಕೊನೆಯ ಸ್ಥಾನದಲ್ಲಿರುವ ಐದನ್ನು ತೆಗೆದುಕೊಂಡರೆ, ಐದು ಪಂಚಭೂತಗಳಾದ ಪ್ರಕೃತಿಗೆ ಗುರುತಾಗಿದೆ. ಒಂಭತ್ತು ದೇವರ ಗುರುತಾದರೂ ಆ ಭಾಗದಲ್ಲಿರುವ ಎರಡು ಅಂಕೆಗಳು ಐದನ್ನು ತೋರಿಸುತ್ತಿವೆ. ಪ್ರಕೃತಿಯನ್ನು ಜ್ಞಾಪಕಕ್ಕೆ ತರುತ್ತಿವೆ. ಅದನ್ನನುಸರಿಸಿ ದೇವರು ದೇವರಾಗಿ ಎಲ್ಲಿಯೂ ಕಾಣಿಸದೆ ಪ್ರಕೃತಿಯಾಗಿಯೇ ತಿಳಿದುಬರುತ್ತಿದ್ದಾನೆಂದು ತಿಳಿಯುತ್ತಿದೆ. ದೇವರು ಯಾವಮಾತ್ರ ಕಾಣಿಸದೆ ಪ್ರಕೃತಿಯೆಲ್ಲಾ ಆವಹಿಸಿ ಪ್ರಕೃತಿಯೆಂಬ ಮಾರುವೇಷದಲ್ಲಿ ಇದ್ದಾನೆಂದು ಅರ್ಥವಾಗುತ್ತಿದೆ. ಈ ವಿಧವಾಗಿ ಮೊದಲಿನ ಸೊನ್ನೆಯನ್ನು ಬಿಟ್ಟರೆ ನಂತರವಿರುವ ಅಂಕೆಗಳನ್ನು ಮೂರು ಭಾಗಗಳು ಮಾಡಿ ಒಂದು ಜೀವಾತ್ಮ ಭಾಗವಾಗಿ, ಎರಡು ಆತ್ಮಭಾಗವಾಗಿ, ಮೂರು ಪರಮಾತ್ಮ ಭಾಗವಾಗಿ ಗುರ್ತಿಸಿದರೂ, ಆ ಭಾಗಗಳಲ್ಲಿನ ಉಳಿದ ಎರಡು ಅಂಕೆಗಳು ಸೇರಿಸಿ ಜೀವಿಯನ್ನು ಮಾಯೆಯಾಗಿ, ಆತ್ಮವನ್ನು ದೇವರಾಗಿ, ಪರಮಾತ್ಮನನ್ನು ಪ್ರಕೃತಿಯಾಗಿ ಬದಲಾಯಿಸಿ ತೋರಿಸುತ್ತಿವೆ. ಆದ್ದರಿಂದ ಪ್ರಪಂಚದಲ್ಲಿ ಮೂರು ಆತ್ಮಗಳಾದ ಜೀವಾತ್ಮ, ಆತ್ಮ, ಪರಮಾತ್ಮಗಳ ವಿಷಯ ಎಲ್ಲಿಯೂ ತಿಳಿಯದಹಾಗೆ ಹೋಗುತ್ತಿದೆ. ಬೇರೆಯಾಗಿ ಅರ್ಥವಾಗುತ್ತಿದೆ. ಗತದಲ್ಲಿ ನಾವು ಭಗವದ್ಗೀತೆಯಲ್ಲಿನ ಪುರುಷೋತ್ತಮ ಪ್ರಾಪ್ತಿಯೋಗವೆಂಬ ಅಧ್ಯಾಯದಲ್ಲಿರುವ 16,17 ಶ್ಲೋಕಗಳನ್ನು ತೋರಿಸುತ್ತಾ ದೇವರ ಕೋಡ್ 9 6 3 ಎಂದು, ಹಾಗೆಯೆ ದೈವಸುರಾ ಸಂಪದ್ವಿಭಾಗ ಯೋಗವೆಂಬ ಅಧ್ಯಾಯದಲ್ಲಿರುವ 14ನೆ ಶ್ಲೋಕವನ್ನು ತೋರಿಸುತ್ತಾ ಮಾಯಕೋಡ್ 6, 6, 6 ಎಂದು ಒಂದು ಚಿಕ್ಕ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಗಣಿತಶಾಸ್ತ್ರ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಇರುವುದರಿಂದ

ದೇವರ ಗುರುತನ್ನು (ದೇವರ ಕೋಡ್‌ನ್ನು) ಮಾಯೆಗುರ್ತನ್ನು (ಮಾಯ ಕೋಡ್‌ನ್ನು) ಸಂಖ್ಯೆಗಳ ರೂಪದಲ್ಲಿ ಬರೆಯುವುದು ನಡೆದಿದೆ.

ಸೃಷ್ಟಿಆದಿಯಲ್ಲಿ ಬ್ರಹ್ಮವಿದ್ಯಾ ಶಾಸ್ತ್ರ ಆಕಾಶ ಅನ್ನುವ ಮಹಾ ಭೂತದಿಂದ ಹೇಳಲ್ಪಟ್ಟಿದೆ. ಅದರಿಂದ ಮೊದಲು ಹುಟ್ಟಿದ ಶಾಸ್ತ್ರ ಬ್ರಹ್ಮವಿದ್ಯಾ ಶಾಸ್ತ್ರವೆಂದು ಹೇಳುತ್ತಿದ್ದೇವೆ. ನಂತರ ಗಣಿತಶಾಸ್ತ್ರ ಎರಡನೆ ಶಾಸ್ತ್ರವಾಗಿ ಹುಟ್ಟಿದೆ. ನಂತರ ಹುಟ್ಟಿದ ಗಣಿತ ಶಾಸ್ತ್ರ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಹುಟ್ಟುವುದರಿಂದ ಸೊನ್ನೆ ಸೃಷ್ಠಿ ತಯಾರಾಗದ ಮೊದಲಿರುವ ದೇವರ ಗುರುತೆಂದು, ಒಂಭತ್ತು ಸೃಷ್ಠಿ ತಯಾರಾದ ನಂತರ ಏರ್ಪಟ್ಟಿರುವ ಗುರ್ತೆಂದು ಗಣಿತ ಶಾಸ್ತ್ರದ ಪ್ರಕಾರ ಸಹಾ ಅಂಕೆಗಳನ್ನು ತೋರಿಸುತ್ತಿದ್ದೇವೆ. ಸೃಷ್ಠಿ ನಂತರ, ಬ್ರಹ್ಮವಿದ್ಯಾ ಶಾಸ್ತ್ರದ ನಂತರ ತಯಾರಾದ ಶಾಸ್ತ್ರ ಗಣಿತವೆ, ಆದ್ದರಿಂದ ಅದು ಸತ್ಯವೆನ್ನುವಂತೆ ಪ್ರತಿ ಚಿಕ್ಕಹುಡುಗನು ಚಿಕ್ಕವಯಸ್ಸಿನಲ್ಲಿಯೆ, ಅವನಿಗೇನಾದರೂ ಕೊಟ್ಟರೆ ನನಗೂ ಇಷ್ಟೇನಾ? ನಿನಗಾದರೆ ಹೆಚ್ಚು, ನನಗೆ ಕಡಿಮೆನಾ, ಎಂದು ಲೆಕ್ಕಚಾರದ ಪ್ರಕಾರ ಮಾತನಾಡುತ್ತಾನೆ. ಸ್ವಲ್ಪ ವಯಸ್ಸು ಬದಂತೆಲ್ಲ ತನಗೆ ಯಾವ ಶಾಸ್ತ್ರ ತಿಳಿಯದಿದ್ದರೂ ನನಗೆ ಒಂದು ನಿನಗೆ ಎರಡಾ ಎಂದು ಕೇಳುವುದೊ, ನನಗೆ ಸ್ವಲ್ಪ ನಿನಗೆ ಬಹಳವಾ ಎಂದು ಕೇಳುವುದೊ ನೋಡುತ್ತಿರುತ್ತೇವೆ. ಇದನ್ನನುಸರಿಸಿ ಚಿಕ್ಕ ವಯಸ್ಸಿನಲ್ಲಿಯೇ ಎಲ್ಲರಿಗೂ ಮೊದಲು ಸ್ವಲ್ಪ ಗಣಿತವೇ ತಿಳಿಯುತ್ತಿದೆಯೆಂದು ಅರ್ಥವಾಗುತ್ತಿದೆ. ನಂತರ ಚಿಕ್ಕವಯಸ್ಸಿನಲ್ಲಿಯೆ ಖಗೋಳಕ್ಕೆ ಸಂಬಂಧಿಸಿದ ಸೂರ್ಯಚಂದ್ರರಲ್ಲಿ ಮೊದಲು ಚಂದ್ರನನ್ನು ಚಂದಮಾಮನಾಗಿ ಗುರುತಿ ಸುತ್ತಿದ್ದಾನೆ. ಮೊದಲು ಹುಟ್ಟಿರುವುದು ಬ್ರಹ್ಮವಿದ್ಯೆ ನಂತರ ಗಣಿತ, ಆ ನಂತರ ಖಗೋಳ, ರಾಸಾಯನ, ಭೌತಿಕ, ಜ್ಯೋತಿಷ್ಯವಾಗಿದ್ದು ಮೊದಲು ಹುಟ್ಟಿದ ಬ್ರಹ್ಮವಿದ್ಯೆ ಕೊನೆಗೆಹೋಗಿ ವರಸೆಕ್ರಮದಲ್ಲಿ ಮೊದಲು ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯ ಬಂದಿವೆ. ಬ್ರಹ್ಮವಿದ್ಯಾಶಾಸ್ತ್ರ ಕೊನೆಗೆ ಹೊರಟುಹೋಗಿದೆ. ನಿಜಕ್ಕೆ ಬ್ರಹ್ಮವಿದ್ಯಾಶಾಸ್ತ್ರವನ್ನು ಬಾಲ್ಯದಲ್ಲಿ ಮೊದಲೇ ತಿಳಿಯಬೇಕಾಗಿರುವಾಗ, ಕೆಲವರು ವೃದ್ಧಾಪ್ಯದಲ್ಲಿ ತಿಳಿದುಕೊಂಡರೆ ಸರಿಹೋಗುತ್ತ

ದೆಂದು ಕೊನೆಗೆ ಇಟ್ಟುಕೊಂಡಿದ್ದಾರೆ. ಎಲ್ಲದಕ್ಕಿಂತ ಮುಖ್ಯವಾದ ಶಾಸ್ತ್ರ ಬ್ರಹ್ಮವಿದ್ಯಾಶಾಸ್ತ್ರವಾಗಿದ್ದು, ಅದನ್ನೇ ಕೊನೆಗೆ ಹಾಕಿಕೊಳ್ಳುವುದು ಮನುಷ್ಯನೊಂದರ ಅಜ್ಞಾನವೆಂದು ಹೇಳಬಹುದು. ಈಗಿನಕಾಲದಲ್ಲಿನ ಮನುಷ್ಯರು ಕೊನೆಗಾದರೂ ಬ್ರಹ್ಮವಿದ್ಯಾಶಾಸ್ತ್ರವನ್ನು ತಿಳಿಯಬೇಕೆಂದು ಅಂದುಕೊಳ್ಳುತ್ತಿಲ್ಲ. ಆದ್ದರಿಂದ ಆ ಶಾಸ್ತ್ರವೊಂದರ ಹೆಸರೇ ಶಾಸ್ತ್ರಜ್ಞರಿಗೆ ತಿಳಿಯದಂತೆ ಹೋಗಿದೆ.

ಮನುಷ್ಯರಾದವರಿಗೆ ಬ್ರಹ್ಮವಿದ್ಯಾ ಶಾಸ್ತ್ರವೊಂದರ ಉದ್ದೇಶ ತಿಳಿಯದಹಾಗೆ ಹೋದಾಗ, ಮೊದಲು ತಿಳಿಸಲಾದ ದೇವರ ಧರ್ಮಗಳು ಅಧರ್ಮಗಳಾಗಿ ಬದಲಾದಾಗ, ಪುನಃ ಆ ಬ್ರಹ್ಮವಿದ್ಯಾ ಶಾಸ್ತ್ರವನ್ನು ಶಾಸನ ಬದ್ಧವಾಗಿ, ಧರ್ಮಯುಕ್ತವಾಗಿ ತಿಳಿಸುವವನು ಭಗವಂತನೆಂದು ಹೇಳಬಹುದು. ಭಗವಂತನ ಶರೀರದಲ್ಲಿರುವ ಆತ್ಮ ದೇವರ ಧರ್ಮಗಳನ್ನು ದೇವರಂತೆ ತಿಳಿಸುತ್ತಾನೆ. ಯಾರಾದರೆ ದೇವರ ಧರ್ಮಗಳನ್ನು ತಿಳಿಸುತ್ತಿದ್ದಾನೊ ಅವನನ್ನೆ ಅವಧೂತ ಎಂದೂ, ಇಲ್ಲವೆ ಭಗವಂತನು ಎಂದೂ ಅನ್ನಬಹುದು. ಅಂತಹವನು ಪ್ರವಕ್ತನಲ್ಲ. ಪ್ರವಕ್ತ ಯಾರಾದರೂ, ಯಾವ ಮನುಷ್ಯನಾದರೂ ಆಗಬಹುದು. ಪ್ರವಕ್ತ ಯಾರಾದರೂ ಜೀವಾತ್ಮನಾಗಿಯೇ ಕರ್ಮಬದ್ಧನಾಗಿ ಇರುತ್ತಾನೆ. ಪ್ರವಕ್ತ ತಾನು ತಿಳಿದುಕೊಂಡ ಜ್ಞಾನವನ್ನು ಇಲ್ಲವೆ ತಾನು ಕೇಳಿದ ಜ್ಞಾನವನ್ನು ತಿಳಿಸುತ್ತಾನಾಗಲಿ, ಸ್ವತಹವಾಗಿ ಇದು ಧರ್ಮವೆಂದು ಹೇಳಲಾರನು. ಖುರ್‌ಆನ್ ಗ್ರಂಥವನ್ನು ಹೇಳಿದ ಮುಹಮ್ಮದ್ ಪ್ರವಕ್ತರು ತಾನು ಜಿಬ್ರಯೇಲ್ ಹೇಳಿದ ಜ್ಞಾನವನ್ನು ಹೇಳಿದ್ದಾನಾಗಲಿ, ಸ್ವತಹವಾಗಿ ಸ್ವಂತ ನಿರ್ಣಯವಾಗಿ ದೈವಜ್ಞಾನವನ್ನು ಹೇಳಲಿಲ್ಲ. ದೇವರು ಹೇಳಿರುವುದು ವಿಶ್ವದಲ್ಲಿನ ಮಾನವರೆಲ್ಲರಿಗೂ (ಜೀವರಾಶಿ ಗಳೆಲ್ಲರಿಗೂ) ಅನ್ವಯಿಸುವುದಾಗಿರುತ್ತದೆ. ಆದರೆ ಮೊದಲು ಅವಧೂತನ ಮೂಲಕ ಕೇಳಿದ ಜ್ಞಾನವನ್ನು ಪ್ರವಕ್ತರು ಬದಲಾಯಿಸಿ ಹೇಳುವುದರಿಂದ, ಅದು ಮತಗಳಾಗಿ ತಯಾರಾಗಿದೆ. ಕೃಷ್ಣನು ಮೊದಲು ಹೇಳಿದ ಗೀತೆಯಲ್ಲಿ ಮತವಿಲ್ಲ. ಆದರೆ ಅದು ಇತರರ ಮೂಲಕ ಹೇಳಿದನಂತರ ಹಿಂದೂಮತವಾಗಿ ಬದಲಾಗಿಹೋಗಿದೆ. ಹಾಗೆಯೇ ಏಸು ಹೇಳಿದ ಜ್ಞಾನದಲ್ಲಿ ಮತವಿಲ್ಲ ನಂತರ ಅದನ್ನು ಬೋಧಿಸುವವರ ಕ್ರೈಸ್ತವ ಮತವಾಗಿ ಬೋಧಿಸಿದ್ದಾರೆ. ಹಾಗೆಯೇ ಜಿಬ್ರಯೇಲ್ ದೂತ

ಮುಹಮ್ಮದ್‌ರವರಿಗೆ ಬೋಧಿಸಿದ ಬೋಧನೆ ಸರ್ವಮಾನವರಿಗೂ ಅನ್ವಯಿಸುವ ಧರ್ಮಗಳಾಗಿ ಇದೆ. ಆದರೆ ನಂತರ ಅದು ಇಸ್ಲಾಮ್ ಇಲ್ಲವೆ ಮುಸ್ಲಿಮ್ ಮತವಾಗಿ ತಯಾರಾಗಿದೆ. ಈದಿನ ಯಾವ ಬೋಧನೆಯಾದರೂ ಒಂದು ಮತವಾಗಿ ಕಾಣಿಸುತ್ತಿದೆ. ಮತ ಮಾಯೆಯಿಂದ ಕೂಡಿಕೊಂಡಿದೆ. ಮತವನ್ನು ದೂತರು ಹೇಳಲಿಲ್ಲ, ಮತವನ್ನು ಬೋಧಕರು ಹೇಳಿದ್ದಾರೆ. ಕೆಲವು ಮತಗಳಲ್ಲಿ ಪ್ರವಕ್ತರು ಬೋಧಿಸಿದ ಬೋಧನೆಗಳಾಗಿಯೇ ಎಲ್ಲರಿಗೂ ತಿಳಿಯಲ್ಪಡುತ್ತಿದೆ. ಉದಾಹರಣೆಗೆ ಕೃಷ್ಣನು ಭಗವದ್ಗೀತೆಯನ್ನು ಅರ್ಜುನನಿಗೆ ಬೋಧಿಸಿದ್ದಾನೆ, ಆದ್ದರಿಂದ ಓ ಅರ್ಜುನಾ ಕೇಳು ಎಂದು ಭಗವದ್ಗೀತೆಯಲ್ಲಿ ಬಹಳಕಡೆ ಹೇಳುವುದು ಕಾಣಿಸುತ್ತಿದೆ. ಹಾಗೆಯೇ ಜಿಬ್ರಯೇಲ್ ಖುರಾನ್ ಗ್ರಂಥದಲ್ಲಿನ ವಾಕ್ಯಗಳನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳುವುದು ನಡೆದಿದೆ. ಖುರಾನ್ ಗ್ರಂಥದಲ್ಲಿ ಸಹಾ ಭಗವದ್ಗೀತೆಯಲ್ಲಿ **ಓ ಅರ್ಜುನಾ ಕೇಳು** ಎಂದು ಹೇಳಿದಂತೆ, **ಓ ಪ್ರವಕ್ತ ಕೇಳು** ಎಂದು ಅನೇಕಬಾರಿ ಹೇಳುವುದು ಕಾಣಿಸುತ್ತಿದೆ. ಮುಹಮ್ಮದ್ ಪ್ರವಕ್ತರು ಒಳ್ಳೆಯ ನಿಜಾಯಿತಿ ಪರನಾದ್ದರಿಂದ ಜಿಬ್ರಯೇಲ್ ಹೇಗೆ ಹೇಳಿದ್ದಾನೊ ಹಾಗೆ ಖುರಾನ್ ಗ್ರಂಥದಲ್ಲಿ ಓ ಪ್ರವಕ್ತಾ ಕೇಳು ಎಂದೇ ಬರೆಯಿಸಿದ್ದಾನೆ. ಅದು ಜಿಬ್ರಯೇಲ್ ಹೇಳಿದ ಜ್ಞಾನವೆಂದು ಎಲ್ಲರಿಗೂ ತಿಳಿಯುವಂತೆ ಮುಹಮ್ಮದ್ ಪ್ರವಕ್ತರು ಮಾಡಿದ್ದಾರೆ. ಆದರೆ ನಂತರ ಬಂದಿರುವ ಖುರಾನ್ ಬೋಧಕರು ಅದನ್ನು ಮುಹಮ್ಮದ್ ಪ್ರವಕ್ತರು ಹೇಳಿದಂತೆಯೆ ಪ್ರಚಾರ ಮಾಡಿದ್ದಾರೆ. ಆದ್ದರಿಂದ ಖುರ್‌ಆನ್ ಗ್ರಂಥವನ್ನು ಜಿಬ್ರಯೇಲ್ ಹೇಳಿದಹಾಗೆ ಕೆಲವರಿಗೆ ತಿಳಿಯದಂತೆ ಹೋಗಿದೆ. ಹೀಗೆ ಕೊನೆಗದು ಮತಗ್ರಂಥವಾಗಿ ಪ್ರಚಾರವಾಗಿದೆ. ನಿಜಕ್ಕೆ ಖುರಾನ್ ಗ್ರಂಥ ಮತಗ್ರಂಥ ಅಲ್ಲ. ನನ್ನ ಮಾತನ್ನು ಬಲಪಡಿಸುವುದಕ್ಕೆ ಖುರಾನ್ ಗ್ರಂಥದಲ್ಲಿ 81ನೆ ಸುರಾ, 27ನೆ ಆಯತ್‌ನಲ್ಲಿ ಹೀಗೆ ಬರೆದಿದ್ದಾರೆ. "ಇದು ಸಮಸ್ತ ಲೋಕವಾಸಿಗಳಿಗಾಗಿ ಹಿತೋಪದೇಶ" ಈವಾಕ್ಯದಿಂದ ಖುರಾನ್ ಗ್ರಂಥ ಸಕಲಲೋಕದವರಿಗೋಸ್ಕರ ಬೋಧಿಸಲ್ಪಟ್ಟಿದೆಯೆಂದು ತಿಳಿಯದೆ, ಅದು ಕೇವಲ ಒಂದು ಮತಗ್ರಂಥವೆಂದು ಅಂದುಕೊಳ್ಳುತ್ತಿದ್ದಾರೆ.

ಯಾವ ಬೋಧನೆಯನ್ನಾದರೂ ಮತವಾಗಿ ಬೋಧಿಸುವವರು ಅವಧೂತರು (ಭಗವಂತರು) ಅಲ್ಲ. ಬೋಧಕರನ್ನು ಪ್ರವಕ್ತರೆಂದು ಸಹಾ ಅನ್ನಬಹುದು. ಆದರೆ ಅವಧೂತರು ಜ್ಞಾನವನ್ನು ಬೋಧಿಸಿದಲ್ಲಿಯೂ ಪ್ರವಕ್ತರಿಗಿಂತ ಮೀರಿದ ಸ್ಥಾನದಲ್ಲಿ ಇರುತ್ತಾರೆ. ಭಗವಂತನು ತನಗೆ ತಾನಾಗಿ ಜ್ಞಾನವನ್ನು ಬೋಧಿಸುತ್ತಾನೆ. ಬೋಧಕನು ಇಲ್ಲವೆ ಪ್ರವಕ್ತ ತಾನು ಕೇಳಿರುವುದನ್ನು ಬೋಧಿಸುತ್ತಾನೆ. ಆದ್ದರಿಂದ ಸಾಧಾರಣ ಪ್ರವಕ್ತನಿಗು ದೂತ ಇಲ್ಲವೆ ಅವಧೂತನಿಗು ಎಷ್ಟೋ ವ್ಯತ್ಯಾಸ ಇರುತ್ತದೆ. ಹಿಂದೂಮತದಲ್ಲಿ ಹುಚ್ಚುಹಿಡಿದು ತಿರುಗುವವರನ್ನು, ಬಟ್ಟೆಗಳು ಇಲ್ಲದಂತೆ ಕೊಳೆಯಿಂದ ಅಶುಭ್ರವಾಗಿರುವವರನ್ನು ಅವಧೂತ ಅಂದುಕೊಳ್ಳುವುದು ನಡೆಯುತ್ತಿದೆ. ಹುಚ್ಚರು ಎಂದಿಗೂ ಅವಧೂತರು ಆಗುವುದಿಲ್ಲ. ಅವರಿಗೆ ಯಾವ ಜ್ಞಾನವೂ ಇರುವುದಿಲ್ಲ. ಅವಧೂತ ಅಂದರೆ ಸ್ವತಹವಾಗಿ ದೇವರ ಧರ್ಮಗಳನ್ನು ಬೋಧಿಸುವುದಕ್ಕೆ ಬಂದಿರುವ ಭಗವಂತ ನೆಂದು ತಿಳಿಯಬೇಕು. ಮನುಷ್ಯರು ಬೋಧಕರು ಪ್ರವಕ್ತರು ಆಗಬಹುದಾಗಲಿ, ಅವಧೂತರು ಆಗಲಾರರು. ಅವಧೂತ ಅಂದರೆ ಸಾಕ್ಷಾತ್ತು ಎರಡನೆ ಆತ್ಮನಾದವನು, ಮೂರನೆ ಆತ್ಮವಾಗಿ ಮಾತನಾಡಿ ಬೋಧಿಸುತ್ತಾನೆಂದು ಅರ್ಥ. ಇನ್ನೊಂದು ವಿಧವಾಗಿ ಹೇಳಿದರೆ ಆರಾಗಿರುವವನು ಒಂಭತ್ತಾಗಿ ಪ್ರವರ್ತಿಸುವು ದೆಂದು ಅರ್ಥ. ಆ ವಿಧವಾಗಿ ಒಬ್ಬ ಭಗವಂತನಿಗೆ ಮಾತ್ರ ಸಲ್ಲುತ್ತದೆ. ಒಂದುವೇಳೆ ಯಾರಾದರೂ ಹಾಗೆ ನಟಿಸಿದರೂ ಭಗವಾನ್ ಎಂದು ಹೆಸರು ಇಟ್ಟುಕೊಂಡರೂ ಜೀವಾತ್ಮನಾಗಿಯೇ ಇರುತ್ತಾರೆ, ಎರಡನೆ ಆತ್ಮನಾಗಿ ಇರುವುದಿಲ್ಲ.

ಒಂದು ವಿಷಯಕ್ಕೆ ಸಂಬಂಧಿಸಿದ ಕಾರಣವನ್ನು (ಹೇತುವನ್ನು) ಕ್ರಮಪದ್ಧತಿಯಾಗಿ ಕೇಳುವವನನ್ನು ಹೇತುವಾದಿ ಅನ್ನುತ್ತಾರೆ. ಕೇಳಿದ ಪ್ರಶ್ನೆಗೆ ಶಾಸ್ತ್ರಬದ್ಧವಾಗಿ ಸರಿಯಾದ ಉತ್ತರವನ್ನು ಕೊಡುವವನು ಪ್ರತಿವಾದಿ ಆಗುತ್ತಾನೆ. ಒಂದು ಪ್ರಶ್ನೆ ಇದ್ದನಂತರ ಅದಕ್ಕೆ ಉತ್ತರ ತಪ್ಪದೆ ಇರುತ್ತದೆ. ಉದಾಹರಣೆಗೆ ಒಂದು ರೋಗವಿದ್ದನಂತರ ಅದಕ್ಕೆ ಎಲ್ಲಿಯೋ ಒಂದುಕಡೆ ನಿವಾರಣೆ ಇರುತ್ತದೆ. ಆದರೆ ರೋಗವಿರುವವನು ಸರಿಯಾದ ವೈದ್ಯನಹತ್ತಿರಕ್ಕೆ ಹೋಗದಂತೆ, ವೈದ್ಯ

ತಿಳಿಯದವನ ಹತ್ತಿರಕ್ಕೆ ಹೋಗಿ, ವೈದ್ಯ ಮಾಡಿಸಿಕೊಂಡರೂ ತನ್ನ ರೋಗ ಹೋಗದಿದ್ದರೆ, ಅಷ್ಟುಮಾತ್ರಕ್ಕೆ ತನ್ನ ರೋಗಕ್ಕೆ ವೈದ್ಯವೆ ಇಲ್ಲವೆಂದು, ಇರುವ ವೈದ್ಯರೆಲ್ಲರೂ ಕೈಲಾಗದವರೆಂದು ಹೇಳುವುದು ಹೇಗಿರುತ್ತದೊ, ಹಾಗೆ ಒಂದು ಪ್ರಶ್ನೆಗೆ ಉತ್ತರ ದೊರೆಯದಮಾತ್ರಕ್ಕೆ ತನ್ನ ಪ್ರಶ್ನೆಗೆ ಉತ್ತರವೇ ಇಲ್ಲವೆನ್ನುವುದು, ತನ್ನ ಪ್ರಶ್ನೆಗೆ ಸಮಾಧಾನ ಹೇಳುವವನು ಯಾರೂ ಇಲ್ಲವೆನ್ನುವಂತಿರುತ್ತದೆ. ಪ್ರಸ್ತುತ ತಾನು ಕೇಳಬೇಕಾಗಿರುವುದು ಯಾರಹತ್ತಿರ ಕೇಳಬೇಕೊ ತಿಳಿಯದೆಯೇ, ಹಾಗೆ ಮಾತನಾಡುವುದು ಸಮಂಜಸ ಅಲ್ಲವಲ್ಲ! ಕಿವಿ ರೋಗವಿರುವವನು ಹಲ್ಲಿನ ಡಾಕ್ಟರ್ ಹತ್ತಿರಕ್ಕೆ ಹೋದರೂ ಅವನ ಸಮಸ್ಯೆ ತೀರುವುದಿಲ್ಲ. ಇತನು ಸಹಾ ಡಾಕ್ಟರ್ ಅಲ್ಲವೇ ಅಂದರೆ ಹೇಗಿರುತ್ತದೊ ಹಾಗೆಯೇ ದೇವರನ್ನು ಕುರಿತಾದ ಪ್ರಶ್ನೆಯನ್ನು ಪೂಜಾರಿಯನ್ನು ಕೇಳಿದಷ್ಟುಮಾತ್ರಕ್ಕೆ ಅವನಿಗೆ ಸರಿಯಾದ ಉತ್ತರ ಲಭಿಸದಿರಬಹುದು. ಅಷ್ಟುಮಾತ್ರಕ್ಕೆ ದೇವರೆ ಇಲ್ಲ, ನನ್ನ ಪ್ರಶ್ನೆಗೆ ಉತ್ತರವೇ ಇಲ್ಲ ಎನ್ನುವಂತಿರುತ್ತದೆ. ದೇವರನ್ನು ಆರಾಧಿಸುವ ವಿಷಯವನ್ನು ಪೂಜಾರಿಯನ್ನು ಕೇಳಬೇಕು. ಹಾಗೆಯೇ ದೇವರನ್ನು ಕುರಿತಾದ ವಿಷಯವನ್ನು ಆಧ್ಯಾತ್ಮಿಕತಜ್ಞರನ್ನು ಕೇಳಬೇಕು. ಹಾಗೆ ಅಲ್ಲದೆ ದೇವರನ್ನು ಕುರಿತು ಪೂಜಾರಿಯನ್ನು, ಪೂಜೆಯನ್ನು ಕುರಿತು ಆಧ್ಯಾತ್ಮಿಕತಜ್ಞನನ್ನು ಕೇಳಿದಂತಿರುತ್ತದೆ.

ಈ ದಿನ ಹೇತುವಾದಕ್ಕೆ ಅರ್ಥ ತಿಳಿಯದವರು ಸಹಾ ತಾವು ಹೇತುವಾದಿಗಳೆಂದು ಹೇಳಿಕೊಳ್ಳುತ್ತಿದ್ದಾರೆ. ದೈವವೆಂದರೆ ಮನುಷ್ಯನಲ್ಲವೆಂದು ತಿಳಿಯುದವರು ಸಹಾ ದೇವರಿಗೆ ಆಸಿವು ಬಾಯಾರಿಕೆ ಇರುತ್ತವಾ? ಕಷ್ಟಸುಖಗಳಿರುತ್ತವಾ? ಎಂದು ಕೇಳುತ್ತಿದ್ದಾರೆ. ದೇವರು ಮನುಷ್ಯನೆ ಅಲ್ಲದಿರುವಾಗ ಹಸಿವು ಬಾಯಾರಿಕೆ ಹೇಗೆ ಇರುತ್ತವೆ ಎಂದು ಅವರನ್ನು ಕೇಳಿದರೆ, ನಮಗೆ ಉತ್ತರ ಹೇಳಲಾರದೆ ಹೀಗೆ ಕೇಳುತ್ತಿದ್ದಾರೆಂದು ಅಂದುಕೊಳ್ಳುತ್ತಿದ್ದಾರೆ. ಪ್ರಶ್ನೆ ಕೇಳುವಾಗಲೇ ತಮ್ಮ ಪ್ರಶ್ನೆ ಸಮಂಜಸವಾದುದೊ ಅಲ್ಲವೊ, ಹೇತುಬದ್ಧವಾದುದೊ ಅಲ್ಲವೊ ಆಲೋಚಿಸಿ ಕೇಳಬೇಕು. ಹಾಗಲ್ಲದೆ ಕತ್ತೆಗೆ ಎಷ್ಟು ರೆಕ್ಕೆಗಳಿರುತ್ತವೆ ಎಂದು ಕೇಳಿದರೆ, ಕೇಳುವವನದು ಪ್ರಶ್ನೆಯೇ ಅಲ್ಲವೆಂದು, ಅವನಿಗೆ ಎಷ್ಟುಮಾತ್ರ ಕತ್ತೆಯ ವಿಷಯ ತಿಳಿಯದೆಂದು, ಅಂಥವನಿಗೆ

ಉತ್ತರವಾಗಿ ಕತ್ತೆಗೆ ರೆಕ್ಕೆಗಳು ಇಲ್ಲವೆಂದು ಹೇಳಿದರೂ ತಪ್ಪೆ, ಇವೆಯೆಂದು ಹೇಳಿದರೂ ತಪ್ಪೇಯಾಗುತ್ತದೆ. ಯಾವುದೊ ಒಂದು ಹೇಳದೆಹೋದರೆ ನನ್ನ ಪ್ರಶ್ನೆ ದೊಡ್ಡದೆಂದು, ನಾನು ದೊಡ್ಡ ಮೇಧಾವಿಯೆಂದು ಕೇಳಿದವನಂದು ಕೊಳ್ಳುತ್ತಾನೆ. ಅಂಥವರನ್ನು ಕುರಿತು ಪೂರ್ವದಲ್ಲಿ ಒಬ್ಬ ಕವಿ ಮರಳಿನಲ್ಲಿ ತೈಲವನ್ನು ತೆಗೆಯಬಹುದು, ಮೊಲದ ಕೊಂಬನ್ನು ಸಾಧಿಸಬಹುದು, ಮರುಭೂಮಿಯಲ್ಲಿ ನೀರು ಕುಡಿಯಬಹುದು ಅಂತಹ ಅಡ್ಡ ಪ್ರಶ್ನೆಗಳನ್ನುಕೇಳುವ ಮೂರ್ಖನಿಗೆ ಉತ್ತರ ಹೇಳಿ ತೃಪ್ತಿಪಡಿಸಲಾರೆವು ಎಂದಿದ್ದಾನೆ. ಈದಿನ ಮೂರ್ಖ ಪ್ರಶ್ನೆಕೇಳುವ ಮೂರ್ಖರು ಸಹಾ ಎಷ್ಟೋಜನ ಇದ್ದಾರೆ. ಅಂತಹವರನ್ನು ಬಿಟ್ಟು ಸರಿಯಾದ ಹೇತುಬದ್ದವಾದ ಪ್ರಶ್ನೆಗಳಿಗೆ ನಾವು ಉತ್ತರ ಕೊಡುವುದು ಒಳ್ಳೆಯದು.

ರಾಮನು ದೇವರಾ ಎಂದು ಒಬ್ಬ ಮುಸ್ಲಿಮ್ ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿಕೊಂಡಿದ್ದೇವೆ. ಖುರ್‌ಆನ್ ದೈವಗ್ರಂಥವಾ? ಎಂದು ಒಬ್ಬ ಕ್ರೈಸ್ತವನು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿಕೊಂಡಿದ್ದೇವೆ. ಪ್ರವಕ್ತ ಅಂದರೆ ಯಾರು? ಮತವೆಂದರೆ ಏನು? ಎಂದು ಒಬ್ಬ ಸಮಸ್ಯೆ ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿಕೊಂಡಿದ್ದೇವೆ. ಈಗ ಒಬ್ಬ ಹಿಂದೂವು ಕೇಳಿದ ಪ್ರಶ್ನೆಗೆ ಮತಗಳ ಸಂಬಂಧ ಅಲ್ಲದೆ ಶಾಸ್ತ್ರಬದ್ದವಾದ ಉತ್ತರವನ್ನು ಹೇಳಿಕೊಳ್ಳೋಣ. ಶಾಸ್ತ್ರಬದ್ದವಾಗಿ ಹೇಳುವ ಉತ್ತರ ಎಷ್ಟುಕಾಲಕ್ಕಾದರೂ ಖಂಡಿಸದ ಉತ್ತರವಾಗಿ, ಯಾರಾದರೂ ಎದುರಾಡದ ಉತ್ತರವಾಗಿ, ಹೇತುವಾದಿಗಳಿಗೆ ತೃಪ್ತಿಕೊಡುವ ಉತ್ತರವಾಗಿರುತ್ತದೆ. ಪ್ರಶ್ನೆ ಏನೊ ಕೆಳಗೆ ನೋಡೋಣ.

**ಹಿಂದೂವು :–** ಏಸು ಕನ್ಯೆ ಗರ್ಭದಲ್ಲಿ ಹುಟ್ಟಿದ್ದಾನಾ? ಈಗಿನಕಾಲದಲ್ಲಿ ಭೌತಿಕ ಶಾಸ್ತ್ರಕ್ಕೆ ಈ ಮಾತು ಪೂರ್ತಿ ವಿರುದ್ಧ ಅಲ್ಲವೆ! ಇಂತಹ ಅಶಾಸ್ತ್ರ ವಿಷಯಗಳನ್ನು ದೊಡ್ಡದಾಗಿ ಹೇಳಿಕೊಂಡು ನಮ್ಮ ಮತ ದೊಡ್ಡದು, ಕನ್ಯ ಗರ್ಭದಲ್ಲಿ ಹುಟ್ಟಿದ ಏಸು ಉತ್ತಮನೆಂದು ಹೇಳುವುದು ಮೂರ್ಖತ್ವ ಅಲ್ಲವೆ! ಇದನ್ನು ಶಾಸ್ತ್ರೀಯವಾದ ಉತ್ತರದಿಂದ ಸತ್ಯವೆನ್ನುತ್ತೀರಾ? ಇಲ್ಲವೇ ಅಸತ್ಯವೆನ್ನುತ್ತೀರಾ?

**ನಾವು :–** ಈದಿನ ಭೌತಿಕಶಾಸ್ತ್ರವನ್ನು ಸ್ವಲ್ಪ ತಿಳಿದವರು ಒಬ್ಬ ಸ್ತ್ರೀ ಕನ್ಯೆಯಾಗಿರುವಾಗ ಆಕೆಗೆ ಶಿಶುವು ಹುಟ್ಟಿದ್ದಾನೆನ್ನುವುದು ಅಸತ್ಯ ಅನ್ನುತ್ತಾರೆ. ಪುರುಷ ಸಂಪರ್ಕ ಇಲ್ಲದೆ ಗರ್ಭ ತಯಾರಾಗುತ್ತದೆಂಬುದು ಭೌತಿಕ ಶಾಸ್ತ್ರವಿರುದ್ದವೆಂದು, ಆದ್ದರಿಂದಲೇ ಅದು ಅಸತ್ಯವಾದ ಮಾತುಯೆಂದು ಭೌತಶಾಸ್ತ್ರತಜ್ಞರು ಅನ್ನಬಹುದು. ಶಾಸ್ತ್ರತಜ್ಞರೇ ಅಲ್ಲದೆ ಕೆಲವರು ಸಾಧಾರಣ ಮನುಷ್ಯರು ಸಹಾ ಪತಿ ಇಲ್ಲದೆ ಮಕ್ಕಳು ಹುಟ್ಟುವುದು ಅಸಂಭವವೆಂದು ಹೇಳುತ್ತಿರುತ್ತಾರೆ. ಇವರೆಲ್ಲರ ಮಾತಿನ ಪ್ರಕಾರ ಏಸು ಹುಟ್ಟುವುದಕ್ಕೆ ಕಾರಣವಾದ ಮನುಷ್ಯ ಇಂತಹವನೆಂದು ತಿಳಿಯದಿದ್ದರೂ ಯಾರೊ ಒಬ್ಬನು ಇದ್ದೇಇರುತ್ತಾನೆ ಎಂದು ಕೆಲವರಂದುಕೊಳ್ಳಬಹುದು. ಇವುಗಳಿಗೆಲ್ಲ ಉತ್ತರವಾಗಿ! ಎಲ್ಲರ ಸಂಶಯಗಳಿಗೆ ಉತ್ತರವಾಗಿ ನಮ್ಮ ಮಾತುಗಳು ಹೀಗೆ ಇವೆ. ಭೌತಶಾಸ್ತ್ರದ ಪ್ರಕಾರ ಮನುಷ್ಯ ಹುಟ್ಟಿದರೆ ಒಪ್ಪಿಕೊಳ್ಳುತ್ತಾರೆ, ಹಾಗೆ ಮರಣಿಸಿದರೆ ಒಪ್ಪಿಕೊಳ್ಳುತ್ತಾರೆ. ಅವರಿಗೆ ಅದು ತಿಳಿದ ಭೌತಶಾಸ್ತ್ರವನ್ನು ಅನುಸರಿಸಿ ಇರುತ್ತದೆ. ಮನುಷ್ಯ ಇಲ್ಲಿಯವರೆಗೂ ಭೌತಶಾಸ್ತ್ರವನ್ನು ಪೂರ್ತಿಯಾಗಿ ತಿಳಿದಿದ್ದಾನಾ? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಭೌತಶಾಸ್ತ್ರ ಇಲ್ಲಿಯವರೆಗೂ ಸ್ವಲ್ಪ ತಿಳಿಯಲ್ಪಟ್ಟಿದೆ, ಇನ್ನೂ ತಿಳಿಯಬೇಕಾಗಿರುವುದು ಇದೆ. ಕಾಲ ಕಳೆದಂತೆಲ್ಲವೂ ಶಾಸ್ತ್ರ ಸ್ವಲ್ಪ ಸ್ವಲ್ಪ ಹೊಸದಾಗಿ ತಿಳಿಯುತ್ತಾ ಹೋಗುತ್ತಿರುತ್ತದೆ. ಇಲ್ಲಿಯವರೆಗೂ ಬ್ರಹ್ಮವಿದ್ಯಾ ಶಾಸ್ತ್ರ ಹೊರತು ಉಳಿದ ಐದು ಶಾಸ್ತ್ರಗಳು ಯಾವುದು ಸಹಾ ಪೂರ್ತಿಯಾಗಿ ಮನುಷ್ಯನಿಗೆ ತಿಳಿಯಲಿಲ್ಲ. ಭೌತಶಾಸ್ತ್ರ ಪೂರ್ತಿಯಾಗಿ ಇಷ್ಟು ಇದೆಯೆಂದು ತಿಳಿಯದ ಕಾರಣದಿಂದ ನಾವು ಎಲ್ಲಾ ತಿಳಿದುಕೊಂಡಿದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ನಮಗೆ ಎಲ್ಲಾ ತಿಳಿದಿದೆ ಅಂದುಕೊಳ್ಳುವುದರಿಂದ ತಿಳಿಯದಿರುವುದನ್ನು ಕುರಿತು ಹುಡುಕುವುದು ಬಿಟ್ಟು ಶಾಸ್ತ್ರದಲ್ಲಿ ಪೂರ್ತಿ ಪುರೋಗತಿಯನ್ನು, ಅಭಿವೃದ್ಧಿಯನ್ನು ಸಾಧಿಸಲಾರದೆ ಹೋಗುತ್ತಿದ್ದಾರೆ. ಏಸು ಜನನ ಅಶಾಸ್ತ್ರೀಯವೆಂದು ಅನ್ನದಮೊದಲೆ ನಮಗೆಲ್ಲಾ ವಿಷಯಗಳು ಶಾಸ್ತ್ರೀಯವಾಗಿ ತಿಳಿದಿದೆಯಾ? ಎಂದು ಪ್ರಶ್ನಿಸಿಕೊಳ್ಳಬೇಕಾದ ಅಗತ್ಯ ಪ್ರತಿ ಶಾಸ್ತ್ರತಜ್ಞನಿಗು ಇದೆ. ಈದಿನ ಶ್ವಾಸ ಆಡದವನನ್ನು ಮರಣಿಸಿದ್ದಾನೆ ಎಂದು

ಎಲ್ಲರೂ ಅನ್ನುತ್ತಿದ್ದಾರೆ. ಇವನು ಮರಣಿಸಿದ್ದಾನೆಂದು ಡಾಕ್ಟರ್‌ಗಳು ನಿರ್ಧಾರಣೆ ಪತ್ರವನ್ನು ಕೊಡುತ್ತಿದ್ದಾರೆ. ಹಾಗೆ ಚೆನ್ನಾಗಿ ತಿಳಿದ ಡಾಕ್ಟರ್‌ಗಳ ನಿರ್ಧಾರಣೆ ಮಾಡಿದ ನಂತರ ಹತ್ತು, ಹನ್ನೆರಡು ಗಂಟೆಗಳು ಕಳೆದ ನಂತರ ಎಷ್ಟೋಜನ ಸಜೀವವಾಗಿ ಎದ್ದು ಕುಳಿತುಕೊಂಡಿದ್ದಾರೆ. ಕೆಲವರು ಕೆಲವು ದಿನಗಳ ನಂತರ ಬದುಕಿದ ಯಥಾರ್ಥಸಂಘಟನೆಗಳು ಕೂಡ ಇವೆ. ಹಾಗೇ ಯಾವುದೋ ಒಂದು ಅಲ್ಲದೆ, ಎಷ್ಟೋ ನಡೆದರೂ ಅವುಗಳನ್ನು ಕುರಿತು ಶಾಸ್ತ್ರ ಏನು ಹೇಳುತ್ತದೋ ಪರಿಶೋಧಿಸಿ ನೋಡದೆ. ತಿಳಿದರೂ ತಿಳಿಯದಂತೆ ಅವುಗಳನ್ನು ಹಿಡಿಸಿಕೊಳ್ಳದ ಭೌತಿಕಶಾಸ್ತ್ರತಜ್ಞರು, ತಂದೆ ಇಲ್ಲದೆ ಕನ್ಯ ಗರ್ಭದಲ್ಲಿ ಹುಟ್ಟಿದ ಸಂಘಟೆಯನ್ನು ಅಶಾಸ್ತ್ರೀಯ ಎಂಬುವುದರಲ್ಲಿ ಅರ್ಥವಿಲ್ಲ. ಕನ್ಯೆ ಗರ್ಭದಲ್ಲಿ ಹುಟ್ಟಿದ ಏಸುನನ್ನು ಅಶಾಸ್ತ್ರವೆಂದು ಹೇಳಿದಾಗ, ಮರಣಿಸಿ ಹನ್ನೆರಡು ಗಂಟೆಗಳ ನಂತರ ಬದುಕಿದ ವ್ಯಕ್ತಿಯನ್ನು ಅಶಾಸ್ತ್ರವೆಂದು ಅನ್ನಲಾರದೆ ನೋಡಿದರೂ ನೋಡದಹಾಗೆ, ತಿಳಿದರೂ ತಿಳಿಯದಹಾಗೆ ಏಕೆ ಬಿಟ್ಟು ಹಾಕುತ್ತಿದ್ದಾರೆ? ಪ್ರಸವಿಸಲ್ಪಟ್ಟ ಶಿಶುವನ್ನು ಅರ್ಧಗಂಟೆ ಸಮಯ ನಾಲ್ಕುಜನ ಡಾಕ್ಟರ್ಸ್ ಪರೀಕ್ಷಿಸಿ ಗರ್ಭದಲ್ಲಿಯೇ ಮರಣಿಸಿದ್ದಾನೆಂದು ನಿರ್ಧಾರಿಸಿದ ನಂತರ ಕೆಲವು ಗಂಟೆಗಳಿಗೆ ಆ ಶಿಶುವು ಬದುಕಿದ ಸಂಘಟನೆಗಳು ಎಷ್ಟೋ ಇರುವಾಗ, ಆ ಸಂಘಟನೆ ಶಾಸ್ತ್ರಬದ್ಧವಾದುದಾ, ಅಶಾಸ್ತ್ರಬದ್ಧವಾದುದಾ ಎಂದು ತೀರ್ಮಾನಿಸಿ ಹೇಳದವರು ಏಸು ಜನನವನ್ನು ಅಶಾಸ್ತ್ರೀಯವೆಂದು ಹೇಗೆ ಹೇಳುತ್ತಿದ್ದಾರೆ?

ಯಾವುದಾದರೂ ಒಂದು ವಿಷಯವನ್ನು ಶಾಸ್ತ್ರವೆಂದು ಹೇಳಿದಾಗ, ಹಾಗೆಯೆ ಇನ್ನೊಂದು ವಿಷಯವನ್ನು ಸಹಾ ಅಶಾಸ್ತ್ರವೆಂದು ನಿರ್ಧಾರಿಸುವ ವಿಧಾನವಿರಬೇಕು. ಒಂದು ವಿಷಯವನ್ನು ಮೂಢನಂಬಿಕೆಯೆಂದು ಹೇಳುವುದಕ್ಕು ಸಹಾ ಕಾರಣ ಶಾಸ್ತ್ರಬದ್ಧವಾಗಿರಬೇಕು. ಯಾವ ವಿಷಯವನ್ನಾದರೂ ಶಾಸ್ತ್ರದ ಆಧಾರವಿಲ್ಲದೆ ಖಂಡಿಸಲೂಬಾರದು. ಹಾಗೇ ಸಮರ್ಥಿಸಲೂಬಾರದು ಎಂಬುದು ಸೂತ್ರವಾಗಿ ಇಟ್ಟುಕೊಳ್ಳಬೇಕು. ಎಲ್ಲಿಯಾದರೂ ಏನಾದರೂ ಒಂದು ಅಪರೂಪವಾದ ಸಂಘಟನೆ ನಡೆದರೆ ಅದನ್ನು ಸ್ವಲ್ಪವೂ ಆಲೋಚಿಸದೆ

ಬಿಟ್ಟುಬಿಡುವುದು ನಡೆಯುತ್ತದೆ. ಸತ್ಯವಾಗಿ ನಡೆದಿರುವುದನ್ನು ಕುರಿತು ಬಾಯಿ ಕದಲಿಸದವರು ಕೆಲವನ್ನು ಮೂಢನಂಬಿಕೆ ಎನ್ನುವುದರಲ್ಲಿ ಅರ್ಥವೇಯಿಲ್ಲ. ತನಗೆ ದೂರವಾಗಿ ನಡೆದಿರುವುದನ್ನು ಮೂಢನಂಬಿಕೆಯೆಂದು, ತನಗೆ ಎದುರುಗಡೆ ನಡೆದಿರುವುದನ್ನು ಕುರಿತು ಬಾಯಿ ಕದಲಿಸದಿರುವುದನ್ನು ವಿಜ್ಞಾನವೆಂದು ಅನಿಸಿಕೊಳ್ಳುವುದಿಲ್ಲ, ಅದನ್ನು ಅಜ್ಞಾನವೆಂದು ಹೇಳಬಹುದು. ಇದಕ್ಕುಮೊದಲೇ ಸೈನ್ಸು ಸ್ಥೂಲವಾಗಿ ಮತ್ತು ಸೂಕ್ಷ್ಮವಾಗಿ ಎರಡು ವಿಧಗಳಾಗಿದೆ ಎಂದು ಹೇಳಿಕೊಂಡಿದ್ದೇವೆ. ಸ್ಥೂಲವಾಗಿ ಕಾಣಿಸುವ ಸೈನ್ಸೆ ತಿಳಿಯದವರಿಗೆ ಸೂಕ್ಷ್ಮ ವಾಗಿರುವ ಸೈನ್ಸು ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಗರ್ಭದಲ್ಲಿಯೇ ಮರಣಿ ಸಿದ್ದಾನೆಂದು ಹೇಳಿದ ಶಿಶುವು ಕೆಲವು ಗಂಟೆಗಳ ನಂತರ ಬದುಕಿದರೂ, ಸತ್ತುಹೋಗಿದ್ದಾನೆಂದು ಹೇಳಿದ ವ್ಯಕ್ತಿ ಕೆಲವು ದಿನಗಳ ನಂತರ ಬದುಕಿದರೂ, ಅವುಗಳನ್ನು ಅಪರೂಪವಾಗಿ ನಡೆಯುವ ಸಂಘಟನೆಗಳೆಂದು ಬಿಟ್ಟುಬಿಡುತ್ತಿದ್ದಾರೆ. ಇಂತಹ ಸಂಘಟಣೆಗಳು ಏಕೆ ನಡೆದಿವೆ, ಅದಕ್ಕಿರುವ ಕಾರಣವೇನೆಂದು ಹೇತುವಾದಿಗಳು ಏಕೆ ಪ್ರಶ್ನಿಸಿಕೊಳ್ಳದೆಹೋಗುತ್ತಿದ್ದಾರೆ. ಯಥಾರ್ಥವಾಗಿ ನಡೆದ ಸಂಘಟನೆಯನ್ನು ಮೂಢನಂಬಿಕೆಯೆಂದು, ನಾವು ನಂಬುವುದಿಲ್ಲಯೆಂದು ಹೇಳುವುದು ತಪ್ಪಿಸಿಕೊಳ್ಳುವ ಧೋರಣಿ ಅಲ್ಲವಾ? ಯೇಸು ಕನ್ಯೆ ಗರ್ಭದಲ್ಲಿ ಹುಟ್ಟಿದ್ದಾನೆನ್ನುವುದು ಯದಾರ್ಥಸಂಘಟನೆಯಾಗಿ ಏಕೆ ತೆಗೆದುಕೊಳ್ಳಬಾರದು. ವೀರ್ಯಕಣವಿಲ್ಲದೆ ಗರ್ಭ ಬರುವುದಿಲ್ಲ ಎಂಬುದು ಭೌತಿಕಸೂತ್ರವೆಂದು ತಿಳಿದಷ್ಟುಮಾತ್ರಕ್ಕೆ, ಏಸು ಕನ್ಯೆ ಗರ್ಭದಲ್ಲಿ ಹುಟ್ಟಿದ್ದಾನೆಂಬ ಮಾತನ್ನು ಖಂಡಿಸಬಹುದಾ? ತಾಯಿಯಾದ ಮರಿಯಮ್ಮ ನನಗೆ ಯಾವ ಪುರುಷ ನೊಂದಿಗೂ ಸಂಬಂಧವಿಲ್ಲ ಎಂದು ಪ್ರತ್ಯಕ್ಷ ಸಾಕ್ಷಿ ಹೇಳುತ್ತಿದ್ದರೂ, ಆಕೆಯ ಮಾತನ್ನು ಅಸತ್ಯವೆಂದು ಹೇಳುವುದು ಅವಿವೇಕ ಅಲ್ಲವೆ! ಒಂದುವೇಳೆ ಆಕೆಗೆ ಪುರುಷನೊಂದಿಗೆ ಸಂಬಂಧ ಇಲ್ಲ ಎಂಬ ಮಾತು ಸತ್ಯವೇ ಆಗಿರಬಹುದೆಂದು ಏಕೆ ಆಲೋಚಿಸಬಾರದು, ಆಕೆ ಮಾತು ಸತ್ಯವೇ ಆದಾಗ ವೀರ್ಯಕಣ ಇಲ್ಲದೆ ಗರ್ಭ ಬಂದಂತೆಯೆ ಆಗುತ್ತದೆ ಅಲ್ಲವೆ! ಹಾಗೇ ಬರುವುದಕ್ಕೆ ನಮಗೆ ತಿಳಿಯದ ಕಾರಣವೇನಾದರೂ ಇದೆಯೇನೊ ಎಂದು ಏಕೆ ಹುಡುಕಬಾರದು?

ಒಂದು ವಿಷಯವನ್ನು ಪೂರ್ತಿಯಾಗಿ ಪರಿಶೀಲನೆ ಮಾಡದಂತೆ ಅದನ್ನು ಅಸತ್ಯವೆಂದರೆ, ಒಂದುವೇಳೆ ಅದು ಸತ್ಯವಾಗಿದ್ದರೆ ಆಗ ಅಸತ್ಯ ಎಂದವನೇ ಅಸತ್ಯವಾದಿ ಆಗುತ್ತಾನೆ. ಆದ್ದರಿಂದ ಮೂರ್ಖನಂತೆ ಏನನ್ನು ಖಂಡಿಸಬಾರದು. ಆಹಾರವಾಗಲಿ, ನೀರಾಗಲಿ ಮುಟ್ಟದಂತೆ ಕೆಲವು ದಿನಗಳು ಬಿಟ್ಟರೆ ಹೆಚ್ಚಾಗಿ ಬದುಕುವುದಕ್ಕೆ ಅವಕಾಶ ಇಲ್ಲ ಎಂದು ಹೇಳುವುದು ಸುಲಭವೇ. ಆದರೆ ಆಹಾರವನ್ನು ತೆಗೆದುಕೊಳ್ಳದೆ, ನೀರನ್ನು ಕುಡಿಯದಂತೆ 75 ವರ್ಷಗಳಿಂದ ಬದುಕುತ್ತಿರುವ ವ್ಯಕ್ತಿ ಪ್ರತ್ಯಕ್ಷವಾಗಿ ನಮ್ಮಮುಂದೆಯೇ ಇರುವಾಗ ಅದರಲ್ಲಿ ನಮಗೆ ತಿಳಿಯದ ಸೈನ್ಸು (ಶಾಸ್ತ್ರ) ಏನಾದರೂ ಇದೆಯೋನೊಯೆಂದು ನೋಡದೆ, ಹಾಗೇ ಬದುಕುವುದು ಅಸತ್ಯವೆಂದು ಅಂದರೆ, ಅದು ವಿಜ್ಞಾನವಲ್ಲ ಅಜ್ಞಾನ ವಾಗುತ್ತದೆ. ಅಂತಹವನನ್ನು ಮೂಢನಂಬಿಕೆ ಇರುವವನೆಂದು ಹೇಳಬಹುದು. ಹಾಗೆ ಬದುಕುವುದಕ್ಕೆ ಸಾಧ್ಯವಿಲ್ಲ ಎಂಬ ಡಾಕ್ಟರ್ಸ್ 40 ಜನ ಬೃಂದವಾಗಿ ಏರ್ಪಟ್ಟು ಆತನನ್ನು ಕುರಿತು ಆರು ತಿಂಗಳು ಒಂದು ನಿಮಿಷ ಸಹಾ ಬಿಡದಂತೆ ಹತ್ತಿರವಿದ್ದು ಪರೀಕ್ಷಿಸಿ ಆತನು ಆಹಾರ ನೀರು ಇಲ್ಲದಂತೆ ಬದುಕುತ್ತಿದ್ದಾನೆಂದು, ಅದಕ್ಕಿರುವ ಕಾರಣ ತಮಗೆ ಅರ್ಥವಾಗಲಿಲ್ಲವೆಂದು ಪ್ರಕಟಿಸಿದ್ದಾರೆ. **ಒಂದು ವಿಷಯ ಸತ್ಯವಾದಾಗ, ಅದನ್ನು ಗ್ರಹಿಸಿಕೊಳ್ಳುವ ವಿಜ್ಞಾನ ಮನುಷ್ಯನತ್ತಿರ ಇಲ್ಲದಂತೆ ಹೋದಷ್ಟುಮಾತ್ರಕ್ಕೆ, ಆ ವಿಷಯ ಅಸತ್ಯ ಅಲ್ಲವಲ್ಲಾ! ಒಂದು ಸತ್ಯ ವಿಷಯವನ್ನು ಗ್ರಹಿಸಿಕೊಳ್ಳುವ ವಿಜ್ಞಾನ ಮನುಷ್ಯನತ್ತಿರ ಇರಬಹುದು ಇಲ್ಲವೇ ಇಲ್ಲದೆಹೋಗ ಬಹುದು.** ತನ್ನಹತ್ತಿರ ವಿಜ್ಞಾನ ಇರುವಾಗ ಅದರಮೂಲಕ ಸತ್ಯವನ್ನು ತಿಳಿದುಕೊಳ್ಳ ಬಹುದು. ವಿಜ್ಞಾನ ಇಲ್ಲದಿರುವಾಗ ನಡೆಯುತ್ತಿರುವುದು ಸತ್ಯವಾದಾಗ ಅದನ್ನು ಗ್ರಹಿಸಿಕೊಳ್ಳುವ ವಿಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ಹಾಗಲ್ಲದೆ ತನಗೆ ತಿಳಿಯದ ಸತ್ಯವನ್ನು ಅಸತ್ಯವೆನ್ನುವುದು ಸತ್ಯವನ್ನು ವಧಿಸಿದಂತೆ ಅಲ್ಲವೆ! ಅಂಥವನು ಅಸತ್ಯವಾದಿ ಅಲ್ಲವೇ! ಒಂದು ವಿಷಯದಲ್ಲಿನ ಹೇತುವನ್ನು ಕುರಿತು ಅನೇಕ ಕೋನಗಳಿಂದ ನೋಡುವುದು ಹೇತುವಾದಿ (ಸತ್ಯವಾದಿ) ಒಂದರ ಲಕ್ಷಣ ವಾಗುತ್ತದೆ.

ಸತ್ಯಾನ್ವೇಷಣೆ ಸಂಘ ಎಂದು ಹೆಸರಿಟ್ಟುಕೊಂಡು ಅದಕ್ಕೆ ಅಧ್ಯಕ್ಷನೆಂದು ಹೇಳಿಕೊಳ್ಳುವ ವ್ಯಕ್ತಿ ಒಂದುಬಾರಿ ನನಗೆ ತಿಳಿದ ಸತ್ಯವನ್ನು ಒಪ್ಪಿಕೊಳ್ಳದೆ ಅದನ್ನು ಅಸತ್ಯವೆಂದಿದ್ದಾನೆ. ತಾವು ಅಸತ್ಯವಾದಿಗಳಾಗಿದ್ದು, ಸತ್ಯಾನ್ವೇಷಕರೆಂದು ಹೆಸರಿಟ್ಟುಕೊಂಡು, ತಮ್ಮನ್ನು ತಾವು ಪ್ರಚಾರ ಮಾಡಿಕೊಳ್ಳುವ ಇಂಥಹವರು ಇನ್ನೂ ಎಷ್ಟೋಜನ ಇದ್ದಾರೆಂದು ಆಗ ನನಗೆ ಅರ್ಥವಾಗಿದೆ. ಅಂಥವರು ಸೈನ್ಸನ್ನು ಅಡ್ಡವಿಟ್ಟುಕೊಂಡು, ತಮಗೆ ಪೂರ್ತಿ ಸೈನ್ಸು ತಿಳಿಯದಿದ್ದರೂ ಯಥಾರ್ಥ ಸಂಘಟಣೆಗಳನ್ನು ಖಂಡಿಸುತ್ತಿರುತ್ತಾರೆ. ಏಸು ಜನನವನ್ನು ಭೌತಿಕಶಾಸ್ತ್ರ ಒಪ್ಪಿಕೊಳ್ಳುವುದಿಲ್ಲ ಎನ್ನುವವರು, ಭೌತಿಕಶಾಸ್ತ್ರ ತಮಗೆ ಪೂರ್ತಿಯಾಗಿ ತಿಳಿದಿದೆಯಾ ಇಲ್ಲವಾ ಎಂದು ಏಕೆ ಆಲೋಚಿಸಿಕೊಳ್ಳಬಾರದು? ಯಾರಾದರೂ ಯಾವ ಶಾಸ್ತ್ರವನ್ನಾದರೂ ನನಗೆ ಪೂರ್ತಿಯಾಗಿ ತಿಳಿದಿದೆ ಎನ್ನುವವನು ಇದ್ದಾನಾ? ಹಾಗೇ ಇದ್ದಾನೆ ಎಂದರೆ ಅದು ತಪ್ಪಾಗುತ್ತದೆ. ಏಕೆಂದರೆ ಸೈನ್ಸು ನಿತ್ಯ ಪರಿಶೋಧನೆಯಿಂದ ಕೂಡಿಕೊಂಡಿರುವುದಾಗಿದೆ. ಅದರಲ್ಲಿ ಇನ್ನೂ ತಿಳಿಯದ ವಿಷಯಗಳು ಎಷ್ಟೋ ಇವೆ. ಕಾಲ ಕಳೆದಂತೆಲ್ಲಾ ಕೆಲವನ್ನು ಕಂಡುಕೊಳ್ಳುತ್ತಿದ್ದೇವೆ. ಆದ್ದರಿಂದ ಒಂದು ಸತ್ಯ ವಿಷಯ ಅಪರೂಪವಾಗಿ ನಡೆದಾಗ, ಅದು ತನಗಿರುವ ವಿಜ್ಞಾನಕ್ಕೆ ಅರ್ಥವಾಗದಿರುವಾಗ, ಅದನ್ನು ಅಸತ್ಯವೆನ್ನದೆ ಅದಕ್ಕೆ ತಕ್ಕ ವಿಜ್ಞಾನವನ್ನು ಮನುಷ್ಯ ಸಂಪಾದಿಸಿಕೊಳ್ಳಬೇಕು. ಈಗ ಏಸು ಹುಟ್ಟುವಿಕೆ ಒಂದು ಅಪರೂಪವಾದ ಸಂಘಟನೆಯಾಗಿದೆ. ಏಸು ಹುಟ್ಟುವಿಕೆಯೇ ಅಲ್ಲದೆ ಏಸು ಮರಣವೂ ಸಹಾ ಒಂದು ವಿಚಿತ್ರವಾದ ಅಪರೂಪವಾದ ಸಂಘಟನೆಯಾಗಿದೆ. ಆತನ ಮರಣ ವಿಷಯದಲ್ಲಿ ಸಹಾ ಕೆಲವರು ಆತನ ಶಿಲುಬೆ ಮೇಲೆ ಮರಣಿಸಿದ್ದಾನೆಂದು, ಇನ್ನುಕೆಲವರು ಶಿಲುಬೆ ಮೇಲೆ ಮರಣಿಸಲಿಲ್ಲವೆಂದು ವಾದಿಸಿಕೊಳ್ಳುತ್ತಿದ್ದಾರೆ. ಮರಣಿಸಿ ಎದ್ದಿದ್ದಾನೆಂದು ಕೆಲವರೂ, ಮರಣಿಸಲಿಲ್ಲ ಮೂರ್ಛೆಯಲ್ಲಿದ್ದು ಎದ್ದಿದ್ದಾರೆನ್ನುವವರು ಕೆಲವರೂ ವಾದಿಸಿಕೊಳ್ಳುತ್ತಿದ್ದಾರೆ. ಅಲ್ಲಿ ನಡೆದ ವಾಸ್ತವ ಯಾರಿಗೂ ತಿಳಿಯದಹಾಗೆ ಹೋಗಿದೆ. ನಿಜಕ್ಕೆ ಇಬ್ಬರ ವಾದನೆ ಪೂರ್ತಿ ತಪ್ಪೆಂದು ಹೇಳಬಹುದು. ಮರಣವನ್ನು ಕುರಿತಾದ ವಿಜ್ಞಾನ ಪೂರ್ತಿಯಾಗಿ ತಿಳಿಯದವರಿಗೆ, ಏಸು

ಮರಣ ರಹಸ್ಯವು ತಿಳಿಯದಹಾಗೆ ಹೋಗಿದೆ. ಹಾಗೇ ಜನನ ರಹಸ್ಯ ತಿಳಿಯದವರಿಗೆ ಏಸು ಒಂದರ ಜನನದಲ್ಲಿನ ವಿವರ ಸಹಾ ತಿಳಿದಹಾಗೆ ಹೋಗಿದೆ. ಆದ್ದರಿಂದ ಬಹಳಜನ ಕ್ರೈಸ್ತರು ಭಕ್ತಿಯಿಂದ ತಮಗೆ ಅರ್ಥವಾಗದ ವಿಷಯವನ್ನು ಒಪ್ಪಿಕೊಂಡರೂ, ಉಳಿದವರು ಆ ವಿಷಯವನ್ನು ಒಪ್ಪಿಕೊಳ್ಳದೆ, ಮರಿಯಮ್ಮ ಪುರುಷಸಂಬಂಧದಿಂದಲೇ ಏಸುನನ್ನು ಹೆತ್ತಿದ್ದಾಳೆಂದು ಅನ್ನುತ್ತಿದ್ದಾರೆ. ನಿಜಕ್ಕೆ ಹಾಗೆ ನಡೆಯಲಿಲ್ಲ. ಮರಿಯಮ್ಮ ಯಾವ ಪುರುಷನ ಸಂಬಂಧ ಇಲ್ಲದಹಾಗೆಯೇ ಏಸುಗೆ ಜನ್ಮವನ್ನು ಕೊಟ್ಟಿದ್ದಾಳೆಂದು ಸೂಪರ್‌ನೈನ್ಸು ಹೇಳುತ್ತಿದೆ.

ಹಿಂದೂಗಳು, ಮುಸ್ಲೀಮ್‌ರು ತಮ್ಮದು ಬೇರೆ ಮತವಾಗಿರುವುದರಿಂದ ಏಸು ಮರಣವನ್ನು ಕುರಿತಾಗಲಿ, ಏಸು ಜನನದ ಕುರಿತಾಗಲಿ ಒಪ್ಪಿಕೊಳ್ಳದೆಹೋದರೂ, ನಡೆದ ಸತ್ಯ ಮಾತ್ರ ಯಾರ ಅಂಗೀಕಾರಕ್ಕೆ ಸಂಬಂಧ ವಿಲ್ಲದೆ ಇದೆ. ಸತ್ಯ ಸರ್ವಮಾನವರಿಗೂ ಸಂಬಂಧಿಸಿರುವುದಾಗಿ ಇರುತ್ತದೆ ಆದರೆ, ಒಂದು ಮತಕ್ಕೆ ಸಂಬಂಧಿಸಿರುವುದಾಗಿ ಇರುವುದಿಲ್ಲ. ಆದ್ದರಿಂದ ಏಸು ಜನನವನ್ನು ಮತಕ್ಕೆ ಅತೀತವಾಗಿ, ಸೈನ್ಸನ್ನು (ಶಾಸ್ತ್ರವನ್ನು) ಅನುಸರಿಸಿ ನೋಡೋಣ. ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆಯಲ್ಲಿ ವಿಭೂತಿಯೋಗವೆಂಬ ಅಧ್ಯಾಯದಲ್ಲಿ 39 ಶ್ಲೋಕ ಈ ವಿಧವಾಗಿ ಇದೆ.

**ಶ್ಲೋ॥ ಯಚ್ಚಾಪಿ ಸರ್ವಭೂತಾನಾಂ ಜೀಜಂ ತದಹ ಮರ್ಜುನ,**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್.**

**ಭಾವನೆ :** "ಸರ್ವ ಜೀವರಾಶಿಗಳಿಗು ಬೀಜ ನಾನೇ, ಆದ್ದರಿಂದ ಆ ಜನ್ಮಗಳಿಗೆ ನಾನೇ ಕಾರಣವಾಗುತ್ತೇನೆ. ಈ ಚರಾಚರ ಜಗತ್ತಿನೊಳಗೆ ನನ್ನ ಬೀಜದಿಂದ ಹುಟ್ಟದ ಜೀವರಾಶಿ ಯಾವುದೂ ಇಲ್ಲ."

ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗ ಯೋಗವೆಂಬ ಅಧ್ಯಾಯದಲ್ಲಿ 3, 4 ಶ್ಲೋಕಗಳು ಹೀಗಿವೆ.

**ಶ್ಲೋ.3. ಮಮಯೊನಿ ರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್,**
**ಸಂಭವ ಸರ್ವಭೂತಾನಾಂ ತತೋಭವತಿ ಭಾರತ !**

**ಭಾವನೆ:–** "ಈ ಅಚೇತನ ಪ್ರಕೃತಿಯೆಲ್ಲವೂ ನನಗೆ ಹೆಂಡತಿಯಾಗಿದೆ. ಈ ಪ್ರಕೃತಿಯೆಂಬ ಸ್ತ್ರೀಗೆ ನಾನು ಬೀಜದಾತನಾಗಿ ಇದ್ದೇನೆ. ನನ್ನಿಂದಲೇ ಈ ಭೂಮಿಮೇಲೆ ಸಕಲ ಜೀವರಾಶಿಗಳು ಹುಟ್ಟುತ್ತಿವೆಯೆಂದು ತಿಳಿದುಕೋ"

**ಶ್ಲೋ. 4. ಸರ್ವಯೋನಿಷು ಕೌಂತೇಯ!ಮೂರ್ತಯಃ ಸಂಭವಂತಿ ಯಾಃ,**
**ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜ ಪ್ರದಃ ಪಿತಾ॥**

**ಭಾವನೆ :–** "ಸಕಲ ಗರ್ಭಗಳಲ್ಲಿ ಜನ್ಮಿಸುವ ಸಕಲ ಜೀವರಾಶಿಗಳಿಗೆ ತಾಯಿ ಪ್ರಕೃತಿಯಾಗಿದ್ದು, ಬೀಜದಾತನಾದ ನಾನು ತಂದೆಯೆಂದು ತಿಳಿಯಬೇಕು."

ಈಗ ಈ ಮೂರು ಶ್ಲೋಕಗಳ ಭಾವನೆಯಿಂದ ಪ್ರಪಂಚದಲ್ಲಿ ಒಂದು ಮಾನವಜಾತಿಯೇ ಅಲ್ಲದೆ, ಸಕಲ ಜಾತಿಗಳ ಜೀವರಾಶಿಗಳಿಗು ಕಾಣಿಸದ ತಾಯಿಯಾಗಿ ಪ್ರಕೃತಿ ಇದೆಯೆಂದು, ಕಾಣಿಸದ ತಂದೆಯಾಗಿ ಪರಮಾತ್ಮ ಇದ್ದಾನೆಂದು ತಿಳಿಯುತ್ತಿದೆ. ಇಲ್ಲಿ ಜಗತ್ತಿನಲ್ಲಿನ ಸರ್ವಜೀವಿಗಳಿಗು ಬೀಜದಾತ ಪರಮಾತ್ಮಯೆಂದು ಹಾಗೆಯೇ ಪ್ರಕೃತಿ ತಾಯಿಯೆಂದು ತಿಳಿದುಹೋಗಿದೆ. ಪ್ರಕೃತಿ ಪರಮಾತ್ಮರ ಸಂಬಂಧ ಇಲ್ಲದೆ ಜಗತ್ತಿನಲ್ಲಿ ಯಾವ ಜೀವರಾಶಿ ಹುಟ್ಟಲಿಲ್ಲವೆಂದು, ಎಲ್ಲಿ ಯಾವ ಜೀವರಾಶಿ ಹುಟ್ಟಿದರೂ, ಯಾವ ಮನುಷ್ಯ ಹುಟ್ಟಿದರೂ, ಅವರಿಗೆ ಕಾಣಿಸದ ಅಸಲಾದ ತಾಯಿ ಪ್ರಕೃತಿಯೆಂದು, ಹಾಗೆಯೇ ಕಾಣಿಸದ ತಂದೆ ಪರಮಾತ್ಮಯೆಂದು ತಿಳಿದುಹೋಗಿದೆ. ಈ ಸಮಾಚಾರವೆಲ್ಲವೂ ಮೊದಲು ಹುಟ್ಟಿದ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರದೊಳಗಿನದು. ಈ ಶಾಸ್ತ್ರದ ನಂತರ ನಾಲ್ಕನೆ ಶಾಸ್ತ್ರವಾಗಿ ಹುಟ್ಟಿರುವುದು ಭೌತಿಕಶಾಸ್ತ್ರ. ಭೌತಿಕಶಾಸ್ತ್ರದ ಪ್ರಕಾರ ತಾಯಿಯೊಂದರ ರಜೋಕಣದೊಂದಿಗೆ (ಅಂಡದೊಂದಿಗೆ) ತಂದೆ ಯೊಂದರ ವೀರ್ಯಕಣ ಬೆರೆತಾಗ ಆ ವೀರ್ಯಕಣ ಶಿಶುವಾಗಿ ತಯಾರಾಗುತ್ತ ದೆಂದು ಹೇಳಲ್ಪಟ್ಟಿದೆ. ಇಲ್ಲಿ ಕಾಣಿಸುವ ತಾಯಿ, ಕಾಣಿಸುವ ತಂದೆ ಇಬ್ಬರೂ

ಇದ್ದಾರೆ. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಪ್ರಕೃತಿ ಕಾಣಿಸುವುದಾದರೂ, ಪರಮಾತ್ಮ ಕಾಣಿಸದವನಾಗಿ ಇದ್ದಾನೆ. ಇಲ್ಲಿ ಎರಡೂ ಶಾಸ್ತ್ರಗಳೇ, ಎರಡೂ ಎರಡು ವಿಧಗಳಾಗಿ ಹೇಳಿದಂತೆ ಕಾಣಿಸುತ್ತಿದೆ. ಶಾಸ್ತ್ರ ಎಂದರೆ ಶಾಸನಗಳಿಂದ ಕೂಡಿಕೊಂಡಿರುವುದು. ತಪ್ಪದೆ ನಡೆಯುವುದು, ಸತ್ಯವಾದುದೆಂದು ತಿಳಿದಾಗ, ಎರಡೂ ಎರಡು ದಾರಿಗಳು ತೋರಿಸಿದಾಗ ಯಾವುದನ್ನು ನಂಬಬೇಕು ಎಂಬ ಪ್ರಶ್ನೆಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! **ಶಾಸ್ತ್ರವನ್ನು ನಂಬುವುದು ನಂಬದಿರುವುದು ಎಂಬುದು ಇರುವುದಿಲ್ಲ. ಶಾಸ್ತ್ರ ಎನ್ನುವುದು ಸತ್ಯವಾಗಿರುತ್ತದೆ, ಆದ್ದರಿಂದ ಅದನ್ನು ಆಚರಿಸುವುದೆ ಕರ್ತವ್ಯ.** ಮೊದಲು ತಿಳಿದ ಬ್ರಹ್ಮವಿದ್ಯಾಶಾಸ್ತ್ರ ಸಕಲ. ಜೀವರಾಶಿಗಳ ತಂದೆತಾಯಿಯರನ್ನು ಕುರಿತು ತಿಳಿಸಿದೆ. ನಂತರ ತಿಳಿಯಲ್ಪಟ್ಟ ಭೌತಿಕಶಾಸ್ತ್ರದಲ್ಲಿ ಗರ್ಭ ಹೇಗೆ ತಯಾರಾಗುತ್ತದೋ ಹೇಳಿದ್ದಾರೆ. ಎರಡು ಶಾಸ್ತ್ರಗಳು ಒಂದೇ ವಿಧಾನವನ್ನು ತಿಳಿಸುತ್ತಿವೆಯಾಗಲಿ, ಎರಡು ವಿಧಾನಗಳನ್ನು ತೋರಿಸಲಿಲ್ಲ. ಅಂಡವು ಗರ್ಭವಾಗಿ ತಯಾರಾಗುವುದಕ್ಕೆ ವೀರ್ಯಕಣ ಅಗತ್ಯವೆಂದು ಭೌತಿಕಶಾಸ್ತ್ರ ಹೇಳಿದೆ. ತಾಯಿ ಅಂಡದಲ್ಲಿರುವ ಸೂಕ್ಷ್ಮಶಕ್ತಿಯನ್ನು, ತಂದೆ ವೀರ್ಯಕಣದಲ್ಲಿನ ಸೂಕ್ಷ್ಮಶಕ್ತಿಯನ್ನು ಬ್ರಹ್ಮವಿದ್ಯಾಶಾಸ್ತ್ರ ತಿಳಿಸಿದೆ.

ಒಂದು ಚೆಂಡನ್ನು ಉದಾಹರಣೆಯಾಗಿ ಸ್ಥೂಲ ಸೂಕ್ಷ್ಮಗಳನ್ನು ಕುರಿತು ಮೊದಲು ಹೇಳಿಕೊಂಡಿದ್ದೇವೆ. ಅಲ್ಲಿ ಸ್ಥೂಲ ಇಲ್ಲದಿದ್ದರೂ ಸೂಕ್ಷ್ಮವಿರುತ್ತದಾಗಲಿ, ಸೂಕ್ಷ್ಮ ಇಲ್ಲದೆ ಸ್ಥೂಲವಿರುವುದಿಲ್ಲವೆಂದು ಹೇಳಿಕೊಂಡಿದ್ದೇವೆ. ಭೌತಿಕವಾದ ತಾಯಿತಂದೆಯರ ಶರೀರಗಳಲ್ಲಿ ತಾಯಿ ಹೊಟ್ಟೆಯಲ್ಲಿನ ಅಂಡದಲ್ಲಿ ಪ್ರಕೃತಿ ಶಕ್ತಿ ಸೂಕ್ಷ್ಮವಾಗಿ ಇರುವಾಗ, ಹಾಗೆಯೇ ತಂದೆಯೊಂದರೆ ವೀರ್ಯಕಣದಲ್ಲಿ ಪರಮಾತ್ಮಶಕ್ತಿ ಸೂಕ್ಷ್ಮವಾಗಿ ಇದೆ. ಭೌತಿಕ ತಂದೆತಾಯಿಯರ ಅಂಡ ವೀರ್ಯಕಣ ಇದ್ದರೂ ಅವನಲ್ಲಿನ ಶಕ್ತಿ ಇಲ್ಲದಿರುವಾಗ ಅವರಿಗೆ ಸಂತತಿ ಉಂಟಾಗುವುದಿಲ್ಲ. ವೀರ್ಯಕಣದಲ್ಲಿನ ಪರಮಾತ್ಮಶಕ್ತಿಯಿಂದಲೇ ತಾಯಿಯ ಅಂಡವು ಶಿಶುವಾಗಿ ಬದಲಾಗುವುದಕ್ಕೆ ಮೊದಲಾಗುತ್ತದೆ. ಆದ್ದರಿಂದ ಗೀತೆಯಲ್ಲಿ **"ಸಕಲ ಜೀವರಾಶಿಗಳಿಗು ಬೀಜದಾತನು ನಾನೇ"** ಎಂದು ದೇವರು ಹೇಳುವುದು ನಡೆದಿದೆ.

ಈಗ ಒಂದು ಚಿಕ್ಕ ಪ್ರಶ್ನೆ ಬರಬಹುದು. ಅದೇನೆಂದರೆ! ಸ್ಥೂಲವಾದ ತಾಯಿಗೆ ಸ್ಥೂಲವಾದ ತಂದೆ ಇದ್ದಾಗಲೇ ಅಲ್ಲವೆ! ಆತನ ವೀರ್ಯಕಣದಲ್ಲಿನ ಪರಮಾತ್ಮಶಕ್ತಿಯಿಂದ ಸಂತತಿ ಉಂಟಾಗುತ್ತದೆ. ಸ್ಥೂಲವಾದ ತಾಯಿಯಾದ ಮರಿಯಮ್ಮ ಇದ್ದರೂ ಆಕೆಗೆ ವಿವಾಹವೇ ಆಗಲಿಲ್ಲ, ಯಾವ ಪುರುಷನ ಸ್ಪರ್ಶವಿಲ್ಲ. ಅಂಥದರಲ್ಲಿ ಮರಿಯಮ್ಮನ ಹೊಟ್ಟೆಯಲ್ಲಿ ರಜೋಕಣವಿದ್ದರೂ (ಅಂಡವಿದ್ದರೂ), ಆ ಕಣದೊಂದಿಗೆ ಬೆರೆಯುವುದಕ್ಕೆ ಪುರುಷನೊಂದರ ವೀರ್ಯಕಣ ಇಲ್ಲ. ಮೊದಲಿಗೆ ವೀರ್ಯಕಣ ಇಲ್ಲದಿರುವಾಗ ಅದರಲ್ಲಿನ ಶಕ್ತಿ ಸಹಾ ಇಲ್ಲ ಅಲ್ಲವೆ! ಅಂತಹದರಲ್ಲಿ ಮರಿಯಮ್ಮನಿಗೆ ಗರ್ಭ ಬರುವುದಕ್ಕೆ ಅವಕಾಶವೇ ಇಲ್ಲವಲ್ಲ! ಆದರೂ ವಿಚಿತ್ರವಾಗಿ ಗರ್ಭ ಬಂದಿದೆ, ಆಕೆ ಏಸುಗೆ ಜನ್ಮವನ್ನು ಕೊಡುವುದು ನಡೆದಿದೆ. ಈ ವಿಷಯ ಒಂದಕ್ಕೊಂದು ಸ್ವಲ್ಪವೂ ಸಂಬಂಧವಿಲ್ಲದೆ ಇದೆ. ವೀರ್ಯಕಣ ಇಲ್ಲದ್ದು ಗರ್ಭವು ಹೇಗೆ ಬಂದಿದೆ ಎಂಬ ಪ್ರಶ್ನೆ ಬಹಳ ಬಲವಾಗಿ ಉಳಿದುಹೋಗುತ್ತಿದೆ. ಇದಕ್ಕೆ ನೀವೇನು ಹೇಳುತ್ತೀರಾ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! 1400 ವರ್ಷಗಳ ಕೆಳಗೆ ಹೇಳಿದ ಖುರ್‌ಆನ್ ಗ್ರಂಥದಲ್ಲಿ ಆಲ್‌ಹಜ್ ಎಂಬ 22ನೆ ಸೂರಾದಲ್ಲಿ 8ನೆ ವಾಕ್ಯದಲ್ಲಿ ಜಿಬ್ರಯೇಲ್ ಹೇಳಿದ ವಿಷಯ ಹೀಗಿದೆ. "ಮಾನವರಲ್ಲಿ ಕೆಲವರು ಯಾವ ಜ್ಞಾನ ತಿಳಿಯದೆ ಹೋದರೂ, ಯಾವ ಮಾರ್ಗದರ್ಶಕತ್ವ ಇಲ್ಲದಿದ್ದರೂ, ಜ್ಯೋತಿಯನ್ನು ಪ್ರಸಾದಿಸುವ ಯಾವ ಗ್ರಂಥವೂ ಇಲ್ಲದೆಯೇ, ತಲೆ ಬಿರುಸುತನದಿಂದ ದೇವರ ಬಗ್ಗೆ ವಾದಿಸುತ್ತಿರುತ್ತಾರೆ." ಈ ವಾಕ್ಯಕ್ಕಿಂತ ಮೊದಲು 3600 ವರ್ಷಗಳ ಕೆಳಗೆ ಇಲ್ಲಿಗೆ 5000 ವರ್ಷಗಳ ಪೂರ್ವ ಭಗವಂತನಾಗಿ ಹುಟ್ಟಿದ ಕೃಷ್ಣನು ಹೇಳಿದ ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿ ಭಾಗಯೋಗವೆಂಬ ಅಧ್ಯಾಯದಲ್ಲಿ 23ನೆ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

**23ನೆ ಶ್ಲೋ॥ ಯಶ್ಶಾಸ್ತ್ರವಿಧಿ ಮುತ್ಸೃಜ್ಯ ವರ್ತತೇ ಕಾಮಕಾರತಃ,**
**ನಸಸಿದ್ಧಿ ಮವಾಪ್ನೋತಿ ನ ಸುಖಂ ನ ಪರಾಂ ಗತಿಮ್.**

**ಭಾವನೆ :–** "ಶಾಸ್ತ್ರವಿಧಾನವನ್ನು ಬಿಟ್ಟು ಇಷ್ಟಬಂದಂತೆ ಮಾತನಾಡುವವನು

ಏನನ್ನು ತಿಳಿಯಲಾರನು, ಏನನ್ನು ಹೊಂದಲಾರನು. ಅಂತಹವನಿಗೆ ಜ್ಞಾನ ಸುಖವಾಗಲಿ, ದೇವರ ವಿಧಾನವಾಗಲಿ ತಿಳಿಯದು.” ಈ ಎರಡು ವಾಕ್ಯಗಳನ್ನು ಅನುಸರಿಸಿ ನೋಡಿದರೆ ಶಾಸ್ತ್ರಾಧಾರ ಇಲ್ಲದೆ ಯಾವುದರ ಬಗ್ಗೆ ಮಾತನಾಡ ಬಾರದೆಂದು, ದೇವರ ವಿಷಯದಲ್ಲಿ ಪೂರ್ತಿಯಾಗಿ ಶಾಸ್ತ್ರವನ್ನು ಆಧಾರ ಮಾಡಿಕೊಂಡು ಮಾತನಾಡಬೇಕೆಂದು ತಿಳಿಯುತ್ತಿದೆ ಅಲ್ಲವೆ! ಆದ್ದರಿಂದ ಇಲ್ಲಿ ಭೌತಿಕಶಾಸ್ತ್ರವನ್ನು ಅನುಸರಿಸಿ ಮತ್ತು ಅಲ್ಲಿ ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ನಾವು ಉತ್ತರವನ್ನು ಹೇಳಿಕೊಳ್ಳಬೇಕಾಗಿದೆ. ಭೌತಿಕಶಾಸ್ತ್ರವನ್ನು ಅನುಸರಿಸಿ ಸ್ತ್ರೀವೊಂದರ ಅಂಡವನ್ನು, ಪುರುಷನೊಂದರ ವೀರ್ಯಕಣವನ್ನು ಆಧಾರ ಮಾಡಿಕೊಂಡು ಮಾತನಾಡಬೇಕಾದ ಅಗತ್ಯವಿದೆ. ಗರ್ಭ ಬಂದಿದೆ ಎಂದರೆ ಸ್ತ್ರೀ ಪುರುಷ ಸಂಬಂಧ ಅಂಡ ವೀರ್ಯಕಣ ತಪ್ಪದೆ ಇರಬೇಕಾಗಿದ್ದೆ. ವೀರ್ಯಕಣ ಇಲ್ಲದೆ ಗರ್ಭಬರುವುದಿಲ್ಲವೆಂದು ನಾವು ಸಹಾ ಹೇಳುತ್ತಿದ್ದೇವೆ. ವೀರ್ಯಕಣ ಇಲ್ಲದೆ ಗರ್ಭ ಬಂದಿದೆಯೆಂದು ಅಂದರೆ ಅದು ಭೌತಿಕಶಾಸ್ತ್ರಕ್ಕೆ ವಿರುದ್ಧವಾಗುತ್ತದೆ. ನಾವು ಯಾವಾಗಾಗಲಿ ಶಾಸ್ತ್ರವನ್ನು ಬಿಟ್ಟಾಗಲಿ, ಶಾಸ್ತ್ರಕ್ಕೆ ವಿರುದ್ಧವಾಗಿ ಆಗಲಿ ಮಾತನಾಡುವುದಿಲ್ಲ.

ಈಗ ಈ ವಿಷಯ ಚೆನ್ನಾಗಿ ಅರ್ಥವಾಗುವುದಕ್ಕೆ ಭಗವಂತನಾದ ಕೃಷ್ಣನ ಜನ್ಮವನ್ನು ತೆಗೆದುಕೊಂಡು ನೋಡೋಣ. ಶ್ರೀಕೃಷ್ಣನು ತಾಯಿತಂದೆಯ ರಾದ ದೇವಕೀದೇವಿ, ವಸುದೇವನ ಎಂಟನೆ ಸಂತತಿಯಾಗಿ ಕೃಷ್ಣನು ಹುಟ್ಟಿದ್ದಾನೆ. ಆಗಲೇ ಅವರಿಗೆ ಹುಟ್ಟಿದ ಏಳುಜನ ಸಂತಾನವನ್ನು ಅವರು ಕಳೆದುಕೊಂಡಿದ್ದಾರೆ. ಎಂಟನೆ ಸಂತಾನವನ್ನು ಕಂಸನು ಬಿಡದೆ ಸಾಯಿಸುತ್ತಾನೆಂದು ಸಹಾ ಅವರಿಗೆ ತಿಳಿದಿದೆ. ಅಂಥಹ ದುಃಖಕರವಾದ ಪರಿಸ್ಥಿತಿಯಲ್ಲಿ ಅವರ ತಲೆಯಲ್ಲಿ ಶೃಂಗಾರವೆಂಬುದೆ ಮೆದಲದಂತೆ ಹೋಗಿದೆ. ಒಂದುವೇಳೆ ಇದ್ದರೂ ಅದು ಅಪರೂಪವಾಗಿ ಇತ್ತು. ಮೇಲೆ ಮನುಷ್ಯರು ಹೇಗಿದ್ದರೂ ಶರೀರದೊಳಗೆ ನಡೆಯುವ ಕೆಲಸಗಳು ಕೆಲವು ನಡೆಯುತ್ತಿದ್ದವು. ಅದೇ ಪ್ರಕಾರ ದೇವಕೀದೇವಿ ಶರೀರದಲ್ಲಿ ಅಂಡ ಬಿಡುಗಡೆಯಾಗಿ ಗರ್ಭವಾಗಿ ಬದಲಾಗುವುದಕ್ಕೆ

ವೀರ್ಯಕಣಕ್ಕಾಗಿ ಕಾದಿದೆ. ಈ ವಿಧಾನ ಸ್ತ್ರೀ ಶರೀರದಲ್ಲಿ ಸ್ತ್ರೀ ಬಹಿಷ್ಠೆಯಾದ ನಂತರ 14ನೆ ದಿನ ಇರುತ್ತದೆಂದು, ಭೌತಿಕಶಾಸ್ತ್ರವನ್ನು ತಿಳಿದವರಿಗೆಲ್ಲರಿಗೂ ತಿಳಿದಿದೆ. ಸ್ತ್ರೀ ಗರ್ಭಧರಿಸುವುದಕ್ಕೆ ಬಹಿಷ್ಠೆಯಾದ ನಂತರ 14ನೆ ದಿನ ಮಾತ್ರವೇ ಅನುಕೂಲವಿರುತ್ತದೆ. ಆದರೆ ಕೃಷ್ಣ ಗರ್ಭಬಂದಾಗ ಅದಕ್ಕುಮುಂಚೆ ಏಳನೆ ದಿನವೇ ಅಂಡವೊಂದರ ಸೂಕ್ಷ್ಮದಲ್ಲಿ (ಪ್ರಕೃತಿಶಕ್ತಿಯಲ್ಲಿ) ವೀರ್ಯಕಣ ಒಂದರ ಸೂಕ್ಷ್ಮ (ಪರಮಾತ್ಮ ಶಕ್ತಿ) ಗರ್ಭವಾಗಿ ನಿಂತು ಸೂಕ್ಷ್ಮವಾಗಿ ಇದೆ. ದೇವಕೀದೇವಿಗೆ 14ನೆ ದಿನ ಅಂಡವು ಬಿಡುಗಡೆಯಾದರೂ ಆ ಮಾಸವೆಲ್ಲವೂ ಅವರ ಸೇರುವಿಕೆ ನಡೆಯಲಿಲ್ಲ. ದೇವಕೀದೇವಿ ತನ್ನ ಪತಿಯೊಂದಿಗೆ ಸೇರದೆ ಹೋದರೂ, ಆಕೆ ಶರೀರದೊಳಗೆ ವೀರ್ಯಕಣ ಸೇರದಿದ್ದರೂ, ಒಂದು ತಿಂಗಳಲ್ಲಿ 14ನೆ ದಿನ ಆಕೆಯ ಹೊಟ್ಟೆಯಲ್ಲಿನ ಅಂಡದೊಳಗೆ ಸೂಕ್ಷ್ಮ ಗರ್ಭ ಸೇರಿಹೋಗಿ, ಸ್ಥೂಲಗರ್ಭವಾಗಿ ಬೆಳೆಯುವುದಕ್ಕೆ ಮೊದಲುಮಾಡಿದೆ. ಆ ವಿಷಯ ಮೇಲಿರುವ ತಂದೆತಾಯಿಯರಿಗೆ ತಕ್ಷಣ ತಿಳಿಯಲಿಲ್ಲ. ತಾಯಿ ಹೊಟ್ಟೆಯಲ್ಲಿ ಗರ್ಭ ನಿಂತ ನಂತರ ಎರಡನೆ ತಿಂಗಳಲ್ಲಿ ಆ ವಿಷಯ ತಿಳಿಯುತ್ತದೆ. ಹಾಗೇ ತಿಳಿದರೂ 14ನೆ ದಿನವೇ ತಾವು ಸೇರಿದ್ದೇವಾ ಇಲ್ಲವಾ ಎಂಬ ವಿಷಯ ಯಾರೂ ಆಲೋಚಿಸುವುದಿಲ್ಲ. ಹಾಗೆ ಆಲೋಚಿಸಿದರೆ ಸ್ತ್ರೀಯರೆಲ್ಲರೂ ಭೌತಿಕಶಾಸ್ತ್ರದ ಪ್ರಕಾರವೇ 14ನೆ ದಿನವೇ ಗರ್ಭ ಧರಿಸಿದರೂ, ಖಚಿತವಾಗಿ ಅವರ ಪತಿಯರಾದ ಪುರುಷರು ಅವರೊಂದಿಗೆ ಶಾರೀರಕವಾಗಿ ಆ ದಿನವೇ ಸೇರಿರುತ್ತಾರೆಂಬ ನಂಬಿಕೆ ಇಲ್ಲ. ಆ ದಿನ ಸೇರಿದವರು ಸಹಾ ಕೆಲವರಿರಬಹುದು. ಪತಿ ಸೇರದೆ ಹೋದರೂ 14ನೆ ದಿನವೇ ಗರ್ಭಧಾರಣೆ ಹೇಗೆ ನಡೆದಿದೆ ಎಂದು ನೀವು ನನ್ನನ್ನು ಕೇಳಬಹುದು. ನಿಮಗೆ ಅಲ್ಲ ಯಾರಿಗಾದರೂ ಈ ಪ್ರಶ್ನೆಬರುತ್ತದೆ. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ. ನಿಮಗೆ ತಿಳಿಯದ ವಿಷಯ ಮತ್ತೊಂದಿದೆ ಅದೇನೆಂದರೆ! ಪ್ರಪಂಚವೆಲ್ಲಾ ಇರುವ ಮನುಷ್ಯರ ಜನಾಭಾದಲ್ಲಿ 14ನೆ ದಿನವೇ ಗರ್ಭ ಧರಿಸಿದ ಸ್ತ್ರೀಯರಲ್ಲಿ ಕೇವಲ 30 ರಷ್ಟು ಜನರೇ ಆ ದಿನ ತಮ್ಮ ಪತಿಯೊಂದಿಗೆ ಸೇರಿದ್ದಾರೆಂದು, ಸುಮಾರು 70 ರಷ್ಟು ಜನರು ಆ ದಿನ ಸಂಪರ್ಕ (ಸಂಯೋಗ, ಸಂಭೋಗ) ಮಾಡದವರಿದ್ದಾರೆಂದು ಹೇಳಬಹುದು.

ಶೇ.39 ರಷ್ಟು ಜನರು ತಮ್ಮ ಪುರುಷರೊಂದಿಗೆ ಸೇರಿದ್ದಾರೆ ಆದ್ದರಿಂದ ಭೌತಿಕಶಾಸ್ತ್ರದ ಪ್ರಕಾರ 14ನೆ ದಿನವೇ ಗರ್ಭ ಧರಿಸಿದ್ದಾರೆನ್ನುವುದರಲ್ಲಿ ತಪ್ಪಿಲ್ಲ. ಆದರೆ ಅತ್ಯಧಿಕವಾಗಿ ಶೇ.70 ರಷ್ಟು ಜನರು ಆ ದಿನ ತಮ್ಮ ಪತಿಯರೊಂದಿಗೆ ಕಲಿಯದೆ 14ನೆ ದಿನವೇ ಗರ್ಭ ನಿಲ್ಲುವುದು ನಡೆಯುತ್ತಿದೆ. ಹಾಗೆ ನಡೆಯುವುದಕ್ಕೆ ಎರಡು ವಿಧಗಳ ಕಾರಣಗಳಿವೆ. ಒಂದು ಸ್ತ್ರೀಯೊಂದಿಗೆ ತನ್ನ ಪತಿ 14ನೆ ದಿನ ಸೇರದಿದ್ದರೂ ಅದಕ್ಕುಮುಂಚೆ 13ನೆ ದಿನವಾಗಲಿ ಇಲ್ಲವೆ 12ನೆ ದಿನವಾಗಲಿ ಸೇರಿದ್ದರೆ ಆ ವೀರ್ಯಕಣಗಳು ಎರಡು ಇಲ್ಲವೇ ಮೂರು ದಿನಗಳವರೆಗೂ ಸ್ತ್ರೀ ಹೊಟ್ಟೆಯಲ್ಲಿ ಇರುವುದಕ್ಕೆ ಅವಕಾಶವಿದೆ. ಅಂತಹ ವೀರ್ಯಕಣದಿಂದ ಸಹಾ ಸ್ತ್ರೀ 14ನೆ ದಿನವೇ ಗರ್ಭ ಧರಿಸುವುದಕ್ಕೆ ಅವಕಾಶ ಇದೆ. ಆದರೆ 12,13 ದಿನಗಳಲ್ಲಿ ನಡೆದ ಸಂಪರ್ಕದಿಂದ ಬಂದಿರುವ ವೀರ್ಯಕಣಗಳು ಅನೇಕ ಕಾರಣಗಳಿಂದ ಬಹಳಮಟ್ಟಿಗೆ ಕೆಟ್ಟುಹೋಗಿ ಗರ್ಭವಾಗಿ ಪರಿವರ್ತ ನೆಯಾಗುವುದಕ್ಕೆ ಅನುಕೂಲ ಇರುವುದಿಲ್ಲ. ಮೊದಲು ನಡೆದ ಸೇರುವಿಕೆಯಿಂದ ಬಂದಿರುವ ವೀರ್ಯಕಣಗಳು ಸುಮಾರು ಅರ್ಧಕ್ಕಿಂತ ಹೆಚ್ಚು ತಮ್ಮ ಸಾಮರ್ಥ್ಯವನ್ನು ಕಳೆದುಕೊಂಡಿರುತ್ತದೆ. ಒಂದುವೇಳೆ ಅಂತಹ ವೀರ್ಯಕಣಗಳು ಕೆಲವಿದ್ದರೂ ಅವುಗಳಿಂದ ಗರ್ಭಬರುವುದು ಕೇವಲ 20 ರಷ್ಟು ಜನರಿಗೆ ಮಾತ್ರವೇ ನಡೆಯುತ್ತಿರುತ್ತದೆ. ಸ್ತ್ರೀ ಬಹಿಷ್ಠಿಯಾದ ನಂತರ 14ನೆ ದಿನವೇ ಅಂಡ (ಪಿಂಡವಾಗಿ ಬದಲಾಗುವುದಕ್ಕೆ ಅನುಕೂಲವಾದ ಪದಾರ್ಥ) ತಯಾರಾಗಿ ಸ್ತ್ರೀ ಹೊಟ್ಟೆಯ ಮುಂದಿನ ಭಾಗದ (ಯೋನಿಯ ಮುಂದಿನ ಭಾಗದ) ಹತ್ತಿರಕ್ಕೆ ಬಂದಿರುತ್ತದೆ. ಅಂಡವು ತಯಾರಾಗಿ ಬಂದ ನಂತರ ಕೇವಲ ಒಂದು ದಿನ ಮಾತ್ರವೇ (24 ಗಂಟೆಗಳು ಮಾತ್ರವೇ) ಪಿಂಡವಾಗಿ ಬದಲಾಗುವುದಕ್ಕೆ ಅವಕಾಶವಿರುತ್ತದೆ. 24 ಗಂಟೆಗಳ ನಂತರ ಅಂಡ ಯೊನಿಯೊಳಗಿನ ಭಾಗದೊಳಗೆ ಹೋಗಿ ನಿಲ್ಲುತ್ತದೆ. ಯೋನಿಯ ಮುಂದಿನ ಭಾಗದಲ್ಲಿ ಇರುವಾಗ ಅದು 24 ಗಂಟೆಗಳ ಕಾಲದಲ್ಲಿ ವೀರ್ಯಕಣದಿಂದ ಗರ್ಭ ಬರುವುದಕ್ಕೆ ಅವಕಾಶ ಇದೆ. ಕೆಲವು ಸ್ತ್ರೀಯರ ಶರೀರದಲ್ಲಿ ಅಂಡ 24 ಗಂಟೆಗಳಲ್ಲಿ ಅಲ್ಲದೇ ಅವರವರ ಆರೋಗ್ಯವನ್ನನುಸರಿಸಿ 22 ಗಂಟೆಗಳಲ್ಲಾಗಲಿ, 23

ಗಂಟೆಗಳಲ್ಲಾಗಲಿ ಗರ್ಭಧರಿಸುವ ಅವಕಾಶವಿದೆ. ಇದೆಲ್ಲವೂ ಭೌತಿಕ ಶಾಸ್ತ್ರವನ್ನು ಅನುಸರಿಸಿ ಹೇಳುತ್ತಿದ್ದೇವೆ.

ಸ್ತ್ರೀಗೆ ಬಹಿಷ್ಠಿಯಾದ ದಿನದಿಂದ 12, 13, 14 ದಿನಗಳಲ್ಲಿ ಸೇರುವಿಕೆ ನಡೆದಿದ್ದರೂ ವೀರ್ಯಕಣದಲ್ಲಿನ ಅನೇಕ ಲೋಪಗಳಿಂದ ಆ ಸೇರುವಿಕೆಯಲ್ಲಿನ ವೀರ್ಯಕಣಗಳು ಮುಂದಕ್ಕೆ ಹೋಗಲಾರದೆ ಅಂಡವನ್ನು ಸೇರಲಾರದೆ ಹೋಗುತ್ತಿರುವವೂ ಕೂಡಾ ಬಹಳಜನರಲ್ಲಿ ಇರಬಹುದು. ಇಷ್ಟು ವಿಧಗಳ ಎಲ್ಲಾ ವಿಧಗಳಾಗಿ ಗ್ರಹಿಸಿದ ನಂತರ ಒಬ್ಬ ಸ್ತ್ರೀಗೆ ತನ್ನ ಪುರುಷನ ಮೂಲಕ ಶೇ.50 ಅಥವಾ 40 ರಷ್ಟು 14ನೆ ದಿನ ಗರ್ಭ ಧರಿಸುವುದಕ್ಕೆ ಸಾಧ್ಯವಿದೆ. 12,13 ದಿನಗಳಲ್ಲಿ ನಡೆದ ಸಂಪರ್ಕದ ಮೂಲಕ ಬಂದಿರುವ ವೀರ್ಯಕಣಗಳಿಂದ 20 ರಷ್ಟು 14ನೆ ದಿನ ನಡೆದ ಸಂಪರ್ಕದ ಮೂಲಕ ಬಂದಿರುವ ವೀರ್ಯಕಣಗಳ ಮೂಲಕ ಶೇ.20ರಷ್ಟು 14ನೆ ದಿನ ನಡೆದ ಸಂಪರ್ಕದ ಮೂಲಕ ಬಂದಿರುವ ವೀರ್ಯಕಣಗಳ ಮೂಲಕ 30 ಅಥವಾ 20 ರಷ್ಟು ಸೇರಿಸಿ ಒಟ್ಟಾರೆ 50 ಅಥವಾ 40 ರಷ್ಟು ಜನರು ಮಾತ್ರ ತಮ್ಮ ಭೌತಿಕ ಪತಿಗಳ ಮೂಲಕ ಗರ್ಭ ಧರಿಸುವುದು ನಡೆದಿದೆ. ಉಳಿದ ಶೇ.50 ರಷ್ಟು ಜನ ಸ್ತ್ರೀಯರಿಗೆ (ಅರ್ಧಜನ ಸ್ತ್ರೀಯರಿಗೆ) ಅವರ ಭೌತಿಕ ಪತಿಯರಿಂದ ವೀರ್ಯಕಣ ಬರದಿದ್ದರೂ, 12,13, 14 ದಿನಗಳಲ್ಲಿ ಸಂಪರ್ಕ ನಡೆಯದಿದ್ದರೂ, 14ನೆ ದಿನ 50, 40 ರಷ್ಟು ಮಂದಿ ಸ್ತ್ರೀಯರು ಗರ್ಭ ಧರಿಸುವುದು ನಡೆಯುತ್ತಿದೆ. ಪ್ರಪಂಚ ಒಟ್ಟಾರೆ ಜನಸಂಖ್ಯೆಯಲ್ಲಿ ನೂರಕ್ಕೆ ಐವತ್ತುಜನ ಅಥವಾ ನಲವತ್ತುಜನ ಮಾತ್ರ ಅವರ ಭೌತಿಕ ತಂದೆಯ ವೀರ್ಯಕಣದಿಂದ ಹುಟ್ಟಿದ್ದಾರೆ. ಉಳಿದವರ ಹುಟ್ಟುವಿಕೆಗೆ ಕಾರಣ ಪುರುಷನ ವೀರ್ಯಕಣ ಅಲ್ಲವೆಂದೇ ಹೇಳಬಹುದು. ಸ್ತ್ರೀಗೆ ಪುರುಷನ ಸಂಪರ್ಕದಿಂದ ಸಂಬಂಧ ಇಲ್ಲದೆ ಸ್ತ್ರೀಗೆ 14ನೆ ದಿನ ಗರ್ಭಧಾರಣೆ ನಡೆಯುವ ವಿಧಾನ ಸಹಾ ಇದೆ. ಭೌತಿಕ ಪುರುಷನ ವೀರ್ಯಕಣದಿಂದ ಗರ್ಭ ಧರಿಸುವ ವಿಧಾನ ಭೌತಿಕಶಾಸ್ತ್ರಕ್ಕೆ ಸಂಬಂಧಿಸಿರುವುದು. ಇದು ಮನುಷ್ಯರೆಲ್ಲರಿಗೂ ತಿಳಿದ ಸೈನ್ಸು ಅಥವಾ ವಿಜ್ಞಾನ ಎಂದು ಹೇಳಬಹುದು. ಆದರೆ ಮನುಷ್ಯರೆಲ್ಲರಿಗೂ ತಿಳಿಯದ ವಿಧಾನ ಮತ್ತೊಂದು ಇದೆ. ಅದು ಸಾಧಾರಣ ಸೈನ್ಸಾಗಿ ಅಲ್ಲದೆ

ಸೂಪರ್ ಸೈನ್ಸಾಗಿದೆ. ಸೂಪರ್ ಸೈನ್ಸು ಒಂದರ ವಿಧಾನದಲ್ಲಿ ಎಂದರೆ ಬ್ರಹ್ಮವಿದ್ಯಾಶಾಸ್ತ್ರ ವಿಧಾನದಲ್ಲಿ ಭೌತಿಕ ಪುರುಷನ ಸಂಬಂಧವಿಲ್ಲದೆ ಸ್ತ್ರೀ ರುತುಕ್ರಮದಿಂದ 14ನಡ ದಿನ ಗರ್ಭ ಧರಿಸುತ್ತಿದೆ. ಹಾಗೇ ಭೌತಿಕವಾದ ವೀರ್ಯಕಣ ಇಲ್ಲದೆ ಹುಟ್ಟಿದವರು ಇಂದು ಭೂಮಿಮೇಲಿರುವ ಜನಸಂಖ್ಯೆಯಲ್ಲಿ ಶೇ.50,60 ರಷ್ಟು ಜನರು ಇದ್ದಾರೆ. ಉಳಿದ ಶೇ.50,40 ರಷ್ಟು ಮಂದಿ ಅವರ ಭೌತಿಕ ತಂದೆಯ ವೀರ್ಯಕಣದಿಂದ ಹುಟ್ಟಿದವರೆಂದು ಹೇಳಬಹುದು. ಈ ವಿಷಯ ಯಾರಿಗೆ ತಿಳಿಯದ ರಹಸ್ಯವಾಗಿ ಇದೆ.

ವಿವಾಹವಾಗಿದ್ದು ತಮ್ಮ ಪತಿಯರಿರುವ ಸ್ತ್ರೀಯರಿಗೆ ಗರ್ಭ ನಿಂತಾಗ, ಪ್ರತಿಯೊಬ್ಬ ಪತಿಯು ನನ್ನಿಂದಲೇ ನನ್ನ ಹೆಂಡತಿಗೆ ಗರ್ಭಬಂದಿದೆ ಅಂದು ಕೊಳ್ಳುತ್ತಾನೆ. ಯಾವ ಸ್ತ್ರೀ ಆದರೂ ನನ್ನ ಗಂಡನಿಂದಲೇ ಗರ್ಭ ಬಂದಿದೆ ಅಂದುಕೊಳ್ಳುತ್ತಾಳೆ. ಆದರೆ ಹಾಗೆ ಗರ್ಭ ಬರುವುದಕ್ಕೆ ಶೇ.40, 50 ರಷ್ಟು ಮಾತ್ರವೇ ಅವಕಾಶ ಇದೆ, ಎಂದು ಯಾರಿಗೂ ತಿಳಿಯದು. ಆದ್ದರಿಂದ ಹತ್ತುಜನ ಮಕ್ಕಳಿರುವ ತಾಯಿ ಅದರಲ್ಲಿ ನಾಲ್ಕುಜನರೋ, ಐದುಜನರೋ ನನ್ನ ಗಂಡನ ವೀರ್ಯಕಣದಿಂದ (ನನ್ನ ಗಂಡನ ಸಂಬಂಧದಿಂದ) ಹುಟ್ಟಿದ್ದಾ ರೆಂದು, ಉಳಿದ ಐದು ಆರು ಜನ ನನ್ನ ಗಂಡನ ಸಂಬಂಧವಿಲ್ಲದೆ ಹುಟ್ಟಿದ್ದಾ ರೆಂದು ಹೇಗೆ ಅಂದುಕೊಳ್ಳುತ್ತಾಳೆ? ಆದರೆ ಇರುವ ಸತ್ಯವನ್ನೂ, ನಡೆಯುತ್ತಿರುವ ವಾಸ್ತವ ವಿಧಾನವನ್ನೂ ತಿಳಿಯದಿರುವುದರಿಂದ, ಎಲ್ಲರೂ ತಿಳಿಯದ ವಿಧಾನದಲ್ಲಿ ಇದ್ದಾರೆ. ಮದುವೆಯಾದವರು ತಮ್ಮ ಗಂಡನಿಂದಲೇ ಸಂತತಿ ನಡೆದಿದೆಯೆಂದು ಅಂದುಕೊಳ್ಳುವುದು ತಿಳಿಯದ ವಿಧಾನವೇಯಾಗಲಿ, ಹಾಗೆ ಅಂದುಕೊಳ್ಳುವು ದರಲ್ಲಿ ತಪ್ಪಿಲ್ಲ, ಅದನ್ನು ಯಾರೂ ವಿಮರ್ಶಿಸುವುದಿಲ್ಲ. ಆದರೆ ಒಬ್ಬ ಸ್ತ್ರೀಗೆ ವಿವಾಹ ಆಗದಮುಂಚೆಯೇ, ತನಗೆ ಭೌತಿಕ ಪುರುಷನು ಇಲ್ಲದೆಯೇ, ಪುರುಷ ಶರೀರೊಂದಿಗೆ ಸಂಬಂಧ ಇಲ್ಲದಮೊದಲೆ ಗರ್ಭಬಂದರೆ, ಅದು ಗಂಡನಿಂದ ಬರಲಿಲ್ಲ, ಮದುವೆಯಾಗದ ಸ್ತ್ರೀಗೆ ಗಂಡ ಇಲ್ಲದಿರುವುದರಿಂದ ಆಕೆ ಗರ್ಭ ಅಕ್ರಮ ಸಂಬಂಧದಿಂದ ಬಂದಿದೆಯೆಂದು ಅಂದುಕೊಳ್ಳುವುದಕ್ಕೆ ಶೇಕಡ

ನೂರರಷ್ಟು ಅವಕಾಶವಿದೆ. ಅಂತಹ ಅವಕಾಶ ಇರುವುದರಿಂದ ಯಾರಿಗೂ ವಿವಾಹ ಆಗದಮೊದಲೇ ಗರ್ಭ ಬರುವಂತೆ ದೇವರು ಮಾಡಿಲ್ಲ ಆದರೆ ತನ್ನ ವಿಧಾನ ಮತ್ತೊಂದು ಇದೆಯೆಂದು ತಿಳಿಸುವುದಕ್ಕೋಸ್ಕರ, ಎಲ್ಲಿಯೋ ಒಂದುಕಡೆ, ಯಾವುದೋ ಒಂದು ಆಧಾರವನ್ನು ತೋರಿಸಬೇಕಾದ ಅವಶ್ಯಕತೆ ಇದೆ. ಹಾಗೆ ತೋರಿಸದೆಹೋದರೆ ಬ್ರಹ್ಮವಿದ್ಯಾ ಶಾಸ್ತ್ರವೊಂದರ ವಿಧಾನ ಯಾರಿಗೂ ತಿಳಿಯದಂತೆ ಹೋಗುತ್ತದೆ. ಆದ್ದರಿಂದ ಭೂಮಿಮೇಲೆ ಒಂದುಕಡೆ ವಿವಾಹವಾಗದ ಸ್ತ್ರೀ, ಯಾವ ಭೌತಿಕ ಪುರುಷನೊಂದಿಗೆ ಸಂಬಂಧವಿಲ್ಲದ ಸ್ತ್ರೀಯಾದ ಮರಿಯಮ್ಮ ಏಸುನನ್ನು ಶಿಶುವಾಗಿ ಪ್ರಸವಿಸಿದ್ದಾಳೆ. ಆದರೆ ಅದು ಹೇಗೆ ನಡೆದಿದೆ ಎಂಬ ಪ್ರಶ್ನೆಗೆ ಮನುಷ್ಯರೆಲ್ಲರೂ ಅಂದುಕೊಂಡಂತೆ ಅಂದುಕೊಳ್ಳುವುದು ನಡೆದಿದೆ.

ಮನುಷ್ಯರೆಲ್ಲರೂ ಪುರುಷರು ತಮ್ಮನ್ನು ತಮ ಸ್ತ್ರೀಗೆ ಪತಿಯಾಗಿ, ಸ್ತ್ರೀಯರು ತಮ್ಮ ಪುರುಷನಿಗೆ ಪತ್ನಿಯಾಗಿ ಹೇಳಿಕೊಳ್ಳುವುದು ಅಭ್ಯಾಸ, ಭೌತಿಕವಾಗಿರುವ ಸಂಬಂಧ ಸಹಾ ಅಷ್ಟೇ. ಒಂದು ಜತೆಯಲ್ಲಿನ ಪುರುಷನು ಪತಿಯಾಗಿ, ಸ್ತ್ರೀ ಪತ್ನಿಯಾಗಿ ಹೇಳಿಕೊಳ್ಳುವುದು ತಪ್ಪಿಲ್ಲ. ಆದರೆ ಪ್ರತಿ ಸ್ತ್ರೀಗು ಮದುವೆಯಾಗದ ಮುಂಚೆಯೇ ಒಬ್ಬ ಪತಿ ಇದ್ದಾನೆಂಬ ವಿಷಯ ತಿಳಿಯದು. ಪ್ರತಿ ಸ್ತ್ರೀಗು ಕಾಣಿಸದ ಪತಿಯಾಗಿ ದೇವರು ಚಿಕ್ಕಂದಿನಿಂದ ಇರುವಾಗ, ನಂತರ ಯುಕ್ತವಯಸ್ಸಿನಲ್ಲಿ ಮತ್ತೊಬ್ಬ ಪತಿಯನ್ನು ಮದುವೆ ಮಾಡಿಕೊಳ್ಳುತ್ತಿದ್ದಾಳೆ. ಮದುವೆಯಾದ ಸ್ತ್ರೀಗೆ ಕಾಣಿಸುವ ಪತಿ ಮಧ್ಯದಲ್ಲಿ ಬಂದವನಾದ್ದರಿಂದ, ಕಾಣಿಸದ ಪತಿ ಮೊದಲಿನಿಂದ ಇದ್ದಾನೆ. ಮಧ್ಯದಲ್ಲಿ ಬಂದಿರುವ ಪತಿ ಮಧ್ಯದಲ್ಲಿ ಹೋಗುವುದು ಸಹಾ ನಡೆಯುತ್ತಿದೆ. ಆದರೆ ಶಾಶ್ವತ ಪತಿಯಾದ ದೇವರು ಯಾರನ್ನು ಮಧ್ಯದಲ್ಲಿ ಬಿಟ್ಟುಹೋಗುವುದಿಲ್ಲ. ಭೌತಿಕವಾಗಿ ಕಾಣಿಸುವ ಪತಿ ಮನೆಯಲ್ಲಿರುವಾಗ, ಅಭೌತಿಕವಾಗಿ ಕಾಣಿಸದ ಪತಿ ತನ್ನ ಶರೀರದಲ್ಲಿಯೇ ಇದ್ದಾನೆ. ಭೌತಿಕ ಪತಿ ಕಾಣಿಸಿ ಮಾತನಾಡುತ್ತಾನೆ. ಅಭೌತಿಕಪತಿ ಕಾಣಿಸುವುದಿಲ್ಲ, ಮಾತನಾಡುವುದಿಲ್ಲ. ಪತಿಯ ಮೂಲಕ ಪತ್ನಿಗೆ ಸಂತತಿ ಉಂಟಾಗುತ್ತದೆಂಬ

ಸೂತ್ರದ ಪ್ರಕಾರ ಕಾಣಿಸುವ ಪತಿಯ ಮೂಲಕ ಮಕ್ಕಳು ಹುಟ್ಟಿದಂತೆ, ಕಾಣಿಸದ ಪತಿಯ ಮೂಲಕ ಸಹಾ ಮಕ್ಕಳು ಹುಟ್ಟುವುದು ನಡೆಯುತ್ತಿದೆ. ಆದರೂ ಯಾರಿಗೂ ಈ ವಿಧಾನ ತಿಳಿಯದು. ಎಲ್ಲಿಯಾದರೂ ಮದುವೆಯಾಗದ ಸ್ತ್ರೀಗೆ ಸಂತತಿ ಉಂಟಾದರೆ ಅದು ಅಕ್ರಮ ಸಂಬಂಧವೇ ಎಂದು ಎಲ್ಲರೂ ಹೇಳುತ್ತಿದ್ದಾರೆ. ಮದುವೆಯಾಗದ ಮುಂಚೆ ಸಂತತಿ ಹೊಂದಿದವರು ಕೆಲವರಿದ್ದರೂ, ಅಲ್ಲಲ್ಲಿ ಅಂತಹ ಸಂಘಟನೆಗಳು ನಡೆದರೂ, ಅವು ಎಲ್ಲಾ ನಮಗೆ ತಿಳಿಯವುದಿಲ್ಲ. ಆದರೆ ನಮಗೆ ಈಗ ಪ್ರಶ್ನೆಯಾಗಿ ಬಂದಿರುವ ಏಸು ಜನನ ಮಾತ್ರ ಬಹಳ ಜನರಿಗೆ ತಿಳಿದಿದೆ. ಆದರೆ ಅದರಲ್ಲಿನ ನಿಜ ಯಾರಿಗೂ ತಿಳಿಯದು.

ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಮರಿಯಮ್ಮ ಎಂಬ ಸ್ತ್ರೀಗೆ ಮದುವೆ ಆಗದೆಯೇ, ಯಾವ ಪುರುಷನೊಂದಿಗೆ ಸಂಬಂಧ ಇಲ್ಲದೆಯೇ ಗರ್ಭಧರಿಸುವುದು ನಡೆದಿದೆ. ಕೊನೆಗೆ ಆಕೆ ಏಸುಗೆ ಜನ್ಮವನ್ನು ಕೊಟ್ಟಿದ್ದಾಳೆ. ಆದರೆ ಈಗ ಒಬ್ಬ ಸ್ತ್ರೀಗೆ ಪತಿ ಇದ್ದರೂ ಭೌತಿಕ ಪತಿಯೊಂದಿಗೆ ಎಂತಹ ಸಂಬಂಧವಾಗಲಿ, ಸಂಪರ್ಕವಾಗಲಿ ಇಲ್ಲದಂತೆ ಗರ್ಭವುಬಂದು ಕುಮಾರನನ್ನು ಪ್ರಸವಿಸಿದ್ದಾಳೆ. ಆದರೆ ಇಲ್ಲಿ ಮಂಗಮ್ಮ ಎಂಬ ಸ್ತ್ರೀಗೆ ಮದುವೆಯಾಗಿದೆ ಪತಿ ಇದ್ದಾನೆ. ಅಲ್ಲಿ ಮರಿಯಮ್ಮಗೆ ಮದುವೆಯಾಗಲಿಲ್ಲ, ಪತಿಯಿಲ್ಲ. ಒಳಗೆ ಪುರುಷ ಸಂಬಂಧವಿಲ್ಲದೆ ಪುರುಷ ವೀರ್ಯಕಣದೊಂದಿಗೆ ಸಂಬಂಧವಿಲ್ಲದೆ ಗರ್ಭಬಂದಿದೆ. ಅಲ್ಲಿ ಇಬ್ಬರಿಗೂ ಒಂದೇ ವಿಧಾನದಿಂದ ನಡೆದಿದೆ. ಇಲ್ಲಿ ಮಂಗಮ್ಮನಿಗೆ ನಡೆದರೂ, ಅಲ್ಲಿ ಮರಿಯಮ್ಮನಿಗೆ ನಡೆದರೂ ಇಬ್ಬರಿಗೂ ಕಾಣಿಸದ ಪತಿಯಿಂದಲೇ ಗರ್ಭಬಂದಿದೆ. ಆದರೆ ಇಲ್ಲಿ ಮಂಗಮ್ಮನಿಗೆ ಮದುವೆಯಾಗಿದೆ ಕಾಣಿಸುವ ಪತಿಯಿದ್ದಾನೆ. ಅಲ್ಲಿ ಮರಿಯಮ್ಮನಿಗೆ ಮದುವೆಯಾಗಲಿಲ್ಲ, ಕಾಣಿಸುವ ಪತಿಯಿಲ್ಲ. ಮಂಗಮ್ಮನಿಗೆ ಪತಿ ಇದ್ದರೂ, ಮರಿಯಮ್ಮನಿಗೆ ಪತಿ ಇಲ್ಲದಿದ್ದರೂ ಇಬ್ಬರಿಗೂ ಕಾಣಿಸದ ಪತಿಯಾದವನಿಂದಲೇ ಗರ್ಭಬಂದಿದೆ. ಸೂಪರ್‌ಸೈನ್ಸು ಪ್ರಕಾರ ಭೌತಿಕ ಪತಿಯ ಸಂಪರ್ಕ ಇಲ್ಲದಿದ್ದರೂ,

ವೀರ್ಯಕಣದೊಂದಿಗೆ ಸಂಬಂಧ ಇಲ್ಲದಹಾಗೆ ಮಗಮ್ಮನಿಗಾಗಲಿ, ಮರಿಯಮ್ಮನಿಗಾಗಲಿ ಗರ್ಭ ಹೇಗೆ ಬಂದಿದೆ? ಎಂದು ಪ್ರಶ್ನಿಸಿಕೊಂಡು ಅದಕ್ಕೆ ಉತ್ತರವನ್ನು ನೋಡಿದರೆ ಹೀಗೆ ಇದೆ.

ಸ್ಥೂಲ, ಸೂಕ್ಷ್ಮ ಎಂದು ಎರಡನ್ನು ಮೊದಲೇ ಹೇಳಿಕೊಂಡಿದ್ದೇವೆ. ಸ್ಥೂಲವನ್ನು ಭೌತಿಕ ಎಂದೂ, ಸೂಕ್ಷ್ಮವನ್ನು ಅಭೌತಿಕ ಎಂದೂ ಹೇಳಿಕೊಳ್ಳಬಹುದು. ಭೌತಿಕ ಕಾಣಿಸುತ್ತದೆ, ಅಭೌತಿಕ ಕಾಣಿಸುವುದಿಲ್ಲ. ಭೌತಿಕ ಸತ್ಯ ಅಭೌತಿಕ ಅಸತ್ಯವೆಂದು ವಾದಿಸುವವರು ಭೂಮಿಮೇಲೆ ಬಹಳಜನ ಇದ್ದರೂ ಅಭೌತಿಕ ಇರುವುದು ವಾಸ್ತವವೇ. ಆದರೆ ಅದನ್ನು ಕುರಿತು ಯಾವ ಜ್ಞಾನವು ಅಭೌತಿಕವಾದಿಗಳಿಗೆ ತಿಳಿಯದು. ಸ್ಥೂಲ, ಸೂಕ್ಷ್ಮಗಳನ್ನು ಕುರಿತು ಹೇಳಿದಾಗ ಒಂದು ಚೆಂಡನ್ನು ಉದಹಾರಣೆ ಕೊಡುತ್ತಾ ಹೇಳುವುದು ನಡೆದಿದೆ. ಸ್ಥೂಲವಾಗಿ ಚೆಂಡು ಕಾಣಿಸಿದರೂ ಅದರಲ್ಲಿ ಕಾಣಿಸದ ಗಾಳಿ ಇದೆಯೆಂದು, ಕಾಣಿಸದ ಗಾಳಿಯೇ ಚೆಂಡಿನಲ್ಲಿ ಸೂಕ್ಷ್ಮವಾಗಿ ಇದೆಯೆಂದು, ಕಾಣಿಸುವ ಚೆಂಡಿನ್ನೊಂದರ ಮೇಲ್ಭಾಗವಾದ (ಚರ್ಮದ ಚೀಲ) ಅದರ ಸ್ಥೂಲವೆಂದು ಹೇಳಿಕೊಂಡಿದ್ದೇವೆ. ಅಷ್ಟೇಯಲ್ಲದೆ ಸೂಕ್ಷ್ಮವಾದ ಗಾಳಿ ಇದ್ದಾಗಲೇ ಚೆಂಡು ಇರುತ್ತದಾಗಲಿ, ಗಾಳಿ ಇಲ್ಲದೆ ಚೆಂಡು ಇರುವುದಿಲ್ಲ. ಚೆಂಡು ಇಲ್ಲದಿದ್ದರೂ ಗಾಳಿ ಇದೆ. ಗಾಳಿ ಇಲ್ಲದಿದ್ದರೆ ರಬ್ಬರ್‌ಚೀಲ ಇರುತ್ತದಾಗಲಿ ಚೆಂಡು ಇರುವುದಿಲ್ಲ. ಚೆಂಡನ್ನು ವಿಭಾಗಿಸಿ ನೋಡಿದರೆ ಸ್ಥೂಲವಾಗಿ ರಬ್ಬರ್‌ಚೀಲ (ತೋಲುತಿತ್ತಿ), ಸೂಕ್ಷ್ಮಗಾಳಿ ಇದ್ದಂತೆ ಅದರಲ್ಲಿಯೂ ಸ್ಥೂಲ ಸೂಕ್ಷ್ಮಗಳಿವೆಯೆಂದು ಮೊದಲೇ ಹೇಳಿಕೊಂಡಿದ್ದೇವೆ. ಒಂದು ಕಾಣಿಸುವ ವೀರ್ಯಕಣದಲ್ಲಿ ಮೇಲಿನ ಆಕಾರ ಅದರ ಸ್ಥೂಲವಾಗಿದ್ದು, ಅದರಲ್ಲಿನ ಕಾಣಿಸದ ಶಕ್ತಿ ಸೂಕ್ಷ್ಮವಾಗಿದೆ. ವೀರ್ಯಕಣದಲ್ಲಿ ಪರಮಾತ್ಮ ಶಕ್ತಿ ಕಾಣಿಸದಿರುವುದಾಗಿದೆ. ವೀರ್ಯಕಣದಲ್ಲಿನ ಪರಮಾತ್ಮಶಕ್ತಿ ಅದರಲ್ಲಿಯೇ ಅಲ್ಲದೆ ಅಣುವಣುವುನಲ್ಲಿಯೂ ವ್ಯಾಪಿಸಿದೆ. ಪ್ರತಿ ಪದಾರ್ಥದಲ್ಲಿಯೂ ವ್ಯಾಪಿಸಿರುವ ಪರಮಾತ್ಮ ಶಕ್ತಿ ವೀರ್ಯಕಣದಲ್ಲಿ ವೀರ್ಯಶಕ್ತಿಯಾಗಿ ಇದೆ. ಗಾಳಿ ಚೆಂಡಿನಲ್ಲಿ ಇದೆ. ಹೊರಗೂ ಸಹಾ ಇದೆ.

ಹೊರಗಿನ ಗಾಳಿ ಸರ್ವಸಾಧಾರಣವಾಗಿ ಇದೆ. ಚೆಂಡಿನಲ್ಲಿನ ಗಾಳಿ ಚೆಂಡನ್ನು ಎಗುರುವಂತೆ, ಉರುಳುವಂತೆ ಮಾಡುತ್ತಿದೆ. ಗಾಳಿಯಿಲ್ಲದ ಚೆಂಡು ಎಗರುವುದಿಲ್ಲ, ಉರುಳುವುದಿಲ್ಲ, ಹಾಗೆಯೇ ಪರಮಾತ್ಮ ಶಕ್ತಿ ಯಾವುದರಲ್ಲಿ ಕೆಲಸ ಮಾಡಿದರೂ ಅದಾಗಿಯೇ ಬದಲಾಗುತ್ತದೆ. ಹಾಗೆಯೇ ವೀರ್ಯಕಣದಲ್ಲಿರುವ ಶಕ್ತಿ ಸಂತಾನವನ್ನು ಉಂಟುಮಾಡುವುದಾಗಿರುತ್ತದೆ.

ಚೆಂಡಿನಲ್ಲಿನ ಗಾಳಿ ಚೆಂಡಾಗಿ ಎಗರಿದಂತೆ, ವೀರ್ಯಕಣದಲ್ಲಿನ ಶಕ್ತಿ ಸಂತಾನವಾಗಿ ಮಾರ್ಪಡುತ್ತಿದೆ. ಚೆಂಡಿನಲ್ಲಿನ ಗಾಳಿಯನ್ನು ತೆಗೆದುಹಾಕಿದರೆ ಆ ಗಾಳಿ ಚೆಂಡಿನ ಹೊರಗೆ ಬಂದು ಗಾಳಿ ಗಾಳಿಯಾಗಿಯೇ ಇರುತ್ತದೆ ಆದರೆ ಚೆಂಡು ಚೆಂಡಾಗಿ ಇರುವುದಿಲ್ಲ. ಸ್ಥೂಲ ಇಲ್ಲದಿದ್ದರೂ ಸೂಕ್ಷ್ಮ ವಿರುತ್ತದೆಯಾಗಲಿ, ಸೂಕ್ಷ್ಮ ಇಲ್ಲದೆ ಸ್ಥೂಲ ಇರುವುದಿಲ್ಲವೆಂಬುದು ಸೂತ್ರ. ಸೂತ್ರದ ಪ್ರಕಾರ ಚೆಂಡಿನಲ್ಲಿರುವಾಗ ಎಗುರುವಂತೆ ಶಕ್ತಿಯನ್ನುಕೊಟ್ಟಿರುವ ಗಾಳಿ, ಚೆಂಡಿನ ಹೊರಗಡೆ ಇರುವಾಗ ಸಹಾ ಗಾಳಿ ಮೇಲಕ್ಕೆ ಕೆಳಕ್ಕೆ ಎಗರುವಂತಹ ಶಕ್ತಿ ಹೊಂದಿದೆ. ಹಾಗೆಯೇ ಸ್ಥೂಲವಾದ ವೀರ್ಯಕಣದಲ್ಲಿ ಇಲ್ಲದ ಪರಮಾತ್ಮಶಕ್ತಿ ಹೊರಗಡೆ ಇದ್ದರೂ ವೀರ್ಯಕಣಶಕ್ತಿ ಹೊಂದಿದೆ. ಭಗವದ್ಗೀತೆಯಲ್ಲಿ ವಿಭೂತಿಯೋಗ 39ನೆ ಶ್ಲೋಕದಲ್ಲಿ "ಸರ್ವಜೀವರಾಶಿಗಳಿಗು ಬೀಜವು (ವೀರ್ಯಕಣ ಶಕ್ತಿಯು) ನಾನೇ, ಅವರ ಜನ್ಮಗಳಿಗೆ ಕಾರಣವಾದ ವೀರ್ಯ ಶಕ್ತಿಯು ನಾನೇ ಆದ್ದರಿಂದ ಈ ಚರಾಚರ ಪ್ರಪಂಚದಲ್ಲಿ ನನ್ನ ಸಂತತಿ ಅಲ್ಲದಿರುವವರು ಇಲ್ಲ." ಎಂದು ಹೇಳುವುದು ನಡೆದಿದೆ. ಸ್ಥೂಲವಾದ ವೀರ್ಯಕಣ ಇಲ್ಲದಿದ್ದರೂ ಸೂಕ್ಷ್ಮವಾದ ವೀರ್ಯಶಕ್ತಿಯಾಗಿರುವ ದೈವಶಕ್ತಿ ಸ್ಥೂಲವಾಗಿರುವ ಸ್ತ್ರೀ ಅಂಡದೊಳಗೆ ಪ್ರವೇಶಿಸುವುದರಿಂದ ಅಂಡವು ಫಲಧಿಕರಣ ಹೊಂದಿ ಏಕ ಕಣವಾಗಿರುವ ಅಂಡ ಎರಡಾಗಿ ಸೀಳಿಹೋಗಿ, ನಂತರ ಎರಡು ನಾಲ್ಕಾಗಿಯೂ, ನಾಲ್ಕು ಎಂಟಾಗಿ ಸೀಳಿಹೋಗುತ್ತಾ ಕಣ ವಿಭಜನೆ ನಡೆದು ಬೆಳೆಯುತ್ತಾ ಬಂದು ಶಿಶುವಾಗಿ ಬದಲಾಗಿಹೋಗುತ್ತದೆ. ವೀರ್ಯಕಣ ಸ್ಥೂಲವಾಗಿ ಕಾಣಿಸುವ ಸ್ಥೂಲ ಪತಿಯಿಂದ ಬರುತ್ತದೆ. ಹಾಗೆಯೇ ಸೂಕ್ಷ್ಮವಾದ ವೀರ್ಯಶಕ್ತಿ ಸೂಕ್ಷ್ಮವಾಗಿ ಕಾಣಿಸದಾಗಿದ್ದರೂ ಪರಮಾತ್ಮನಿಂದ ಬರುತ್ತದೆ.

ಆ ವಿಧವಾಗಿ ಅರ್ಧ ಜನಸಂಖ್ಯೆ ಎಲ್ಲವೂ ಸ್ಥೂಲ ವೀರ್ಯಕಣ ಇಲ್ಲದೆ ದೈವಶಕ್ತಿಯಿಂದ ಹುಟ್ಟಿದ್ದಾರೆಂದು ಹೇಳಬಹುದು. ನೂರಕ್ಕೆ ಐವತ್ತುಜನ ಹಾಗೆಯೇ ಹುಟ್ಟಿದಾಗ ಏಸು ಒಬ್ಬನು ಹಾಗೇ ಹುಟ್ಟಿದರೆ ಅದೇನು ಅಶ್ಚರ್ಯ ಅಲ್ಲವಾಗಲಿ, ಏಸುನನ್ನು ಹೆತ್ತ ತಾಯಿಗೆ ಸ್ಥೂಲವಾದ ಪತಿ ಇಲ್ಲದಿರುವುದು ಒಂದು ವಿಚಿತ್ರವಾಗಿದೆ. ಶಾಸ್ತ್ರ ತಿಳಿದವರಿಗೆ ಈ ವಿಷಯ ವಿಚಿತ್ರವಾಗದಿದ್ದರೂ, ಶಾಸ್ತ್ರ ತಿಳಿಯದವರಿಗೆ ಏಸು ಜನ್ಮ ವಿಚಿತ್ರವಾಗಿಯೇ ಕಾಣಿಸಿರಬಹುದು.

ಸ್ಥೂಲವಾದ ತಂದೆಗೆ ಸಂತತಿ ಆಗಿದೆಯೆಂದು ನಂಬುವ ಈ ಸಮಾಜದಲ್ಲಿ ಶೇ.50, 60 ರಷ್ಟು ಜನರು ಸ್ಥೂಲ ತಂದೆಗೆ ಹುಟ್ಟಲಿಲ್ಲ ಎಂದು ಹೇಳಿದಾಗ ಯಾರು ಸ್ಥೂಲ ತಂದೆಗೆ ಹುಟ್ಟಿದ್ದಾರೆ? ಯಾರು ಸೂಕ್ಷ್ಮತಂದೆಗೆ ಹುಟ್ಟಿದ್ದಾರೆಂದು ತಿಳಿಯುವುದಕ್ಕೆ ಅವಕಾಶವಿದೆಯಾ? ಎಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ. ಹುಟ್ಟಿದ ಸಂತತಿ ಸ್ತ್ರೀಯೊಂದರ ಸ್ಥೂಲ ಅಂಡ ಕಣವಿಭಜನೆ ಮೂಲಕ ಹುಟ್ಟುತ್ತಿದೆ. ಆದಕಾರಣ ಸೂಕ್ಷ್ಮಶಕ್ತಿಗೆ ಹುಟ್ಟಿದವರು ಸಹಾ ಸ್ಥೂಲವಾಗಿ ಕಾಣಿಸುತ್ತಿದ್ದಾರೆ. ಅಂತಹ ಸಂತತಿಯನ್ನು ಮೂರು ಭಾಗಗಳಾಗಿ ವಿಭಜಿಸಬಹುದು. ಅದರಲ್ಲಿ ಒಂದು ಪೂರ್ತಿ ತಾಯಿ ಹೋಲಿಕೆಗಳಿರುವವರು. ಎರಡು ಪೂರ್ತಿ ತಂದೆ ಹೋಲಿಕೆಗಳಿರುವವರು. ಮೂರು ತಾಯಿ ಹೋಲಿಕೆಗಳು ಕೆಲವು, ತಂದೆ ಹೋಲಿಕೆಗಳು ಕೆಲವು ಬೆರೆತು ಹುಟ್ಟಿದವರು ಇದ್ದಾರೆ. ಈ ಮೂರು ವಿಧಗಳಾಗಿ ಕಾಣಿಸುವವರನ್ನು ಕುರಿತು ಹೇಳುವುದಕ್ಕೆ ಶಾಸ್ತ್ರಬದ್ಧತೆ ಇಲ್ಲವಾಗಲಿ, ಪ್ರತ್ಯಕ್ಷ ಸತ್ಯವಾಗಿರುವುದರಿಂದ ವಿವರಿಸಿ ಹೇಳಿಕೊಳ್ಳಬಹುದು. ಫಲದೀಕರಣ ದಿನವಾದ 14ನೆ ದಿನ ಸ್ಥೂಲವಾಗಿರುವ ರಜೋಕಣದೊಂದಿಗೆ (ಅಂಡದೊಂದಿಗೆ) ಸ್ಥೂಲ ವಾಗಿರುವ ವೀರ್ಯಕಣ ಸೇರಿ ಗರ್ಭವಾಗಿ ಬದಲಾಗಿ ಬೆಳೆಯುತ್ತಾ ಬಂದಿರುವ ಶಿಶುವು ಹುಟ್ಟಿದ ಕೆಲವುದಿನಗಳಿಗೆ ಪೂರ್ತಿಯಾಗಿ ತಂದೆತಾಯಿಯರ ಇಬ್ಬರ ಹೋಲಿಕೆಗಳನ್ನು ಹೊಂದಿರುತ್ತಾನೆ. ಭೌತಿಕ ತಾಯಿ, ಭೌತಿಕ ತಂದೆಯ ಇಬ್ಬರ ಹೋಲಿಕೆಗಳು ಯಾರಲ್ಲಿ ಕಾಣಿಸುತ್ತವೊ ಅವರು ತಾಯಿ ಅಂಡದಿಂದ, ತಂದೆಯ ವೀರ್ಯದಿಂದ ಹುಟ್ಟಿದ್ದಾರೆಂದು ಹೇಳಬಹುದು. ಹಾಗೆಯೇ ಭೌತಿಕ

ತಂದೆಯೊಂದರ ವೀರ್ಯಕಣದೊಂದಿಗೆ ಅಲ್ಲದೇ, ಅಭೌತಿಕ ತಂದೆಯಾದ ದೇವರ ವೀರ್ಯಶಕ್ತಿ ಭೌತಿಕ ತಾಯಿಯೊಂದರ ಗರ್ಭದಲ್ಲಿ 14ನೆ ದಿನ ಸೇರಿ ಗರ್ಭವಾಗಿ ಮಾರ್ಪಡುವುದು ನಡೆದಾಗ ಭೌತಿಕ ತಂದೆಯ ಹೋಲಿಕೆಗಳು ಹೆಚ್ಚಾಗಿಹೊಂದಿರುವ ಸಂತಾನ ಹುಟ್ಟುತ್ತಾರೆ. ಅಂಥಹವರಲ್ಲಿ ತಾಯಿ ಹೋಲಿಕೆಗಳು ಇರುವುದಿಲ್ಲ. ಹಾಗೆಯೇ 14ನೆ ದಿನ ಅಂಡ ಬಿಡುಗಡೆಯಾದ ನಂತರ ಹನ್ನೆರಡು ಗಂಟೆಗಳು ಕಳೆದುಹೋದ ನಂತರ ಸೂಕ್ಷ್ಮವಾದ ದೈವವೊಂದರ ವೀರ್ಯಶಕ್ತಿ ಸ್ಥೂಲವಾದ ಅಂಡವನ್ನು ಸೇರಿ ಗರ್ಭವಾಗಿ ಬದಲಾದ ಶಿಶುವು ದೊಡ್ಡದಾದ ನಂತರ ಹೆಚ್ಚಾಗಿ ತಾಯಿ ಹೋಲಿಕೆಗಳು ಹೊಂದಿರುತ್ತದೆ. ಅಂಡದ ಬಿಡುಗಡೆಯ ನಂತರ 12 ಗಂಟೆಗಳವರೆಗೂ ಸೇರಿದ ವೀರ್ಯಶಕ್ತಿ ಹೆಚ್ಚಾಗಿ ಸ್ಥೂಲತಂದೆಯ ಹೋಲಿಕೆಗಳನ್ನು ಹೊಂದಿರುವಾಗ, 12 ಗಂಟೆಗಳ ನಂತರ ಅಂಡದಲ್ಲಿ ಸೇರಿದ ದೈವಶಕ್ತಿ ಹೆಚ್ಚಾಗಿ ಸ್ಥೂಲತಾಯಿ ಹೋಲಿಕೆಗಳನ್ನೊಂದಿ ಹುಟ್ಟಿದ ಸಂತತಿ ಒದಗಿಸುತ್ತದೆ. ಎಲ್ಲಿಯಾದರೂ ತಂದೆ ಹೋಲಿಕೆಗಳು ತಾಯಿ ಹೋಲಿಕೆಗಳು ಬೆರೆತು ಹುಟ್ಟಿದ ಶಿಶುವು ಭೌತಿಕಶಾಸ್ತ್ರವನ್ನು ಅನುಸರಿಸಿ ಹುಟ್ಟಿದವನೆಂದು ಹೇಳಬಹುದು. ಎಲ್ಲಿಯಾದರೂ ತಾಯಿ ಹೋಲಿಕೆಗಳು ಮಾತ್ರವೇ ಇದ್ದು ತಂದೆ ಹೋಲಿಕೆಗಳು ಇಲ್ಲದವನಾಗಲಿ, ತಂದೆ ಹೋಲಿಕೆಗಳಿದ್ದು ತಾಯಿ ಹೋಲಿಕೆಗಳು ಇಲ್ಲದವನಾಗಲಿ ಇದ್ದರೆ ಅಂಥವನ ಅಂಡವು ಸ್ಥೂಲದ್ದಾದರೂ, ವೀರ್ಯಕಣದಿಂದ ಅವನು ಹುಟ್ಟಲಿಲ್ಲವೆಂದು, ಅವನು ಕಾಣಿಸದ ವೀರ್ಯಶಕ್ತಿಯಿಂದ ಹುಟ್ಟಿದ್ದಾನೆಂದು ಹೇಳಬಹುದು. ಇದೆಲ್ಲವೂ ಸಾಧಾರಣ ಮನುಷ್ಯರ ವಿಧಾನವಾಗಿದ್ದು, ಭಗವಂತನು ಹುಟ್ಟಿದಾಗ ಅಂಡದಲ್ಲಿನ ಸೂಕ್ಷ್ಮಶಕ್ತಿ, ವೀರ್ಯಕಣದಲ್ಲಿನ ಸೂಕ್ಷ್ಮಶಕ್ತಿ ಎರಡೂ ಸೇರಿ ಸೂಕ್ಷ್ಮಗರ್ಭವಾಗಿ ಇದ್ದು, ಸ್ಥೂಲ ಶರೀರ ತಾಯಿಯೊಂದರ ಹೊಟ್ಟೆಯಲ್ಲಿ ಸ್ಥೂಲವಾಗಿ ಅಂಡ ಬಿಡುಗಡೆಯಾದಾಗ ಸೂಕ್ಷ್ಮವಾಗಿರುವ ಗರ್ಭ ಸ್ಥೂಲವಾಗಿರುವ ಅಂಡದೊಳಗೆ ಪ್ರವೇಶಿಸಿ ಸ್ಥೂಲ ಶರೀರವಾಗಿ ಬೆಳೆಯಲು ಆರಂಭತ್ತದೆ. ಅಂಥಹ ಶರೀರಕ್ಕೆ ಗರ್ಭದೊಳಗೆ ಜೀವಶಕ್ತಿಯಿದ್ದು ಸಜೀವವಾಗಿ ಹುಟ್ಟುತ್ತದೆ. ಸಜೀವವಾಗಿ ಯಾರೂ ಹುಟ್ಟುತ್ತಾರೊ ಅವನೇ ಭಗವಂತನು.

ಅಂಡ ಇಲ್ಲದಿದ್ದರೂ ಅಂಡದಲ್ಲಿನ ಪ್ರಕೃತಿಶಕ್ತಿಯೊಂದಿಗೆ, ವೀರ್ಯ ಇಲ್ಲದಿದ್ದರೂ ವೀರ್ಯಕಣದಲ್ಲಿನ ಪರಮಾತ್ಮಶಕ್ತಿ ಬೆರೆತಾಗ ಸೂಕ್ಷ್ಮಗರ್ಭದಲ್ಲಿಯೇ ಶಕ್ತಿಗಳು ಎರಡೂ ಸೇರಿ ಆತ್ಮವಾಗಿ ತಯಾರಾಗಿ ಹೋಗುತ್ತೀವೆ. ಆದ್ದರಿಂದ ಭಗವಂತನ ಶರೀರ ಮಾತ್ರ ತಾಯಿ ಗರ್ಭದಿಂದ ಸಜೀವವಾಗಿ ಹುಟ್ಟುತ್ತಿದೆಯೆಂದು ತಿಳಿಯುತ್ತಿದೆ. ತಾಯಿ ಗರ್ಭದಿಂದ ಸಜೀವವಾಗಿ ಹುಟ್ಟುವವನನ್ನು ಭಗವಂತನು ಎಂದು ಇದಕ್ಕುಮೊದಲೇ ಬಹಳಸಲ ಹೇಳಿಕೊಂಡಿದ್ದೇವೆ. ಭಗವಂತನ ಶರೀರದಲ್ಲಿ ಮೊದಲ ದಿನವೇ, ಗರ್ಭ ಫಲಧೀಕರಿಸಿದ ಸಮಯದಲ್ಲಿಯೇ ಆತ್ಮ ಕದಲದೆ ಮೆದಲದೆ ಇದೆಯೆಂದು ತಿಳಿಯುತ್ತಿದೆ. ಅಂತಹ ಶರೀರದಲ್ಲಿ ಆತ್ಮ ಹೊರತು ಜೀವಿಯು ಇರುವುದಿಲ್ಲ. ಕೃಷ್ಣನ ಜನ್ಮ ಹೇಗೆ ನಡೆದಿದೆಯೋ ಹಾಗೆಯೇ ಏಸು ಜನ್ಮ ಸಹಾ ನಡೆದಿದೆ. ಏಸು ತಾಯಿಯಾದ ಮರಿಯಮ್ಮ ಗರ್ಭದಲ್ಲಿ ಏನು ನಡೆದಿರುವುದು ಕ್ರೈಸ್ತವ ಪಂಡಿತರಿಗೇ ತಿಳಿಯದು. ಆತನು ಕೃಷ್ಣನಂತೆ ಎರಡು ಸೂಕ್ಷ್ಮಶಕ್ತಿಗಳ ಸೇರುವಿಕೆಯಿಂದ ಏಸು ಹುಟ್ಟಿದ್ದಾನೆಂದು ಅವರಿಗೆ ತಿಳಿಯದು. ಏಸುನನ್ನು ದೇವರ ಕುಮಾರನೆಂದು ಕೆಲವರನ್ನುತ್ತಿದ್ದರೂ ಆತನು ದೇವರ ಕುಮಾರನೇಗಾಗಿದ್ದಾನೊ ಈಗಿನ ಕ್ರೈಸ್ತರಿಗೆ ಯಾರಿಗೂ ಸ್ವಲ್ಪವೂ ತಿಳಿಯದು.

ಮಾನವರಾಗಿ ಹುಟ್ಟುವವರೊಂದರ ಶರೀರಗಳು ಭೌತಿಕಶಾಸ್ತ್ರವನ್ನು ಅನುಸರಿಸಿ ಹುಟ್ಟುತ್ತವೆ.. ದೈವಾಂಶ ಮಾನವ ಆಕಾರದಲ್ಲಿ ಭಗವಂತನಾಗಿ ಹುಟ್ಟಿದಾಗ ಆ ಹುಟ್ಟುವಿಕೆಯೆಲ್ಲವೂ ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿರುತ್ತದೆ. ಇದೆಲ್ಲವೂ ಕೇಳಿದ ನಂತರ ಕೆಲವರಿಗೆ ಮತ್ತೊಂದು ಪ್ರಶ್ನೆಬಂದು ಅದನ್ನು ಈ ವಿಧವಾಗಿ ಕೇಳುತ್ತಿದ್ದಾರೆ. "ಭಗವಂತನಾಗಿ ಹುಟ್ಟಿದವನಿಗೆ ದೈವಾಂಶ ಹೊಂದಿದೆಯೆಂದು ಆತನು ಸ್ಥೂಲ ತಂದೆಯ ಸಂಬಂಧವಿಲ್ಲದೆ ಹುಟ್ಟುತ್ತಿದ್ದಾನೆಂದು ಹೇಳಿದ್ದಾರೆ. ಹಾಗೆಯೇ ಕೆಲವರು ಮನುಷ್ಯರು ಹುಟ್ಟಿದಾಗ ಸಹಾ ದೇವರ ವೀರ್ಯಶಕ್ತಿ ತಾಯಿ ಅಂಡದಲ್ಲಿ ಸೇರಿ ಹುಟ್ಟುತ್ತಿದ್ದಾರೆ. ಅಂಥವರು ತಂದೆಯ ಹೋಲಿಕೆಯಾಗಲಿ, ತಾಯಿ ಹೋಲಿಕೆಯನ್ನಾಗಲಿ ಹೊಂದಿರುತ್ತಾರೆಂದು, ಅವರಲ್ಲಿ ತಂದೆತಾಯಿಯೊಂದರ ಇಬ್ಬರ ಹೋಲಿಕೆಗಳು ಇರುವುದಿಲ್ಲ

ವೆಂದು ಹೇಳಿದ್ದೀರಿ. ಹಾಗೇ ಅವರು ಹೋದರೆ ನೂರಕ್ಕೆ ಐವತ್ತುಜನ ಭೌತಿಕ ತಂದೆತಾಯಿಗೇ ಹುಟ್ಟಿದ್ದಾರೆಂದು ಅವರ ಅಂಡದೊಂದಿಗೆ ಸೇರಿರುವ ವೀರ್ಯಕ್ಕೆ ಹುಟ್ಟಿದ್ದಾರೆಂದು ಹೇಳಿದ್ದಾರೆ. ಅರ್ಧಜನ ಮನುಷ್ಯರು ವೀರ್ಯದಿಂದ ಹುಟ್ಟಿದರೆ ಅರ್ಧ ಜನಸಂಖ್ಯೆ ದೇವರ ವೀರ್ಯಶಕ್ತಿಯಿಂದ ಹುಟ್ಟಿದವರಿದ್ದಾರೆಂದು ಹೇಳಿದ್ದಾರೆ. ಅದಕ್ಕಿಂತ ಮೊದಲು ಯಾರು ಎಲ್ಲಿ ಹುಟ್ಟಿದರೂ, ಅವರು ನನ್ನ ಬೀಜದಿಂದಲೇ ಹುಟ್ಟುತ್ತಾರೆಂದು ದೇವರು ಭವಗದ್ಗೀತೆ ವಿಭೂತಿ ಯೋಗದಲ್ಲಿ 39ನೆ ಶ್ಲೋಕದಲ್ಲಿ, ಗುಣತ್ರಯ ವಿಭಾಗಯೋಗದಲ್ಲಿ 3, 4 ಶ್ಲೋಕಗಳಲ್ಲಿ ಹೇಳಿದಂತೆ ತಿಳಿಸಿದ್ದೀರಿ. ಗೀತೆಯಲ್ಲಿ ಯಾರು ಎಲ್ಲಿ ಹುಟ್ಟಿದರೂ ನನ್ನ ಬೀಜದಿಂದಲೇ ಎಂದು ಹೇಳಿದಾಗ ಇಲ್ಲಿ ನೀವು ಶೇ.40, 50 ರಷ್ಟು ಜನ ತಂದೆ ವೀರ್ಯಕ್ಕೆ ಹುಟ್ಟುತ್ತಿದ್ದಾರೆ. ಉಳಿದ 50, 60 ರಷ್ಟು ಜನ ದೇವರ ಸೂಕ್ಷ್ಮವಾದ ವೀರ್ಯಶಕ್ತಿಗೆ ಹುಟ್ಟುತ್ತಿದ್ದಾರೆಂದು ಹೇಳಿದ್ದೀರಿ. ದೇವರ ವೀರ್ಯಶಕ್ತಿಗೆ ಹುಟ್ಟಿದವರೆಲ್ಲರನ್ನು ದೇವರ ಬೀಜಕ್ಕೆ ಹುಟ್ಟಿದಂತೆ, ಮನುಷ್ಯರ ವೀರ್ಯಕ್ಕೆ ಹುಟ್ಟಿದವರೆಲ್ಲರನ್ನು ಮನುಷ್ಯರ ಬೀಜಕ್ಕೆ ಹುಟ್ಟಿದಂತೆ ಲೆಕ್ಕಿಸಬಹುದು. ಅಂತಹದರಲ್ಲಿ ಗೀತೆಯಲ್ಲಿ ದೇವರು ಎಲ್ಲರೂ ನನ್ನ ಬೀಜಕ್ಕೆ ಹುಟ್ಟುತ್ತಿದ್ದಾರೆಂಬ ಮಾತು ಅಸತ್ಯವಾಗುತ್ತದೆ ಅಲ್ಲವೆ!" ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ.

ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ ಹೇಳಿದ ತ್ರೈತ ಸಿದ್ಧಾಂತದ ಪ್ರಕಾರ ಪ್ರತಿ ಮಾನವನ (ಜೀವರಾಶಿ) ಶರೀರದಲ್ಲಿ ಮೂರು ಆತ್ಮಗಳು ಇವೆ. ಅವುಗಳಿಗೆ ಅಂಕೆಗಳ ಗುರುತು 3, 6, 9 ಎಂದು ಸಹಾ ಹೇಳಿಕೊಂಡಿದ್ದೇವೆ. ಜೀವಾತ್ಮ, ಆತ್ಮ, ಪರಮಾತ್ಮ ಎಂದು ಅವುಗಳನ್ನು ಗುರುತಿಸಿಕೊಂಡಿದ್ದೇವೆ. ಮಧ್ಯದಲ್ಲಿರುವ ಆತ್ಮ ಶರೀರದಲ್ಲಿ ಶರೀರವೆಲ್ಲಾ ವ್ಯಾಪಿಸಿ ಯಾವಾಗಲೂ ಕೆಲಸ ಮಾಡುತ್ತಿದೆಂದು ಹೇಳಿಕೊಂಡಿದ್ದೇವೆ. ಶರೀರದಲ್ಲಿ ಒಂದುಕಡೆ ಇರುವ ಜೀವಾತ್ಮವಾಗಲಿ, ಶರೀರವೆಲ್ಲಾ ಇರುವ ಪರಮಾತ್ಮನಾಗಲಿ ಎರಡೂ ಶರೀರದಲ್ಲಿ ಕದಲಿ ಕೆಲಸ ಮಾಡುವವು ಅಲ್ಲ. ಜೀವಿಯು ತನ್ನವರೆಗೂ ಬಂದಿರುವ ಸುಖದುಃಖಗಳನ್ನು ಆಸ್ವಾದಿಸುತ್ತಾನೆ. ಪರಮಾತ್ಮ ಏನು

ಮಾಡುವುದಿಲ್ಲ. ಪರಮಾತ್ಮನು ಮೊದಲೆ ರೂಪ, ನಾಮ, ಕ್ರಿಯಾ ರಹಿತನೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಪರಮಾತ್ಮ ಎನ್ನಲ್ಪಡುವ ದೇವರು ಶರೀರದಲ್ಲಿ ಏನು ಮಾಡದೆ ಸುಮ್ಮನಿರುವವನು ಮಾತ್ರವೇ. ಇನ್ನೂ ಆತ್ಮ ಎನ್ನಲ್ಪಡುವುದು ಅಥವಾ ಎನ್ನಲ್ಪಡುವವನು (ಆತ್ಮವನ್ನು ಸ್ತ್ರೀಲಿಂಗವಾಗಿ, ಪುಲ್ಲಿಂಗವಾಗಿ ಎರಡು ವಿಧಗಳು ಹೇಳಬಹುದು.) ಶರೀರವೆಲ್ಲಾ ವ್ಯಾಪಿಸಿ ಚಿಕ್ಕ ಕೆಲಸವನ್ನು ಮೊದಲುಗೊಂಡು ದೊಡ್ಡ ಕೆಲಸದವರೆಗೂ ಎಲ್ಲಾ ಕೆಲಸಗಳನ್ನು ಮಾಡುತ್ತಿದ್ದಾನೆ. ದೇವರಿಂದಲೇ ಎಲ್ಲಾ ನಡೆಯುತ್ತವೆಂದು ಮೇಲಕ್ಕೆ ನಾವು ಹೇಳಿಕೊಂಡರೂ ದೇವರು ಏನು ಮಾಡುವುದಿಲ್ಲ. ಸರ್ವಜಗತ್ತನ್ನು ನಾನೇ ಸೃಷ್ಟಿಸುತ್ತಿದ್ದೇನೆ, ಪಾಲಿಸುತ್ತಿದ್ದೇನೆ, ನಾಶ ಮಾಡುತ್ತಿದ್ದೇನೆಂದು ದೇವರು ಹೇಳಿದರೂ ಅದು ನಾವು ತೃಪ್ತಿಗೋಸ್ಕರವೆಯಾಗಲಿ ವಾಸ್ತವವಾಗಿ ದೇವರು ಏನು ಮಾಡುವವನು ಅಲ್ಲ. ಎಲ್ಲಾ ನಾನೇ ಮಾಡುತ್ತಾನನ್ನುತ್ತಾನೆ, ಆದರೆ ಏನು ಮಾಡುವುದಿಲ್ಲ. ಹಾಗೆಂದು ಸೃಷ್ಟಿಸುವವನು ದೇವರು ಅಲ್ಲವೆ ಎಂದರೆ ಉತ್ತರವಾಗಿ ದೇವರೇ ಎಂದು ಹೇಳಬೇಕು. ಪಾಲಿಸುವವನು ದೇವರು ಅಲ್ಲವಾ ಎಂದು ಕೇಳಿದರೆ ದೇವರೆಯೆಂದು ಹೇಳಬೇಕಾಗಿದ್ದೆ. ಆತನು ಮಾಡದಿರುವಾಗ ಆತನನ್ನು ಏಕೆ ಹೇಳಬೇಕು ಎಂದು ಪ್ರೆಶ್ನಿಸಿದರೆ ಅದಕ್ಕೆ ಉತ್ತರ ಹೀಗೆ ಇದೆ. ಆತನು ಮಾಡದಿದ್ದರೂ ಆತನು ಇತರರಿಂದ ಮಾಡಿಸಿದ್ದಾನೆ, ಆದ್ದರಿಂದ ಆ ಕೆಲಸಕ್ಕೆ ಕಾರಣವಾದವನನ್ನೇ ಹೇಳಬೇಕಾಗಿ ಬಂದಿದೆ. ಕಾರ್ಯವಾಗಿ ಮಾಡಿದವನನ್ನು ಹೇಳದಹಾಗೆ ಬಿಟ್ಟುಹಾಕಬೇಕಾಗಿ ಬಂದಿದೆ. ಅರ್ಥವಾಗುವುದಕ್ಕೆ ಒಂದು ವಿಷಯವನ್ನು ಉದಾಹರಣೆಯಾಗಿ ಹೇಳಿಕೊಳ್ಳೋಣ.

ಒಂದು ಊರಿನಲ್ಲಿ ಹತ್ತುಜನ ಒಂದೇಸಲ ಹತ್ಯಗೈಯಲ್ಪಟ್ಟಿದ್ದಾರೆ. ಅವರನ್ನು ಸಾಯಿಸಿರುವುದು ಹತ್ತುಜನ ಹಂತಕರು ಹತ್ತುಜನ ಹಂತಕರನ್ನು ಪ್ರೇರೇಪಿಸಿ ತನ್ನ ಶತ್ರುಗಳಾದವರನ್ನು ಸಾಯಿಸೆಂದು ಹೇಳಿ ಕಳಿಸಿದ ವ್ಯಕ್ತಿ ಆ ಊರಿನ ಧನಿಕನು. ಕಾರ್ಯಮಾಡಿರುವುದು ಹತ್ತುಜನ ಹಂತಕರಾದರೂ ಮಾಡಿಸಿದವನು ಧನಿಕನು ಒಬ್ಬನೇ. ಹತ್ತುಜನರನ್ನು ಸಾಯಿಸಿರುವುದು ಯಾರು ಎಂದು ಹೊಸಬರು ಕೇಳಿದರೆ ಸಾಯಿಸಿದವನ ಹೆಸರೇ ಯಾರಾದರೂ

ಹೇಳಬಲ್ಲರಾಗಲಿ, ಸಾಯಿಸಿದವರ ಹೆಸರು ಹೇಳುವುದಿಲ್ಲ. ಸಾಯಿಸಿದವರು ಬಾಡಿಗೆಗೆ ಕೆಲಸ ಮಾಡಿದವರು, ಆದ್ದರಿಂದ ಅವರನ್ನು ಯಾರೂ ಹೇಳದೆ ಆ ಕೆಲಸಕ್ಕೆ ಕಾರಣವಾದ ಧನಿಕನನ್ನೇ ಹೇಳುತ್ತಾರೆ. ಭದ್ರಾಚಲಂನಲ್ಲಿ ಸೀತಾರಾಮರ ಮದುವೆ ನಡೆಯುತ್ತಿದೆಯೆಂದು ಹೇಳಿದರೂ, ಅಲ್ಲಿ ಮದುವೆಯಲ್ಲಿ ರಾಮನು ಸ್ವತಹವಾಗಿ ಸೀತೆಯ ಕತ್ತಿನಲ್ಲಿ ತಾಳಿಯನ್ನು ಕಟ್ಟುತ್ತಿಲ್ಲ. ತಾಳಿಕಟ್ಟುವ ಕೆಲಸವನ್ನು ಅಲ್ಲಿನ ಪುರೋಹಿತನು ಮಾಡಿದರೂ, ಅದನ್ನು ಪುರೋಹಿತನ ಮದುವೆ ಅನ್ನದೆ ರಾಮನ ಮದುವೆ ಅನ್ನುತ್ತಿದ್ದಾರೆ ಅಲ್ಲವೆ! ಹಾಗೆಯೇ ದೇವರು ಕರ್ತನಾಗಿದ್ದು ತಾನು ಯಾವ ಕಾರ್ಯವನ್ನು ಮಾಡದಿದ್ದರೂ, ತನ್ನ ಕೆಲಸವನ್ನು ಬೇರೆಯಾರು ಮಾಡಿದರೂ, ಅದನ್ನು ಆತನು ಮಾಡಿದಹಾಗೆ ಆಗುತ್ತಿದೆ. ದೇವರ ಕೆಲಸವನ್ನು ಮಾಡುವುದಕ್ಕೆ ಚೇತನ ಅಚೇತನ ಪ್ರಕೃತಿ ಇದೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ವಿಜ್ಞಾನಯೋಗವೆಂಬ ಅಧ್ಯಾಯದಲ್ಲಿ 6ನೆ ಶ್ಲೋಕದಲ್ಲಿ ಹೀಗೆ ಇದೆ.

**ಶ್ಲೋ॥ 6.** **ಏತ ದ್ಯೋನೀನ ಭೂತಾನಿ ಸರ್ವಾಣಿ ತ್ಯುಪಧಾರಯ,**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ಥಥಾ.**

**ಭಾವನೆ :** "ಸರ್ವ ಜೀವರಾಶಿಗಳ ಜನ್ಮಗಳನ್ನು ಚೇತನಾಚೇತನ ಪ್ರಕೃತಿಗಳು ಮಾಡುತ್ತಿರುತ್ತವೆ. ಸರ್ವ ಪ್ರಪಂಚ ಪ್ರಳಯಗಳಿಗು ಮತ್ತು ಪ್ರಭವ (ಹುಟ್ಟುವಿಕೆಗು)ಕ್ಕು ನಾನು ಕಾರಣವಾಗಿ ಇದ್ದೇನೆ." ಎಂದು ಹೇಳಿದ್ದಾನೆ. ದೇವರ ಕೆಲಸವನ್ನು ಮಾಡುವುದಕ್ಕೆ ಪ್ರಕೃತಿ ಸಂಸಿದ್ಧವಾಗಿ ಇದೆ. ದೇವರ ಕೆಲಸವನ್ನು ಪ್ರಕೃತಿಯೇ ಮಾಡುತ್ತದೆ. ದೇವರು ಏನನ್ನು ಮಾಡುವುದಿಲ್ಲ. ಪ್ರಕೃತಿ ಎರಡು ಭಾಗಗಳಾಗಿ ಚೇತನಾ ಪ್ರಕೃತಿಯಾಗಿ, ಅಚೇತನಾ ಪ್ರಕೃತಿಯಾಗಿ ಇದೆ. ಕದಲುವ ಪ್ರಕೃತಿಯನ್ನು ಚೇತನ ಪ್ರಕೃತಿ ಎಂದೂ, ಕದಲದ ಪ್ರಕೃತಿಯನ್ನು ಅಚೇತನ ಪ್ರಕೃತಿಯೆಂದೂ ಹೇಳಬಹುದು. ಕದಲುವ ಪ್ರಕೃತಿಯಲ್ಲಿ ಕಾಣಿಸದ ಆತ್ಮಯಿದ್ದು ಕದಲಿಸುತ್ತಿದೆ. ಶರೀರ ಪ್ರಕೃತಿಯಿಂದ ತಯಾರುಮಾಡಲ್ಪಟ್ಟಿದೆ. ಶರೀರದಲ್ಲಿ ಆತ್ಮ ಚೈತನ್ಯ ಕದಲಿ ಕೆಲಸ ಮಾಡುತ್ತಿದೆ. ಆದ್ದರಿಂದ ಶರೀರವನ್ನು ಚೇತನಾ ಪ್ರಕೃತಿ ಅನ್ನುತ್ತೇವೆ.

ಶರೀರದಲ್ಲಿ ದೈವವಿದ್ದು ಎಲ್ಲವುಗಳಿಗೂ ಕಾರಣವಾಗಿ ಇದೆ. ಪರಮಾತ್ಮ ಕಾರಣವಾಗಿದ್ದರೂ ಅದು ಕೆಲಸ ಮಾಡುವುದಿಲ್ಲ. ಕೆಲಸ ಮಾಡುವುದು ಶರೀರದಲ್ಲಿನ ಆತ್ಮವೇ. ಆತ್ಮ ಜೀವಿಯಾಗಿ, ದೇವರಾಗಿ ಕೆಲಸ ಮಾಡುತ್ತಿದೆ. ಜೀವಿಯು ಮಾಡದಿದ್ದರೂ ಜೀವಿಯು ಕೆಲವು ಕೆಲಸಗಳನ್ನು ಮಾಡಿದಂತೆ ದೇವರು ಮಾಡದಿದ್ದರೂ ದೇವರು ಮಾಡಿದಂತೆ ಕೆಲವು ಕೆಲಸಗಳನ್ನೂ ಆತ್ಮವೇ ಮಾಡುತ್ತಿದೆ. ಜೀವಿಯು ಕೆಲವು ದೇವರು ಕೆಲವು ಮಾಡಿದಂತೆ ಅನಿಸಿದರೂ, ಇಲ್ಲಿ ಜೀವಿಯಾಗಲಿ, ಅಲ್ಲಿ ದೇವರಾಗಲಿ ಯಾವ ಕೆಲಸವನ್ನು ಮಾಡುತ್ತಿಲ್ಲ. ಜೀವಿಯು ಕೆಲವು ಕೆಲಸಗಳನ್ನು ದೇವರು ಕೆಲವು ಕೆಲಸಗಳನ್ನು ಮಾಡಿದಂತೆ ಮನುಷ್ಯರು ಅಂದುಕೊಂಡರೂ, ಎಲ್ಲರನ್ನು ಆ ವಿಧವಾಗಿ ಭ್ರಮಿಸುವಂತೆಮಾಡಿ, ಯಾರಿಗೂ ತಿಳಿಯದಂತೆ ಆತ್ಮವೇ ಎಲ್ಲಾ ಕೆಲಸಗಳನ್ನು ಮಾಡುತ್ತಿದೆ. ಗರ್ಭ ಧಾರಣೆ ವಿಷಯದಲ್ಲಿ ಜೀವಿಯೊಂದರ ಸ್ಥೂಲ ವೀರ್ಯಕಣದ ಪಾತ್ರ ಇದೆಯೆಂದು ಹೇಳಿದರೂ, ಅಥವಾ ದೇವರೊಂದರ ಸೂಕ್ಷ್ಮವೀರ್ಯಶಕ್ತಿ ಇದೆಯೆಂದು ಹೇಳಿದರೂ ಅವುಗಳನ್ನು ಪದ್ಧತಿಗಾಗಿ ಹೇಳಬೇಕಾಗಿದ್ದೆಯಾಗಲಿ ಸ್ಥೂಲ ವೀರ್ಯಕಣದಲ್ಲಾಗಲಿ, ಸೂಕ್ಷ್ಮ ವೀರ್ಯಶಕ್ತಿಯಲ್ಲಾಗಲಿ ಇರುವುದು ಆತ್ಮವೇ, ಆತ್ಮ ಶರೀರವೆಲ್ಲವೂ ವ್ಯಾಪಿಸಿ ಎಲ್ಲಾ ಕಾರ್ಯಗಳನ್ನು ಮಾಡುತ್ತಿದೆ. ಶರೀರದಲ್ಲಿ ನಡೆಯುವ ಕೆಲಸಗಳೆಲ್ಲ ಆತ್ಮದಿಂದ ನಡೆಯುತ್ತಿವೆ. ಆತ್ಮಯಿಲ್ಲದೆ ಯಾವ ಕದಲಿಕೆಯೂ ಇಲ್ಲ, ಯಾವ ಕಾರ್ಯವೂ ಇಲ್ಲ. ಕೆಲವು ಕೆಲಸಗಳನ್ನು ಕರ್ಮವನ್ನು ಅನುಸರಿಸಿ ಮಾಡುವ ಆತ್ಮ, ಕೆಲವು ಕೆಲಸಗಳನ್ನು ಮಾತ್ರ ದೇವರಂತೆ ಕರ್ಮಕ್ಕೆ ಅತೀತವಾಗಿ ಮಾಡುತ್ತದೆ. ಮನುಷ್ಯರಲ್ಲಿ ಬಹಳಜನ ಜ್ಞಾನಿಗಳು ಸಹಿತವು ಶರೀರದಲ್ಲಿ, ಶರೀರದ ಮೂಲಕ ನಡೆಯುವ ಕೆಲಸಗಳನ್ನು ನೋಡಿ, ಅವುಗಳಲ್ಲಿ ಕೆಲವನ್ನು ಜೀವಿಯು ಮಾಡುತ್ತಿದ್ದಾನೆಂದು, ಮತ್ತೆಕೆಲವು ಪ್ರತ್ಯೇಕವಾದ ಕಾರ್ಯಗಳನ್ನು ದೇವರು ಮಾಡುತ್ತಿದ್ದಾನೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಅಷ್ಟೇಯಾಗಲಿ ಮಧ್ಯದಲ್ಲಿ ಒಂದು ಆತ್ಮಯಿದೆಯೆಂದು, ಅದೇ ಎಲ್ಲವನ್ನು ಮಾಡುತ್ತಾ ಎಲ್ಲರನ್ನು ಭ್ರಮೆಯಲ್ಲಿ ಮುಳುಗಿಸುತ್ತಿದೆ ಎಂದಾಗಲಿ ಯಾರಿಗೂ ತಿಳಿಯದು.

ಜೀವಿಯೂ ಅಲ್ಲದೆ ದೇವರೂ ಅಲ್ಲದೆ ಮಧ್ಯದಲ್ಲಿ ಯಾರಿಗೂ ತಿಳಿಯದ ಆತ್ಮ ಎಲ್ಲಾ ಮಾಡುತ್ತಿದ್ದರೂ, ಎಲ್ಲಿಯೂ ಆತ್ಮ ಹೊರಬೀಳಲಿಲ್ಲ. ಎಷ್ಟೋ ಜಾಗ್ರತೆಯಿಂದ ಶರೀರದಲ್ಲಿ ಕಾರ್ಯಗಳನ್ನು ಮಾಡುವ ಆತ್ಮವೇ ಸ್ತ್ರೀ ಗರ್ಭಧಾರಣ ವಿಷಯದಲ್ಲಿ ಸಹಾ ಕೆಲಸ ಮಾಡುತ್ತಿದೆ. ಇದಕ್ಕುಮೊದಲು ಮನುಷ್ಯರು ಗರ್ಭಧಾರಣೆ ವಿಷಯದಲ್ಲಿ ಭೌತಿಕ ತಂದೆಯೊಂದರ ವೀರ್ಯಕಣ ಅಂಡವನ್ನು ಸೇರಿದರೆ ಅದು ಭೌತಿಕ ತಂದೆಯಿಂದ ಬಂದಿರುವ ಗರ್ಭವೆಂದು, ಭೌತಿಕ ತಂದೆಯೊಂದರ ವೀರ್ಯಕಣ ಅಲ್ಲದೆ, ಕಾಣಿಸದ ದೇವರ ಶಕ್ತಿ ಒಂದರ ವೀರ್ಯಶಕ್ತಿ ಅಂಡವನ್ನು ಸೇರಿದರೆ ಅದು ಅಭೌತಿಕ ತಂದೆಯಾದ ದೇವರಿಂದ ಬಂದಿರುವ ಗರ್ಭವೆಂದು ಹೇಳಿಕೊಂಡಿದ್ದೇವೆ. ಈಗ ಅಸಲು ರಹಸ್ಯವನ್ನು ಬಿಚ್ಚಿ ಈ ಎರಡು ವಿಧಗಳ ಚರ್ಯಗಳು ಮಾಡಿರುವುದು ಆತ್ಮವೇ ಎಂದು, ಆದರೂ ಅದು ಯಾರಿಗೂ ತಿಳಿಯದಿರುವುದರಿಂದ ಎಲ್ಲರೂ ಕೆಲವು ಗರ್ಭಗಳಿಗೆ ಕಾರಣ ಜೀವಿಯೆಂದು, ಕೆಲವು ಗರ್ಭಗಳಿಗೆ ಕಾರಣ ದೇವರೆಂದು ಅಂದು ಕೊಳ್ಳುವುದು ನಡೆಯುತ್ತಿದೆಯೆಂದು ಹೇಳುತ್ತಿದ್ದೇವೆ. ವೀರ್ಯಕಣ ಇಲ್ಲದೆ ಗರ್ಭ ಬರುವಂತೆ ಮಾಡಿರುವುದು ಆತ್ಮವೇ. ಹಾಗೆಯೇ ವೀರ್ಯಕಣದ ಮೂಖಾಂತರವೇ ಗರ್ಭ ಬರುವಂತೆ ಮಾಡುವುದು ಆತ್ಮವೆ. ಒಂದು ಗರ್ಭ ಕಾರ್ಯವನ್ನು ವೀರ್ಯಕಣ ಇಲ್ಲದೆಯೇ ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಆತ್ಮವೇ ಮಾಡಿದೆ. ಹಾಗೆಯೇ ಒಂದು ಗರ್ಭ ವಿಷಯದಲ್ಲಿ ವೀರ್ಯಕಣದ ಮೂಖಾಂತರವೇ ಗರ್ಭ ಬರುವಂತೆ ಭೌತಿಕ ಶಾಸ್ತ್ರವನ್ನು ಅನುಸರಿಸಿ ಆತ್ಮವೇ ಮಾಡಿದೆ. ಮರಿಯಮ್ಮಗೆ ಮದುವೆಯಾಗದ ಮೊದಲೆ ಗರ್ಭ ಬರುವಂತೆ ಮಾಡಿರುವುದು ದೇವರಲ್ಲ, ಮನುಷ್ಯನು ಅಲ್ಲ, ಹಾಗೆ ಮಾಡಿದವನು ಆಕೆಯ ಶರೀರದಲ್ಲಿರುವ ಆತ್ಮವೇ. ಆತ್ಮಯೆಂಬುದು ದೊಡ್ಡ ಜ್ಞಾನಿಗಳಿಗೆ ತಿಳಿಯದೆಹೋದರೆ, ಸೂಕ್ಷ್ಮವನ್ನು ಸ್ವಲ್ಪವೂ ನಂಬದ ನಾಸ್ತಿಕರಿಗೆ, ಅತಿವಾದಿಗಳಿಗೆ ಹೇಗೆ ತಿಳಿಯುತ್ತದೆ? ಆದ್ದರಿಂದ ಹೊರಗಿನ ಪ್ರಜೆಗಳಿಗೆ ಮರಿಯಮ್ಮ ಮದುವೆಯಾಗದ ಮುಂಚೆಯೇ ಗರ್ಭ ಧರಿಸುವುದು ಚರ್ಚನೀಯಾಂಶವಾಗಿದೆ. ಯಾರಿಗೆ ತೋಚಿರುವುದು ಅವರು ಅಂದುಕೊಳ್ಳುವುದು ನಡೆದಿದೆ. ಯಾರಿಗೂ ಅಸಲು ಸಮಾಚಾರ ತಿಳಿಯದು.

ನಾವು ವಿಜ್ಞಾನಿಗಳೆನ್ನುವವರು ಇಂತಹ ವಿಷಯಗಳನ್ನು ತೆಗೆದುಹಾಕುತ್ತಾ ಎಲ್ಲವುಗಳಿಗೂ ಸೈನ್ಸು ಕಾರಣ. ಸೈನ್ಸುನಿಂದ ನಡೆಯುವಂತಹ ಕೆಲಸಗಳನ್ನು ದೇವರಿಗೆ ಅಂಟಗಟ್ಟುವುದು ಮೂಢನಂಬಿಕೆಯೆಂದು ಹೇಳುತ್ತಿರುತ್ತಾರೆ. ಇತರರನ್ನು ಮೂಢನಂಬಿಯುಳ್ಳವರೆಂದು ಅನ್ನುತ್ತಿರುವವರೇ ಬಹಳ ವಿಷಯಗಳಲ್ಲಿ ಸತ್ಯವನ್ನು ತಿಳಿಯದೆ, ಅವುಗಳಿಗೆ ಸರಿಯಾದ ವಿವರಣೆ ಕೊಡಲಾರದೆ, ಮೂಢವಾಗಿ ಖಂಡಿಸುತ್ತಿರುತ್ತಾರೆ. ಅಂತಹ ವಿವರಣೆಯಿಲ್ಲದ ಖಂಡನೆಯನ್ನು ಸಹಾ ಮೂಢನಂಬಿಕೆ ಎಂದೇ ಹೇಳಬಹುದು. ಮರಣಿಸಿ ಕೆಲವು ಗಂಟೆಗಳ ನಂತರವಾಗಲಿ, ಕೆಲವು ದಿನಗಳ ನಂತರವಾಗಲಿ ಬದುಕಿದ ಸಂಘಟನೆಗಳು ಎಷ್ಟೋ ಭೂಮಿಮೇಲೆ ನಡೆದಿವೆ. ಎಲ್ಲದಕ್ಕೂ ಕಾರಣ ಸೈನ್ಸ ಎಂದು ಹೇಳುವವರೂ, ವಿಜ್ಞಾನಿಗಳನ್ನುವವರೂ ಮರಣಿಸಿದವನು ನಂತರ ಹೇಗೆ ಬದುಕಿದ್ದಾನೋ ಸೈನ್ಸು ಪ್ರಕಾರ ಏಕೆ ಹೇಳಲಾರದೆ ಹೋಗಿದ್ದಾರೆ? ಮೊದಲಿಗೆ ಅವನು ಮರಣಿಸಲಿಲ್ಲ, ಅವನು ಮರಣಿಸಿದಂತೆ ತಪ್ಪಾಗಿ ಅಂದುಕೊಳ್ಳುವುದು ನಡೆದಿರುತ್ತದೆ. ಸಜೀವವಾಗಿ ಮೂರ್ಚೆಯಲ್ಲಿರುವವನು ಪುನಃ ಜ್ಞಾಪಕ ಬಂದು ಎದ್ದಿರುತ್ತಾನೆಂದು ಹೇಳುತ್ತಿದ್ದಾರೆ. ಮರಣಿಸಿದವನು ಮತ್ತೆ ಎದ್ದಿದ್ದಾನೆಂಬುದು ಸತ್ಯವಾದಾಗ, ಅವನು ಮೂರ್ಚೆಯಲ್ಲಿ ಇರುತ್ತಾನೆ, ಅದನ್ನು ಗಮನಿಸದೆ ಮರಣಿಸಿದ್ದಾನೆಂದು ಅಂದುಕೊಂಡಿದ್ದಾರೆಂದು ಹೇಳುವುದು ಮೂಢನಂಬಿಕೆ ಯಿಂದ ಹೇಳಿದಹಾಗೆ ಅಲ್ಲವೆ! ಬೋಡುಗುಂಡು ಬೇರೆ, ಮೊಣಕಾಲು ಬೇರೆಯೆಂದು ತಿಳಿಯದೆ ಬೋಡುಗುಂಡನ್ನು ಮೊಣಕಾಲನ್ನು ಎರಡನ್ನು ಒಂದು ಎಂದುಕೊಳ್ಳುವುದು ವಿವೇಕ ಅಲ್ಲ. ಹಾಗೆಯೇ ಭೌತಶಾಸ್ತ್ರಕ್ಕೂ, ಬ್ರಹ್ಮವಿದ್ಯಾಶಾಸ್ತ್ರಕ್ಕೂ ವ್ಯತ್ಯಾಸ ತಿಳಿಯದೆ ಮೊಣಕಾಲನ್ನು ಬೋಡುಗುಂಡೇ ಎಂದು ಅಂದುಕೊಂಡಂತೆ, ಬ್ರಹ್ಮವಿದ್ಯಾಶಾಸ್ತ್ರವನ್ನು ಸಹಾ ಭೌತಿಕ ಶಾಸ್ತ್ರವೆಂದು ಕೊಂಡರೆ ಅದು ಅವಿವೇಕವಾಗುತ್ತದೆ. ಶಾಸ್ತ್ರವನ್ನು ಸೈನ್ಸು ಎನ್ನಬಹುದು. ಶಾಸ್ತ್ರಗಳು ಎಷ್ಟು ವಿಧಗಳಿವೆಯೋ ತಿಳಿಯಲ್ಪಟ್ಟರೆ, ಸೈನ್ಸು ಅಷ್ಟು ವಿಧಗಳಿದಂತೆ ತಿಳಿಯುತ್ತದೆ. ಒಂದು ಅಥವಾ ಎರಡು ಶಾಸ್ತ್ರಗಳನ್ನು ತಿಳಿದಷ್ಟುಮಾತ್ರಕ್ಕೆ ಸೈನ್ಸೆಲ್ಲಾ ತಿಳಿದಿದೆಯೆಂದುಕೊಳ್ಳುವುದು ತಿಳುವಳಿಕೆಯಿಲ್ಲದ ಕೆಲಸ ತಾನೆ! ಶಾಸ್ತ್ರಗಳಲ್ಲಿ

ದೊಡ್ಡ ಶಾಸ್ತ್ರವೆಂದು ಹೆಸರುವಾಸಿಯಾದ ಶಾಸ್ತ್ರವೊಂದಿರುವಾಗ, ಅದನ್ನು ಸ್ವಲ್ಪವೂ ತಿಳಿಯದವರು ಪೂರ್ತಿ ವಿಜ್ಞಾನಿಗಳು ಹೇಗೆ ಆಗುತ್ತಾರೆ. ಪೂರ್ತಿ ವಿಜ್ಞಾನಿಗಳಲ್ಲದೆ ಕಾಲ್ಭಾಗವೊ, ಅರ್ಧಭಾಗವೊ ವಿಜ್ಞಾನ ತಿಳಿದವರಿಗೆ ಎಲ್ಲಾ ವಿಷಯಗಳಲ್ಲಿನ ಶಾಸ್ತ್ರವಿಧಾನ ತಿಳಿಯದು. ಅಂತಹದರಲ್ಲಿ ತಮಗೆ ತಿಳಿಯದಿದ್ದರೂ ತಿಳಿದಿದೆಯೆಂದು ಒಪ್ಪಿಸಿಕೊಳ್ಳುವುದಕ್ಕೆ ಶಾಸ್ತ್ರವನ್ನು ಬಿಟ್ಟು ಮೂಢವಾಗಿ ಮಾತನಾಡುತ್ತಾರೆ. ಅದೇ ವಿಧವಾಗಿ ಪುರುಷ ಸಂಬಂಧ ಇಲ್ಲದೆ ಸಂತಾನ ಉಂಟಾಗುವುದಿಲ್ಲವೆಂದು ಮರಿಯಮ್ಮನ ವಿಷಯದಲ್ಲಿ ಹೇಳಿದ್ದಾರೆ.

ಒಂದೊಂದು ಶಾಸ್ತ್ರ ಒಂದೊಂದು ವಿವರವನ್ನು ಕೊಡುತ್ತದೆ. ಸಾಧಾರಣ ಮನುಷ್ಯನಿಂದ ದೇವರವರೆಗೂ ಶಾಸ್ತ್ರಗಳು ಪ್ರಮಾಣವಾಗಿ ಇವೆ. ಶಾಸ್ತ್ರಗಳು ಆರಾದರೆ ಅವುಗಳಲ್ಲಿ ಮೊದಲು ಹುಟ್ಟಿರುವುದು ಮತ್ತು ದೊಡ್ಡದು ಬ್ರಹ್ಮವಿದ್ಯಾಶಾಸ್ತ್ರ. ಈ ಶಾಸ್ತ್ರ ದೇವರ ವಿಷಯಗಳಿಗೆ ಪ್ರಮಾಣವಾಗಿ ಇದೆ. ಬ್ರಹ್ಮವಿದ್ಯಾ ಶಾಸ್ತ್ರ ತಿಳಿಯದವರು ದೈವ ವಿಷಯಗಳನ್ನು, ಅವುಗಳ ಜ್ಞಾನವನ್ನು ತಿಳಿಯಲಾರದೆ ದೈವ ವಿಷಯಗಳಲ್ಲಿ ಅನೇಕ ಅನುಮಾನಗಳು ಉಂಟಾಗಿ, ಎಷ್ಟೋ ಪ್ರಶ್ನೆಗಳನ್ನು ಕೇಳುತ್ತಿರುತ್ತಾರೆ. ಅಂತಹ ಪ್ರಶ್ನೆಗಳಲ್ಲಿ ಈಗ ಒಂದನ್ನು ತೆಗೆದುಕೊಂಡು ನೋಡೋಣ. ಹೇತುವಾದಿಯೆಂದು ಹೆಸರಿಟ್ಟುಕೊಂಡರು ನಾಸ್ತಿಕವಾದಿ ಕೇಳಿದ ಪ್ರಶ್ನೆ ಹೀಗೆ ಇದೆ.

**ಪ್ರಶ್ನೆ :–** ದೇವರಿದ್ದಾನಾ? ಇದ್ದರೆ ದೇವರು ಯಾರು? ಏಕೆ ಕಾಣಿಸುವುದಿಲ್ಲ?

**ಉತ್ತರ :–** ಒಂದು ಮನೆಯೊಳಗೆ ಕಳ್ಳ ಪ್ರವೇಶಿಸಿದ್ದಾನೆಂದು ತಿಳಿದು ಕೆಲವರು ಆ ಮನೆಯೊಳಗೆ ಪ್ರವೇಶಿಸಿ ಹುಡುಕಲು ಮೊದಲುಮಾಡಿದ್ದಾರೆ. ಕಳ್ಳನಾದವನು ತಾನು ಯಾರಿಗೂ ತಿಳಿಯದಂತಿರಬೇಕೆಂದು ತಿಳಿದು, ಬಾಗಿಲಹಿಂದೆ ಇದ್ದು ಮನೆಯೊಳಗೆ ಹೊರಗಿನ ಮನುಷ್ಯರು ಬಂದಾಗ ಅವರಲ್ಲಿ ಬೆರೆತುಹೋಗಿ ಎಲ್ಲರೂ ಕಳ್ಳನನ್ನು ಹುಡಿಕಿದಂತೆ ಕಳ್ಳನೂ ಸಹಾ ಹುಡುಕುತ್ತಿದ್ದನು. ಎಲ್ಲರೂ ಸೇರಿ ಮನೆಯೆಲ್ಲವೂ ನೋಡಿದ ನಂತರ ಹೊರಗಿನಿಂದ ಒಬ್ಬನು ಬಂದು **"**ಕಳ್ಳ ಇದ್ದಾನಾ? ಇದ್ದರೆ ಕಳ್ಳ ಯಾರು? ಕಳ್ಳ ಏಕೆ ಕಾಣಿಸಲಿಲ್ಲ.?**"** ಎಂದು

ಕೇಳಿದ್ದಾನಂತೆ. ಒಂದು ಮನೆಯಲ್ಲಿನ ಕಳ್ಳನನ್ನು ಕಂಡುಕೊಳ್ಳದೆ ಹೇಗೆ ಪ್ರಶ್ನಿಸಿದ್ದಾನೋ ಹಾಗೆಯೇ ದೇವರಿದ್ದಾನಾ? ಇದ್ದರೆ ದೇವರು ಯಾರು? ಏಕೆ ಕಾಣಿಸಲಿಲ್ಲ? ಕಾಣಿಸಲಿಲ್ಲ ಆದ್ದರಿಂದ ಕಳ್ಳನ ವಿಷಯದಲ್ಲಿ ಕೇಳಿದ ಪ್ರಶ್ನೆಗಳನ್ನೆ ದೇವರ ವಿಷಯದಲ್ಲಿ ಸಹಾ ಕೇಳಬಹುದು. ಕಳ್ಳ ಮನೆಯಲ್ಲಿರುವುದು ವಾಸ್ತವವೇ, ಆದ್ದರಿಂದ ಕಳ್ಳ ಇದ್ದಾನಾ ಎಂಬ ಪ್ರಶ್ನೆಗೆ ಕಳ್ಳ ಇದ್ದಾನೆಂಬುದೇ ಸರಿಯಾದ ಸಮಾಧಾನವಾದಂತೆ ದೇವರು ವಿಶ್ವದಲ್ಲಿ ಇರುವುದು ವಾಸ್ತವವೇ, ಆದ್ದರಿಂದ ದೇವರನ್ನು ಸಹಾ ಇದ್ದಾನೆಂದೇ ಹೇಳಬಹುದು. ಕಳ್ಳ ಸಹಾ ಮನುಷ್ಯನೇ, ಆದಕಾರಣ ಕಳ್ಳನಿಗೋಸ್ಕರ ಮನೆಯೊಳಗೆ ಪ್ರವೇಶಿಸಿದ ಮನುಷ್ಯರಲ್ಲಿ ಕಳ್ಳ ಬೆರೆತುಹೋಗುವುದರಿಂದ ಅಷ್ಟುಜನರಲ್ಲಿ ಯಾರು ನಿಜವಾದ ಕಳ್ಳ ಎಂದು ಹುಡುಕಬೇಕಾಗಿ ಬಂದಿದೆ. ಅಷ್ಟುಜನರಲ್ಲಿ ಬೆರೆತುಹೋದ ಕಳ್ಳನನ್ನು ಗುರುತಿಸಲ್ಪಟ್ಟರೆ ಕಾಣಿಸಿದಂತೆ ಅಲ್ಲವೆ! ಹಾಗೆಯೇ ಈ ದಿನ ಎಷ್ಟೋಜನ ದೇವತೆಗಳಲ್ಲಿ ದೇವರ್ಯಾರೋ ತಿಳಿಯದ ಸ್ಥಿತಿಯಲ್ಲಿ ಮನುಷ್ಯ ಇದ್ದಾನೆ. ಇಷ್ಟುಜನ ದೇವತೆಗಳಲ್ಲಿ ಅಸಲಾದ ದೇವರನ್ನು ಗುರುತಿಸಲ್ಪಟ್ಟ ದಿನ ನೀನು ದೇವರನ್ನು ನೋಡಿದಂತೆ ಅಲ್ಲವೆ! **ಈಗ ನೀನು ಹುಡಿಕಿ ಗುರುತಿಸಲಿಲ್ಲ ಆದಕಾರಣ ದೇವರು ಕಾಣಿಸಲಿಲ್ಲ. ಏಕೆ ಕಾಣಿಸುವುದಿಲ್ಲ ಎಂದು ಕೇಳುವುದಕ್ಕಿಂತ ನಾನು ಏಕೆ ಗುರುತಿಸಲಿಲ್ಲ ಎಂದು ಅಂದುಕೋ, ದೇವರು ಯಾರು ಎಂದು ತಿಳಿಯದೆಹೋಗುವುದು, ಆತನನ್ನು ನೋಡದಿರುವುದು ನಮ್ಮ ಅನ್ವೇಷಣೆ ಮೇಲೆ ಆಧಾರಪಟ್ಟಿರುತ್ತದೆ.** ಹಾಗೆ ಆಗದೆಹೋದರೆ ಪೊಲೀಸನು "ಯಾರು ಕಳ್ಳ? ಏಕೆ ಕಾಣಿಸುವುದಿಲ್ಲ" ಎಂದು ಕೇಳಿದಂತಿರುತ್ತದೆ. ಕಳ್ಳ ಪೊಲೀಸನಿಗಾಗಲಿ, ಇತರರಿಗಾಗಲಿ ಹೇಗೆ ಕಾಣಿಸದಂತೆ ಇರುತ್ತಾನೋ, ಇರಬೇಕೆಂದು ಅಂದುಕೊಳ್ಳುತ್ತಾನೊ, ಹಾಗೆಯೇ ದೇವರು ಸಹಾ ಕಳ್ಳನಂತೆ ಯಾರಿಗೂ ತಿಳಿಯದಂತೆ ಇರಬೇಕೆಂದುಕೊಳ್ಳುತ್ತಾನೆ, ಹಾಗೆಯೇ ಇರುತ್ತಾನೆ. ಆದ್ದರಿಂದ ಆತನನ್ನು ದೇವರು ಅನ್ನುತ್ತಾರೆ. ದೇವರು ಎಂದರೆ ಹುಡುಕಲ್ಪಡುವಂಥವನು ಎಂದು ಅರ್ಥ. ದೇವುಲಾಡುವುದು ಎಂದರೆ ಹುಡುಕುವುದೆಂದು ಅರ್ಥ. ಕೆಲವು ಪ್ರಾಂತಗಳಲ್ಲಿ (ತೆಲಂಗಾಣಾ ಪ್ರಾಂತದಲ್ಲಿ) ಹುಡುಕುವುದು ಎಂಬ ಪದಕ್ಕೆ ಬದಲಾಗಿ ದೇವಲಾಡುವುದು ಎಂದೇ ಹೆಚ್ಚಾಗಿ

ಬಳಸುತ್ತಾರೆ. ದೇವರು ಎಂದಿಗೂ ಹುಡುಕಲ್ಪಡುವವನೇ, ಆದ್ದರಿಂದ ದೇವರು ಯಾರೊ! ಹೇಗಿರುತ್ತಾನೊ! ಯಾರಿಗೂ ತಿಳಿಯದಂತೆ ಹೋಗಿದ್ದಾನೆ. ಹುಡುಕುತ್ತಾ ಹುಡುಕುತ್ತಾ ಏನಾದರೂ ದೊರೆತರೆ ಪುನಃ ಅದನ್ನು ಹುಡುಕಬೇಕಾದ ಕೆಲಸವಿಲ್ಲ. ಅದೇ ವಿಧವಾಗಿ ದೇವರನ್ನು ಅನ್ವೇಷಿಸುತ್ತಾ ಅನ್ವೇಷಿಸುತ್ತಾ ಕೊನೆಗೆ ಯಾವಾಗಲೋ ಒಂದುಸಲ ದೊರೆಯುತ್ತಾನೆ. ಹಾಗೆ ದೊರೆತ ನಂತರ ಇನ್ನು ಅವನಿಗೆ ಹುಡುಕಬೇಕಾದ ಕೆಲಸ ಇರುವುದಿಲ್ಲ.

ಪೊಲೀಸು "ಯಾರು ಕಳ್ಳ, ಇದ್ದರೆ ಏಕೆ ಕಾಣಿಸುವುದಿಲ್ಲ" ಎಂದು ಕೇಳಿದರೆ ಕಳ್ಳ ಬಂದು "ನಾನೇ ಕಳ್ಳನು, ಹೀಗಿದ್ದೇನೆ ನೋಡು" ಎಂದು ಹೇಗನ್ನುವುದಿಲ್ಲವೊ, ಹಾಗೆಯೇ ಒಬ್ಬ ಭಕ್ತನಾಗಲಿ ಅಥವಾ ನಾಸ್ತಿಕನಾಗಲಿ ಯಾರು ದೇವರು ಎಂದು ಪ್ರಶ್ನಿದಷ್ಟು ಮಾತ್ರಕ್ಕೆ ತಕ್ಷಣ ದೇವರು ಬಂದು ನಾನೇ ದೇವರು ಎಂದು ಹೇಳುವುದಿಲ್ಲ. ಒಬ್ಬ ಕಳ್ಳನನ್ನು ಕಂಡುಕೊಳ್ಳುವುದಕ್ಕೆ ಎಷ್ಟೋ ಅನ್ವೇಷಣೆ ಅಗತ್ಯ. ಅಂತಹದರಲ್ಲಿ ಕಳ್ಳನಿಗಿಂತ ಎಷ್ಟೋ ದೊಡ್ಡವನಾದ ದೇವರನ್ನು ಕಂಡುಹಿಡಿಯುವುದಕ್ಕೆ ಎಷ್ಟು ಅನ್ವೇಷಣೆ ಅಗತ್ಯವೊ ನೀವೆ ಯೋಚಿಸಿರಿ. ಎಷ್ಟೋಜನ ಸನ್ಯಾಸಿಗಳಾಗಿ ಬದಲಾವಣೆಹೊಂದಿ ಗೋಸಿಗಳಿಟ್ಟು, ಜುಟ್ಟುಗಳು ಬಿಗಿಸಿ ಸಾಧನೆಗಳು ಮಾಡಿದರೂ ಅವರಿಗೆ ತಿಳಿಯಲ್ಪಡದ ದೇವರು, ಒಬ್ಬ ನಾಸ್ತಿಕನು ಕೇಳಿದರೆ ಅವನಿಗೆ ತಿಳಿಯುವುದಕ್ಕೆ ಬಂದು ದೇವರು ಕಾಣಿಸುತ್ತಾನಾ? ಹಾಗೆ ಎಂದಿಗೂ ನಡೆಯುವುದಿಲ್ಲ. ದೇವರಿದ್ದಾನೆಂಬುವವರಿಗಾಗಲಿ, ಇಲ್ಲ ಎನ್ನುವವರಿಗಾಗಲಿ ಇಲ್ಲಿಯವರೆಗೂ ಕಾಣಿಸಲಿಲ್ಲ. ಮತ್ತು ಇಂಟರಾಗೇಷನ್ (ವಿಚಾರಣೆ) ಅಗತ್ಯವಾದಂತೆ, ದೇವರನ್ನು ತಿಳಿಯುವುದಕ್ಕೆ ಎಷ್ಟೋ ಯೋಚನೆ ಮತ್ತು ಯೋಗ ಅಗತ್ಯ. ಎಷ್ಟೋ ಪರಿಶೀಲನೆ ವಿಚಾರಣೆ ಮಾಡಿದ ನಂತರ ಕಳ್ಳ ತಿಳಿದಂತೆ, ಎಷ್ಟೋ ಯೋಚನೆ (ಆತ್ಮಜ್ಞಾನ) ಯೋಗ (ಆತ್ಮಕಲೆಯಿಕೆ) ನಡೆದ ನಂತರ ದೇವರು ಇಂಥಹವನೆಂದು ತಿಳಿಯುತ್ತದೆ. ಹಾಗೇ ತಿಳಿಯಲ್ಪಟ್ಟಾಗ ದೇವರು ಯಾರು ಎಂಬ ಪ್ರಶ್ನೆಗೂ, ದೇವರು ಹೇಗಿದ್ದಾನೆಂಬ ಪ್ರಶ್ನೆಗೂ ಉತ್ತರ ದೊರೆಯುತ್ತದೆ. ಉತ್ತರ ದೊರೆತಾಗ ಆ

ಉತ್ತರ ವಿಚಿತ್ರವಾಗಿರುತ್ತದೆ. ಏಕೆಂದರೆ ಯಾರಾಗಲಿ, ಯಾವಾಗಾಗಲಿ ದೇವರನ್ನು ತಿಳಿಯಲಾರರು ಅನ್ನುವಂತೆ ಉತ್ತರ ದೊರೆಯುತ್ತದೆ. ದೇವರು ಇದ್ದಾನಾ ಎಂಬುದಕ್ಕೆ ಇದ್ದಾನೆ ಎಂದು ಉತ್ತರ ತಿಳಿದರೂ, ಹೇಗಿದ್ದಾನೆ ಎಂಬುದಕ್ಕೆ ಹೀಗಿದ್ದಾನೆ ಎಂದು ಉತ್ತರ ತಿಳಿದರೂ, ಅದು ವಿಚಿತ್ರ ಸಮಾಧಾನವಾಗಿ ತಿಳಿಯುತ್ತದೆ. ದೇವರು ಎಲ್ಲಾಕಡೆ ಇದ್ದಾನೆ, ಆದರೆ ಆತನಿಗೆ ರೂಪವಾಗಲಿ, ಹೆಸರಾಗಲಿ, ಕೆಲಸವಾಗಲಿ ಇಲ್ಲ. ದೇವರು ರೂಪ ನಾಮ ಕ್ರಿಯಾರಹಿತನಾದ ಸರ್ವವ್ಯಾಪಿ ಎಂದು ತಿಳಿಯುತ್ತಿದೆ ಆದ್ದರಿಂದ ದೇವರು ಎಲ್ಲರ ಮನುಷ್ಯರಂತೆ ಇಲ್ಲ ಎಂದು ತಿಳಿಯುತ್ತಿದೆ. ಈ ಉತ್ತರ ನಾಸ್ತಿಕರಿಗು ಆಸ್ತಿಕರಿಗು ಎಲ್ಲರಿಗೂ ಒಂದೇಯೆಂದು ತಿಳಿಯುತ್ತಿದೆ. ಇದು ಬ್ರಹ್ಮವಿದ್ಯೆಯಲ್ಲಿರುವ ಉತ್ತರ ಆದ್ದರಿಂದ ಇದನ್ನು ಶಾಸ್ತ್ರಬದ್ಧವಾದ ಉತ್ತರವೆಂದು ಹೇಳಬಹುದು.

ದೇವರನ್ನು ಕುರಿತು ಪ್ರಶ್ನಿಸುವವನಿಗೆ ಒಂದು ಮತವೆನ್ನುವುದು ಇರುವುದಿಲ್ಲ. ನಾಸ್ತಿಕ ಭಾವನೆಗಳು ಇರುವವರಾಗಲಿ, ಆಸ್ತಿಕ ಭಾವಗಳು ಇರುವವರಾಗಲಿ ಯಾವ ಮತದಲ್ಲಾದರೂ ಇರಬಹುದು. ನಾಸ್ತಿಕನಾದವನು ಒಂದು ಮತದಲ್ಲಿನ ದೇವರನ್ನೇ ವಿಮರ್ಶಿಸುತ್ತಾನೆಂದು ಅಂದುಕೊಳ್ಳಬಾರದು. ನಾಸ್ತಿಕನು ದೇವರು ಎಂಬ ಪದವನ್ನು ಕೇಳಿದ ಕಡೆಯೆಲ್ಲವೂ ಅವನು ಪ್ರಶ್ನಿಸುತ್ತಲೇ ಇರುತ್ತಾನೆ. ಆತನಿಗೆ ದೇವರೊಂದರ ನಿಜವಾದ ಜ್ಞಾನ ತಿಳಿಯದೆ ಪುರಾಣಗಳ ಮಾತುಗಳು ಕೇಳಿ ಪ್ರಶ್ನಿಸುತ್ತಿರುತ್ತಾನೆ. ದೇವರೂ, ದೇವರ ಜ್ಞಾನವೂ ಶಾಸ್ತ್ರಬದ್ಧವಾದುದೆಂದು ಆತನಿಗೆ ತಿಳಿಯದು. ಆದ್ದರಿಂದ ಆತನು (ನಾಸ್ತಿಕನು) ದೇವರನ್ನು ಕುರಿತು ವಿಮರ್ಶಿಸುತ್ತಿರುತ್ತಾನೆ, ಹಾಗೆಯೇ ಅನೇಕವಾಗಿ ಪ್ರಶ್ನಿಸುತ್ತಿರುತ್ತಾನೆ. ಇದಕ್ಕುಮೊದಲು ನಾವು ಹೇಳಿಕೊಂಡವುಗಳಲ್ಲಿ ಮೂರು ಮತಗಳಿಗೆ ಸಂಬಂಧಿಸಿದ ಪ್ರಶ್ನೆಗಳು ಉತ್ತರಗಳು ಇವೆ. ಈಗಲೂ ಸಹಾ ನಾಸ್ತಿಕವಾದಿಗಳ ಪ್ರಶ್ನೆಗಳಾಗಲಿ, ಹೇತುವಾದಿಗಳ ಪ್ರಶ್ನೆಗಳಾಗಲಿ ಮೂರು ಮತಗಳಿಗೆ ಸಂಬಂಧಿಸಿರುವುದಾಗಿಯೇ ಇರುತ್ತವೆ. ದೇವರನ್ನು ಕುರಿತಾದ ಒಂದು ಮತವನ್ನೆ ಸೂಚಿಸುತ್ತಾ ಪ್ರಶ್ನೆ ಕೇಳಿದರೂ, ದೇವರು ಎಲ್ಲಾ ಮತಗಳಿಗು

ಒಬ್ಬನೇ ಆದುದರಿಂದ, ಹೇಳುವ ಉತ್ತರ ಎಲ್ಲಾ ಮತದವರಿಗೂ ಸರಿಹೋಗುತ್ತದೆ. ಈಗ ಒಬ್ಬ ಹೇತುವಾದಿ ಕೇಳಿದ ಪ್ರಶ್ನೆಯನ್ನು ಕುರಿತು ಉತ್ತರವನ್ನು ವಿವರಿಸಿಕೊಳ್ಳೋಣ. ಮೊದಲ ಪ್ರಶ್ನೆ ಹೀಗೆ ಇದೆ ನೋಡಿರಿ.

**ಹೇತುವಾದಿ ಪ್ರಶ್ನೆ :–** ದೇವರು ದಯಾಮಯನು, ಕೃಪಾಶೀಲನು ಆದರೆ ಕೆಲವರನ್ನು ಬಡವರನ್ನಾಗಿ ಏಕೆ ಇಟ್ಟಿದ್ದಾನೆ? ಅವರಿಗೆ ಹಸಿವಿಗೆ ಅನ್ನ, ದೇಹಕ್ಕೆ ವಸ್ತ್ರಗಳು, ನಿವಾಸಕ್ಕೆ ಮನೆ ಏಕೆ ಕೊಡುತ್ತಿಲ್ಲ. ಭೂಮಿಮೇಲೆ ಎಲ್ಲ ದೇಶಗಳಲ್ಲಿಯೂ ಎಲ್ಲ ಮತಗಳಲ್ಲಿಯೂ ಕೂಳು, ಬಟ್ಟೆ, ಮನೆ ಇಲ್ಲದವರಿರುವಾಗ, ಎಲ್ಲರೂ ದೇವರನ್ನು ಕರುಣಾಮಯನು, ದಯಾಮಯನು ಎನ್ನುವುದು ಸರಿಯಾದ ಮಾತೇನಾ?

**ಉತ್ತರ :–** ದೇವರು ದಯಾಮಯನು ಎಂಬಮಾತು ಎಲ್ಲ ಮತಗಳಲ್ಲಿಯೂ ಹೇಳುತ್ತಿದ್ದಾರೆ. ಕೆಲವರು ಪ್ರೀತಿಯೆ ದೇವರೆಂದು ಸಹಾ ಹೇಳುತ್ತಿದ್ದಾರೆ. ದೇವರು ಅಪಾರ ಕೃಪಾಶೀಲನು, ಅನಂತ ಕರುಣಾಮಯನು ಎಂದು ಹೆಚ್ಚಾಗಿ ಇಸ್ಲಾಮ್ ಗ್ರಂಥವಾದ ಖುರಾನ್ ಗ್ರಂಥವನ್ನು ಓದುವ ಪ್ರತಿಯೊಬ್ಬರೂ ಮೊದಲು ಈ ವಾಕ್ಯವನ್ನು ಹೇಳಿ ನಂತರ ಗ್ರಂಥವನ್ನು ಓದುವುದಕ್ಕೆ ಪ್ರಾರಂಭಿಸುತ್ತಾರೆ. ಹಾಗೆ ಮಾಡುವುದು ಒಂದು ವಿಧವಾಗಿ ಎಷ್ಟೋ ಒಳ್ಳೆಯ ಪದ್ಧತಿಯೇ ಅಲ್ಲದೆ ಹಾಗೆ ಮಾಡುವುದರಿಂದ ದೇವರಮೇಲೆ ವಿಶ್ವಾಸ ಇಲ್ಲದವರಿಗೂ ಸಹಾ ಗ್ರಂಥ ಪ್ರಾರಂಭದಲ್ಲಿಯೇ ದೇವರ ಮೇಲೆ ವಿಶ್ವಾಸ, ದೇವರೆಂದರೆ ಭಯ, ಭಕ್ತಿ ಎರಡೂ ಉಂಟಾಗುತ್ತವೆ. ಆದರೆ ಸಮಾಜದಲ್ಲಿ ಕಳ್ಳನನ್ನು ಹೊಡೆದು ಕಳ್ಳತನವನ್ನು ನಿವಾರಿಸಿದರೂ, ಅತ್ಯಾಚಾರ ಮಾಡುವವನನ್ನು ಗಾಯಪಡಿಸಿ ಮಾನಭಂಗವನು ನಡೆಯದಹಾಗೆ ನಿವಾರಿಸಿದರೂ, ಅವು ಒಳ್ಳೆಯ ಕೆಲಸಗಳೇ ಆದರೂ ಆಗ ಸಮಯಾ ಸಂಧರ್ಭಾನುಸಾರ ಕಳ್ಳನನ್ನೂ, ಅತ್ಯಾಚಾರ ಮಾಡುವವನನ್ನು ದಂಡಿಸಿ ಹೊಡೆಯುವುದು ಕಾನೂನಿನ ದೃಷ್ಟಿಯಲ್ಲಿ ಅಪರಾಧವಾದಂತೆ ಗ್ರಂಥಪಠನೆ ಮೊದಲಿನಲ್ಲಿ ದೇವರನ್ನು ಯಾವುದೊ ಒಂದು ಮಾತಿನಿಂದ ನೆನಪಿಸಿಕೊಳ್ಳುವುದು ಒಳ್ಳೆಯಕೆಲಸವೇ ಆದರೂ, ಹಾಗೆ ಮೊದಲು ನೆನಪಿಸಿ

ಕೊಳ್ಳುವುದು ತಪ್ಪಲ್ಲ ಆದರೆ, ಅಲ್ಲಿ ಹೇಳುವ ಮಾತನ್ನು ಶಾಸ್ತ್ರ ಒಪ್ಪಿಕೊಳ್ಳುವುದಿಲ್ಲ. ಶಾಸ್ತ್ರ ಒಪ್ಪಿಕೊಳ್ಳುವುದಿಲ್ಲ ಎಂದರೆ ಅದು ದೇವರ ದೃಷ್ಟಿಯಲ್ಲಿ ಸಹಾ ತಪ್ಪೆಂದೇ ಅರ್ಥ. ಇಲ್ಲಿ ಎಲ್ಲರೂ ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕಾದ ಅಗತ್ಯವೇನೆಂದರೆ! ಮುಖ್ಯವಾಗಿ ಮೊದಲು ದೇವರನ್ನು ತಿಳಿದುಕೊಳ್ಳುವುದು ಬಹಳ ಒಳ್ಳೆಯಕೆಲಸ, ಅದರೂ ದೇವರನ್ನು ದೇವರಾಗಿಯೇ ತಿಳಿದುಕೊಳ್ಳಬೇಕು. ಆತನ (ದೇವರ) ಗೌರವಕ್ಕಾಗಲಿ, ದೇವರ ಧರ್ಮಗಳಿಗಾಗಲಿ, ಹಾನಿ ಉಂಟುಮಾಡದ ಯಾವ ವಾಕ್ಯದೊಂದಿಗಾದರೂ, ಯಾವ ಮಾತಿನಿಂದಾದರೂ ಆತನನ್ನು ನೆನಪಿಸಿಕೊಳ್ಳ ಬಹುದು, ತಿಳಿದುಕೊಂಡು ಪ್ರಾರಂಭಿಸಬಹುದು. ಹಾಗೆ ಮಾಡುವುದು ಎಲ್ಲರ ಕರ್ತವ್ಯ. ಆದರೆ ನಾವು ಯಾವ ಮಾತಿನಿಂದ ದೇವರನ್ನು ತಿಳಿದುಕೊಳ್ಳುತ್ತಿದ್ದೇವೋ, ಆ ಮಾತು ದೇವರೊಂದರ ಧರ್ಮವನ್ನು ತಿಳಿಸುವುದಾಗಿ ರಬೇಕು. ಹಾಗಲ್ಲದೆ ದೇವರ ಧರ್ಮಕ್ಕೆ, ದೇವರ ಸಹಜತ್ವಕ್ಕೆ ವ್ಯತಿರೇಕವಾಗಿ ಇರಬಾರದು. ಹಾಗೆ ಎಲ್ಲಾದರೂ ಇದ್ದರೆ ಅದನ್ನು ಸರಿಪಡಿಸಿಸಿಕೊಂಡು ದೇವರ ಧರ್ಮಕ್ಕೆ ಹಾನಿಯಾಗದಂತೆ ನೋಡುವುದು ಪ್ರತಿಯೊಬ್ಬರ ಕರ್ತವ್ಯ.

ಭೌತಿಕ ತಂದೆಮೇಲೆ ಎಲ್ಲರಿಗೂ ಪ್ರೇಮ ಗೌರವ ಇರುತ್ತದೆ. ತಂದೆಯನ್ನು ಗೌರವಿಸುವ ಮಗ ಇತರರಿಗೆ ತನ್ನ ತಂದೆಯನ್ನು ಪರಿಚಯ ಮಾಡುವಾಗ ಇವನು ನನ್ನ ತಂದೆ ಎಂದು ಹೇಳಿದರೆ ಆ ಮಾತು ಗೌರವಪ್ರದವಾಗಿ ಇರುವುದಿಲ್ಲ. ಇವನು ಅನ್ನುವ ಕಡೆ ಈತನು ಎಂಬ ಪದ ಬಳಸಿದರೆ ಚೆನ್ನಾಗಿರುತ್ತದೆ. ಒಂದುವೇಳೆ ಇವನು ಅನ್ನದಂತೆ ಈತನು ಎಂಬ ಪದವನ್ನುಪಯೋಗಿಸಿ ಹೇಳಿದರೂ ಪಕ್ಕ ಪದವನ್ನು ಸರಿಯಾಗಿ ಬಳಸದಿದ್ದರೂ ಚೆನ್ನಾಗಿರುವುದಿಲ್ಲ ಈತನು ನನ್ನ ಅಮ್ಮನಿಗೆ ಗಂಡ ಎಂದರೂ ಅಥವಾ ಇವರು ನನ್ನನ್ನು ಹುಟ್ಟಿಸಿದವರೂ ಎಂದರೂ, ಈತನು ನನ್ನ ಅಣ್ಣನಿಗೆ ತಂದೆ ಎಂದರೂ, ಇವೆಲ್ಲವೂ ಗೌರವವಾದ ವಾಕ್ಯಗಳು ಅಲ್ಲ. ಹಾಗೆ ಸಹಾ ಅಲ್ಲದೆ ತನ್ನ ತಂದೆಯನ್ನು ದೊಡ್ಡವನಾಗಿ (ಉತ್ತಮನಾಗಿ) ಹೇಳಿಕೊಳ್ಳುವುದಕ್ಕೆಂದು ನನ್ನ ತಂದೆ ದೊಡ್ಡ ಹಂತಕನು, ಎಂದರೂ ಆತನಿಗೆ ಭಯಪಡುತ್ತಾರೆಂದು ಹೇಳಿದರೂ, ನನ್ನ

ತಂದೆಗೆ ಎಲ್ಲರೂ ನಮಸ್ಕರಿಸುತ್ತಾರೆ ಇಲ್ಲದಿದ್ದರೆ ಹೊಡೆಯುತ್ತಾನೆಂದು ಬಗ್ಗಿ ನಮಸ್ಕರಿಸುತ್ತಾರೆಂದು ಹೇಳಿದರೂ, ಆ ವಾಕ್ಯಗಳು ಪೂರ್ತಿಯಾಗಿ ತಪ್ಪಾಗುತ್ತದೆ. ಎಲ್ಲರೂ ಆತನಿಗೆ ಭಯಪಡುತ್ತಾರೆಂದು ಹೇಳುವುದು ಒಳ್ಳೆಯದೆ, ಎಲ್ಲರೂ ನಮಸ್ಕರಿಸುತ್ತಾರೆಂದು ಹೇಳುವುದು ಒಳ್ಳೆಯದೆ, ಆದರೆ ಅದಕ್ಕೆ ಮೊದಲು ಬಳಸಿದ ಪದಗಳು ತಂದೆಯ ಗೌರವಕ್ಕೆ ಹಾನಿ ಉಂಟುಮಾಡುತ್ತದೆಂದು ಹೇಳದೆ ತಪ್ಪುವುದಿಲ್ಲ. ಹಾಗೆಯೇ ಯಾರಾದರೂ ತಿಳಿಯದೆ ಆಗಲಿ, ತಪ್ಪಾಗಾಗಲಿ, ಎಲ್ಲರೂ ಅಂದಂತೆ ಅನ್ನಬೇಕೆಂದಾಗಲಿ ಹೇಳುವುದು ನಡೆದರೆ ಅದನ್ನು ತಪ್ಪೆಂದು ಹೇಳುವುದರಲ್ಲಿ ತಪ್ಪಿಲ್ಲ. ದೇವರ ಗೌರವವನ್ನು ಧರ್ಮವನ್ನು ಶ್ರೇಷ್ಠವಾಗಿಡುವುದಕ್ಕೇ ಹೇಳುತ್ತಿದ್ದೇವಾಗಲಿ ಬೇರೆ ಉದ್ದೇಶವಿಲ್ಲ ಅಲ್ಲವೆ! ಆದ್ದರಿಂದ ಇಲ್ಲಿ ಒಬ್ಬ ಹೇತುವಾದಿ ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳುತ್ತಿದ್ದೇವೆ.

ಮನುಷ್ಯರು ಸ್ವಲ್ಪ ವಯಸ್ಸು ಬಂದಾಗಲಿನಿಂದ ಪ್ರತಿ ಕ್ಷಣ ಏನೊ ಒಂದು ಸಂಪಾದಿಸಿಕೊಳ್ಳಬೇಕೆಂಬ ಉದ್ದೇಶದಿಂದ ಇರುತ್ತಾರೆ. ಅದರ ಪ್ರಕಾರವೇ ಕೆಲಸಗಳು ಮಾಡುತ್ತಾ ಧನವನ್ನು, ಬಂಗಾರವನ್ನು ಸಂಪಾದಿಸಿಕೊಂಡು ಉಳಿದಿರುವುದೆಲ್ಲವನ್ನು ಬ್ಯಾಂಕಿನಲ್ಲಿ ಬಚ್ಚಿಟ್ಟಿಕೊಂಡಿರುತ್ತಾರೆ. ತನಗೆ ಅವಶ್ಯಕತೆ ಬಂದಾಗ ಬ್ಯಾಂಕಿನಲ್ಲಿ ಉಳಿತಾಯಮಾಡಿದ ಹಣವಾಗಲಿ, ಬಂಗಾರವನ್ನಾಗಲಿ ಬಳಸಿಕೊಳ್ಳುತ್ತಿರುತ್ತಾರೆ. ದೊರೆ ಎನ್ನುವಾತನು ಗ್ರಾಮೀಣ ಬ್ಯಾಂಕಿನಲ್ಲಿ ತಾನು ವಯಸ್ಸಿನಲ್ಲಿ ಇರುವಾಗ ಸಂಪಾದಿಸಿಕೊಂಡ ಧನ ಕನಕಗಳನ್ನು ಎರಡನ್ನು ಬಚ್ಚಿಟ್ಟುಕೊಂಡಿದ್ದಾನೆ. ಬಚ್ಚಿಟ್ಟುಕೊಂಡ ಧನವನ್ನೂ, ಬಂಗಾರವನ್ನು ಬಳಸಿ ಕೊಳ್ಳುತ್ತಾ ತನ್ನ ವೃದ್ಧಾಪ್ಯವನ್ನು ಕಳೆಯುತ್ತಿದ್ದನು. ಹಾಗೆ ತನ್ನ ಸಂಪಾದನೆ ಯನ್ನು ಗ್ರಾಮೀಣ ಬ್ಯಾಂಕಿನಿಂದ ಬಳಸಿಕೊಳ್ಳುತ್ತಾ, ಕಾಲವನ್ನು ಕಳೆಯುತ್ತಿರುವ ದೊರೆ ಗ್ರಾಮ ಅಧ್ಯಕ್ಷನನ್ನು ನೋಡಿ "ಊರಿಗೆ ಪ್ರೆಸಿಡೆಂಟ್ ಅಂದರೆ ಊರಿನ ಪ್ರಜೆಗಳಿಗೆ ಸಹಾಯ ಮಾಡಬೇಕು ಅಲ್ಲವೆ! ಅಂತಹ ಗ್ರಾಮದ ಅಧ್ಯಕ್ಷ ಎಂದರೆ ಗ್ರಾಮದಲ್ಲಿರುವವರಿಗೆ ಒಳ್ಳೆಯದು ಮಾಡಬೇಕು ಅಲ್ಲವೆ! ಅಂತಹ ಗ್ರಾಮ ಅಧ್ಯಕ್ಷ ಊರಿನಲ್ಲಿನ ಯಾರಿಗೂ ಒಂದು ರೂಪಾಯಿ ಸಹಾ ಕೊಟ್ಟ

ಸಹಾಯವಾಗಲಿಲ್ಲ. ಊರಿನಲ್ಲಿ ಎಷ್ಟೋಜನ ಬಡವರಿದ್ದಾರೆ. ಗ್ರಾಮಸರ್ಪಂಚಿ ಗ್ರಾಮದಲ್ಲಿರುವವರೆಲ್ಲರನ್ನು ಸಹಾಯಮಾಡಿ ಕೂಳು ಬಟ್ಟೆ ಕೊಡಬೇಕು ಅಲ್ಲವೆ! ಗ್ರಾಮ ಪ್ರಜೆಗಳನ್ನು ಕುರಿತು ಕಾಳಜಿ ವಹಿಸಿಕೊಂಡು ಅವನು ಗ್ರಾಮಕ್ಕೆ ಅಧ್ಯಕ್ಷನೆಂದು ಹೇಗೆ ಹೇಳಿಕೊಳ್ಳುತ್ತಾನೆ" ಎಂದು ಅಂದನಂತೆ ಹಾಗೆ ಅನ್ನುವುದೆ ಅಲ್ಲ ತನಗೆ ಸಹಾಯ ಮಾಡಲಿಲ್ಲವೆಂದು ದೂಷಿಸುವುದು ಸಹಾ ನಡೆದಿದೆ.

ಗ್ರಾಮದ ಅಧ್ಯಕ್ಷನಾದವನು ತನಗಿರುವ ಅಧಿಕಾರದ ಪ್ರಕಾರ ಗ್ರಾಮದಲ್ಲಿನ ಬೀಧಿಗಳನ್ನೂ, ಬೀಧಿದೀಪಗಳನ್ನೂ, ಕುಡಿಯುವ ನೀರಿನ ಸೌಕಾರ್ಯವನ್ನೂ, ಗ್ರಾಮ ಬೀಧಿಗಳಲ್ಲಿ ಕಸಕಡ್ಡಿ ಇಲ್ಲದಂತೆ ನೋಡಿಕೊಳ್ಳುವುದು ಮೊದಲಾದ ಗ್ರಾಮ ಸೌಕಾರ್ಯಗಳು ಮಾಡುವವನಾಗಿ ಇರುತ್ತಾನಾಗಲಿ, ಗ್ರಾಮದಲ್ಲಿನ ವ್ಯಕ್ತಿಗಳಿಗೆ ವ್ಯಕ್ತಿತ್ವ ಸಹಾಯ ಮಾಡುವವನಾಗಿ ಇರುವುದಿಲ್ಲ. ಊರಿನಲ್ಲಿನ ಬಡವರಿಗು ಸಹಾ ಬಟ್ಟೆ ಕೊಡಬೇಕೆಂದು ಗ್ರಾಮ ಅಧ್ಯಕ್ಷ ವಿಧಿಗಳಲ್ಲಿ ಇಲ್ಲ. ಗ್ರಾಮ ಅಧ್ಯಕ್ಷ (ಊರಿನ ಪ್ರೆಸಿಡೆಂಟ್) ಅದವನು ಗ್ರಾಮಕ್ಕೆ ಸರ್ಕಾರದ ಕಡೆಯಿಂದ ಸಹಾಯಕಾರಿಯಾಗಿ ಇರುತ್ತಾನೆ ಆದರೆ, ಗ್ರಾಮದಲ್ಲಿನ ವ್ಯಕ್ತಿಗಳ ವ್ಯಕ್ತಿಗತ ಅವಶ್ಯಕತೆಗಳಿಗೆ ಸಹಾಯಕಾರಿಯಾಗಿ ಇರುವುದಿಲ್ಲ. ಹಾಗೆಯೇ ದೇವರು ಎಂಬುವವನು ವಿಶ್ವವನ್ನು ಪಾಲಿಸುವವನಾಗಲಿ, ಮನುಷ್ಯರಿಗೆ ಉಪಯೋಗ ಪಡುವವನಲ್ಲ. ಒಂದು ಗ್ರಾಮದಲ್ಲಿ ದೊರೆ ಎಂಬುವವನು ತನ್ನ ವಯಸ್ಸಿನಲ್ಲಿ ಸಂಪಾದಿಸಿಕೊಂಡ ಧನ ಕನಕಗಳನ್ನು ಗ್ರಾಮೀಣ ಬ್ಯಾಂಕುಗಳಲ್ಲಿ ಬಚ್ಚಿಟ್ಟುಕೊಂಡಂತೆ ಮನುಷ್ಯ ಎಂಬುವವನು ಪ್ರತಿಯೊಬ್ಬನೂ ತನ್ನ ಗತಕಾಲದಲ್ಲಿ ಸಂಪಾದಿಸಿಕೊಂಡ ಪಾಪಪುಣ್ಯಗಳನ್ನು 'ವಿಧಿ ವಿಧಾನ ಬ್ಯಾಂಕು' ಎಂಬುವ ಪ್ರಾರಬ್ಧಕರ್ಮದಲ್ಲಿ ಇಟ್ಟುಕೊಂಡಿದ್ದಾನೆ. ಹಾಗೆ ಪ್ರಾರಬ್ಧಕರ್ಮದಲ್ಲಿ ಇರುವ ಪಾಪಪುಣ್ಯಗಳನ್ನು ಪುನಃ ಮನುಷ್ಯ ಅನುಭವಿಸುತ್ತಿರುತ್ತಾನೆ. ಇದು ಸರ್ವಸಾಧಾರಣವಾಗಿ ಎಲ್ಲರಿಗೂ ಇರುವ ಪದ್ಧತಿ. ಸೃಷ್ಟಿ ಎಲ್ಲವನ್ನು ಸೃಷ್ಟಿಸಿದ ಸೃಷ್ಟಿಕರ್ತನಾದ ದೇವರು ಸೃಷ್ಟಿ ಎಲ್ಲವನ್ನು ಪಾಲಿಸುವ ಅಧಿಕಾರವನ್ನು ಹೊಂದಿರುತ್ತನಾಗಲಿ, ಸೃಷ್ಟಿಯಲ್ಲಿನ ಜೀವಿಗಳಾದ ಮನುಷ್ಯರಿಗೆ ವ್ಯಕ್ತಿಗತ

ಕೋರಿಕೆಗಳನ್ನು ತೀರಿಸುವುದಕ್ಕೆ ದೇವರು ಇಲ್ಲ. ಮನುಷ್ಯನ ಕೋರಿಕೆಗಳನ್ನು ತೀರಿಸುವುದು ದೇವರ ವಿಧಾನದಲ್ಲಿ ಇಲ್ಲ. ಆದ್ದರಿಂದ ದೇವರು ಯಾರಿಗೂ ವ್ಯಕ್ತಿಗತ ಸಹಾಯ ಮಾಡುವುದಿಲ್ಲ. ಅಂತಹದರಲ್ಲಿ ದೇವರು ಸಹಾಯ ಮಾಡಲಿಲ್ಲ ಎನ್ನುವುದಾಗಲಿ, ಬಡವರಿಗೆ ಸಹಾಯಮಾಡಲಿಲ್ಲ ಎನ್ನುವುದಾಗಲಿ ಒಳ್ಳೆಯ ಪದ್ಧತಿಯಲ್ಲ. ದೇವರ ವಿಧಾನಕ್ಕೆ ವಿರುದ್ಧವಾಗಿ ಮಾತನಾಡಿದಂತಾಗುತ್ತದೆ. ಹಾಗೆಯೇ ದೇವರನ್ನು ಸಹಾಯಕಾರಿ ಅನ್ನುವುದರಿಂದ ಆತನು ಮಾಡದ ಕೆಲಸವನ್ನು ಆತನಿಗೆ ಅಂಟಗಟ್ಟಿ ಹೇಳಿದಂತಾಗುತ್ತದೆ. ದೇವರು ಗುಣರಹಿತನಾದಾಗ ಆತನಿಗೆ ಕೆಲವು ಗುಣಗಳನ್ನು ಅಂಟಗಟ್ಟಿ ಹೇಳುವುದು ಆತನನ್ನು ಅವಹೇಳನ ಮಾಡಿದಂತೆ ಅಲ್ಲವೆ! ಯಾವ ಕಳ್ಳತನ ಮಾಡದವನನ್ನು ಕಳ್ಳ ಎನ್ನುವುದರಿಂದ ಆತನನ್ನು ತಪ್ಪಾಗಿ ಆರೋಪಿಸಿದಂತಾಗುತ್ತಿದೆ. ಹಾಗೆಯೇ ಯಾವ ಗುಣವಿಲ್ಲದ ದೇವರನ್ನು ದಯಾಮಯನು ಎನ್ನುವುದು ಆತನು (ದೇವರು) ಮಾಡದ ಕೆಲಸವನ್ನು ಆತನ ಮೇಲೆ ಆರೋಪಿಸುವುದು ಆತನನ್ನು ಅವಮಾನಪಡಿಸಿದಂತೆ ಅಲ್ಲವೆ!

ಸ್ವಲ್ಪವೂ ಕಿವುಡುತನ ಇಲ್ಲದವನನ್ನು ಕಿವುಡ ಅನ್ನುವುದು ಎಷ್ಟು ತಪ್ಪೋ, ಹಾಗೆಯೇ ಚೆನ್ನಾಗಿ ನೋಡುವವನನ್ನು ಕುರುಡನೆನ್ನುವುದು ಎಷ್ಟು ತಪ್ಪೊ. ಚೆನ್ನಾಗಿ ನಡೆಯುವವನನ್ನು ಕುಂಟನೆಂಬುದು ಎಷ್ಟು ತಪ್ಪೋ, ಹಾಗೆಯೇ ಯಾವ ಗುಣವಿಲ್ಲದ ಗುಣರಹಿತನನ್ನು, ಗುಣ ಇರುವವನೆನ್ನುವುದು ಅಷ್ಟೇ ತಪ್ಪಾಗುತ್ತದೆ. ದಯಾರಹಿತನನ್ನು ದಯಾಮಯನೆನ್ನುವುದು ಪೂರ್ತಿ ತಪ್ಪಾಗುತ್ತದೆ. ದೇವರು ರೂಪ, ನಾಮ, ಕ್ರಿಯಾ ರಹಿತನು. ಅಷ್ಟೇ ಅಲ್ಲದೆ ದೇವರು ಗುಣರಹಿತನು, ಕರ್ಮರಹಿತನು, ಜನ್ಮರಹಿತನು. ಮನುಷ್ಯನಿಗೆ ರೂಪವಿದೆಯಾದ್ದರಿಂದ ಆ ರೂಪಕ್ಕೆ ತಪ್ಪದೇ ಹೆಸರು ಇರುತ್ತದೆ. ರೂಪ ಇರುವವನಿಗೆ ಹೆಸರಿರುವಂತೆ, ಹೆಸರಿರುವವನಿಗೆ ಕೆಲಸ ಸಹಾ ಇರುತ್ತದೆ. ಈ ವಿಧವಾಗಿ ರೂಪ, ನಾಮ, ಕ್ರಿಯೆಗಳು ಒಂದರೊಂದಿಗೆ ಮತ್ತೊಂದು ಸಂಬಂಧ ಹೊಂದಿವೆ. ಅಷ್ಟೇ ಅಲ್ಲದೆ ಎಲ್ಲಿಯಾದರೆ ಯಾರಿಗಾದರೆ ರೂಪ, ನಾಮ, ಕ್ರಿಯಗಳಿವೆಯೋ

ಅಲ್ಲಿ ಅವರಿಗೆ ಗುಣ, ಕರ್ಮ, ಜನ್ಮಗಳಿರುತ್ತವೆ. ಮನುಷ್ಯನಿಗೆ ರೂಪ ನಾಮ, ಕ್ರಿಯೆಗಳಿವೆಯಾದ್ದರಿಂದ ಗುಣ, ಕರ್ಮ, ಜನ್ಮಗಳಿವೆ. ದೇವರಿಗೆ ಯಾವು ಇಲ್ಲವೊ ಮನುಷ್ಯನಿಗೆ ಅವು ಎಲ್ಲವೂ ಇವೆ. ಮನುಷ್ಯನಿಗಿರುವ ರೂಪ ನಾಮ ಕ್ರಿಯೆಗಳು ಮತ್ತು ಗುಣ, ಕರ್ಮ, ಜನ್ಮಗಳು ದೇವರಿಗೆ ಇಲ್ಲ. ಯಾರಿಗಾದರೆ ಗುಣಗಳು ಇರುತ್ತವೊ ಅವರಿಗೆ ಕರ್ಮಗಳಿರುತ್ತವೆ, ಯಾರಿಗೆ ಕರ್ಮಗಳಿರುತ್ತವೊ ಅವರಿಗೆ ತಪ್ಪದೆ ಜನ್ಮಗಳಿರುತ್ತವೆ. ಈ ವಿಧವಾಗಿ ಗುಣ, ಕರ್ಮ. ಜನ್ಮಗಳು ಒಂದಕ್ಕೊಂದು ಸಂಬಂಧ ಹೊಂದಿವೆ. ದೇವರಿಗೆ ರೂಪ ನಾಮ ಕ್ರಿಯೆಗಳು ಇಲ್ಲದಿರುವುದರಿಂದ ಗುಣ, ಕರ್ಮ, ಜನ್ಮಗಳು ಸಹಾ ಇಲ್ಲವೆಂದೇ ಹೇಳಬಹುದು. ಆದ್ದರಿಂದ ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಮೇಲ್ನೋಟಕ್ಕೆ ಸ್ಥೂಲವಾಗಿ ಕಾಣಿಸುವ ರೂಪ, ನಾಮ, ಕ್ರಿಯೆ, ಜನ್ಮಗಳಾಗಲಿ, ಮೇಲ್ನೋಟಕ್ಕೆ ಕಾಣಿಸದ ಗುಣ ಕರ್ಮಗಳಾಗಲಿ, ದೇವರಿಗೆ ಇಲ್ಲ ಎಂದು ಹೇಳಬಹುದು. ರೂಪ, ನಾಮ, ಕ್ರಿಯೆಗಳಾಗಲಿ, ಗುಣ, ಕರ್ಮ, ಜನ್ಮಗಳಾಗಲಿ ಮನುಷ್ಯನಿಗಿರುತ್ತವೆ. ಈ ಆರರಲ್ಲಿ ಯಾವೊಂದಾದರೂ ದೇವರಿಗಿವೆಯೆಂದು ಹೇಳಿದರೆ ಆ ಮಾತು ದೇವರ ಗೌರವವನ್ನು ಭಂಗಪಡಿಸಿದಂತಾಗುತ್ತದೆ. ದೇವರನ್ನು ಕಡಿಮೆಮಾಡಿ ಮಾತನಾಡಿದಂತಾಗುತ್ತದೆ. ಆದ್ದರಿಂದ ದೇವರಿಗೆ ದಯ ಎಂಬ ಗುಣವಿರುವಂತೆ ಹೇಳಬಾರದು. ಹಾಗೆ ದೇವರನ್ನು ಕರುಣಾಮಯನು ಎಂದು ತಿಳಿಯದಮೊದಲು ಅಂದರೂ ಆತನ ಬಗ್ಗೆ ತಿಳಿದುಕೊಂಡ ನಂತರ ಯಾರಾಗಲಿ ದೇವರನ್ನು ದಯೆ ಅಥವಾ ಕರುಣೆ ಇರುವವನೆಂದು ಹೇಳುವುದು ತಪ್ಪಾಗುತ್ತದೆ.

ಮನುಷ್ಯ ದೇವರ ವಿಧಾನವಾದ ಜ್ಞಾನವನ್ನು, ಧರ್ಮವನ್ನು ಸರಿಯಾಗಿ ತಿಳಿಯದವನಾಗಿ, ದೇವರ ಮೇಲೆ ಗೌರವದಿಂದಲೇ ದೇವರನ್ನು ತಪ್ಪಾಗಿ ಉಚ್ಛರಿಸಿದರೆ ಅದು ತಪ್ಪೇ ಆಗುತ್ತದೆ. ಆದ್ದರಿಂದ ತಿಳಿದಾಗಲಿ, ತಿಳಿಯದಾಗಲಿ, ದೇವರನ್ನು ಅವಹೇಳನ ಮಾಡುವುದಾಗಲಿ, ಆತನ ಸ್ಥಾನವನ್ನು ಕಡಿಮೆಮಾಡಿ ಮಾತನಾಡುವುದಾಗಲಿ ಮಾಡಬಾರದು. ದೇವರ ಗ್ರಂಥಗಳಲ್ಲಿ ಎಲ್ಲಿಯಾಗಲಿ ದೇವರು ತನ್ನನ್ನು ದಯೆ ಇರುವವನೆಂದು ಹೇಳಿಕೊಳ್ಳಲಿಲ್ಲ. ದೇವರನ್ನು ಕುರಿತು

ಮನುಷ್ಯ ಹೇಳಿದ ವಾಕ್ಯಗಳಲ್ಲಿ ದೇವರನ್ನು ದಯ ಇರುವವನೆಂದು ಹೇಳುವುದು ನಡೆದಿದೆ. ಭಗವದ್ಗೀತೆ ದೇವರ ಗ್ರಂಥವಾದರೂ ಅದರಲ್ಲಿ ಮೊದಲಿರುವ ಅರ್ಜುನ ವಿಷಾಧಯೋಗ ದೇವರು ಹೇಳಿರುವುದಲ್ಲ. ಅರ್ಜುನ ವಿಷಾಧಯೋಗ ಮನುಷ್ಯನಾದ ಅರ್ಜುನನು ಹೇಳಿರುವುದು. ಹಾಗೆಯೇ ಖುರಾನ್ ಗ್ರಂಥ ದೈವಗ್ರಂಥವಾದರೂ ಅದರಲ್ಲಿ ಮೊದಲ ಸುರಾ 'ಅಲ್ ಫಾತಿಹ' ಸುರಾಗಿಂತ ಮೊದಲು ಬರೆದ ವಾಕ್ಯ ಮನುಷ್ಯರು ಬರೆದಿರುವುದೆಯಾಗಲಿ ದೇವರು ಹೇಳಿರುವುದು ಅಲ್ಲವೆಂದು ತಿಳಿಯಬೇಕು. ಮೊದಲ ಸುರಾದಲ್ಲಿನ ಏಳು ವಾಕ್ಯಗಳು ದೇವರನ್ನು ಮನುಷ್ಯರು ಕೊಂಡಾಡುವವು ಮಾತ್ರವಾಗಿವೆ ಅವು ದೇವರನ್ನು ಹೊಗಳುವ ವಾಕ್ಯಗಳೆಯಾಗಲಿ! ದೇವರ ಜ್ಞಾನವನ್ನು ತಿಳಿಸುವ ವಾಕ್ಯಗಳು ಇಲ್ಲ. ಕೆಲವು ದೇವರನ್ನು ಹೊಗಳುವವಾಗಿ ಇವೆ ದೇವರು ಹೊಗಳಿಕೆಗೆ ವಶವಾಗುವುದಿಲ್ಲ. ಆತನು ಜ್ಞಾನಕ್ಕೆ ಮಾತ್ರ ವಶವಾಗುತ್ತಾನೆ. ಅನಂತ ಕರುಣಾಮಯುನು. ಅಪಾರ ಕೃಪಾಶೀಲನಾದ ದೇವರ ಹೆಸರಿನಿಂದ ಪ್ರಾರಂಭಮಾಡುತ್ತಿದ್ದೇನೆಂದು ಮುಸ್ಲಿಮ್‌ರು ಖುರಾನನ್ನು ಓದಲು ಪ್ರಾರಂಭ ಮಾಡುತ್ತಾರೆ. ಆದರೆ ದೇವರನ್ನು ಗೌರವಿಸುವುದಕ್ಕೆ ಈ ವಾಕ್ಯವನ್ನು ಬಳಸಿದರೂ, ಅವು ವಾಸ್ತವವಾಗಿ ದೇವರ ಗೌರವಕ್ಕೆ ಭಂಗವನ್ನು ಉಂಟುಮಾಡುತ್ತೀವೆ. ದೇವರ ಜ್ಞಾನ ತಿಳಿಯದ ನಾಸ್ತಿಕರು ಕೆಲವರು, ದೈವಭಕ್ತರು ದೇವರನ್ನು ದಯಾಮಯನು ಅಂದರೆ, ಅವರು ಹೇಳಿರುವುದೇ ನಿಜವೆಂದು ನಂಬಿದವರಾಗಿ ವಿಮರ್ಶಿಸುವ ಧೋರಣೆಯಲ್ಲಿ ದೇವರು ದಯಾಮಯನಾದರೆ ಎಲ್ಲರಿಗೂ ಸಮಾನವಾಗಿ ಏಕೆ ಸಹಾಯವಾಗಲಿಲ್ಲವೆಂದು ಕೇಳುತ್ತಿದ್ದಾರೆ. ವಾಸ್ತವವಾಗಿ ದೇವರು ವ್ಯಕ್ತಿಗತ ಸಹಾಯ ಮಾಡುವವನಲ್ಲವೆಂದು, ತಿಳಿಯದವರು ಹೇಳಿದ ಮಾತುಗಳನ್ನನುಸರಿಸಿ ಕೆಲವರು ದೇವರು ಎಲ್ಲರಿಗೂ ಸಮಾನವಾಗಿ ಏಕೆ ಸಹಾಯವಾಗಲಿಲ್ಲವೆಂದು ಕೇಳಿರಬಹುದು. ದೈವಜ್ಞಾನವನ್ನು ತಿಳಿಯಲ್ಪಟ್ಟರೆ ದೇವರ ಧರ್ಮದ ಪ್ರಕಾರ ದೇವರು ದಯಾಮಯನಾಗಲಿ, ಕೃಪಾಶೀಲನಾಗಲಿ ಅಲ್ಲವೆಂದು ತಿಳಿಯಲ್ಪಡುತ್ತಿದೆ.

ದೇವರನ್ನು ಕುರಿತು ಎಷ್ಟೋ ಪ್ರಯತ್ನಿಸಿ ಸಂಪೂರ್ಣವಾಗಿ ಜ್ಞಾನವನ್ನು ತಿಳಿದಿದ್ದೇವೆಂದು ಯಾರಾದರೂ ಅಂದುಕೊಂಡರೂ, ದೇವರು ಅನಂತನು ಆದ್ದರಿಂದ ಆತನ ಜ್ಞಾನ ಸಹಾ ಅನಂತವಾದುದಾಗಿಯೇ ಇರುತ್ತದೆ. ಆದ್ದರಿಂದ ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದವರು ಯಾರೂ ಇಲ್ಲವೆಂದು ಹೇಳಬಹುದು. ಕೆಲವರು ದೈವ ಜ್ಞಾನವನ್ನು ಪೂರ್ತಿ ತಿಳಿದಿದ್ದೇವೆಂದು ಮಾತನಾಡಿದರೂ, ಅವರ ಮಾತುಗಳು ಅಸಂಪೂರ್ಣವಾಗಿ, ಅಶಾಸ್ತ್ರೀಯವಾಗಿ ಇರಬಹುದು. ಅಂತಹ ಮಾತುಗಳನ್ನು ಕೆಲವರು ಆಧಾರವಾಗಿ ತೆಗೆದುಕೊಂಡು ದೇವರು ಕಲ್ಪಿತನು, ಅಸತ್ಯವಾದವನು, ದೇವರಿದ್ದಾನೆನ್ನುವುದು ಅಸತ್ಯ ಎನ್ನುವವರು ಸಹಾ ಇದ್ದಾರೆ. ಕೆಲವರು ಹೇಳಿದ ಜ್ಞಾನವನ್ನು, ಕೆಲವರು ಬರೆದ ಪುರಾಣಗಳನ್ನು, ವೇದಗಳನ್ನು ಆಸರೆಯಾಗಿ ಮಾಡಿಕೊಂಡು ಪುರಾಣಗಳಲ್ಲಿ ಶಾಸ್ತ್ರ ಇಲ್ಲವೆಂದು ತಿಳಿದು, ಪುರಾಣಗಳ ಪ್ರಕಾರ ದೇವರನ್ನು ವಿಮರ್ಶಿಸುವ ನಾಸ್ತಿಕವಾದಿಗಳು ಇದ್ದಾರೆ. ಅಂತಹವರಿಗೆ ನಾವು ತಿಳಿಸುವುದು ಏನೆಂದರೆ! ಅಷ್ಟಾದಶ ಪುರಾಣಗಳನ್ನು (18 ಪುರಾಣಗಳನ್ನು) ಬಿಟ್ಟು ಬ್ರಹ್ಮವಿದ್ಯಾಶಾಸ್ತ್ರವನ್ನು ಓದಿರಿ. ಬ್ರಹ್ಮವಿದ್ಯಾಶಾಸ್ತ್ರ ಶಾಸ್ತ್ರಬದ್ಧವಾದುದಾಗಿ ಎಲ್ಲವುಗಳಿಗೂ ಉತ್ತರವಾಗಿದೆ. ಬ್ರಹ್ಮವಿದ್ಯಾಶಾಸ್ತ್ರ ದೇವರ ವಿಧಾನವನ್ನು ಖಚ್ಚಿತವಾಗಿ ತಿಳಿಸುತ್ತಿರುವಾಗ ಯಾರೂ ಪ್ರಶ್ನಿಸಲಾರರು. ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಜ್ಞಾನಿಯಲ್ಲದಂತಹವನಿಗೆ ದೇವರ ಮೇಲೆ ಪ್ರಶ್ನೆಗಳು ಹಾಕುವುದಕ್ಕೆ ಬುದ್ಧಿ ಹುಟ್ಟುತ್ತದೆ. ಹಾಗೆ ಕೆಲವರು ನಾಸ್ತಿಕರಾಗಲಿ, ಆಸ್ತಿಕರಾಗಲಿ ಪ್ರಶ್ನಿಸುವಾಗ ಅದಕ್ಕೆ ದೇವರ ವಿಧಾನದಿಂದ ಪೂರ್ತಿ ಉತ್ತರಗಳು ಶಾಸ್ತ್ರಬದ್ಧವಾಗಿ ಬರುತ್ತವೆ.

ಹಿಂದೂಗಳಲ್ಲಿ ನಾಸ್ತಿಕರು ಕೆಲವರಿರುವಾಗ, ಆಸ್ತಿಕರು ಎಷ್ಟೋಜನ ಇದ್ದಾರೆ. ನಾಸ್ತಿಕರು ದೇವರನ್ನು ವಿಮರ್ಶಿಸುತ್ತಾ ಪ್ರೆಶ್ನೆಗಳನ್ನು ಕೇಳಿದಾಗ, ಆಸ್ತಿಕರಾದವರು ಇತರ ಮತಗಳನ್ನು ಕುರಿತು, ಇತರ ದೇವರುಗಳನ್ನು ಕುರಿತು ವಿಮರ್ಶಿಸುತ್ತಾ ಪ್ರಶ್ನಿಸುತ್ತಿರುತ್ತಾರೆ. ಅಂತಹ ಪದ್ಧತಿಯಲ್ಲಿ ಒಬ್ಬ ಆಸ್ತಿಕ ಹಿಂದೂವು ಕ್ರೈಸ್ತವ ಮತದಲ್ಲಿನ ಆಸ್ತಿಕರನ್ನು ವಿಮರ್ಶಿಸುತ್ತಾ ಒಂದು ಪ್ರಶ್ನೆ ಕೇಳಿದ್ದಾನೆ.

ఆ ప్రశ్నే గతదల్లి నమగూ సహా బందిదె, ఆగ ఆ ప్రశ్నేగె ఉత్తరవాగి "సిలుబె దేవరా?" ఎంబ హెసరినింద ఒందు చిక్క గ్రంథవన్ను బరెయువుదు నడెదిదె. ఇల్లి ఆ ప్రశ్నేగె స్వల్పమట్టిన ఉత్తరవన్ను కొడుత్తేనె అదన్ను నోడి గ్రహిసికొళ్ళుత్తారెందు అందుకొళ్ళుత్తిద్దేనె. ఒందువేళె ఇల్లి కొట్టిరువ ఉత్తర సరియాగి అర్థవాగదిద్దరె నావు బరెద గ్రంథవన్ను నోడిరి.

**ఆస్తిక ప్రశ్నే :–** నావు హిందూగళు, నమగె అనేకజన దేవతెగళిద్దారె. నమ్మ మనె దేవరు నరసింహస్వామి. ఆద్దరింద అరణ్యదల్లిన అహోబిల నరసింహస్వామియన్ను నావు పూజిసి మీసలికెగళు సమర్పిసుత్తిద్దేవె. నమ్మన్ను నోడిద క్రైస్తవరు నీవు విగ్రహగళాద బొంబెగళన్ను పూజిసుత్తీరి అవు కాణిసుత్తలే బగ్గి నమస్కరిసుత్తారె. నమ్మ మతదల్లి యావ బొంబెయన్నూ పూజిసువుదిల్ల, గౌరవిసువుదిల్ల. నీవు పూర్తి మనుష్యన ఆకార సహా ఇల్లద నరసింహనన్ను, ఆంజనేయనన్ను మొదలాద దేవతెగళన్ను పూజిసుత్తిద్దారె. నావు యారన్ను పూజిసదె ఎహోవా దేవరన్ను ఒబ్బనన్నే ప్రార్థిసుత్తిద్దేవె ఎందు హేళనవాగి మాతనాడిద్దారె. ఆగ ననగె కోప బందు నీవు సిలుబె బొంబెయన్ను గౌరవిసువుదిల్లవా? కణ్ణిగె హత్తుకొండు కత్తినల్లి హాకికొండు ఆగాగ నోడికొళ్ళుత్తిల్లవా? నావు ప్రాణిగళ తలెగళిరువ దేవరుగళన్ను ముగిదరె, నీవు చిక్క కోలు ఒందు, ఉద్ద కోలు ఒందు (నావు చిక్కందినల్లి ఆడికొళ్ళుత్తిద్ద చిన్నిదండెయంతహ) ఎరడు కట్టిగెగళ ఆకారవాద శిలుబెగె ముగియుత్తిల్లవా? ఎందు కేళిద్దేనె. నన్న మాతిన ప్రకార అవరు ఆంధ్రాదింద అమేరికావరెగూ కత్తినల్లి శిలుబెయన్ను నేతాకికొండిద్దారె. ఒందు ఉద్దనెకట్టిగెగె ఒందు అడ్డకట్టిగెయన్నిట్టు అదు శిలుబెయెందు అదన్ను గౌరవిసిదాగ నావు విగ్రహగళిగె

ಮುಗಿಯುವುದು ತಪ್ಪಾ? ಅವರು ಶಿಲುಬೆಯನ್ನು ಗುಡಿಯಲ್ಲಿಟ್ಟು ಪೂಜಿಸದಿದ್ದರೂ ಕತ್ತಿನಲ್ಲಿ ಹಾಕಿಕೊಂಡು ಗುಡಿಯಲ್ಲಿನ ದೇವರಿಗಿಂತ ಹೆಚ್ಚಾಗಿ ಗೌರವವಾಗಿ ನೋಡಿಕೊಳ್ಳುತ್ತಿದ್ದಾರೆ ಅಲ್ಲವೆ! ಅವರ ಸಿಲುಬೆ ಅವರಿಗೂ ಸಹಾ ವಿಗ್ರಹ ದಂತಹದೇ ಅಲ್ಲವೆ! ಇದಕ್ಕೆ ನೀವೇನನ್ನುತ್ತೀರಾ?

**ನಮ್ಮ ಉತ್ತರ :–** ಹಿಂದೂಗಳು ದೇವರೆಂಬ ನಂಬಿಕೆಯಿಂದ ದೇವರಲ್ಲದವರನ್ನು ಪೂಜಿಸುತ್ತಿದ್ದಾರನ್ನುವುದರಲ್ಲಿ ತಪ್ಪಿಲ್ಲಾಗಲಿ, ಕ್ರೈಸ್ತವರು ಸಹಾ ದೇವರಲ್ಲದ ಶಿಲುಬೆಯನ್ನು ಗೌರವಿಸುತ್ತಾ ಹಿಂದೂಗಳಿಗಿಂತ ದೊಡ್ಡ ತಪ್ಪು ಮಾಡುತ್ತಿದ್ದಾರೆ. ದೇವರಿಗೆ ಶಾಸ್ತ್ರೀಯವಾದ ಒಂದು ವಿಧಾನವಿದೆ. ಅದು ಏನೆಂದರೆ! ಮನುಷ್ಯನಿಗೆ ತಿಳಿದ ರೂಪ, ನಾಮ, ಕ್ರಿಯೆಗಳಾಗಲಿ, ಮನುಷ್ಯನಿಗೆ ತಿಳಿಯದ ಗುಣ, ಕರ್ಮ, ಜನ್ಮಗಳಾಗಲಿ ದೇವರಿಗೆ ಇಲ್ಲ. ಅವು ಇಲ್ಲದಂತಹವನು ದೇವರು ಎಂಬುದು ಬ್ರಹ್ಮವಿದ್ಯಾಶಾಸ್ತ್ರದಲ್ಲಿನ ಸೂತ್ರ. ಈ ಸೂತ್ರಕ್ಕೆ ವಿರುದ್ಧವಾಗಿರುವ ಹಿಂದೂ ಆಚರಣೆಯಾಗಲಿ, ಕ್ರೈಸ್ತರ ಆಚರಣೆಯಾಗಲಿ, ಮುಸ್ಲೀಮ್‌ರ ಆಚರಣೆಯಾಗಲಿ ತಪ್ಪಾಗುತ್ತದೆ. ಒಳ್ಳೆಯದು ಕೆಟ್ಟದೆಂಬುದು ಎಲ್ಲಾ ಮತಗಳಲ್ಲಿಯೂ ಇವೆ. ಆದರೂ ಗುಲಗಂಜಿಗೆ ಕಪ್ಪು ಕಾಣಿಸದಂತೆ ಕೆಳಗೆ ಇರುವುದರಿಂದ ತಾನು ಎಲ್ಲಾ ಕೆಂಪಗೆ ಇದ್ದೇನೆಂದುಕೊಂಡಂತೆ, ಪ್ರತಿ ಮತಸ್ಥನು ತನ್ನ ತಪ್ಪನ್ನು ಮರೆತುಹೋಗಿ, ಮತ್ತೊಬ್ಬರ ತಪ್ಪನ್ನು ಬೆರಳೆತ್ತಿ ತೋರಿಸುತ್ತಾರೆ. ಹಿಂದೂಗಳು ವಿಗ್ರಹಾರಾಧನೆ ತಪ್ಪಾದಾಗ, ಕ್ರೈಸ್ತರು ಶಿಲುಬೆಯನ್ನು ಧರಿಸುವುದು ಸಹಾ ತಪ್ಪಾಗುತ್ತದೆ. ಹಾಗೆ ಮುಸ್ಲಿಮ್‌ರು ದರ್ಗಗಳಿಗೆ ಮುಗಿಯುವುದು ಸಹಾ ತಪ್ಪಾಗುತ್ತದೆ. ಹಿಂದೂಗಳದು ಭಗವದ್ಗೀತೆ ಪ್ರಕಾರ ವಿಗ್ರಹಾರಾಧನೆ ತಪ್ಪೇ. ಹಾಗೇ ಬೈಬಲ್ ಪ್ರಕಾರ ಕ್ರೈಸ್ತವರು ಶಿಲುಬೆಯನ್ನು ಧರಿಸುವುದು ತಪ್ಪೇ. ಹಾಗೆಯೇ ಖುರಾನ್ ಪ್ರಕಾರ ಮುಸ್ಲಿಮ್‌ರು ದರ್ಗಗಳ ಪೂಜೆ ಮಾಡುವುದು ತಪ್ಪೇ. ಯಾರ ತಪ್ಪುಗಳನ್ನು ಅವರು ಮರೆತು, ಮೂರು ಮತದವರು ಅವರವರ ಗ್ರಂಥಗಳನ್ನು ಮರೆತುಹೋಗಿ, ಅದರಲ್ಲಿನ ಜ್ಞಾನವನ್ನು ತಿಳಿಯದೆ, ತಮ್ಮ ತಪ್ಪನ್ನು ತಾವು ಗುರುತಿಸದೆ, ಮತ್ತೊಬ್ಬರನ್ನು ತಪ್ಪಿಡಿಯುವುದು ಸರಿಯಾದ

ಪದ್ಧತಿಯಲ್ಲ. ವಿಗ್ರಹಗಳನ್ನು ಮುಗಿಯುವುದು ತಪ್ಪು ಎಂದು ಹಿಂದೂಗಳನ್ನು ವಿಮರ್ಶಿಸಿದ ಕ್ರೈಸ್ತರು, ತಾವು ಶಿಲುಬೆಯನ್ನು ಧರಿಸುವುದೂ, ಚರ್ಚಿಗಳ ಮೇಲೆ ಶಿಲುಬೆಯನ್ನು ಇಟ್ಟುಕೊಳ್ಳುವುದು ತಪ್ಪೆಂದು, ಅದು ಸಹಾ ವಿಗ್ರಹರಾಧನೆಯಂತಹದೇ ಎಂದು ಅಂದುಕೊಳ್ಳುತ್ತಿಲ್ಲ. ಕ್ರೈಸ್ತವರು ಶಿಲುಬೆಯನ್ನು ದೊಡ್ಡದಾಗಿ ಇಟ್ಟುಕೊಳ್ಳುವುದು ಎಷ್ಟು ತಪ್ಪಾಗುತ್ತದೊ, ಹಿಂದೂಗಳು ವಿಗ್ರಹರಾಧನೆ ಮಾಡುವುದು ಅಷ್ಟೇ ತಪ್ಪಾಗುತ್ತದೆ. ಕ್ರೈಸ್ತವರದು ಹೇಗೆ ತಪ್ಪಾಗುತ್ತದೊ ವಿವರಿಸುತ್ತಾ **"ಶಿಲುಬೆ ದೇವರಾ?"** ಎಂಬ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಕ್ರೈಸ್ತರಾಗಲಿ, ಹಿಂದೂಗಳಾಗಲಿ ತಮ್ಮ ತಪ್ಪನ್ನು ಗ್ರಹಿಸಿಕೊಂಡು, ವಿಗ್ರಹಗಳನ್ನು ಹಿಂದೂಗಳು ಬಿಟ್ಟು ಅಸಲಾದ ದೇವರನ್ನು ಆಶ್ರಯಿಸಬೇಕು. ಹಾಗೆಯೇ ಕ್ರೈಸ್ತರು ಶಿಲುಬೆಯನ್ನು ಬಿಟ್ಟು ಅಸಲಾದ ದೇವರನ್ನು ಅನುಸರಿಸಬೇಕು. ಅಲ್ಲಿಯವರೆಗೂ ಇಬ್ಬರದು ತಪ್ಪಾಗುತ್ತದೆ.

**ಆಸ್ತಿಕನ ಪ್ರಶ್ನೆ :–** ಸ್ವಲ್ಪಕಾಲದಿಂದ ಜನ ವಿಜ್ಞಾನವೇದಿಕೆ ಎಂಬ ಒಂದು ಸಂಸ್ಥೆ ಪ್ರಜೆಗಳಲ್ಲಿ ಚೈತನ್ಯತಂದು, ಮೂಢನಂಬಿಕೆಗಳನ್ನು ನಂಬದಂತೆ ಎಚ್ಚರಗೊಳಿಸುವ ಕೆಲಸವನ್ನು ಮಾಡಬೇಕೆಂಬ ಉದ್ದೇಶದಿಂದ ಕೆಲಸ ಮಾಡುತ್ತಿದೆ. ಅದರಲ್ಲಿನ ಸದಸ್ಯರು ಮೂಢನಂಬಿಕೆಗಳನ್ನು ಖಂಡಿಸುತ್ತಾ ಶಾಸ್ತ್ರೀಯವಾದ ವಿಧಾನವನ್ನು ಬೋಧಿಸುತ್ತೇವೆಂದು ಹೇಳುತ್ತಾರೆ. ಈ ಮಧ್ಯಕಾಲದಲ್ಲಿ ಉಬ್ಬಸವ್ಯಾಧಿಗೆ ಮೀನಿನ ಔಷಧಿ ಅನ್ನುವುದರ ಮೇಲೆ ಅವರ ದೃಷ್ಟಿಯನ್ನು ಕೇಂದ್ರಿಕರಿಸಿ ಮೀನಿನ ಔಷಧಿ ಔಷಧಿಯಲ್ಲವೆಂದು, ಪ್ರಜೆಗಳು ಮೂಢವಾಗಿ ಅದನ್ನು ಔಷಧಿಯೆಂದು ನಂಬುತ್ತಿದ್ದಾರೆಂದು, ಮೀನಿನಔಷಧಿಯಲ್ಲಿ ಎಂತಹ ಶಾಸ್ತ್ರೀಯವಾದ ಔಷಧಿಯಿಲ್ಲವೆಂದು ಪ್ರಚಾರ ಮಾಡುತ್ತಿದ್ದಾರೆ. ನೀವು ಕೂಡಾ ಪ್ರತಿಮಾತಿಗೂ ಶಾಸ್ತ್ರೀಯತೆ ಎಂದಾಗಲಿ, ಶಾಸ್ತ್ರವು ಆಧಾರವಾಗಿರಬೇಕೆಂದಾಗಲಿ ಹೇಳುತ್ತಿರುತ್ತೀರಲ್ಲವೆ! ಹಾಗಿರುವಾಗ ನಿಮಗೆ ತಿಳಿದ ಶಾಸ್ತ್ರಪದ್ಧತಿ ಪ್ರಕಾರ ಮೀನಿನ ಔಷಧಿ ಮೂಢನಂಬಿಕೆಯೇನಾ? ಅದನ್ನು ಕುರಿತು ನೀವೇನು ಹೇಳುತ್ತೀರಾ?

**ನಮ್ಮ ಉತ್ತರ :–** ಶಾಸ್ತ್ರ ಎಂಬುದು ಎಲ್ಲರಿಗೂ ಸಮಾನವೇ ಆಗುತ್ತದೆ.

ಶಾಸ್ತ್ರೀಯತೆಯಿಲ್ಲದಿರುವುದನ್ನು ಯಾರಾದರೂ ಖಂಡಿಸಬಹುದು. ಆದರೆ ಇಲ್ಲಿ ಒಂದು ಉದಾಹರಣೆ ಪ್ರಕಾರ ಖಾಕೀಡ್ರಸ್ಸು ಹಾಕಿಕೊಂಡವರೆಲ್ಲರೂ ಪೋಲೀಸರಲ್ಲ (ರಕ್ಷಕಭಟರು ಅಲ್ಲ). ಖದ್ದರುಬಟ್ಟೆಗಳು ಧರಿಸಿದವರೆಲ್ಲರೂ ಪೊಲಿಟೀಷಿಯನ್ಸ್ ಅಲ್ಲ (ರಾಜಕೀಯ ನಾಯಕರು ಅಲ್ಲ) ಅದೇ ವಿಧವಾಗಿ ಸೈನ್ಸು ಎಂದು ಮಾತನಾಡಿದವರೆಲ್ಲರೂ ವಿಜ್ಞಾನಿಗಳಲ್ಲ, ಶಾಸ್ತ್ರವೆಂದು ಹೇಳುವವರೆಲ್ಲರೂ ಶಾಸ್ತ್ರಜ್ಞರಲ್ಲ. ಜನ ವಿಜ್ಞಾನವೇದಿಕೆಯವರು ಮೀನಿನಔಷಧಿಯಲ್ಲಿ ಶಾಸ್ತ್ರೀಯತೆ ಇಲ್ಲ, ಅದರಲ್ಲಿ ಸೈನ್ಸು ಪ್ರಕಾರ ಔಷಧಿಯಿಲ್ಲ ಅಂದಷ್ಟುಮಾತ್ರಕ್ಕೆ ಅವರು ಹೇಳಿದ ಮಾತನ್ನು ನಾವು ಮೂಢವಾಗಿ ನಂಬದಂತೆ, ಅವರು ಹೇಳಿದಮಾತು ಶಾಸ್ತ್ರವನ್ನು ಅನುಸರಿಸಿ ಇದೆಯಾ, ಸೈನ್ಸನ್ನು ಅನುಸರಿಸಿ ಇದೆಯಾ ಎಂದು ಪರಿಶೀಲಿಸಿ ನೋಡಬೇಕು. ಹಾಗೆ ನೋಡದಂತೆ ಅವರು ಹೇಳಿದ್ದಾರೆ ನಾವು ಕೇಳಿದ್ದೇವೆ ಅಂದರೆ ಅದು ಮೂಢನಂಬಿಕೆಯಾಗುತ್ತದೆ. ಅಂತಹ ಪರಿಶೀಲನೆಯಲ್ಲಿ ನಾವು ವಿಜ್ಞಾನ ಎಂದರೆ ಏನೊ ಮೊದಲು ತಿಳಿದುಕೊಳ್ಳೋಣ.

ಏನಾದರೂ ಒಂದು ವಿಷಯವನ್ನು ಕುರಿತು ವಿವರವನ್ನು ಕೊಡುವುದು ಜ್ಞಾನ. ಒಂದು ವಿಷಯವನ್ನು ವಿವರವಾಗಿ ತಿಳಿಸುವುದು ಜ್ಞಾನ. ತಿಳಿಯಲ್ಪಟ್ಟ ವಿವರದ ಪ್ರಕಾರ ಅಥವಾ ಜ್ಞಾನದ ಪ್ರಕಾರ ಅನುಭವಕ್ಕೆ ಬಂದರೆ ಅದು ವಿಜ್ಞಾನವಾಗುತ್ತದೆ. ತಿಳಿಯಲ್ಪಡುವುದು ಜ್ಞಾನ, ಅನುಭವಕ್ಕೆ ಬರುವುದು ವಿಜ್ಞಾನ. ಜ್ಞಾನ ಎಂದರೆ ತಿಳಿಯಲ್ಪಡುವುದಾದಾಗ ವಿಶೇಷ ಜ್ಞಾನ ಇರುವುದನ್ನು ವಿಜ್ಞಾನ ಎನ್ನುತ್ತೇವೆ. ಅನುಭವದಿಂದ ತಿಳಿದುಕೊಂಡಿರುವುದನ್ನು ವಿಜ್ಞಾನ ಅನ್ನುತ್ತಿದ್ದೇವೆ. ಜ್ಞಾನ ಬುದ್ಧಿಗೆ ತಿಳಿಯುವುದಾಗಿದ್ದು ವಿಜ್ಞಾನ ಜೀವಿಯ ಅನುಭವಕ್ಕೆ ಬರುತ್ತಿದೆ. ಯಾವ ವಿಷಯ ವಿವರವಾದರೂ ಅನುಭವಕ್ಕೆ ಬಾರದಮುನ್ನ ಜ್ಞಾನವಾಗುತ್ತದೆ. ಅನುಭವಕ್ಕೆ ಬಂದ ನಂತರ ವಿಜ್ಞಾನವಾಗುತ್ತದೆ. ಉದಾಹರಣೆಗೆ ಲಡ್ಡು ಸಿಹಿಯಾಗಿರುತ್ತದೆ ಎಂಬ ವಿವರ ಜ್ಞಾನವಾಗುತ್ತದೆ. ಲಡ್ಡನ್ನು ತಿಂದಾಗ ಅದು ಸಿಹಿಯಾಗಿದೆಂಬ ವಿವರದ ಪ್ರಕಾರ ತಿಳಿದುಹೋಗುವುದು ವಿಜ್ಞಾನವಾಗುತ್ತದೆ. ಒಬ್ಬನು ಲಡ್ಡನ್ನು ತಿನ್ನದಿದ್ದರೂ ಅವನಿಗೆ ಲಡ್ಡು ಸಿಹಿಯಾಗಿರುತ್ತದೆಂದು ಇತರರಿಂದ ತಿಳಿಯಲ್ಪಟ್ಟಿದೆ. ಇನ್ನೊಬ್ಬನಿಗೆ ಲಡ್ಡುವಿನ ವಿಷಯವೇ ತಿಳಿದಿಲ್ಲ,

ಅಂಥವನಿಗೆ ಲಡ್ಡು ಸಿಕ್ಕಿದೆ, ತಿನ್ನುವುದು ನಡೆದಿದೆ. ಆಗ ಬೆಲ್ಲದಂತೆ ಲಡ್ಡು ಸಿಹಿಯಾಗಿದೆಯೆಂದು ಅನುಭವದ ಮೂಲಕ ತಿಳಿದುಕೊಂಡಿದ್ದಾನೆ. ಅನುಭವ ಇಲ್ಲದಿದ್ದರೂ ಲಡ್ಡು ಸಿಹಿಯಾಗಿರುತ್ತದೆಯೆಂದು ಇತರರ ಮೂಲಕ ತಿಳಿದು ಕೊಂಡು ಹೇಳುವ ಮಾತಾಗಲಿ, ಲಡ್ಡನ್ನು ತಿಂದು ಅನುಭವದ ಮೂಲಕ ಲಡ್ಡು ಸಿಹಿಯಾಗಿದೆಯೆಂದು ಹೇಳುವಮಾತಾಗಲಿ ಎರಡೂ ಸತ್ಯವೇ ಆಗುತ್ತವೆ. ಅದರಲ್ಲಿ ಒಂದು ಜ್ಞಾನವಾಗಿದೆ, ಎರಡನೆಯದು ವಿಜ್ಞಾನವಾಗಿದೆ. ಇಲ್ಲಿಯವರೆಗೂ ಜ್ಞಾನವೆಂದರೆ ಏನು ಮತ್ತೆ ವಿಜ್ಞಾನವೆಂದರೆ ಏನೆಂದು ಅರ್ಥವಾಗಿದೆ ಯೆಂದು ಕೊಳ್ಳುತ್ತೇನೆ.

ಈಗ ಶಾಸ್ತ್ರ ಮತ್ತು ಶಾಸ್ತ್ರೀಯತೆ ಎಂಬ ವಿಷಯವನ್ನು ಕುರಿತು ಹೇಳಿಕೊಳ್ಳೋಣ. ಶಾಸನ ಎಂಬ ಶಬ್ದದಿಂದ ಹುಟ್ಟಿರುವುದು ಶಾಸ್ತ್ರ. ಶಾಸನ ಎಂದರೆ ಜಾರಿ ಮಾಡಿರುವುದೆಂದು ಅರ್ಥ. ಶಾಸ್ತ್ರ ಎಂದರೆ ನಡದೇತೀರುವು ದೆಂದು ಅರ್ಥ. ಶಾಸ್ತ್ರ ಹೇಳಿದಹಾಗೆ ಜಾರಿ ಆಗಿರುವುದನ್ನು “ಶಾಸ್ತ್ರೀಯತೆ” ಎನ್ನುತ್ತಾರೆ. ನಡೆಯುವಂತಹ ಅದರೊಂದರ ನಿಯಮಗಳನ್ನು ಶಾಸ್ತ್ರ ಎಂದರೆ ಶಾಸ್ತ್ರವೊಂದರ ನಿಯಮಗಳ ಪ್ರಕಾರ ನಡೆಯುವುದನ್ನು ಶಾಸ್ತ್ರೀಯತೆ ಎನ್ನುತ್ತಾರೆ. ಮತ್ತೊಂದು ವಿಧವಾಗಿ ಹೇಳಿದರೆ ಶಾಸ್ತ್ರ ಎಂದರೆ ಜ್ಞಾನ ಎಂದೂ, ಶಾಸ್ತ್ರೀಯತೆ ಎಂದರೆ ವಿಜ್ಞಾನ ಎಂದೂ ಹೇಳಬಹುದು. ಇನ್ನೊಂದು ವಿಧವಾಗಿ ಹೇಳಿದರೆ ಶಾಸ್ತ್ರ ಎಂದರೆ ಸತ್ಯವೆಂದೂ, ಶಾಸ್ತ್ರೀಯತೆ ಎಂದರೆ ಅನುಭವ ಸತ್ಯ ಅಥವಾ ಪ್ರತ್ಯಕ್ಷ ಸತ್ಯವೆಂದೂ ಹೇಳಬಹುದು. ಸತ್ಯವಲ್ಲದಿರುವುದನ್ನು, ಅನುಭವಕ್ಕೆ ತಿಳಿಯದಿರುವುದನ್ನು ಅಸತ್ಯ ಅಥವಾ ಅಶಾಸ್ತ್ರ ಅನ್ನಬಹುದು. ಶಾಸ್ತ್ರ ಎಂಬುದು ಸತ್ಯಕ್ಕೆ ಮತ್ತೊಂದುಹೆಸರೆಂದು, ಅಶಾಸ್ತ್ರ ಎಂದರೆ ಅಸತ್ಯವೆಂದು ತಿಳಿದುಹೋಗುತ್ತಿದೆ. ಒಂದು ಸತ್ಯವನ್ನು ಇತರರ ಮೂಲಕ ತಿಳಿದುಕೊಂಡರೂ ಅಥವಾ ಪ್ರತ್ಯಕ್ಷವಾಗಿ ಅನುಭವಿಸಿದರೂ ಅದನ್ನು ಅಸತ್ಯವೆನ್ನುವುದಕ್ಕೆ ಸಾಧ್ಯವಿಲ್ಲ. ಒಂದು ಸತ್ಯವನ್ನು ಅನುಭವಿಸಿಯಾದರೂ ತಿಳಿದುಕೊಳ್ಳಬಹುದು, ಅಥವಾ ಕೇಳಿಯಾದರೂ ತಿಳಿದುಕೊಳ್ಳಬಹುದು. ಇತರರು ಅನುಭವಿಸಿದ ಅನುಭವವನ್ನು ತಿಳಿದುಕೊಂಡರೂ, ಅಥವಾ ತಾನು ಸ್ವತಃವಾಗಿ ಅನುಭವದ ಮೂಲಕ

ತಿಳಿದುಕೊಂಡರೂ ಎರಡೂ ಸತ್ಯವೇ, ಎರಡೂ ಶಾಸ್ತ್ರಸಮ್ಮತವೇ ಆಗುತ್ತದೆ. ಅದರಲ್ಲಿ ತಿಳಿದುಕೊಂಡಿರುವುದು ಶಾಸ್ತ್ರವಾದರೆ, ಅನುಭವದಿಂದ ತಿಳಿದು ಕೊಂಡಿರುವುದು ಶಾಸ್ತ್ರೀಯತೆ ಅನ್ನುತ್ತೇವೆ. ಶಾಸ್ತ್ರ ಎಂದರೂ ಶಾಸ್ತ್ರೀಯತೆ ಎಂದರೂ ಎರಡೂ ಸತ್ಯವೇ ಆಗುತ್ತದೆ. ಅವು ಎರಡೂ ಸತ್ಯಕ್ಕೆ ಮತ್ತೊಂದು ಹೆಸರಿನಂತವು.

ಈಗ ಒಂದು ವಿಷಯವನ್ನು ತೆಗೆದುಕೊಂಡು ಅದರಲ್ಲಿನ ಶಾಸ್ತ್ರವೇನೊ ಶಾಸ್ತ್ರೀಯತೆ ಏನೊ ಪರಿಶೀಲಿಸೋಣ. ರಾಮಯ್ಯ ಎಂಬುವವನು ತೋಟಯ್ಯ ಅನ್ನುವವನೊಂದಿಗೆ "ನನಗೆ ಚೇಳು ಕಚ್ಚಿದೆ, ಚೇಳಿನ ವಿಷ ಬಹಳ ಬಾಧೆಯಿಂದ ಇರುತ್ತದೆಂದು ನನಗೆ ಚೆನ್ನಾಗಿ ಅರ್ಥವಾಗಿದೆ. ದುಃಖವನ್ನು ಇಪ್ಪತ್ತು ನಿಮಿಷಗಳು ಅನುಭವಿಸಿದ ನಂತರ ಚೇಳಿನ ವಿಷಕ್ಕೆ ಔಷಧಿ ಬಳಸಿದರೆ ಆಗ ಬಾಧೆ ಕಡಿಮೆಯಾಗಿದೆ. ಹಾಗೆ ನಡೆದ ಸರಿಯಾಗಿ ತಿಂಗಳ ನಂತರ ಮತ್ತೊಂದುಬಾರಿ ಚೇಳು ಕಚ್ಚುವುದು ನಡೆದಿದೆ. ಆಗಲೂ ಕೂಡಾ ಚೇಳು ವಿಷದಿಂದ ಬಹಳ ಬಾಧೆಪಟ್ಟಿದ್ದೇನೆ. ಆ ಸಮಯದಲ್ಲಿ ಚೇಳಿನ ವಿಷಕ್ಕೆ ಔಷಧಿ ಎಲ್ಲಿಯೂ ಲಭಿಸಲಿಲ್ಲ. ಕೊನೆಗೆ ಅರ್ಧಗಂಟೆ ನಂತರ ಔಷಧಿವೈದ್ಯನಲ್ಲದೆ ಮಂತ್ರವೈದ್ಯನು ದೊರೆತನು, ಆದರೆ ನಾನು ಮಂತ್ರವನ್ನು ನಂಬುವವನಲ್ಲ, ಆದರೂ ಬಾಧೆಯನ್ನು ಸಹಿಸಲಾರದೆ ಆತನೊಂದಿಗೆ ವೈದ್ಯ ಮಾಡಿಸಿಕೊಳ್ಳುವುದಕ್ಕೆ ಆತನತ್ತಿರಕ್ಕೆ ಹೋಗಿದ್ದೇನೆ. ಆಗ ಆತನು ಯಾವುದೊ ಚಿಕ್ಕ ಮಂತ್ರವನ್ನು ಹತ್ತು ಅಥವಾ ಹನ್ನೊಂದುಬಾರಿ ಉಚ್ಛರಿಸಿ ನಂತರ ಗಾಳಿಯನ್ನು ನೀರಿನೊಳಗೆ ಊದಿ, ಗ್ಲಾಸ್‌ನಲ್ಲಿನ ನೀರನ್ನು ಕುಡಿಯೆಂದಿದ್ದಾನೆ. ಆಗ ನಾನು ಆ ಗ್ಲಾಸ್‌ನಲ್ಲಿನ ನೀರನ್ನು ಕುಡಿದ ತಕ್ಷಣ, ಅರ್ಧ ನಿಮಿಷದೊಳಗೆ ಅಲ್ಲಿಯವರೆಗೂ ಬಾಧಿಸುತ್ತಿರುವ ವಿಷ ಕೆಲಸ ಮಾಡದಂತೆ ಹೋಗಿ ಬಾಧೆ ಪೂರ್ತಿಯಾಗಿ ಕಡಿಮೆಯಾಗಿದೆ. ಅಲ್ಲಿಯವರೆಗು ಮಂತ್ರಗಳನ್ನು ನಂಬದ ನಾನು ಪ್ರತ್ಯಕ್ಷ ಅನುಭವದಿಂದ ಮಂತ್ರಗಳಿವೆಯೆಂದು ನಂಬುತ್ತಿದ್ದೇನೆ. ಅಷ್ಟೇಯಲ್ಲದೆ. ಚೇಳಿನ ವಿಷದ ಬಗ್ಗೆ ಅದರ ಬಾಧೆಯನ್ನು ಕುರಿತು ಇತರರು ಹೇಳುತ್ತಿದ್ದರೆ ಅದನ್ನು ಕೂಡಾ ಪೂರ್ತಿ ನಂಬುವವನಲ್ಲ. ಈಗ ನಾನು ಸ್ವತಃ ಅನುಭವಿಸಿದ ನಂತರ ವಿಷದ ಬಾಧೆ ತಿಳಿದುಹೋಗಿದೆ,

ಹಾಗೆಯೆ ಮಂತ್ರವೊಂದರ ಕೆಲಸವೂ ತಿಳಿದುಹೋಗಿದೆ. ಈಗ ನನಗೆ ಅರ್ಥವಾಗಿರುವುದೇನೆಂದರೆ, ನಾನು ನಂಬದಷ್ಟುಮಾತ್ರಕ್ಕೆ ಸತ್ಯ ಅಸತ್ಯ ಆಗುವುದಿಲ್ಲವೆಂದು, ಯಾರೂ ನಂಬಿದರೂ, ನಂಬದೆಹೋದರೂ ಸತ್ಯ ಎಂದಿಗೂ ಸತ್ಯವೇಯೆಂದು ತಿಳಿದುಹೋಗಿದೆ" ಅಂದಿದ್ದಾನೆ. ಇದು ಒಬ್ಬರ ಬಗ್ಗೆ ಯಥಾರ್ಥವಾಗಿ ನಡೆದ ಸಂಘಟನೆ ಆಗಿರುವುದರಿಂದ ಇದನ್ನು ಎಲ್ಲರೂ ಒಪ್ಪಿಕೊಳ್ಳಬೇಕಾಗಿದ್ದೆ.

ಆದರೆ ಈ ವಿಷಯ ಸತ್ಯವೆಂದು ಯಾರು ಎಷ್ಟು ಅರಚಿ ಮೊರೆಹಿಟ್ಟುಕೊಂಡರೂ ಅದನ್ನು ನಾವು ನಂಬುವುದಿಲ್ಲ ಎಂದರೆ ನಂಬುವುದಿಲ್ಲ ಎಂಬುವವರೂ ಕೂಡಾ ಎಷ್ಟೋಜನ ಇದ್ದಾರೆ. ಅಂಥವರಲ್ಲಿ ನಮಗೆ ತಿಳಿದಿರುವ ಜನ ವಿಜ್ಞಾನ ವೇದಿಕೆಯವರು ಮುಖ್ಯವಾದವರು. ಅವರು ಚೇಳನ್ನು ನಂಬಿದರೂ, ಚೇಳಿನ ವಿಷಬಾಧೆಯನ್ನು ನಂಬಿದರೂ, ಆ ಬಾಧೆ ಮಂತ್ರದಿಂದ ಹೋಗಿದೆಂಬ ಮಾತನ್ನು ಮಾತ್ರ ನಂಬುವುದಿಲ್ಲ. ಅವರು ನಂಬದಷ್ಟು ಮಾತ್ರಕ್ಕೆ ಅದು ಅಸತ್ಯವಾ ಎಂದರೆ ಹಾಗೂಸಹ ಅಲ್ಲ. ಚೇಳಿನ ವಿಷಬಾಧೆ ಮಂತ್ರದಿಂದ ನಿವಾರಿಸಲ್ಪಟ್ಟಿ ದೆಯೆನ್ನುವುದು ಮಾತು ಪೂರ್ತಿ ಸತ್ಯ, ಯಥಾರ್ಥವಾಗಿ ನಡೆದ ಪ್ರತ್ಯಕ್ಷ ವಿಷಯ. ನಡೆದ ಪ್ರತ್ಯಕ್ಷ ಸತ್ಯವನ್ನು ಶಾಸ್ತ್ರೀಯತೆ ಎನ್ನುತ್ತೇವೆ. ಆ ವಿಷಯವೊಂದರ ವಿವರ ತಿಳಿಯುವುದನ್ನು ಶಾಸ್ತ್ರ ಎನ್ನುತ್ತೇವೆ. ಅನುಭವವನ್ನು ಶಾಸ್ತ್ರೀಯತೆ ಅನ್ನುತ್ತಿದ್ದೇವೆಂದು ಮೊದಲೇ ಹೇಳಿಕೊಂಡಿದ್ದೇವೆ. ಈಗ ಚೇಳಿನ ವಿಷಬಾಧೆ ಮಂತ್ರದಿಂದ ಕಡಿಮೆಯಾಗುತ್ತದೆಂದು ಅನುಭವದ ಮೂಲಕ ತಿಳಿದವನಿಗೆ ಶಾಸ್ತ್ರೀಯತೆಯೆಂದು, ಅವನು ಹೇಳಿರುವುದು ಶಾಸ್ತ್ರವೆಂದು ಹೇಳದೆ ತಪ್ಪುವುದಿಲ್ಲ. ಆದರೆ ನಮಗೆ ಸೈನ್ಸು ಗೊತ್ತು ನಾವು ದೇಶ ವಿಜ್ಞಾನಿಗಳು, ಪ್ರಪಂಚ ವಿಜ್ಞಾನಿಗಳೆಂದು ಹೇಳಿಕೊಳ್ಳುವವರಿಗೆ ಪೂರ್ತಿ ಸೈನ್ಸು ತಿಳಿಯದು. ಸ್ವಲ್ಪ ಸೈನ್ಸೇ ತಿಳಿಯುತ್ತದೆ. ಆದಕಾರಣ ಕೆಲವು ಶಾಸ್ತ್ರಗಳು ಮಾತ್ರವೇ ಅವರಿಗೆ ತಿಳಿದಿರುತ್ತವೆ. ಕೆಲವು ಶಾಸ್ತ್ರಗಳು ಅವರಿಗೆ ತಿಳಿದಿಲ್ಲವೆಂದು ಹೇಳಬಹುದು. ಪ್ರಪಂಚದಲ್ಲಿ ಇರುವವೆಲ್ಲಾ ಆರು ಶಾಸ್ತ್ರಗಳಾಗಿದ್ದರೇ, ಬಹಳಜನ ವಿಜ್ಞಾನಿಗಳಿಗೆ ನಾಲ್ಕು

ಶಾಸ್ತ್ರಗಳೆ ತಿಳಿದಿವೆ, ಉಳಿದ ಎರಡು ಶಾಸ್ತ್ರಗಳು ತಿಳಿಯದು. ನಾಲ್ಕು ಶಾಸ್ತ್ರಗಳೇ ಸರ್ವಸ್ವವೆಂದುಕೊಂಡವರಿಗೆ ಪ್ರಪಂಚದಲ್ಲಿ ನಡೆಯುವ ಪ್ರತ್ಯಕ್ಷ ವಿಷಯಗಳಿಗೆ ಉತ್ತರವಾಗಲಿ, ವಿವರವಾಗಲಿ ತಿಳಿಯದು. ತಮಗೆ ತಿಳಿಯದ ಎಷ್ಟೊ ಸತ್ಯಗಳನ್ನು ಅವರು ಅಸತ್ಯಗಳೆಂದು, ಕಲ್ಪಿತಗಳೆಂದು, ನಾಟಕಗಳೆಂದು, ಬೂಟಕಗಳೆಂದು, ರೋಗಗಳೆಂದು ಹೆಸರಿಟ್ಟು ದಾಟಿಹೋಗುತ್ತಿದ್ದಾರೆ. ಮುಮ್ಮಡಿವರದಲ್ಲಿ ಬಾಲಯೋಗಿ ಕದಲದೆ ಮೆದಲದೆ ಕೆಲವು ವರ್ಷಗಳಿಂದ ಕುಳಿತುಕೊಂಡರೂ ಅದಕ್ಕೆ ವಿವರ ತಿಳಿಯದವರೂ ತಾವು ವಿಜ್ಞಾನಿಗಳೆಂದು ಹೇಳಿಕೊಳ್ಳುತ್ತಾ ಬಾಲಯೋಗಿ ಆಗಿರುವುದಕ್ಕೆ ಕಾರಣ ಅದು ಒಂದು ರೋಗಲಕ್ಷಣವೆಂದು ಹೇಳುತ್ತಿದ್ದಾರೆ. ಗುಜರಾತ್‌ನಲ್ಲಿ 75 ವರ್ಷಗಳಿಂದ ಆಹಾರವಾಗಲಿ, ನೀರಾಗಲಿ ತೆಗೆದುಕೊಳ್ಳದೆ ಆರೋಗ್ಯವಾಗಿರುವ ಪ್ರಹ್ಲಾದ್ ಜಾನಿಯನ್ನು ಬೂಟಕ, ನಾಟಕವೆಂದು ಹೇಳುತ್ತಿದ್ದಾರೆ. ಯಾರಿಗೂ ತಿಳಿಯದಂತೆ ಏನೊ ಒಂದು ತಿನ್ನುತ್ತಿರುತ್ತಾನೆಂದು ಹೇಳುತ್ತಿದ್ದಾರೆ.

ನೀರಿಲ್ಲದೆ ಕೆಲವು ಗಂಟೆಗಳು, ಆಹಾರವಿಲ್ಲದೆ ಕೆಲವು ದಿನಗಳು ಮಾತ್ರ ಮನುಷ್ಯ ಬದುಕಬಲ್ಲನು. ಆಹಾರ ನೀರು ಇಲ್ಲದಂತೆ 75 ವರ್ಷಗಳಿಂದ ಇದ್ದಾನೆಂಬುದು ಅಸತ್ಯವೆನ್ನುತ್ತಿದ್ದಾರೆ. ಭೌತಿಕಶಾಸ್ತ್ರದ ಪ್ರಕಾರ ಹಾಗೆ ಇರುವುದಕ್ಕೆ ಸಾಧ್ಯವಿಲ್ಲ ಅನ್ನುತ್ತಿದ್ದಾರೆ. ಆ ಮಾತುಸ್ವಲ್ಪ ಭೌತಿಕಶಾಸ್ತ್ರದ ಪ್ರಕಾರ ನೀರು ಆಹಾರ ಇಲ್ಲದೆ ಇರುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ನಮಗೂ ಸಹಾ ಗೊತ್ತು. ಆದರೆ ಮತ್ತೊಂದು ಶಾಸ್ತ್ರದ ಪ್ರಕಾರ, ಮತ್ತೊಂದು ಸೈನ್ಸು ಪ್ರಕಾರ ಹಾಗೆ ಬದುಕುವುದಕ್ಕೆ ಸಾಧ್ಯವೆಂದು ನಮಗೆ ತಿಳಿದಿದೆ. ತಮಗೆ ತಿಳಿಯದ ಶಾಸ್ತ್ರಗಳು ಮತ್ತೆಕೆಲವು ಇವೆಯೆಂದು, ತಮಗೆ ಎಲ್ಲಾ ಶಾಸ್ತ್ರಗಳು ತಿಳಿದಿಲ್ಲವೆಂದು, ಆದಕಾರಣ ಕೆಲವು ಸತ್ಯಗಳಿಗೆ ವಿವರ ತಿಳಿಯದೆಂದು ಜನ ವಿಜ್ಞಾನಿಗಳಾಗಲಿ, ದೇಶ ವಿಜ್ಞಾನಿಗಳಾಗಲಿ ಅಂದುಕೊಳ್ಳುತ್ತಿಲ್ಲ. ಕಣ್ಣೆದುರುಗಡೆ ನಡೆಯುತ್ತಿರುವ ಸತ್ಯಗಳಿಗೆ ಏಕೆ ವಿವರ ತಿಳಿಯದೆಂದು ಅವರು ಆಲೋಚಿಸುತ್ತಿಲ್ಲ. ಗರ್ಭದಲ್ಲಿ ಮರಣಿಸಿದ್ದಾನೆಂದು ಡಾಕ್ಟರ್ಸ್ ಹೇಳಿದ ಶಿಶುವು ಎರಡು ಮೂರು ಗಂಟೆಗಳ

ನಂತರ ಊಸಿರುತೆಗೆದುಕೊಂಡು ಬದುಕಿದರೆ! ಏಕೆ ಹಾಗೆ ನಡೆದಿದೆಯೆಂದು ಅಂದುಕೊಳ್ಳದೆ ಡಾಕ್ಟರ್ಸ್ ತಪ್ಪಾಗಿ ತಿಳಿದುಕೊಂಡಿದ್ದಾರೆಂದು ಹೇಳುತ್ತಿದ್ದಾರೆ. ಅಲ್ಲಿ ನಡೆದ ಸತ್ಯವನ್ನು ಗಾಳಿಗೆ ಬಿಡುತ್ತಿದ್ದಾರೆ. ಹಾಗೆಯೇ ಮರಣಿಸಿದ್ದಾನೆಂದು ಡಾಕ್ಟರ್ಸ್ ಹೇಳಿದ ನಂತರ ಮರಣಿಸಿದ ಶವ ಕೆಲವು ಗಂಟೆಗಳಿಗೆ, ಕೆಲವು ದಿನಗಳಿಗೆ ಬದುಕಿ ಮಾತನಾಡಿ, ಎದ್ದು ನಡೆದರೂ, ನಡೆದ ಸತ್ಯಕ್ಕೆ ವಿವರವನ್ನು ಹುಡುಕದಂತೆ, ಆತನು ಮರಣಿಸಿರುವುದಿಲ್ಲ. ಮೂರ್ಚೆಹೋಗಿದ್ದರೆ ತಪ್ಪಾಗಿ ಮರಣಿಸಿದ್ದಾನೆಂದು ಅಂದುಕೊಂಡಿದ್ದಾರೆಂದು ಹೇಳಿ, ನಡೆದ ಯದಾರ್ಥಕ್ಕೆ ವಿವರ ತಿಳಿಯದೆ ಪುನಃ ಬದುಕಿದ ಸತ್ಯವನ್ನು ಸಮಾಧಿ ಮಾಡುತ್ತಿದ್ದಾರೆ. ಪ್ರಸವಿಸಲ್ಪಟ್ಟ ಶಿಶುವು ಕೆಲವು ಗಂಟೆಗಳ ನಂತರ ಪ್ರಾಣ ತೆಗೆದುಕೊಂಡರೆ ಅದು ಭೌತಿಕಶಾಸ್ತ್ರ ಅಲ್ಲವೆನ್ನುವವರು, ಹಾಗೆಯೇ ಸತ್ತುಹೋಗಿ ಕೆಲವು ಗಂಟೆಗಳಾದ ನಂತರ ಬದುಕಿದ ವಿಧಾನವನ್ನು ಭೌತಿಕಶಾಸ್ತ್ರ ಅಲ್ಲವೆನ್ನುವವರು, ಇವುಗಳಿಗೆ ವಿವರ ಇನ್ನೊಂದು ಶಾಸ್ತ್ರದಲ್ಲಿ ಏನಾದರೂ ಇದೆಯೇನೊ ಎಂದು ಏಕೆ ಆಲೋಚಿಸಲಿಲ್ಲ? ಒಂದುವೇಳೆ ತಮಗೆ ತಿಳಿದಿದೆಯೆಂದುಕೊಂಡ ಭೌತಿಕಶಾಸ್ತ್ರದಲ್ಲಿಯೇ ತಮಗೆ ತಿಳಿಯದ ವಿಧಾನ ಇನ್ನೂ ಉಳಿದಿದೆಯೇನೊ ಎಂದು ಏಕೆ ಅಂದುಕೊಳ್ಳಬಾರದು? ಒಂದು ಅಣುವಿನಲ್ಲಿನ ಪ್ರೋಟಾನ್‌ಗಳು, ನ್ಯೂಟ್ರಾನ್‌ಗಳು, ಎಲಕ್ಟ್ರಾನ್‌ಗಳನ್ನು ಅವುಗಳ ರಸಾಯನಕ್ರಿಯೆಯನ್ನು ತಿಳಿದಷ್ಟುಮಾತ್ರಕ್ಕೆ ಎಲ್ಲಾ ಶಾಸ್ತ್ರಗಳನ್ನು ತಿಳಿದವರಾಗಿ ಏಕೆ ಭಾವಿಸಿಕೊಳ್ಳಬೇಕೆಂದು ನಾವು ಪ್ರಶ್ನಿಸುತ್ತಿದ್ದೇವೆ.

ಭೂಮಿಮೇಲೆ ಮೇಧಾವಿಗಳಾದ ವಿಜ್ಞಾನಿಗಳು ಕೆಲವರು ತಮಗೆ ತಿಳಿಯದ ಸೈನ್ಸು ಇನ್ನೂ ಎಷ್ಟೋ ಇದೆಯೆಂದು ಹೇಳುತ್ತಿರುವಾಗ, ಅರ್ಧಬರ್ಧ ಸೈನ್ಸನ್ನು ತಿಳಿದವರು, ನಾವು ವಿಜ್ಞಾನಿಗಳೆಂದುಕೊಳ್ಳುತ್ತಿದ್ದಾರೆ. ಶಾಸ್ತ್ರಕ್ಕೆ ಅರ್ಥ ತಿಳಿಯದವರು, ಶಾಸ್ತ್ರಗಳು ಎಷ್ಟೋ ತಿಳಿಯದವರೂ ನಾವು ಶಾಸ್ತ್ರಜ್ಞರೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಅಂಥವರು ಜನ ವಿಜ್ಞಾನವೇದಿಕೆಯಲ್ಲಿ ಹೆಚ್ಚುಜನರು ಇರುವುದರಿಂದ ಈದಿನ ಮೀನಿನ ಔಷಧಿಯನ್ನು ಔಷಧಿಯಲ್ಲ ಎನ್ನುತ್ತಿದ್ದಾರೆ. ಮೀನಿನಔಷಧಿಯಲ್ಲಿ ಯಾವ ಔಷಧಿ ಇದ್ದಂತೆ ಶಾಸ್ತ್ರೀಯವಾದ

ಆಧಾರ ಇಲ್ಲವೆನ್ನುತ್ತಿದ್ದಾರೆ. ಅವರಿಗೆ ತಿಳಿದಿರುವುದೆ ಶಾಸ್ತ್ರ, ಅವರಿಗೆ ದೊರೆತಿರುವುದೆ ಆಧಾರ ಎಂದರೆ, ನಿಮಗೆ ತಿಳಿದ ಶಾಸ್ತ್ರಗಳು ಹೊರತು ಬೇರೆ ಶಾಸ್ತ್ರಗಳೆ ಇಲ್ಲವಾ ಎಂದು ನಾವು ಕೇಳುತ್ತಿದ್ದೇವೆ. ಹಾಗೆಯೇ ನಿಮಗೆ ದೊರೆತ ಆಧಾರಗಳು ಹೊರೆತು ಕಣ್ಣಿಗೆ ಕಾಣಿಸುವ ಸತ್ಯಗಳು ನಿಮಗೆ ಆಧಾರ ಅಲ್ಲವಾ ಎಂದು ನಾವು ಕೇಳುತ್ತಿದ್ದೇವೆ. ಔಷಧಿಯೇ ಇಲ್ಲದ ಎಯಿಡ್ಸ್ ರೋಗ, ಸರಿಯಾದ ಚಿಕಿತ್ಸೆಯಿಲ್ಲದ ಕ್ಯಾನ್ಸರ್ ರೋಗ, ಔಷಧಿಗಳಿಗೂ ಕೂಡಾ ಅಭ್ಯಾಸವಾಗಿ ಔಷಧಿಗೂ ಸೆರೆಯಾಗದೆ ಮನುಷ್ಯನನ್ನೆ ಸಾಯಿಸುವ ಟಿ.ಬಿ.ರೋಗ ಭೌತಿಕಶಾಸ್ತ್ರದ ಪ್ರಕಾರ ಔಷಧಿಗಳಿಂದಲ್ಲದೆ, ಭೌತಿಕ ವಿಧಾನದ ಪ್ರಕಾರ ಯಾವ ಚಿಕಿತ್ಸೆ ಮಾಡದಂತೆ ದೈವಜ್ಞಾನಶಕ್ತಿಯಿಂದ ತೊಲಗಿಸಿಕೊಳ್ಳುವ ವಿಧಾನವೂ ಸಹಾ ಭೂಮಿಮೇಲೆ ಇದೆ. ರೋಗಗಳು ಕೂಡಾ ಕೆಲವು ಭೂತಗಳೆಯೆಂದು, ಆ ಭೂತಗಳು ದೇವರ ಮೇಲೆ ಎಷ್ಟೋ ಶ್ರದ್ಧೆಭಕ್ತಿ ಹೊಂದಿದ್ದಾರೆಂದು, ಯಾವ ಮನುಷ್ಯನಾದರೆ ದೇವರ ಮೇಲೆ ಬಹಳ ಭಕ್ತಿಶ್ರದ್ಧೆಗಳನ್ನು ಬೆಳೆಸಿಕೊಳ್ಳುತ್ತಾನೊ ಆತನನ್ನು ದೊಡ್ಡ ರೋಗಗಳಾಗಿ ಹೆಸರುವಾಸಿಯಾದ ಎಯಿಡ್ಸ್, ಕ್ಯಾನ್ಸರ್, ಟಿ.ಬಿ. ಮೊದಲಾದ ರೋಗಗಳು (ಭೂತಗಳು) ಗೌರವಿಸಿ, ಅವನನ್ನು ಏನು ಮಾಡದೆ ಬಿಟ್ಟುಹೋ ಗುತ್ತದೆಂಬ ಒಂದು ವಿಧಾನವಿದೆ. ದೈವಜ್ಞಾನವನ್ನು ಗೌರವಿಸುವ ರೋಗ ಭೂತಗಳು ಅವರಿಂದ ದೂರ ಹೋಗುತ್ತದೆನ್ನುವುದು ಕುರುಡರಂತೆ ಹೇಳುವುದು ಅಲ್ಲ. ಹಾಗೆಯೇ ಅಶಾಸ್ತ್ರೀಯವಾಗಿ ಹೇಳುವುದು ಅಲ್ಲ. ಪ್ರಪಂಚದಲ್ಲಿಯೇ ಎಲ್ಲಾ ಶಾಸ್ತ್ರಗಳಿಗಿಂತ ದೊಡ್ಡಶಾಸ್ತ್ರವೊಂದರ ಆಧಾರದಿಂದ ಹೇಳಿದ ಮಾತಾಗಿ ತಿಳಿಯಬೇಕು. ದೊಡ್ಡ ಶಾಸ್ತ್ರದಿಂದ ದೊಡ್ಡ ಕೆಲಸಗಳನ್ನು ಸಾಧಿಸಬಹುದು. ಅಂತಹ ಶಾಸ್ತ್ರ ಯಾವುದೊ, ಹೇಗಿರುತ್ತದೊ ತಿಳಿಯದವರು ಶಾಸ್ತ್ರಜ್ಞರು ಹೇಗಾಗುತ್ತಾರೆ. ಮೊದಲನೆಯದು ದೊಡ್ಡದಾದ ಬ್ರಹ್ಮವಿದ್ಯಾಶಾಸ್ತ್ರದಲ್ಲಿನ ವಿಜ್ಞಾನವನ್ನು ಏನೊ ತಿಳಿಯದೆಯೇ, ಯಾರೂ ವಿಜ್ಞಾನಿ ಆಗಲಾರನು. ಆದ್ದರಿಂದ ಎಲ್ಲಾ ಪ್ರಶ್ನೆಗಳಿಗು ಉತ್ತರಗಳನ್ನು ಹೇಳಲಾರರು.

ಪ್ರಪಂಚದಲ್ಲಿನ ಯಾವ ಪದಾರ್ಥವಾದರೂ ಎರಡು ವಿಧಗಳಾಗಿ ವಿಭಜಿಸಲ್ಪಟ್ಟಿದೆಯೆಂಬ ಮಾತು ಪ್ರಾಥಮಿಕವಾಗಿ ಎಲ್ಲರೂ ತಿಳಿಯಬೇಕಾಗಿದೆ.

ವಿಜ್ಞಾನದ ಪ್ರಕಾರ ಯಾವ ಪದಾರ್ಥವಾಗಲಿ, ಸ್ಥೂಲ, ಸೂಕ್ಷ್ಮ ಎಂಬ ಎರಡು ಭಾಗಗಗಳಿಂದ ನಿರ್ಮಿಸಲ್ಪಟ್ಟಿದೆ. ಜೀವವಿರುವುದಾಗಲಿ, ಜೀವ ಇಲ್ಲದಿರುವು ದಾಗಲಿ ಏನಾದರೂ ಎರಡು ಭಾಗಗಳಾಗಿ ವಿಭಜಿಸಬಹುದೆಂಬ ಮಾತು ಶಾಸ್ತ್ರಬದ್ಧವಾದುದು. ಪ್ರಾಣವಿಲ್ಲದ ಚಿಕ್ಕ ಕಲ್ಲನ್ನು ತೆಗೆದುಕೊಂಡು ನೋಡಿದರೂ, ಅದರಲ್ಲಿ ಸ್ಥೂಲ ಸೂಕ್ಷ್ಮ ಒಳಗೊಂಡಿದೆ. ಹಾಗೆಯೇ ಪ್ರಾಣವಿರುವ ಮನುಷ್ಯನನ್ನು ನೋಡಿದರೂ ಶಾಸ್ತ್ರಪದ್ಧತಿ ಪ್ರಕಾರ ಸ್ಥೂಲ ಸೂಕ್ಷ್ಮ ಎಂಬ ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿವೆ. ಈ ವಿಷಯ ಮೊದಲ ಶಾಸ್ತ್ರ ತಿಳಿಯದವರಿಗೆ ತಿಳಿಯದು. ಆದ್ದರಿಂದ ಪ್ರಪಂಚ ಸಂಬಂಧವಾದ ಗಣಿತ, ಖಗೋಳ, ರಸಾಯನ, ಭೌತಿಕವೆಂಬ ನಾಲ್ಕು ಶಾಸ್ತ್ರಗಳನ್ನು ತಿಳಿದವರಿಗೆ ಸ್ಥೂಲವೊಂದರ ವಿಷಯ ತಿಳಿದಿರಬಹುದಾಗಲಿ, ಸೂಕ್ಷ್ಮದ ವಿಷಯ ಯಾವುದು ತಿಳಿಯದು. ಯಾವ ಮನುಷ್ಯನಿಗಾದರೂ ಸ್ಥೂಲ ತಿಳಿದು ಸೂಕ್ಷ್ಮ ತಿಳಿಯದಿರುವುದರಿಂದ, ಒಂದು ಪದಾರ್ಥವೊಂದರ ಒಟ್ಟು ಸಮಾಚಾರದಲ್ಲಿ ಅರ್ಧ ತಿಳಿದು, ಉಳಿದ ಅರ್ಧ ತಿಳಿಯದೆಂದು ಹೇಳಬಹುದು. ಅಂಥವನಿಗೆ ಒಂದು ಪದಾರ್ಥದಲ್ಲಿನ ಸ್ಥೂಲ ಭಾಗವೊಂದರ ವಿಷಯ ಮಾತ್ರ ತಿಳಿದಿರುತ್ತದಾಗಲಿ, ಸೂಕ್ಷ್ಮ ಭಾಗವೊಂದರ ವಿಷಯ ಸ್ವಲ್ಪವೂ ತಿಳಿಯದು. ಯಾವ ಪದಾರ್ಥದಲ್ಲಾದರೂ ಸ್ಥೂಲ ಕಾಣಿಸುವ ಕರೆಂಟು ವಯರ್‌ನಂಥದ್ದು. ಹಾಗೆಯೇ ಸೂಕ್ಷ್ಮವು ಕಾಣಿಸುವ ವಯರ್‌ನಲ್ಲಿ ಕಾಣಿಸದಂತಿರುವ ಕರೆಂಟಿ ನಂಥದ್ದು. ವಯರ್‌ನಲ್ಲಿನ ಕರೆಂಟಿನಂತೆ ಸೂಕ್ಷ್ಮವಿದೆಯೆಂದು ತಿಳಿಯದವರಿಗೆ, ಯಾವ ಪದಾರ್ಥದಲ್ಲಾದರೂ ಇರುವ ಸೂಕ್ಷ್ಮ ತಿಳಿಯದೆಂದೇ ಹೇಳಬಹುದು.

ಆಸ್ತಮಾ ವ್ಯಾಧಿಗೆ ನಿವಾರಣೆಯಾಗಿ ಕೊಡುವ ಮೀನಿನ ಔಷಧಿ ಸ್ಥೂಲವಾಗಿ ಕಾಣಿಸುತ್ತಿದ್ದರೂ. ಅದರಲ್ಲಿ ಯಾರಿಗೂ ತಿಳಿಯದ ಸೂಕ್ಷ್ಮ ಕೂಡಾ ಒಳಗೊಂಡಿದೆ. ಕರೆಂಟು ತಂತಿಯನ್ನು ಹಿಡಿದುಕೊಂಡವನು ಮರಣಿಸಿದ್ದಾನೆಂದರೆ ಅವನ ಸಾವಿಗೆ ಕಾಣಿಸುವ ತಂತಿ ಕಾರಣವಲ್ಲ. ತಂತಿಯಲ್ಲಿ ಸೂಕ್ಷ್ಮವಾಗಿ ಕಾಣಿಸದಿರುವ ಕರೆಂಟೆಂದು ಹೇಳಬಹುದು. ಹಾಗೆಯೇ ಮೀನಿನಔಷಧಿಯಿಂದ

ಆಸ್ತಮಾ ವ್ಯಾಧಿ ಗುಣವಾಗುತ್ತದೆಂದು ಅಂದರೆ, ಸ್ಥೂಲವಾಗಿ ಕಾಣಿಸುವ ಮೀನಿನಔಷಧಿಯಿಂದ ಅಲ್ಲ. ಆ ಮೀನಿನಔಷಧಿಯಲ್ಲಿನ ಕಾಣಿಸದೆ ಸೂಕ್ಷ್ಮವಾಗಿ ಅಡಕವಾಗಿರುವ ಶಕ್ತಿಯಿಂದ ಎಂದು ತಿಳಿಯಬೇಕು. ಮೀನಿನ ಔಷಧಿಯಲ್ಲಿ ಭೌತಿಕಶಾಸ್ತ್ರದ ಪ್ರಕಾರ ಔಷಧಿ ಇಲ್ಲದಿರಬಹುದು. ಆದರೆ ಅಭೌತಿಕ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಅದರಲ್ಲಿ ಸೂಕ್ಷ್ಮವಾದ ಔಷಧಿಯಿದೆ. ಈಗ ಸೂಕ್ಷ್ಮವಾದ ಔಷಧಿ ಇದೆಯೆಂದು ಹೇಗೆ ಹೇಳುತ್ತಿದ್ದೀರೆಂದು ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ಅಷ್ಟೇಯಲ್ಲದೆ ನೀವು ಔಷಧಿಯಿದ್ದಂತೆ ಆಧಾರವನ್ನು ತೋರಿಸುತ್ತೀರಾ ಎಂದು ಕೇಳಬಹುದು. ಆ ಮಾತಿಗೆ ನಮ್ಮ ಉತ್ತರ ಹೀಗೆ ಇದೆ. ಸೂಜಿಗಿರುವ ದಾರವನ್ನು ಅನುಸರಿಸಿ ದಾರವೊಂದರ ಕೊನೆಯ ತುದಿಯನ್ನು ಕಂಡುಕೊಳ್ಳಬಹುದು. ಇಲ್ಲದಿದ್ದರೆ ದಾರದಕೊನೆಯಿಂದ ದಾರವನ್ನು ಅನುಸರಿಸಿ ಬಂದು ಕೊನೆಗೆ ಸೂಜಿಯನ್ನಾದರೂ ಕಂಡುಕೊಳ್ಳಬಹುದು. ಶಾಸ್ತ್ರವೂ, ಶಾಸ್ತ್ರೀಯತೆ ಎರಡು ಸೂಜಿ ದಾರದಂತಿವೆ. ಸೂಜಿಯಿಂದ ದಾರದ ಕೊನೆಯನ್ನಾಗಲಿ, ದಾರದ ಕೊನೆಯಿಂದ ಸೂಜಿಯ ಮೊನೆಯನ್ನು ಕಂಡುಕೊಂಡಂತೆ, ಶಾಸ್ತ್ರವನ್ನು ಅನುಸರಿಸಿ ಅದರ ಫಲಿತವಾದ ಶಾಸ್ತ್ರೀಯತೆಯನ್ನು ಕಂಡುಕೊಳ್ಳಬಹುದು. ಇಲ್ಲದಿದ್ದರೆ ಪ್ರತ್ಯಕ್ಷ ಸಾಕ್ಷ್ಯವಾದ ಶಾಸ್ತ್ರೀಯತೆಯನ್ನು ಅನುಸರಿಸಿ ಶಾಸ್ತ್ರವನ್ನಾದರೂ ಕಂಡುಕೊಳ್ಳಬಹುದು. ಇಲ್ಲಿ ಅಸಲು ವಿಷಯಕ್ಕೆ ಬಂದರೆ ಮೀನಿನ ಔಷಧಿಯಿಂದ ಆಸ್ತಮಾ ರೋಗ ಗುಣವಾದಂತೆ ಆಧಾರಗಳಿವೆ. ಆಸ್ತಮಾ ರೋಗ ನಿವಾರಣೆ ಎಂಬುದು ಪ್ರತ್ಯಕ್ಷ ಸಾಕ್ಷಿಯಾದ ಶಾಸ್ತ್ರೀಯತೆ ಆಗಿರುವುದು ಕಾಣಿಸುವ ಶಾಸ್ತ್ರೀಯತೆಯನ್ನು ಅನುಸರಿಸಿ ಕೊನೆಗದು ಯಾವ ಶಾಸ್ತ್ರವೊ ತಿಳಿಯಬಹುದು. ನಡೆದ ಸತ್ಯ ಶಾಸ್ತ್ರಬದ್ಧವಾದಾಗ, ಆ ಸತ್ಯವನ್ನು ಅನುಸರಿಸಿ ಅದಕ್ಕೆ ಸಂಬಂಧಿಸಿದ ಶಾಸ್ತ್ರವನ್ನು ತಿಳಿಯಬಹುದೆನ್ನುದು ಸೂತ್ರವಾಗಿದ್ದು, ಆ ಸೂತ್ರದ ಪ್ರಕಾರ ಪರಿಶೀಲಿಸಿ ನೋಡಿದರೆ ಅಲ್ಲಿ ಭೌತಿಕಶಾಸ್ತ್ರ ಕಾಣಿಸುತ್ತಿಲ್ಲ. ಯಾವ ಔಷಧಿ ಗುಣವಿಲ್ಲದ ಔಷಧಿಮೂಲಕ ರೋಗ ನಿವಾರಣೆ ಆಗುವುದನ್ನು ನೋಡಿದರೆ ಅಲ್ಲಿ ಅಭೌತಿಕವಾದ ಬ್ರಹ್ಮವಿದ್ಯಾ ಶಾಸ್ತ್ರ ಕಾಣಿಸುತ್ತಿದೆ.

ಬ್ರಹ್ಮವಿದ್ಯಾಶಾಸ್ತ್ರವನ್ನು ಎಷ್ಟುಜನ ತಿಳಿದಿದ್ದಾರೆಂಬ ಪ್ರಶ್ನೆಗೆ ಕೆಲವು ಲಕ್ಷಗಳಜನರಲ್ಲಿ ಒಬ್ಬರು ತಿಳಿದಿದ್ದಾರೆಂಬುದು ಕೂಡಾ ಅಪರೂಪವಾಗಿದೆಯೆಂದು ಹೇಳಬಹುದು. ಕೆಲವು ಕೋಟಿಜನರಲ್ಲಿ ಒಬ್ಬರಿಬ್ಬರಿಗೆ ಅಪರೂಪವಾಗಿ ಈ ಶಾಸ್ತ್ರ ತಿಳಿದಿರಬಹುದು. ಹಾಗಿರುವಾಗ ದೈವಜ್ಞಾನವೆಂದರೆ ಅಲರ್ಜಿಯಾಗಿರುವ ಕೆಲವರಿಗಾಗಲಿ, ಅಸೂಯಯಿಂದಿರುವ ಮತ್ತೆಕೆಲವರಿಗಾಗಲಿ, ದೊಡ್ಡಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರ ಅರ್ಥವಾಗುವುದಿಲ್ಲ. ಆದ್ದರಿಂದ ಪ್ರಪಂಚದಲ್ಲಿ ಎಲ್ಲಾ ಶಾಸ್ತ್ರಗಳನ್ನು ಕಲಿತಂತೆ ಇದನ್ನು ಯಾರೂ ತಿಳಿಯಲಾರರು. ಬ್ರಹ್ಮವಿದ್ಯಾಶಾಸ್ತ್ರವನ್ನು ತಿಳಿಯುವುದಕ್ಕೆ ಭಕ್ತಿ ಶ್ರದ್ಧೆಗಳು ಪೂರ್ತಿ ಅಗತ್ಯ. ಪ್ರಪಂಚದ ಮೇಲೆಯೇ ಶ್ರದ್ಧೆ ಇರುವವರಿಗೆ ದೈವಜ್ಞಾನ ಲಭಿಸುವುದಿಲ್ಲ. ಈದಿನ ದೇವರ ಮೇಲೆ ವಿಶ್ವಾಸ ಇಲ್ಲದವರು ನಾವು ಎಷ್ಟು ವಿಜ್ಞಾನಿಗಳೆಂದು ಹೇಳಿಕೊಂಡರೂ, ಅವರಿಗೆ ಆದಿಶಾಸ್ತ್ರ ಅರ್ಥವಾಗುವುದಿಲ್ಲ. ಆದಿಯಲ್ಲಿ ಹುಟ್ಟಿದ ಶಾಸ್ತ್ರ ಅರ್ಥವಾಗದಿರುವುದು ಅದರಲ್ಲಿನ ಸೂಕ್ಷ್ಮಶಕ್ತಿ ಅರ್ಥವಾಗುದಿಲ್ಲ. ಸೂಕ್ಷ್ಮಶಕ್ತಿ ಒಂದರ ಫಲಿತ ಪ್ರತ್ಯಕ್ಷ ಪ್ರಮಾಣವಾಗಿ ಕಾಣಿಸುತ್ತಿದ್ದರೂ, ಅದನ್ನು ಅವರು ಅನುಸರಿಸದೆ ಕಾಣಿಸುವುದನ್ನು ಅಸತ್ಯವೆಂದು, ಬೂಟಕವೆಂದು ಅದೊಂದು ರೋಗದಂಥದೆಂದು ಅನೇಕವಾದ ಆರೋಪಣೆಗ ಳನ್ನು ತೋರಿಸುತ್ತಾ ಅದಕ್ಕೆ ದೂರವಾಗಿ ಹೋಗುತ್ತಾರಾಗಲಿ, ಅದನ್ನು ಅನುಸರಿಸಿ ಕೊನೆಗದು ಶಾಸ್ತ್ರವೆಂದು ತಿಳಿಯಲಾರರು. ಒಂದು ಸತ್ಯದಹಿಂದೆ ಒಂದು ಶಾಸ್ತ್ರವಿರುತ್ತದೆಂಬ ಸೂತ್ರವನ್ನಾಗಲಿ, ಹಾಗೆಯೇ ಒಂದು ಶಾಸ್ತ್ರದಹಿಂದೆ ಒಂದು ಸತ್ಯವಿರುತ್ತದೆಂದಾಗಲಿ ತಿಳಿಯದೆ ಮೂರ್ಖವಾಗಿ ಮೂಢನಂಬಿಕೆಯಿಂದ ಮಾತನಾಡುತ್ತಾರೆ. ಅವರು ದೇವರಾಗಲಿ, ದೈವಶಕ್ತಿಯಾಗಲಿ ಇಲ್ಲವೆಂದು ಮೂಢವಾಗಿ ವಾದಿಸುತ್ತಾ, ಅವರು ಮೂಢನಂಬಿಕೆ ಇರುವವರಾಗಿ, ಉಳಿದವರನ್ನು ಮೂಢನಂಬಿಕೆ ಇರುವವರೆನ್ನುತ್ತಿದ್ದಾರೆ. ಅಂತಹವರಿಗೆ ಶಾಸ್ತ್ರ ತಿಳಿಯದೆಂದು ಹೇಳಬಹುದು. ಎಲ್ಲಾ ಶಾಸ್ತ್ರಗಳಿಗು ಆದಿ ಶಾಸ್ತ್ರವಾಗಿದ್ದು, ಎಲ್ಲಾ ಶಾಸ್ತ್ರಗಳು ಹುಟ್ಟುವುದಕ್ಕು ಕಾರಣವಾದ ಬ್ರಹ್ಮವಿದ್ಯಾಶಾಸ್ತ್ರ ತಿಳಿಯದವರಿಗೆ ದೇವರಾಗಲಿ, ದೇವರಶಕ್ತಿಯಾಗಲಿ ಏನು ತಿಳಿಯದು. ಅಂತಹವರಿಗೆ ಸಾವುಹುಟ್ಟುಗಳ ವ್ಯತ್ಯಾಸ ತಿಳಿಯದು. ಅವನಿಗೆ ಶಾಸ್ತ್ರವಾಗಲಿ ಅದರ

ಆಚರಣೆಯಾದ ಶಾಸ್ತ್ರೀಯತೆಯಾಗಲಿ, ಸತ್ಯವಾಗಲಿ ತಿಳಿಯದು. ಅದನ್ನೆ ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 7,8 ಶ್ಲೋಕಗಳಲ್ಲಿ ಕೂಡಾ ಹೇಳಿದ್ದಾರೆ.

**ಶ್ಲೋ॥ 7.** **ಪ್ರವೃತ್ತಿಂಚ ನಿವೃತ್ತಿಂಚ ಜನಾ ನವಿದುರಾಸುರಾಃ।**
**ನ ಶೌಚಂ ನಾಪಿ ಚಾಚಾರೋ ನಸತ್ಯಂ ತೇಷು ವಿದ್ಯತೇ॥**

**ಶ್ಲೋ॥ 8.** **ಅಸತ್ಯ ಮಪ್ರತಿಷ್ಠಂತೇ ಜಗದಾಹು ರನೀಶ್ವರಮ್।**
**ಅಪರಸ್ಪರ ಸಂಭೂತಂ ಕಿಮನ್ಯ ತ್ಕಾ ಮಹೇತುಕಮ್॥**

**ಭಾವನೆ :–** "ಅಜ್ಞಾನಿಗಳಾದವರಿಗೆ ಸಾವು ಹುಟ್ಟುವಿಕೆಯೊಂದರ ವಿವರ ತಿಳಿಯದು. ಶಾಸ್ತ್ರವೇ ತಿಳಿಯದವರಿಗೆ ಅದರ ಆಚರಣೆಯಾಗಲಿ, ಅದರಲ್ಲಿನ ಸತ್ಯವಾಗಲಿ ಯಾವುದು ತಿಳಿಯದು. ಅಂತಹವರು ನಾವು ವಿಜ್ಞಾನಿಗಳೆಂದು, ಖಗೋಳ ಶಾಸ್ತ್ರದ ಪ್ರಕಾರ ಭೂಮಂಡಲ ಆಕಾಶದಲ್ಲಿ ಏರ್ಪಟ್ಟ ಪರಸ್ಪರ ರಸಾಯನಚರ್ಯಗಳಿಂದ ಹುಟ್ಟಿದೆಯೆಂದು, ಇದನ್ನು ಯಾವ ದೇವರೂ ಸೃಷ್ಟಿಸಲಿಲ್ಲವೆಂದು, ದೇವರು ಸೃಷ್ಟಿಸಿದ್ದಾನೆನ್ನುವುದು ಹೇತುಬದ್ಧವಲ್ಲವೆಂದು, ದೇವರೆನ್ನುವವನು ಇಲ್ಲವೇಯಿಲ್ಲವೆಂದು ಹೇಳುತ್ತಾರೆ." ಈ ವಿಧವಾಗಿ ಖಗೋಳ, ರಸಾಯನಿಕ ಶಾಸ್ತ್ರ ತಿಳಿದವರು ಆ ಶಾಸ್ತ್ರಗಳನ್ನು ಆಧಾರ ಮಾಡಿಕೊಂಡು ಮಾತನಾಡುತ್ತಿರುತ್ತಾರೆ. ದೇವರು, ದೈವಸೃಷ್ಟಿ ಎಲ್ಲಾ ಖಗೋಳ, ರಸಾಯನಿಕ ಶಾಸ್ತ್ರಗಳಿಗೆ ಸಂಬಂಧಿಸಿದ ವಿಷಯವಲ್ಲವೆಂದು, ದೇವರು, ದೈವಸೃಷ್ಟಿ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವುದೆಂದು ಅವರಿಗೆ ತಿಳಿಯದು. ಅವರಿಗೆ ತಿಳಿದ ನಾಲ್ಕುಶಾಸ್ತ್ರಗಳ ಪ್ರಕಾರ ಸ್ಥೂಲವಾಗಿರುವ ಕೆಲವು ವಿಷಯಗಳು ಮಾತ್ರವೇ ತಿಳಿಯುತ್ತದೆ. ಸೂಕ್ಷ್ಮವಾಗಿರುವ ಅನೇಕ ವಿಷಯಗಳು ಅವರಿಗೆ ತಿಳಿಯದು.

ಈ ಸೃಷ್ಟಿ ಪೂರ್ತಿ ಸ್ಥೂಲ ಸೂಕ್ಷ್ಮಗಳ ಮೇಲೆ ಆಧಾರಪಟ್ಟಿದೆ. ಆದ್ದರಿಂದ ಸೃಷ್ಟಿ ರಹಸ್ಯ ತಿಳಿಯಬೇಕೆಂದರೆ ಸ್ಥೂಲ ಸೂಕ್ಷ್ಮ ಎರಡು ಭಾಗಗಳು ತಿಳಿಯಬೇಕು. ಸ್ಥೂಲವನ್ನು ಎಲ್ಲರೂ ತಿಳಿಯುತ್ತಾರೆ. ಸೂಕ್ಷ್ಮವನ್ನು ತಿಳಿಯಬೇಕೆಂದರೆ ಎಲ್ಲರಿಗೂ

ಸಾಧ್ಯವಾಗುವುದಿಲ್ಲ. ಎಲ್ಲಾ ನಮಗೆ ತಿಳಿದಿದೆ ಎಂದು ವಾದಿಸುತ್ತಾ, ದೇವರೆಂದು ಹೇಳುವ ಎಲ್ಲರನ್ನು ಮೋಸಗಾರರೆಂದು ಪ್ರಚಾರ ಮಾಡುವವರು ನಿಜಕ್ಕೆ ವಿಜ್ಞಾನಿಗಳು ಅಲ್ಲದಿದ್ದರೂ, ವಿಜ್ಞಾನಿಗಳೆಂದು ಹೇಳಿಕೊಳ್ಳುತ್ತಾರೆ. ಅವರಿಗೆ ಸೂಕ್ಷ್ಮಜ್ಞಾನ ಯಾವುದು ತಿಳಿಯದು ಸೂಕ್ಷ್ಮ ಎಂದರೆ ಏನೊ ಎಲ್ಲರಿಗೂ ಅರ್ಥವಾಗುವುದಕ್ಕೆ ಮೇಘವನ್ನು ಉದಾಹರಣೆಯಾಗಿ ತೆಗೆದುಕೊಂಡು ನೋಡೋಣ. ಆಕಾಶದಲ್ಲಿ ಒಂದು ಮೇಘ ಕಾಣಿಸಿದಾಗ ಅದು ಸ್ಥೂಲವಾಗಿ ಒಂದು ಆಕಾರದಿಂದ ಸ್ವಲ್ಪ ವಿಸ್ತೀರ್ಣದೊಂದಿಗೆ ಕಾಣಿಸುತ್ತದೆ ಹಾಗೆ ಕಾಣಿಸಿದ ಮೇಘ ಕೆಲವು ನಿಮಿಷಗಳಿಗೆ ಅದರ ಸ್ಥೂಲ ಆಕಾರ ಬದಲಾಗುತ್ತದೆ. ವಿಸ್ತೀರ್ಣ ಕಡಿಮೆಯಾಗುವುದೊ ಹೆಚ್ಚಾಗುವುದೊ ನಡೆಯುತ್ತದೆ. ನಂತರ ಸ್ವಲ್ಪ ಸಮಯಕ್ಕೆ ಅದು ಪೂರ್ತಿ ಕಾಣಿಸದಂತೆ ಮಾಯವಾಗಿಹೋಗುತ್ತದೆ. ಇದರಿಂದ ಒಂದು ಮೇಘ ಸ್ವಲ್ಪಸಮಯ ಸ್ಥೂಲವಾಗಿದ್ದು ನಂತರ ಸೂಕ್ಷ್ಮವಾಗಿ ಕಾಣಿಸದಂತೆ ಹೋಗುತ್ತದೆಂದು ತಿಳಿಯುತ್ತಿದೆ. ಆಕಾಶದಲ್ಲಿ ಮೇಘಗಳು ಸ್ಥೂಲ ಸೂಕ್ಷ್ಮಗಳಾಗಿ ಕಾಣಿಸುವುದರಲ್ಲಿ ಒಂದು ರಹಸ್ಯ ಇದೆ. ಸ್ಥೂಲವಾಗಿ ಭೂಮಿಮೇಲಿರುವ ಯಾವ ವಸ್ತುವನ್ನಾದರೂ, ಯಾವ ಜೀವರಾಶಿಯನ್ನಾದರೂ ಮೇಘವನ್ನು ಶೇಕರಿಸಿ, ಅದನ್ನು ಕಾಣಿಸದಂತೆ ಸೂಕ್ಷ್ಮವಾಗಿ ಬದಲಾಯಿಸಿಕೊಂಡು ತನ್ನಲ್ಲಿ ಬಚ್ಚಿಟ್ಟುಕೊಳ್ಳುತ್ತಿದೆ. ಈ ಮಾತು ವಿಜ್ಞಾನಿಗಳಂದುಕೊಳ್ಳುವ ಕೆಲವರಿಗೆ ಆಶ್ಚರ್ಯವಾಗಿ ಇದ್ದರೂ, ನಂಬುವುದಕ್ಕಾಗದಿದ್ದರೂ ನಾವು ಹೇಳುವುದು ನೂರಕ್ಕೆ ನೂರಷ್ಟು ಸತ್ಯ. ಭೂಮಂಡಲದಲ್ಲಿ ಸ್ಥೂಲವಾಗಿರುವ ಏನನ್ನಾದರೂ ಸೂಕ್ಷ್ಮವಾಗಿ ಬದಲಾಯಿಸಿಕೊಳ್ಳುತ್ತೇನೆಂದು ನಮಗೆ ತಿಳಿಯುವಂತೆ ಮೇಘ ಸ್ಥೂಲವಾಗಿ ಕಾಣಿಸಿ ಸೂಕ್ಷ್ಮವಾಗಿ ಮಾಯವಾಗಿಹೋಗುತ್ತಿದೆ. ಈ ವಿಷಯವನ್ನು ಪೂರ್ತಿಯಾಗಿ ತಿಳಿಯಬೇಕೆಂದರೆ ನಮ್ಮ ರಚನೆಯಲ್ಲಿನ **"ದೆವ್ವಗಳ–ಭೂತಗಳ ಯಥಾರ್ಥ ಸಂಘಟಣೆಗಳು"** ಎಂಬ ಗ್ರಂಥವನ್ನು ಓದಿರಿ.

ಆಕಾಶ ಶೂನ್ಯವಾದರೂ ಸ್ಥೂಲವಾದ ನೀರು ಮಳೆಯಾಗಿ ಬರುತ್ತಿವೆ. ಮಂಜು ಬೀಳುತ್ತಿದೆ, ಮೀನುಗಳು, ಕಪ್ಪೆಗಳು, ಹಾವುಗಳು ಉಳಿದ ಜೀವಿಗಳೆಷ್ಟೊ

ಆಕಾಶದಿಂದ ಬಂದು ಕೆಳಗೆಬೀಳುತ್ತಿವೆ. ಶೂನ್ಯವಾದ ಆಕಾಶದಿಂದ ಸ್ಥೂಲವಾದವು ಎಷ್ಟೋ ಬರುತ್ತಿವೆ. ಆದರೂ ಪ್ರತಿ ನಿತ್ಯ ನಮಗೆ ಕಾಣಿಸುವ ಮೇಘವನ್ನು ಕುರಿತು ನಮಗೂ ತಿಳಿಯದು. ಇಲ್ಲಿಯವರೆಗೂ ಯಾವ ಪರಿಶೋಧಕನೂ ಮೇಘಗಳೊಂದರ ಸಮಾಚಾರವನ್ನು ತಿಳಿದುಕೊಂಡಿಲ್ಲ ಹಾಗಿರುವಾಗ ನಮಗೆ ತಿಳಿಯದ ಎಷ್ಟೋ ವಿಷಯಗಳಲ್ಲಿ ಸೂಕ್ಷ್ಮವಾದುದೇನು ತಿಳಿಯದು. ಯಾವ ವಸ್ತುವಿನಲ್ಲಿ ಯಾವ ಸೂಕ್ಷ್ಮವಿದೆಯೊ ಯಾರಿಗೂ ತಿಳಿಯದು. ಅಂತಹದರಲ್ಲಿ ಸ್ಥೂಲವಾಗಿ ಕಾಣಿಸುವ ಮೀನಿನ ಔಷಧಿಯಲ್ಲಿ ಯಾವ ಸೂಕ್ಷ್ಮವಿದೆಯೊ ಹೇಗೆ ತಿಳಿಯುತ್ತದೆ? ಮೀನಿನಲ್ಲಿನ ಔಷಧಿ ರೋಗವನ್ನು ಇಲ್ಲದಹಾಗೆ ಮಾಡಿದಂತೆ ಪ್ರತ್ಯಕ್ಷ ಸಾಕ್ಷ್ಯವಾಗಿ ಎಷ್ಟೋಜನ ಹೇಳುತ್ತಿರುವಾಗ, ಅದನ್ನು ಶಾಸ್ತ್ರೀಯತೆಯಾಗಿ ಏಕೆ ತಿಳಿದುಕೊಳ್ಳಬಾರದು? ಕಾಣಿಸುವ ಶಾಸ್ತ್ರೀಯತೆಯನ್ನನು ಸರಿಸಿ ಅದು ಯಾವ ಶಾಸ್ತ್ರಕ್ಕೆ ಸಂಬಂಧಿಸಿರುವುದೊ ಏಕೆ ತಿಳಿದುಕೊಳ್ಳಬಾರದು? ಶಿವನ (ಈಶ್ವರ ಲಿಂಗದ) ಗುಡಿಯಲ್ಲಿ ಬಿಲ್ವಪತ್ರಿ (ಮಾರೇಡು) ಗಿಡದ ಎಲೆಗಳನ್ನು ನೀರಿನಲ್ಲಿ ಹಾಕಿ, ಆ ನೀರನ್ನು ಗುಡಿಯಲ್ಲಿ ತೀರ್ಥವಾಗಿ ಕೊಡುವುದರಿಂದ, ತೀರ್ಥವನ್ನು ನಿತ್ಯ ನಲವತ್ತು (40) ದಿನಗಳು ತೆಗೆದುಕೊಂಡವರಿಗೆ ಉಬ್ಬಸವ್ಯಾಧಿ (ಅಸ್ತಮಾ) ಕಡಿಮೆಯಾಗುವುದು ನೋಡಿ, ಆ ಎಲೆಯನ್ನು ಕೆಲವರು ಔಷಧಿಯಾಗಿ ಗುರುತಿಸಿದ್ದಾರೆ. ಮೊದಲು ಬಿಲ್ವಪತ್ರೆ ಎಲೆಗಳು ತಗಲಿದ ನೀರಿನಲ್ಲಿ ಆಸ್ತಮಗೆ ತಕ್ಕ ಔಷಧಿ ಇದೆಯೆಂದು ಯಾರಿಗೂ ತಿಳಿಯದು. ಆ ನೀರನ್ನು ತೀರ್ಥವಾಗಿ ಹೇಳಿಕೊಳ್ಳುವುದರಿಂದ ಪ್ರತ್ಯಕ್ಷ ಸತ್ಯವಾಗಿ ಆಸ್ತಮಾ ಕಡಿಮೆಯಾಗು ವುದು ತಿಳಿದ ನಂತರ, ಅದರಲ್ಲಿ ಆಸ್ತಮಾಗೆ ಔಷಧಿ ಇದೆಯೆಂದು ತಿಳಿದಿದೆ. ಅಲ್ಲಿಯವರೆಗೂ ಬಲ್ವಪತ್ರಿ ಎಲೆಗಳನ್ನು ಶಿವನ ಪೂಜೆಗೆ ಮಾತ್ರ ಉಪಯೋಗಿ ಸಬೇಕೆಂಬುದು ಮಾತ್ರ ಗೊತ್ತು. ಬಿಲ್ವಪತ್ರಿ ಎಲೆಗಳಲ್ಲಿ ಆಸ್ತಮಾಗೆ ಯಾವುದೊ ತಿಳಿಯದ ಔಷಧಿ ಇದೆಯೆಂದು ಕೆಲವರು ಪೂಜಾರಿಗಳು ಮೊದಲು ಗ್ರಹಿಸಿದ್ದಾರೆ. ಬಿಲ್ವಪತ್ರಿ ನೀರು ಈದಿನಕ್ಕೂ ತೀರ್ಥವಾಗಿಯೇ ಕೊಡುತ್ತಿದ್ದಾರೆ ಹೊರತು ಅದನ್ನು ಒಂದು ಔಷಧಿಯೆಂದು ಯಾರೂ ಹೇಳುತ್ತಿಲ್ಲ. ಈದಿನ ಜನ ವಿಜ್ಞಾನವೇದಿಕೆಯವರು ಆಗಿನ ಕಾಲದಲ್ಲಿ ಇಲ್ಲ. ಒಂದುವೇಳೆ ಇದಿದ್ದರೆ ಬಿಲ್ವಪತ್ರಿ

ಎಲೆಯನ್ನು ಕೂಡಾ ಮೂಢನಂಬಿಕೆಯೆಂದು ಹೇಳುತ್ತಿದ್ದರು. ಚಿಕ್ಕವಯಸ್ಸಿನಲ್ಲಿಯೇ ಆಸ್ತಮಾ ಇರುವವರಿಗೆ ಕೆಲವು ದಿನಗಳು ಬಿಡದಂತೆ ಬಿಲ್ವಪತ್ರಿ ಎಲೆಗಳ ನೀರನ್ನು ಕುಡಿದರೆ ಅದು ಪೂರ್ತಿಯಾಗಿ ಗುಣವಾಗುತ್ತದೆ. ಈ ವಿಷಯವನ್ನು ಕೆಲವರು ಪೂರ್ತಿಯಾಗಿ ತಿಳಿದುಕೊಂಡು, ಬಿಲ್ವಪತ್ರಿ ಎಲೆಗಳಿಂದ ಆಯುರ್ವೇದದಲ್ಲಿ ಒಂದು ಔಷಧಿಯನ್ನು ಸಹಾ ತಯಾರುಮಾಡಿ ಬಳಸುವುದು ನಡೆಯುತ್ತಿದೆ. ಆದರೆ ಆ ಔಷಧಿ ಬಿಲ್ವಪತ್ರಿ ಎಲೆಗಳಿಂದ ತಯಾರಾಗಿದೆಯೆಂದು ಬಹಳಜನರಿಗೆ ತಿಳಿಯದು. ಶಿವನಗುಡಿಯಲ್ಲಿ ಬಿಲ್ವಪತ್ರಿ ನೀರು ಪೂಜಾರಿಗಳ ತೀರ್ಥ ಎಂಬ ಹೆಸರಿನಿಂದ ಕೊಟ್ಟರೆ ಆಸ್ತಮಾ ಗುಣವಾದಾಗ, ಹಾಗೆಯೇ ಹೈದರಾಬಾದ್‌ನಲ್ಲಿ ಮೀನಿನ ಔಷಧಿಯೆಂದು ಹೇಳುವುದನ್ನು ಮೀನಿನ ಪ್ರಸಾದವೆಂದು ಬತ್ತಿನ ಸೋದರರು ಕೊಟ್ಟರೆ, ಆಸ್ತಮಾ ಗುಣವಾಗುತ್ತಿದೆಂದು ಪ್ರತ್ಯಕ್ಷವಾಗಿ ಎಲ್ಲರೂ ಹೇಳುತ್ತಿರುವಾಗ, ಮಧ್ಯದಲ್ಲಿ ಜನ ವಿಜ್ಞಾನವೇದಿಕೆಯವರಿಗೆ ಬಂದಿರುವ ತೊಂದರೆಯೇನು? ಅದೇ ಕೆಲಸವಾಗಿ ಬೇಕೆನ್ನುತ್ತಲೇ ಅದು ಔಷಧಿಯಲ್ಲ ಎಂದು ಪ್ರಚಾರ ಮಾಡಬೇಕಾದ ಅಗತ್ಯವೇನೆಂದು ಪ್ರಜೆಗಳು ಅನೇಕಕಡೆ ಪ್ರಶ್ನಿಸುತ್ತಿದ್ದಾರೆ.

ವಿಜ್ಞಾನ ಎಂಬುದು ವಾಸ್ತವವಾದುದು, ಏಕೆಂದರೆ ಅದು ಶಾಸ್ತ್ರ. ಆರು ಶಾಸ್ತ್ರಗಳಿಗೆ ಆರು ವಿಜ್ಞಾನಗಳಿವೆ. ಆದರೆ ವಿಜ್ಞಾನಿಗಳಂದುಕೊಂಡವರಿಗೆ ಶಾಸ್ತ್ರ ಎಷ್ಟು ತಿಳಿದಿದೆಯೋ ಅಷ್ಟೇ ಅವರಲ್ಲಿ ವಿಜ್ಞಾನವಿರುತ್ತದೆ. ಒಂದು ಶಾಸ್ತ್ರವನ್ನು ಸ್ವಲ್ಪ ತಿಳಿದರೆ ಅಲ್ಪ ವಿಜ್ಞಾನಿ ಎಂದು, ಹೆಚ್ಚಾಗಿ ತಿಳಿದರೆ ಹೆಚ್ಚು ವಿಜ್ಞಾನ ಇರುವವನೆಂದು ಹೇಳಬಹುದು. ಉದಾಹರಣೆಗೆ ಮಿಲಿಟರಿ (ಸೈನ್ಯ) ಎನ್ನುವುದರಲ್ಲಿ ಆರ್ಮಿ ಎಂಬುದು ಒಂದುಭಾಗ, ಅದರಲ್ಲಿ ಎಲ್ಲರೂ ಒಂದೇ ಬಣ್ಣ ಇರುವ ವಸ್ತ್ರಗಳು ಧರಿಸಿರುತ್ತಾರೆ. ಎಲ್ಲರನ್ನು ಮಿಲಿಟರಿಯವರೇ ಎಂದು ಹೇಳಬಹುದು. ಆದರೆ ಅದರಲ್ಲಿ ಚಿಕ್ಕ ಉದ್ಯೋಗಿ ಇದ್ದಾನೆ, ಹಾಗೆಯೇ ದೊಡ್ಡ ಉದ್ಯೋಗಿ ಇದ್ದಾನೆ. ಹಾಗೆಯೇ ಸೈನ್ಸು ತಿಳಿದವರನ್ನು ವಿಜ್ಞಾನಿ ಎಂದರೂ ಹೆಚ್ಚಾಗಿ ತಿಳಿದವನಿದ್ದಾನೆ, ಕಡಿಮೆ ತಿಳಿದವನು ಇದ್ದಾನೆ. ಎಲ್ಲರೂ ಸಮಾನವಲ್ಲ

ಅಲ್ಲವೇ! ಜನ ವಿಜ್ಞಾನವೇದಿಕೆಯಲ್ಲಿ ಎತ್ತರಸ್ಥಾನ ವಿಜ್ಞಾನವಿರುವವರಿದ್ದಾರೊ ನಮಗೆ ತಿಳಿದಿಲ್ಲ ಆದರೆ, ಪೂರ್ತಿ ತಿಳಿಯದ ವಿಷಯವನ್ನು ಕುರಿತು ತಿಳಿದಿದ್ದೇವೆಂದು ಮಾತನಾಡುವವರು ಬಹಳಜನ ಇದ್ದಂತೆ ಚೆನ್ನಾಗಿ ಕಾಣಿಸುತ್ತಿದೆ. ಕಾಣಿಸುವ ಸತ್ಯದಲ್ಲಿ ಸೈನ್ಸು ಇಲ್ಲವೆಂದರೆ "ಕಣ್ಣುಮುಚ್ಚಿಕೊಂಡ ಬೆಕ್ಕು ಲೋಕವೇ ಇಲ್ಲವೆನ್ನುವಂತಿದೆ," ಸೈನ್ಸು ಸತ್ಯವಾದಾಗ ಸತ್ಯ ಎಲ್ಲಿದ್ದರೂ ಅದು ಸೈನ್ಸೆಂದು ಹೇಳಬಹುದು. ಒಂದು ಸತ್ಯ ಆರು ಶಾಸ್ತ್ರಗಳಲ್ಲಿ ಯಾವ ಶಾಸ್ತ್ರಕ್ಕೆ ಸಂಬಂಧಿಸಿದ ಸೈನ್ಸಾದರೂ ಆಗಿರಬಹುದು. ಒಂದು ಪ್ರತ್ಯಕ್ಷ ಸತ್ಯ ಇಂತಹ ಶಾಸ್ತ್ರಕ್ಕೆ ಸಂಬಂಧಿಸಿರುವುದೆಂದು ತಿಳಿಯದಷ್ಟುಮಾತ್ರಕ್ಕೆ, ಅದನ್ನು ಶಾಸ್ತ್ರ ಅಲ್ಲವೆಂದು ಹೇಳುವುದು ಮೂರ್ಖತ್ವ ಮತ್ತು ಮೂಢತ್ವ ಆಗುತ್ತದೆ.

ಗಂಜಾಯಿ ಎಲೆ ಮತ್ತನ್ನು ಉಂಟುಮಾಡುತ್ತದೆ, ರಾಗಿ ಎಲೆ ಮತ್ತನ್ನು ಇಲ್ಲದಹಾಗೆ ಮಾಡುತ್ತದೆ. ಕಪ್ಪುಈಶ್ವರಿ (ಎಕ್ಕೆಗಿಡದ) ಎಲೆ ನಿದ್ರೆಯನ್ನು ಉಂಟುಮಾಡುತ್ತದೆ. ಬಿಳಿಈಶ್ವರಿ (ಎಕ್ಕೆಗಿಡದ) ಎಲೆ ನಿದ್ರೆಯನ್ನು ಇಲ್ಲದಹಾಗೆ ಮಾಡಿ ಎಚ್ಚರವಾಗಿರಿಸುತ್ತದೆ. ಕಜ್ಜಿ (ತೀಟೆ) ಗಂಜರಿ ಸೊಪ್ಪು ಎಲೆ ಕಡಿತವನ್ನು (ನವ್ವೆಯನ್ನು) ಉಂಟುಮಾಡುತ್ತದೆ. ಆಟ ಗಂಜರಿ (ಪಿಪ್ಪಂಟಿ) ಎಲೆ ನವ್ವೆಯನ್ನು ಇಲ್ಲದಂತೆ ಮಾಡುತ್ತದೆ. ಕೆಲವರಿಗೆ ಕೆಲವು ಎಲೆಗಳಲ್ಲಿನ ಔಷಧಿಗುಣಗಳು ಯಾವುದಿದೆಯೊ ತಿಳಿದಿದೆ. ಕೆಲವು ಎಲೆಗಳಲ್ಲಿ ಯಾವ ಔಷಧಿ ಇದೆಯೋ ಯಾರಿಗೂ ತಿಳಿಯದು. ತಿಳಿದಿರುವವೆಲ್ಲ ಔಷಧಿಗಳೆಂದು, ತಿಳಿಯದಿರುವವೆಲ್ಲವೂ ಮೂಢನಂಬಿಕೆಗಳೆಂದು ಅನ್ನಬಹುದಾ? ಸತ್ಯ ಕಾಣಿಸುತ್ತಿದೆ. ಆದ್ದರಿಂದ, ಅವುಗಳನ್ನು ಮೂಢನಂಬಿಕೆಯೆಂದು ಅಂದರೆ ಅದು ತಿಳುವಳಿಕೆಯಿಲ್ಲದ ಕೆಲಸ ಆಗುತ್ತದೆ. ಬಹಳಜನರಿಗೆ ಅರ್ಥವಾಗದ ವಿಷಯಗಳೆಷ್ಟೊ ಇವೆ. ಅದರಲ್ಲಿ ಉದಾಹರಣೆಗೆ ಒಂದನ್ನು ಇಲ್ಲಿ ಹೇಳಿಕೊಳ್ಳೋಣ. ಎಕ್ಕೆ ಗಿಡದಹತ್ತಿರಕ್ಕೆ ಮೈನೊವು ಇರುವವನು ಭಕ್ತಿಯಿಂದ ಹೋದರೆ ಶರೀರದಲ್ಲಿ ನೋವುಗಳು ಕಡಿಮೆಯಾಗುತ್ತವೆ. ಶರೀರದಲ್ಲಿ ನೋವುಗಳು ಇಲ್ಲದವನಾದರೂ ಗಿಡವನ್ನು ಕೋಪದಿಂದ ಅಸೂಯೆಯಿಂದ ಹೋಗಿ ಗಿಡವನ್ನು ಕಿತ್ತರೂ, ಅದರ ಎಲೆಗಳನ್ನು ಕಿತ್ತರೂ ನೋವುಗಳು ಬರುವುದು ನಡೆಯುತ್ತದೆ. ಪ್ರತ್ಯೇಕಿಸಿ ಒಂದು ನಕ್ಷತ್ರಕಾಲದಲ್ಲಿಯೇ

ಹಾಗೆ ನಡೆಯುತ್ತದೆ. ಹಾಗೆ ಏಕೆ ನಡೆಯುತ್ತಿದೆಯೋ ಯಾರೂ ಹೇತುಬದ್ಧವಾಗಿ ಹೇಳಲಾರರು. ಹೇಳಲಾರದಷ್ಟುಮಾತ್ರಕ್ಕೆ, ಯಾರಿಗೂ ತಿಳಿಯದಷ್ಟು ಮಾತ್ರಕ್ಕೆ, ಅದಕ್ಕೆ ಹೇತುಬದ್ಧತೆ ಶಾಸ್ತ್ರಬದ್ಧತೆ ಇಲ್ಲವೆನ್ನುತ್ತೇವಾ? ಹಾಗೆ ನಡೆಯುವುದಕ್ಕೆ ಯಾವುದೊ ಒಂದು ಕಾರಣವಿರುತ್ತದೆ, ಅದು ನಮಗೆ ತಿಳಿದಿರಬಹುದು ಅಥವಾ ತಿಳಿಯದಿರಬಹುದು. ಈಗಲೇ ಹಾವು ಕಚ್ಚಿದೆಯೆಂದು ಫೋನ್ ಮಾಡಿದರೆ ಅಲ್ಲಿಂದಲೇ ಹಾವಿನ ವಿಷವನ್ನು ನಿವಾರಿಸುವ ವಿಧಾನವಿದೆ. ಈಗಲೂ ಚೇಳಿನ ವಿಷಕ್ಕೆ ಇತರರಿಗೆ ವೈದ್ಯಮಾಡಿದರೆ ಕಚ್ಚಿದವನಿಗೆ ಬಾಧೆ ಕಡಿಮೆಯಾಗುವುದು ಇದೆ. ಇವುಗಳೆಲ್ಲವುಗಳಲ್ಲಿ ನಡೆಯುವ ಸತ್ಯವೇ ಶಾಸ್ತ್ರೀಯತೆ. ಆದರೆ ಅದು ಯಾವ ಶಾಸ್ತ್ರಕ್ಕೆ ಸಂಬಂಧಿಸಿರುವುದೋ ತಿಳಿಯದು. ಇನ್ನೊಂದು ವಿಧಾನದ ಪ್ರಕಾರ ಒಂದು ಬಾವಿಯಲ್ಲಿನ ನೀರನ್ನು ಒಬ್ಬರು ಪ್ರಭಾವಿತವಾಡಿ (ಯಾಕ್ಟಿವೇಷನ್ ಮಾಡಿ) ಆ ನೀರು ಕುಡಿದವರಿಗೆ ಹಾವಿನ ವಿಷ ನಿವಾರಣೆ ಯಾಗುವಂತೆ ಇಟ್ಟಿದ್ದಾರೆ. ಆಗಿನಿಂದ ಆ ಪ್ರಾಂತದವರು ಯಾವ ಹಾವು ಕಚ್ಚಿದರೂ ಆ ಬಾವಿ ನೀರನ್ನು ಕುಡಿಯುವುದು ನಡೆಯುತ್ತಿದೆ. ಎಷ್ಟೋ ದೂರದಿಂದ ವಿಷ ನಿವಾರಣೆ ಮಾಡುವವರು, ಇತರರಿಗೆ ಚಿಕಿತ್ಸೆ ಮಾಡಿ ರೋಗಿಯನ್ನು ಗುಣಪಡಿಸುವವರು, ಎಷ್ಟೋಕಾಲ ಒಂದೇ ಬಾವಿನೀರು ಹಾವಿನ ವಿಷಕ್ಕೆ ಔಷಧಿಯಾಗಿ ಕೆಲಸ ಮಾಡುವಂತೆ ಪ್ರಭಾವಿತ ಮಾಡಿದವರೂ, ನಮ್ಮದೇಶದಲ್ಲಿ ಇರುವುದಕ್ಕೆ ನಾವು ಗರ್ವಿಸಬಹುದು. ಈ ವಿಧವಾಗಿ ಪೂರ್ವದಿಂದ ಸಮಾಜಕ್ಕೆ ಎಷ್ಟೊ ನಿಸ್ವಾರ್ಥದಿಂದ ಸೇವೆಗಳನ್ನು ಮಾಡದವರಿರು ವಾಗ, ನಿನ್ನೆಯಲ್ಲದೆ ಮೊನ್ನೆ ಕಣ್ಣು ತೆರೆದು ಆಕಳಿಸಿದವರು, ತಲೆಯಲ್ಲಿ ಯಾವ ಗುಣ ಯಾವಾಗ ಮೆದಲುತ್ತದೊ ಹೇಳಲಾರದವರು, ವಿಜ್ಞಾನಿಗಳು ಅಲ್ಲದಿದ್ದರೂ, ನಾವು ವಿಜ್ಞಾನಿಗಳೆಂದು ಹೇಳಿಕೊಳ್ಳುತ್ತಾ, ಇತರರನ್ನು ರೂಪಾಯಿ ಕೂಡಾ ಕೇಳದಹಾಗೆ ಉಚಿತವಾಗಿ ಔಷಧಿಯನ್ನು ಕೊಡುವವರನ್ನು ಪ್ರಜೆಗಳನ್ನು ಮೋಸಮಾಡುವವರೆನ್ನುವುದು ಸಮಂಜಸವಾ ಎಂದು ಪ್ರಶ್ನಿಸುತ್ತಿದ್ದೇನೆ. ಮೀನಿನಔಷಧಿಯಲ್ಲಿ ಎಂಥಹ ಶಾಸ್ತ್ರೀಯತೆ ಇಲ್ಲದಿರುವಾಗ ವಿಜ್ಞತೆಯೆಂದು ಪ್ರಶ್ನಿಸುತ್ತಿದ್ದೇವೆ. ಪ್ರತ್ಯಕ್ಷ ಸತ್ಯ ಎಲ್ಲಿದೆಯೋ ಅದೇ ಶಾಸ್ತ್ರೀಯತೆಯಾಗಲಿ,

ಪ್ರತ್ಯೇಕಿಸಿ ಇದು ಶಾಸ್ತ್ರೀಯತೆ ಎಂದು ಎಲ್ಲಿಯೂ ಇರುವುದಿಲ್ಲ. ಶಾಸ್ತ್ರೀಯತೆಯಾಗಿ ಕಾಣಿಸುವ ಸತ್ಯ ಯಾವ ಶಾಸ್ತ್ರಕ್ಕೆ ಸಂಬಂಧಿಸಿರುವುದೊ ತಿಳಿದುಕೊಳ್ಳುವುದು ಮನುಷ್ಯನೊಂದರ ಕರ್ತವ್ಯ. ಹಾಗಲ್ಲದೆ ಸತ್ಯವನ್ನು ವಿಮರ್ಶಿಸುವುದು ಜವಾಬ್ದಾರಿರಹಿತವೆಂದು ಹೇಳಬಹುದು.

ಈಗಲೂ ಒಂದು ಗ್ರಂಥವನ್ನು ಮುಟ್ಟಿಕೊಂಡು ಭಕ್ತಿಪೂರ್ವಕವಾಗಿ ಹತ್ತಿರವಿಟ್ಟುಕೊಂಡರೆ ಕೆಲವು ರೋಗಗಳು ಹೋಗುತ್ತಿವೆ. ಒಂದು ಸ್ಥಳದಲ್ಲಿ ನಿದ್ರಿಸಿದರೆ ಅವರಿಗಿರುವ ರೋಗಗಳು ಎಷ್ಟೋ ಇಲ್ಲದಹಾಗೆ ಹೋಗುತ್ತೀವೆ. ಕೆಲವು ಗ್ರಂಥಗಳಲ್ಲಿನ ವಿಷಯಗಳನ್ನು ಬಿಡದಂತೆ ಓದಿ ತಿಳಿದುಕೊಂಡರೆ ಕ್ಯಾನ್ಸರ್, ಹೆಚ್.ಐ.ವಿ. ಮೊದಲಾದ ಭಯಂಕರ ರೋಗಗಳು ಚಿಕಿತ್ಸೆ ಇಲ್ಲದಂತೆ ಗುಣವಾಗುತ್ತಿವೆ. ಆದರೆ ಆ ಗ್ರಂಥಗಳಲ್ಲಿ ಯಾವ ಔಷಧವೂ ಕಾಣಿಸುವುದಿಲ್ಲ. ಆ ಸ್ಥಳದಲ್ಲಿ ಎಂತಹ ಪ್ರತ್ಯೇಕತೆಯೂ ಇರುವುದಿಲ್ಲ. ಅಷ್ಟುಮಾತ್ರಕ್ಕೆ ಅದಕ್ಕೆ ಹೇತು ಇಲ್ಲವೆನ್ನುತ್ತೇವಾ? ಅದನ್ನು ಸೈನ್ಸು ಅಲ್ಲವೆನ್ನುತ್ತೇವಾ? ಅದು ಶಾಸ್ತ್ರಬದ್ಧತೆ ಅಲ್ಲವೆನ್ನುತ್ತೇವಾ? ತಿಳಿಯದಷ್ಟು ಮಾತ್ರಕ್ಕೆ ಯಾವುದನ್ನು ಅಲ್ಲವೆಂಬುದಕ್ಕೆ ಸಾಧ್ಯವಿಲ್ಲ. ಮೇಲಿನ ಕೆಲಸಗಳು ಯಾವ ಶಾಸ್ತ್ರಕ್ಕೆ ಸಂಬಂಧಿಸಿವೇಯೊ ನಮಗೆ ತಿಳಿದಿದೆ ಆದ್ದರಿಂದ ಅದನ್ನು ಸೈನ್ಸೆಂದು, ಸೂಪರ್ ಸೈನ್ಸೆಂದು ಹೇಳುತ್ತಿದ್ದೇವೆ. ಅಂತಹ ಸೈನ್ಸು ಏನೊ ಮೀನಿನ ಔಷಧಿ ಕೊಡುವವರಿಗೂ ಕೂಡಾ ತಿಳಿಯದು ಆದರೆ ಮೀನಿನಔಷಧಿಯಲ್ಲಿ ಯಾರಿಗೂ ತಿಳಿಯದ ಶಕ್ತಿ ಅಡಕವಾಗಿದೆ. ಆ ಔಷಧಿಯೊಳಗೆ ಆ ಶಕ್ತಿ ಒಂದು ಬಾವಿನೀರಿನಿಂದ ಬಂದಿದೆ. ಅದೇ ಈ ದಿನ ಮೀನಿನಔಷಧಿ ಪಂಪಿಣಿ ಮಾಡುವ ಬತ್ತಿನಸೋದರರ ಮನೆಯಲ್ಲಿನ ಬಾವಿ. ಅವರ ಮನೆಯಲ್ಲಿರುವ ಬಾವಿಯಲ್ಲಿನ ನೀರು ಪೂರ್ವದಲ್ಲಿ ಪ್ರತ್ಯೇಕವಾದ ವ್ಯಕ್ತಿಯಿಂದ ಶಾಶ್ವತವಾಗಿ ಆಸ್ತಮಾ ರೋಗಕ್ಕೆ ಔಷಧಿಯಾಗಿ ಬದಲಾಗುವಂತೆ ಪ್ರಭಾವಿತ ಮಾಡಲಾಗಿದೆ. ಒಬ್ಬ ವ್ಯಕ್ತಿಯಿಂದ ತುಂಬಲ್ಪಟ್ಟ ಶಕ್ತಿ ಆ ನೀರಿನಲ್ಲಿ ಇದೆ. ಆ ಶಕ್ತಿಯೇ ಈ ದಿನಕ್ಕು ದಿವ್ಯಔಷಧಿಯಾಗಿ ಕೆಲಸ ಮಾಡುತ್ತಿದೆ. ಈ ವಿಷಯವನ್ನು ಮೀನಿನಔಷಧಿಯನ್ನು ಕೊಡುವವರು ಸಹಾ ಒಪ್ಪಿಕೊಳ್ಳುತ್ತಿದ್ದಾರೆ. ಪೂರ್ವದಲ್ಲಿ ಅವರ ಮನೆಯಲ್ಲಿನ ಬಾವಿಗೆ ಆ ಶಕ್ತಿಯನ್ನು ತುಂಬಿದ ವ್ಯಕ್ತಿ

ನಿಸ್ವಾರ್ಥವಾಗಿ ಸೇವೆ ಮಾಡೆಂದು ಹೇಳಿದಮಾತನ್ನು ಮೀರದಂತೆ, ಆ ಮನೆಯವರು ಯಾವ ಧನಾಪೇಕ್ಷೆ ಇಲ್ಲದಂತೆ, ಮೀನಿನಔಷಧಿಯನ್ನು ಪಂಪಿಣಿ ಮಾಡುವುದು ಗಮನಾರ್ಹ. ಇಂತಹ ಕಾರ್ಯವನ್ನೂ, ಎಷ್ಟುಜನರಿಗೆ ಪೈಸಾ ಖರ್ಚಿಲ್ಲದೆ ಚಿಕಿತ್ಸೆ ಮಾಡುವ ವಿಧಾನವನ್ನೂ ಎಲ್ಲರೂ ಪ್ರೋತ್ಸಹಿಸಬೇಕು. ವರ್ಷಕ್ಕೆ ಒಂದುದಿನ ಮೃಗಶಿರಕಾರ್ತಿ ಮೊದಲದಿನ ಮಾತ್ರ ಉಚಿತವಾಗಿ ಪಂಪಣಿ ಮಾಡುವುದು ಎಷ್ಟೋ ಶ್ರಮದಿಂದ ಕೂಡಿಕೊಂಡ ಕಾರ್ಯ. ಆ ಕಾರ್ಯವನ್ನು ಬಿಡದಂತೆ, ಶ್ರಮ ಅಂದುಕೊಳ್ಳದಂತೆ ಪ್ರತಿ ವರ್ಷ ಔಷಧಿ ಪಂಪಣಿಯಲ್ಲಿ ಎಷ್ಟೋಕೃಷಿ ಮಾಡುವವರನ್ನು ಪ್ರೋತ್ಸಹಿಸಬೇಕಾಗಲಿ ನಿರುತ್ಸಾಹಪಡಿಸಬಾರದು. ಅಷ್ಟು ಶ್ರಮದಿಂದ ಕೂಡಿಕೊಂಡ ಕೆಲಸವನ್ನು ನಾವು ಮಾಡುತ್ತೇವೇನೊ ಒಂದುಬಾರಿ ಆಲೋಚಿಸಿರಿ.

ಈಗ ನಾವು ಹೇಳಿದ ವಿಷಯಗಳನ್ನು ನೋಡಿ ಕೆಲವರು ನಂಬದೆ, ನೀವು ಹೇಳಿರುವವು ನಿರೂಪಿಸುತ್ತೀರಾ? ನಿರೂಪಿಸಿದರೆ ಹತ್ತುಕೋಟಿ ಪಂದ್ಯ ಕಟ್ಟುತ್ತೇವೆ. ನೀವು ಗೆದ್ದರೇ ಹತ್ತುಕೋಟಿ ಕೊಡುತ್ತೇವೆಂದು ಸವಾಲಿಗೆ ಕರೆಯುವುದು ಕೆಲವರಿಗೆ ಅಭ್ಯಾಸವಾಗಿದೆ. ವಾಸ್ತುವನ್ನು ಕುರಿತು ಪ್ರಚಾರ ಮಾಡುವವರತ್ತಿರವೊ, ಮಹಿಮೆಗಳನ್ನು ತೋರಿಸುತ್ತೇವೆಂದು ಹೇಳುವವರ ಹತ್ತಿರವೊ ಅಂತಹ ಪ್ರಕಟಣೆಗಳು ಮಾಡಿದರೂ, ಅವು ಹೇಗೊ ಅಸತ್ಯವಾದ್ದರಿಂದ ಅವರು ಹೇಗೊ ಪೋಟಿಗೆ ಬರುವುದಿಲ್ಲ. ಆದ್ದರಿಂದ ಪ್ರಕಟಣೆ ಮಾಡಿರುವವರು ನಾವು ಜಯಿಸಿದ್ದೇವೆ ಉಳಿದವರು ಸೋತುಹೋಗಿದ್ದಾರೆಂದು ಪ್ರಚಾರ ಮಾಡಿಕೊಳ್ಳುತ್ತಾರೆ. ಇಲ್ಲಿ ನಾವು ಇಲ್ಲದಿರುವುದನ್ನು ಇರುವಂತಾಗಲಿ, ಇರುವುದನ್ನು ಇಲ್ಲದಂತಾಗಲಿ, ಅಥವಾ ಮಹಿಮೆಗಳನ್ನಾಗಲಿ, ಇಲ್ಲದ ವಾಸ್ತುವನ್ನಾಗಲಿ ಹೇಳುತ್ತಿಲ್ಲ. ನಾವು ಹೇಳುವುದು ಸೈನ್ಸು. ಅದನ್ನು ಪೋಟಿಗೆ ಇಡಬೇಕಾದ ಅವಶ್ಯಕತೆಯಿಲ್ಲ. ಬೇಕೆಂದರೆ ತಿಳಿದುಕೊಳ್ಳಬಹುದು ಫಲಿತವನ್ನು ಪಡೆಯಬಹುದು. ಸೈನ್ಸು ಎಲ್ಲರಿಗೂ ಸಮಾನವಾದುದು, ಒಬ್ಬರಿಗೆ ಪರಿಮಿತಿಯಲ್ಲ. ಅಂತಹದನ್ನು ವಿಧೇಯತೆಯಿಂದ ಕೇಳಿದರೆ ವಿವರಿಸಿ ಹೇಳುವಂಥಹದಾಗಲಿ,

ಹಣಕ್ಕೆ ಪಂದ್ಯವಾಡುವ ಗಾರಡಿವಿದ್ಯೆಯಂಥದ್ದು ಅಲ್ಲ. ಸೂಕ್ಷ್ಮವಾಗಿರುವ ವಿಜ್ಞಾನ ಶಕ್ತಿಯಿಂದ ಕೂಡಿಕೊಂಡಿರುವುದು. ವಿನಯದಿಂದ ಕೇಳಿ ತಿಳಿದುಕೊಳ್ಳುವಂಥ ದಾಗಲಿ, ವಾದಿಸಿ ತಿಳಿದುಕೊಳ್ಳುವುದು ಅಲ್ಲ. ವಾದಿಸಿ ತಿಳಿದುಕೊಳ್ಳಬೇಕೆಂದು ಕೊಂಡವನಿಗೆ ಸ್ವಲ್ಪವೂ ಅರ್ಥವಾಗುವುದಿಲ್ಲ. ತಿಳಿದುಕೊಳ್ಳುವವನಿಗೆ ಎಷ್ಟಾದರೂ ಅವಗಾಹನೆಯಾಗುತ್ತದೆ. ಆದ್ದರಿಂದ ಕೋಟಿಗಳು ಪಂದ್ಯವಿಟ್ಟು ನಿರೂಪಿಸಿರಿ ಎಂದರೆ ಕೆಲಸ ನಡೆಯುವುದಿಲ್ಲ. ಆದರೆ ಒಂದು ಪೈಸಾ ಖರ್ಚು ಆಗದಂತೆ ಆಸಕ್ತಿಯಿಂದ ಯಾರಾದರೂ ತಿಳಿದುಕೊಳ್ಳಬಹುದು, ಫಲಿತವನ್ನು ಪಡೆಯಬಹುದು. ಶಾಸ್ತ್ರಸಂಬಂಧ ವಿಜ್ಞಾನವನ್ನು ಯಾರೂ ಹಣದಿಂದ ಕೊಂಡುಕೊಳ್ಳಲಾರರು. ಆದ್ದರಿಂದ ಶ್ರದ್ಧೆಯಿಂದ ತಿಳಿಯಬೇಕೆಂದು ತಿಳಿಸುತ್ತಿದ್ದೇವೆ.

ಮೀನಿನಔಷಧಿಯಲ್ಲಿ ಇಂಗು, ಅರಿಶಿನ, ಯಾವುದೊ ಹಿಟ್ಟು ಹೊರೆತು ಎಲೆಗಳು ಕೂಡ ಅದರಲ್ಲಿ ಇರುವಂತೆ ಕಾಣಿಸುವುದಿಲ್ಲ. ಆ ಔಷಧಿಯಲ್ಲಿ ಯಾವ ಹೆಸರುಹೊಂದಿದ ಔಷಧಿ ಕಾಣಿಸುವುದಿಲ್ಲ. ಕದಲದ ನೀರು ಅಂದರೆ ಬಾವಿಯಲ್ಲಿ ನಿಂತಿರುವ ನೀರು ಆ ಔಷಧಿಯಲ್ಲಿ ಬೆರೆತಿರುವುದರಿಂದ ಅದರಲ್ಲಿ ಒಂದು ವಿಶೇಷತೆ ಇದೆಯೆಂದು ಹೇಳಬಹುದು. ಕದಲದ ನೀರಿನಲ್ಲಿ ಬೆರೆಸಿದ ವಸ್ತುಗಳನ್ನು ಕದಲುವ ನೀರಿನಲ್ಲಿ ಅಥವಾ ವಿಶಾಲವಾದ ನೀರಿನಲ್ಲಿ ಕದಲುತ್ತಾ ತಿರುಗುತ್ತಿರುವ ಮೀನಿನಬಾಯಲ್ಲಿ ಇಟ್ಟಾಗ ಆ ಔಷಧಿಗೆ ಪೂರ್ತಿ ವಿಶೇಷತೆ ಏರ್ಪಟ್ಟು ಅದು ಆಸ್ತಮಾಗೆ ಔಷಧಿಯಾಗಿ ಬದಲಾಗುತ್ತಿದೆಯೆಂದು ನಾವು ಅಂದುಕೊಳ್ಳುತ್ತಿದ್ದೇವೆ. ಔಷಧಿಯಲ್ಲಿ ಬಾವಿಯಲ್ಲಿನ ನೀರು ಮುಖ್ಯಪಾತ್ರವನ್ನು ಪೋಷಿಸುತ್ತಿದ್ದರೂ, ಅದು ಮೀನಿನ ಬಾಯೊಳಗೆ ಹೋದಾಗ ಪೂರ್ತಿ ಔಷಧಿಯಾಗಿ ಬದಲಾವಣೆಯಾಗುತ್ತಿದೆ. ಮೀನು ಇಲ್ಲದೆ ಔಷಧಿ ಪೂರ್ತಿ ಶಕ್ತಿಯನ್ನು ಹೊಂದುವುದಿಲ್ಲವೆಂದು ತಿಳಿಯುತ್ತಿದೆ. ಔಷಧಿಯಾಗಿ ಕಾಣಿಸುವ ಪದಾರ್ಥದಲ್ಲಿರುವ ನೀರಿನತೇವ ಮೀನಿನೊಂದಿಗೆ ಬೆರೆತಾಗ, ವಿದ್ಯುತ್ ಧನಧೃವ (ಪಾಜಿಟಿವ್) ಋಣಧೃವ (ನೆಗಿಟಿವ್) ಬೆರೆತಾಗ ಬಲ್ಬು ಬೆಳಗಿದಂತೆ ಔಷಧಶಕ್ತಿ ಪ್ರಕಾಶಿಸುತ್ತದೆ. ಆ ಶಕ್ತಿ ಶರೀರದಲ್ಲಿನ ಉಬ್ಬಸವ್ಯಾಧಿಗೆ ಕೆಲಸ ಮಾಡುತ್ತಿದೆ.

ವರ್ಷದಲ್ಲಿ ಒಂದುಬಾರಿ ಮೀನಿನೊಂದಿಗೆ ಸಹಾ ಔಷಧಿಯನ್ನು ತಿನ್ನುವುದರಿಂದ, ಔಷಧಿಯಲ್ಲಿನ ತೇವ ಎಂಬುದು ಪಾಜಿಟಿವಾಗಿ ಮೀನಿನಲ್ಲಿನ ತೇವ ನೆಗಿಟಿವಾಗಿ ಕೆಲಸಮಾಡಿ, ಔಷಧಿ ಗಂಟಲೊಳಗೆ ಜಾರುತ್ತಿರುವಾಗಲೇ ಔಷಧಜ್ಯೋತಿ ಪ್ರಕಾಶಿಸಿ, ಅದರ ಕಿರಣಗಳು ಶರೀರವೆಲ್ಲಾ ಒಂದೆಬಾರಿಗೆ ಹರಡುತ್ತಿವೆ. ಆದ್ದರಿಂದ ಒಂದೆಬಾರಿ ಮೀನು+ಔಷಧಿ=ಮೀನಿನಔಷಧಿಯನ್ನು ತಿನ್ನುವುದರಿಂದ ಅವರ ಶರೀರದಲ್ಲಿ ರೋಗ ಒಂದೆಬಾರಿ ಎಲ್ಲಾ ಆಗಲಿ ಅಥವಾ ಸ್ವಲ್ಪವಾಗಲಿ ಸಡಲಿಹೋಗುತ್ತಿದೆ. ಒಂದುಬಾರಿ ತಿನ್ನುವುದರಿಂದಲೇ ರೋಗ ಪೂರ್ತಿ ಹೋಗದಿದ್ದರೆ ಎರಡನೆ ವರ್ಷವಾಗಲಿ, ಮೂರನೆ ವರ್ಷವಾಗಲಿ ಕ್ರಮವಾಗಿ ಎರಡು ಮೂರುಬಾರಿ ತಿನ್ನಬಹುದು. ಮೀನು ಇಲ್ಲದೆ ಔಷಧಿಯಾಗಲಿ, ಔಷಧಿಯಿಲ್ಲದೆ ಮೀನಾಗಲಿ ಆಸ್ತಮಾ ರೋಗಕ್ಕೆ ಕೆಲಸಕ್ಕೆ ಬರುವುದಿಲ್ಲ. ಅವರಲ್ಲಿ ಔಷಧಿಜ್ಯೋತಿ ಪ್ರಕಾಶಿಸುವುದಿಲ್ಲ. ಖಚ್ಚಿತವಾಗಿ ಹೀಗೆ ನಡೆಯುತ್ತದೆಂದು ಮೀನಿನ ಔಷಧಿಯನ್ನು ಕೊಡುವವರಿಗೆ ಕೂಡಾ ತಿಳಿಯದು. ಬಾವಿಯಲ್ಲಿನ ನೀರನ್ನು ಪ್ರಭಾವಿತ ಮಾಡಿಹೋದ ಮಹಾರ್ಷಿ ಹೇಳಿದಹಾಗೆ ಮಾಡುವುದೆ ಅವರೊಂದರ ಮುಖ್ಯಕರ್ತವ್ಯವಾಗಿ ಇದೆ. ಔಷಧಿಯನ್ನು ಮೀನಿನೊಂದಿಗೆ ಕೊಡೆಂದು ಪೂರ್ವದಲ್ಲಿ ತಮ್ಮ ಮನೆಗೆ ಬಂದ ಮಹರ್ಷಿಗಳು ಹೇಳಿದಂತೆ ಮಾಡುತ್ತಿದ್ದಾರೆ ಆದರೆ, ಮೀನಿನೊಂದಿಗೆ ಏಕೆ ಕೊಡಬೇಕು ಎಂಬ ವಿಷಯ ಅವರಿಗೂ ಕೂಡಾ ತಿಳಿಯದು. ಕತ್ತಲಿರುವ ಕೋಣೆಯಲ್ಲಿ ಬಲ್ಬು ಬೆಳಗಬೇಕೆಂದರೆ ಎರಡು ವಿದ್ಯುತ್ತು ತಂತಿಗಳು ಅಗತ್ಯ. ಹಾಗೆಯೇ ರೋಗವಿರುವ ಶರೀರದಲ್ಲಿ ಔಷಧಿಜ್ಯೋತಿ ಬೆಳಗುವುದಕ್ಕೆ ಔಷಧಿ+ಮೀನು ಎಂಬ ಎರಡೂ ಇರಬೇಕು. ಆದ್ದರಿಂದ ಅದನ್ನು ಮೀನಿನಔಷಧಿ ಅನ್ನುತ್ತಿದ್ದಾರೆ. ನಂತರ ಮೀನಿನಬಾಯೊಳಗೆ ಇಡುವ ಔಷಧಿಯನ್ನು ಮತ್ತೆಸ್ವಲ್ಪ ಕೊಟ್ಟು 15 ದಿನಗಳಿಗೊಂದು ಬಾರಿ ಆ ಔಷಧಿಯನ್ನು ಬಳಸಿರೆಂದು ಹೇಳುತ್ತಿದ್ದಾರೆ. ಆದ್ದರಿಂದ ಔಷಧಿಯನ್ನು ಪೂರ್ತಿಯಾಗಿ 45 ದಿನಗಳು ಬಳಸಿದಂತಾಗುತ್ತದೆ. ನಂತರ ಮೂರುಬಾರಿ ಬಳಸುವ ಔಷಧಿ ಪ್ರಾರಂಭದಲ್ಲಿ ತಿಂದ ಔಷಧಿಗೆ ಅನುಬಂಧಶಕ್ತಿ ಕೊಡುತ್ತಿದೆ.

ಇಲ್ಲಿಯವರೆಗೂ ಮೀನಿನಔಷಧಿಯಲ್ಲಿನ ವಾಸ್ತವಿಕತೆಯನ್ನು ಕುರಿತು ತಿಳಿದುಕೊಂಡಿದ್ದೇವೆ. ನಾವು ಮೀನಿನಔಷಧಿಯನ್ನು ಕುರಿತು ಕೊಟ್ಟಿರುವ ವಿವರ ಹೇತುವಾದಿಗಳೆಂದು ಹೇಳಿಕೊಳ್ಳುತ್ತಾ, ನಾಸ್ತಿಕವಾದಕ್ಕೆ ಹತ್ತಿರವಾಗಿರುವ ವಿಜ್ಞಾನವೇದಿಕೆ ಎನ್ನುವವರಿಗೆ ಪೂರ್ತಿ ಸಮಾಧಾನವಾಗಿದೆ. ಈಗ ನಾಸ್ತಿಕವಾದಿ ಯಾದ ವ್ಯಕ್ತಿ ಮನುಷ್ಯ ಶರೀರದಲ್ಲಿನ ಮನಸ್ಸನ್ನು ಕುರಿತು ಈ ವಿಧವಾಗಿ ಹೇಳುತ್ತಿದ್ದಾನೆ.

**ನಾಸ್ತಿಕವಾದಿ:–** ಮನಸ್ಸು ಅಂದರೆ ಆಲೋಚಿಸುವುದೂ, ನಿರ್ಣಯಗಳು ತೆಗೆದುಕೊಳ್ಳುವುದೂ, ತಿಳುವಳಿಕೆ, ಭಾವನೆಗಳು, ಆವೇಶಗಳು, ಮಾತಿನರೀತಿ ಇವೆಲ್ಲವೂ ಮನಸ್ಸಿನಿಂದ ಉಂಟಾಗುತ್ತವೆಯೆಂದು, ಈ ಕೆಲಸಗಳಿಗೆಲ್ಲಾ ಇನ್ನೊಂದು ಹೆಸರು ಮನಸ್ಸು ಎಂದು ಹೇಳಬಹುದು.

(ಈ ವಿಧವಾಗಿ ಆತನು ಅಂದುಕೊಳ್ಳುವುದರಿಂದ ಯಾರಿಗೆ ಏನು ನಷ್ಟಬರುವುದಿಲ್ಲ. ಆದರೆ ಆಧ್ಯಾತ್ಮಿಕ ವಿಷಯಗಳಲ್ಲಿ ಮನಸ್ಸಿನ ಬಗ್ಗೆ ತಿಳಿಯದೆಹೋದರೆ ತಪ್ಪುದಾರಿ ಹಿಡಿಯುವ ಅವಕಾಶವಿದೆ. ಆದ್ದರಿಂದ ನಾವು ಈಗ ಮನಸ್ಸನ್ನು ಕುರಿತು ಸಮೂಲಾಗ್ರವಾಗಿ ತಿಳಿದುಕೊಳ್ಳೋಣ. ಮನಸ್ಸನ್ನು ಕುರಿತು ವಿವರಿಸಿಕೊಳ್ಳುವುದರಿಂದ ಇದನ್ನು ತಿಳಿದು ನಾಸ್ತಿಕರು ಕೂಡಾ ಬದಲಾಗುವುದಕ್ಕೆ ಅವಕಾಶವಿದೆ.)

**ನಾವು :–** ಮನಸ್ಸು ಶರೀರದಲ್ಲಿನ ಅಂತರ್ಗತ ಭಾಗ. ರೂಪವಿದ್ದರೆ ನಾಮ ಇರುತ್ತದೆ, ನಾಮವಿದ್ದರೆ ರೂಪವಿರುತ್ತದೆ ಎಂಬುದು ಸೂತ್ರ. ಮನಸ್ಸಿಗೆ ಅನೇಕ ಹೆಸರುಗಳಿವೆ ಮನಸ್ಸನ್ನು 'ಮದಿ' ಎಂದೂಸಹ ಕರೆಯುತ್ತಿದ್ದಾರೆ. ಅಷ್ಟೇಯಲ್ಲದೆ 'ಮನ್' ಎಂದೂ 'ಮಾನಸಿ' ಎಂದೂ ಮೊದಲಾದ ಹೆಸರುಗಳು ಇವೆ. ನಾಮವಿದ್ದರೆ (ಹೆಸರಿದ್ದರೆ) ರೂಪವಿರುತ್ತದೆ ಎಂಬ ಸೂತ್ರದ ಪ್ರಕಾರ ಶರೀರದಲ್ಲಿನ ಮದಿಗೆ (ಮನಸ್ಸಿಗೆ) ರೂಪವೂ ಸಹಾ ಇದೆ. ಮನಸ್ಸು ಯಾವ ರೂಪದಲ್ಲಿ ಇರುವುದು ಇಲ್ಲಿಯವರೆಗೂ ಯಾರೂ ಹೇಳದಿದ್ದರೂ, ನಮಗೆ ತಿಳಿಯದಿದ್ದರೂ ಹೆಸರಿರುವ ಮನಸ್ಸಿಗೆ ರೂಪ ಸಹಾ ಇದೆ. ಮನಸ್ಸು ಶರೀರದಲ್ಲಿ ಎಚ್ಚರದಲ್ಲಿರುವಾಗ

ಇಂತಹರೂಪದಲ್ಲಿ ಇರುತ್ತದೆಂದು, ನಿದ್ರೆಯಲ್ಲಿ ಇರುವಾಗ ಮತ್ತೊಂದು ರೂಪದೊಳಗೆ ಬದಲಾಗಿರುತ್ತದೆಯೆಂದು ಮೊದಲೇ ಅನೇಕಬಾರಿ ಹೇಳಿಕೊಂಡಿದ್ದೇವೆ. ಇದರಿಂದ ಮನಸ್ಸಿಗೆ ಎರಡು ರೂಪಗಳು ಇವೆಯೆಂದು, ಅವು ನಿದ್ರೆ ಎಚ್ಚರಗಳನ್ನನುಸರಿಸಿ ಬದಲಾಗುತ್ತದೆಂದು ತಿಳಿದುಹೋಗಿದೆ. ರೂಪ, ಹೆಸರಿರುವುದಕ್ಕೆ ಕೆಲಸ (ಕ್ರಿಯೆ) ಕೂಡಾ ಇರುತ್ತದೆ. ದೇವರಿಗೆ ಮಾತ್ರ ಹೆಸರಿಲ್ಲ, ರೂಪವಿಲ್ಲ, ಕ್ರಿಯೆಯಿಲ್ಲ. ದೇವರಿಗೆ ಹೊರತು ಉಳಿದ ಎಲ್ಲದಕ್ಕೂ ರೂಪ, ನಾಮ, ಕ್ರಿಯೆಗಳು ಇವೆಯೆಂದೇ ಹೇಳಬಹುದು. ಮನಸ್ಸಿಗೆ ಹೆಸರಿದೆ ಮತ್ತು ರೂಪವಿದೆ. ಈ ಎರಡೂ ಮನುಷ್ಯರಿಗೆ ತಿಳಿದರೂ, ತಿಳಿಯದಿದ್ದರೂ ಯಾವ ಸಮಸ್ಯೆಯಿಲ್ಲ. ಆದರೆ ಮನಸ್ಸೊಂದರ ಕ್ರಿಯೆ (ಕೆಲಸ) ಏನಾಗಿರುವುದು ತಿಳಿಯದಿರುವುದರಿಂದ ಆಧ್ಯಾತ್ಮಿಕರಂಗದಲ್ಲಿ ಅನೇಕ ಅಡತಡೆಗಳು, ಅಜ್ಞಾನಗಳು ಹುಟ್ಟಿಬರುತ್ತಿವೆ. ಮನುಷ್ಯನ ಜೀವನದಲ್ಲಿ ಶರೀರದಲ್ಲಿ ಮುಖ್ಯಪಾತ್ರ ಪೋಷಿಸುವ ಭಾಗಗಳಲ್ಲಿ ಮನಸ್ಸು ಕೂಡಾ ಒಂದು. ಮನಸ್ಸು ಶರೀರ ಅಂತರಂಗದಲ್ಲಿ ಯಾರಿಗೂ ಕಾಣಿಸದಂತಿದ್ದು ಅನೇಕ ವಿಷಯಗಳಲ್ಲಿ ಮುಖ್ಯಪಾತ್ರವನ್ನು ಪೋಷಿಸುತ್ತಿದ್ದರೂ, ಆಧ್ಯಾತ್ಮಿಕರಂಗದಲ್ಲಿ ಮಾತ್ರ ಮನಸ್ಸು ವಿಶೇಷವಾದಪಾತ್ರವನ್ನು ಪೋಷಿಸುತ್ತಿದೆ. ಆದ್ದರಿಂದ ಮನಸ್ಸು ಎಲ್ಲಾ ವಿಧಗಳಲ್ಲಿ ಶರೀರದಲ್ಲಿ ಮುಖ್ಯ ಭಾಗವಾಗಿ ಇದೆಯೆಂದು ಹೇಳಬಹುದು.

ಮನಸ್ಸಿನ ಬಗ್ಗೆ ತಿಳಿಯಬೇಕೆಂದರೆ ಶರೀರದೊಳಗೆ ಪರಿಶೋಧನೆ ಮಾಡಬೇಕು. ಶರೀರದೊಳಗೆ ಮನಸ್ಸೆಲ್ಲಿದೆಯೋ ತಿಳಿಯದೆ ಪರಿಶೋಧನೆ ಮಾಡುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಮನಸ್ಸನ್ನು ಕುರಿತು ತಿಳಿಯಬೇಕೆಂದು ಕೊಂಡವರು ಕೆಲವರು ಸ್ವಲ್ಪಮಟ್ಟಿಗೆ ಅದರ ಸಮಾಚಾರವನ್ನು ಶೇಕರಿಸಿದರೂ, ಪೂರ್ತಿ ಸಮಾಚಾರವನ್ನು ಶೇಕರಿಸಲಾರದೆ ಹೋಗಿದ್ದಾರೆಂದೇ ಹೇಳಬಹುದು. ಆದ್ದರಿಂದ ಅದರ ರೂಪವನ್ನು ಯಾರೂ ಹೇಳಲಾರದೆಹೋಗಿ ದ್ದಾರೆ. ಹಾಗೆಯೇ ಅದರ ಪೂರ್ತಿ ಕೆಲಸವನ್ನು, ಕೆಲಸದ ವೇಳೆಯನ್ನು ಹೇಳಲಾರದೆಹೋಗಿದ್ದಾರೆ. ಮನಸ್ಸನ್ನು ಕುರಿತು ಏನು ತಿಳಿಯದವರು ಕೂಡಾ ಮನಸ್ಸಿನ ಹೆಸರನ್ನು

ಬಳಸಿಕೊಂಡು ಮಾತನಾಡುತ್ತಿರುತ್ತಾರೆ. ಉದಾಹರಣೆಗೆ ಒಬ್ಬ ಕಾಲೇಜು ಯುವಕನಿಗೆ ಮನಸ್ಸಿನ ಬಗ್ಗೆ ಸ್ವಲ್ಪವೂ ಸಹಾ ತಿಳಿಯದಿದ್ದರೂ, ತಾನು ಪ್ರೀತಿಸಿದ ಯುವತಿಗೆ ಪ್ರೇಮಲೇಖನೆ ಬರೆಯುತ್ತಾ ಅದರಲ್ಲಿ "ನನ್ನ ಮನಸ್ಸು ನಿನಗೆ ಕೊಟ್ಟಿದ್ದೇನೆ, ನನ್ನ ಮನಸ್ಸು ನನ್ನತ್ತಿರ ಇಲ್ಲ, ಅದು ಯಾವಾಗಲೂ ನಿನ್ನ ಸುತ್ತಾ ತಿರುಗುತ್ತಿದೆ, ನೀನು ಇಲ್ಲದಿದ್ದರೆ ನಾನು ಬದುಕಲಾರೆನು. ಆದ್ದರಿಂದ ನನ್ನ ಮನಸ್ಸನ್ನು ಸ್ವೀಕರಿಸಿ ನನ್ನನ್ನು ಪ್ರೀತಿಸು" ಎಂದು ಬರೆದಿದ್ದಾನೆ. ಆ ಪ್ರೇಮಲೇಖನೆಯನ್ನು ನೋಡಿದ ಯುವತಿ ಒಂದು ದಿನ ಆ ಯುವಕನ ಹತ್ತಿರಕ್ಕೆ ಬಂದು, "ನಿನ್ನ ಮನಸ್ಸು ನನಗ್ಯಾವಾಗ ಕೊಟ್ಟಿದ್ದೀಯಾ? ನಿನ್ನ ಮನಸ್ಸು ನಿನ್ನಹತ್ತಿರವಿಲ್ಲದೆ ನನ್ನ ಸುತ್ತಾ ತಿರುಗುತ್ತಾ ಇದೆಯೆಂದು ಹೇಳಿದ್ದೀಯಾ. ನಿನ್ನ ಮನಸ್ಸನ್ನು ಇಲ್ಲಿಯವರೆಗೂ ನಾನ್ಯಾವಾಗಲೂ ನೋಡಲಿಲ್ಲವೇ, ಅದುಹೇಗೆ ಇದೆ? ನಿನ್ನ ಮನಸ್ಸನ್ನು ಸ್ವೀಕರಿಸಿ ನಿನ್ನನ್ನು ಪ್ರೀತಿಸೆಂದು ಬರೆದಿದ್ದೀಯಾ. ಅದೆಲ್ಲಿದೆಯೋ ಹೇಳು ಸ್ವೀಕರಿಸುತ್ತೇನೆ ನಂತರ ಪ್ರೀತಿಸುತ್ತೇನೆ. ನಿನ್ನ ಮನಸ್ಸು ನನಗೆ ಕಾಣಿಸಿದರೆ, ನಾನು ಗುರುತುಹಿಡಿಯುವುದಕ್ಕೆ ಅದು ಬೆಳ್ಳಗಿದೆಯಾ? ಅಥವಾ ಕಪ್ಪಗಿದೆಯಾ?" ಎಂದು ಕೇಳಿದಂತೆ. ಆ ಮಾತುಗಳನ್ನು ಕೇಳಿದ ಯುವಕನು ತಾನು ಏನು ಹೇಳಲಾರದೆ ಹೋಗಿದ್ದಾನಂತೆ. ಈ ವಿಧವಾಗಿ ಕೆಲವರು ಮನಸ್ಸಿನ ಬಗ್ಗೆ ಏನು ತಿಳಿಯದಿದ್ದರೂ ಕವಿಗಳಂತೆ ಅದನ್ನು ವರ್ಣಿಸಿ ಮಾತನಾಡುತ್ತಿರುತ್ತಾರೆ. ಯಾರು ಯಾವ ವಿಧವಾಗಿ ಮಾತನಾಡಿದರೂ ಮನಸ್ಸಿನ ಬಗ್ಗೆ ಸಮಾಚಾರ ಅವರಹತ್ತಿರ ಇರುವುದಿಲ್ಲ.

ಕೆಲವರು ಆಧ್ಯಾತ್ಮಿಕತಜ್ಞರಾದವರು, ಅವರ ಸಾಧನೆಯಲ್ಲಿ ಮನಸ್ಸೊಂದರ ಆತಂಕವನ್ನು ಕಂಡುಹಿಡಿದು ಅದನ್ನು ಜಯಿಸುವುದು ದುರ್ಲಭವೆಂದು ಹೇಳಿದ್ದಾರೆ. ಅಷ್ಟೇಯಲ್ಲದೆ ಮನಸ್ಸು ಎಷ್ಟೋ ಬಲವಾದುದೆಂದು, ಅದನ್ನು ಕೆಲವರು ಆನೆಗೆ ಹೋಲಿಸಿ ಹೇಳಿದಾಗ, ಕೆಲವರು ಮನಸ್ಸು ಅತಿ ಚಂಚಲವಾದುದೆಂದು ಅದನ್ನು ನಾಯಿಗೆ ಹೋಲಿಸಿದ್ದಾರೆ. ಮತ್ತೆಕೆಲವರು ಮನಸ್ಸು ನೀಚವಾದ ಆಲೋಚನೆಗಳನ್ನ ಕೊಡುತ್ತದೆಂದು ಅದನ್ನು ಹಂದಿಗೆ ಹೋಲಿಸಿ ಹೇಳಿದ್ದಾರೆ. ಪೂರ್ವದಲ್ಲಿ

ಬ್ರಹ್ಮಯೋಗಸಾಧನೆ ಮಾಡಿದವರಿಗೆ ಮಾತ್ರ ಮನಸ್ಸೊಂದರ ವಿವರ ಸ್ವಲ್ಪ ತಿಳಿದಿರುತ್ತದೆ. ಆದರೂ ಅವರಿಗೂ ಕೂಡಾ ಅದು ಎಲ್ಲಿದೆಯೆಂದಾಗಲಿ, ಯಾವ ಆಕಾರದಿಂದ ಇದೆಯೆಂದಾಗಲಿ ತಿಳಿಯದು. ಅದರ ಕೆಲಸವನ್ನು ಮಾತ್ರ ಸ್ವಲ್ಪ ತಿಳಿದಿರುತ್ತಾರೆ. ಅಂತಹ ಬ್ರಹ್ಮಯೋಗಿಗಳಿಗೇ ಸಾಧ್ಯವಾಗದ ವಿಷಯವನ್ನು ಒಬ್ಬ ನಾಸ್ತಿಕನು ನನಗೆ ತಿಳಿದಿದೆಯೆಂದು ಹೇಳುವುದೂ, ಶರೀರದಲ್ಲಿ ಮನಸ್ಸು ಮಾಡದ ಕೆಲಸಗಳನ್ನು ಕೂಡಾ ಅದಕ್ಕೆ ಅಂಟಗಟ್ಟುವುದೂ ನಡೆದಿದೆ. ನಿಜಕ್ಕೆ ಆತನು ಹೇಳಿದ ಕೆಲಸಗಳನ್ನು ಮನಸ್ಸು ಕೆಲವನ್ನು ಮಾಡುತ್ತಿಲ್ಲ. ಮನಸ್ಸು ಶರೀರದಲ್ಲಿ ಏನು ಮಾಡುತ್ತಿದೆಯೋ ತಿಳಿಯಬೇಕೆಂದರೆ ಅದಕ್ಕಿಂತ ಮೊದಲು ಮನಸ್ಸು ಏನು ಮಾಡಲಿಲ್ಲವೋ ತಿಳಿದುಕೊಳ್ಳಬೇಕು. ಪೂರ್ವದಲ್ಲಿ ಎಷ್ಟೋಜನ ಮಹಾರ್ಷಿಗಳು ಮನಸ್ಸನ್ನು ಕುರಿತು ಅಧ್ಯಯನಮಾಡಿ ಕೊನೆಗೆ ಅದರ ಕೆಲಸಗಳನ್ನು ಕೆಲವನ್ನು ಮಾತ್ರ ತಿಳಿದಿದ್ದಾರೆ. ಅಷ್ಟುಬಿಟ್ಟರೆ ಮನಸ್ಸಿನ ವಿಷಯದಲ್ಲಿ ಪೂರ್ತಿ ಪುರೋಗತಿ ಸಾಧಿಸದಿರುವಾಗ, ಅದರ ಬಗ್ಗೆ ನಾವು ಹೇಗೆ ತಿಳಿಯಬೇಕು ಎಂಬ ಪ್ರಶ್ನೆ ಕೆಲವರಿಗೆ ಬರುತ್ತದೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ತಿಳಿಯಲಾದರೆ, ಮನಸ್ಸೊಂದರ ಪೂರ್ತಿ ಕಾರ್ಯಗಳನ್ನು ತಿಳಿಯಬಹುದು. ಅಷ್ಟೇಯಲ್ಲದೆ ಮನಸ್ಸೊಂದರ ನಿವಾಸ ಸ್ಥಳವನ್ನೂ, ಅದರ ಆಕಾರವನ್ನು ಕೂಡಾ ತಿಳಿಯ ಬಹುದು. ಬ್ರಹ್ಮವಿದ್ಯಾ ಶಾಸ್ತ್ರಪದ್ಧತಿ ಪ್ರಕಾರ ನನಗೆ ತಿಳಿದ ವಿಷಯವೇನೆಂದರೆ!

ಶರೀರದಲ್ಲಿ ಪ್ರತ್ಯೇಕವಾದ ಕೆಲಸವನ್ನು ಮಾಡುವುದನ್ನು ಪ್ರತ್ಯೇಕ ಭಾಗವಾಗಿ ಗುರುತಿಸುತ್ತಿದ್ದೇವೆ. ಶರೀರ ಕೆಲವು ಭಾಗಗಳ ಬೆರಕೆಯಾಗಿ ಇದೆ. ಅವುಗಳನ್ನು ಅವುಗಳ ಕೆಲಸವನ್ನನುಸರಿಸಿ ವಿಭಜಿಸಬಹುದು. ಶರೀರದಲ್ಲಿನ ಜೀವಾತ್ಮವನ್ನು, ಆತ್ಮವನ್ನು, ಪರಮಾತ್ಮವನ್ನು, ಗುಣಗಳನ್ನು ಒಟ್ಟು ಕಾಲ, ಕರ್ಮ, ಗುಣಚಕ್ರಗಳನ್ನು ಬಿಟ್ಟುನೋಡಿದರೆ ಉಳಿದ ಶರೀರದಲ್ಲಿನ ಭಾಗಗಳು 24 ಇವೆ. ಆತ್ಮಗಳನ್ನು ಗುಣಗಳನ್ನು ಸೇರಿಸಿ ನೋಡಿದರೆ 24+16+3=43 ಭಾಗಗಳು ಇವೆ. ಶರೀರ ಒಟ್ಟು 24 ಭಾಗಗಳಾಗಿ ಹೇಳಿದಾಗ, ಶರೀರದಲ್ಲಿ ತಲೆಯಲ್ಲಿರುವ ನಾಲ್ಕುಚಕ್ರಗಳ ಸಮುದಾಯದಲ್ಲಿ 19 ಭಾಗಗಳು ಇದ್ದಂತೆ

ತಿಳಿಯುತ್ತಿದೆ. ಮನಸ್ಸು ಎಂಬುದು ಶರೀರದಲ್ಲಿನ 24 ಭಾಗದೊಳಗೆ ಲೆಕ್ಕಿಸಲಾಗುತ್ತಿದೆ. ಅಂತಃಕರಣಗಳೆಂದು ಹೆಸರುವಾಸಿಯಾದ ಮನಸ್ಸು, ಬುದ್ಧಿ, ಚಿತ್ತವು, ಅಹಮ್, ಜೀವಾತ್ಮ ಎಂಬ ಐದರಲ್ಲಿ ಮನಸ್ಸು ಹೊರತು ಉಳಿದ ನಾಲ್ಕು ಗುಣಚಕ್ರಗಳಲ್ಲಿ ಇರುವಾಗ, ಮನಸ್ಸು ಮಾತ್ರ ಶರೀರದಲ್ಲಿಯೇ ಲೆಕ್ಕಿಸಲ್ಪಟ್ಟಿದೆ. ಹಾಗೆಂದು ಮನಸ್ಸು ಪೂರ್ತಿಯಾಗಿ ಶರೀರದಲ್ಲಿನ ಭಾಗವೆಂದು ಹೇಳಲಾರೆವು. ಮನುಷ್ಯ ಎಚ್ಚರದಲ್ಲಿ ಶರೀರದಲ್ಲಿ ನಿವಾಸವಿರುವ ಮನಸ್ಸು, ಮನುಷ್ಯ ನಿದ್ರಾವಸ್ಥೆಯಲ್ಲಿ ಇರುವಾಗ ಗುಣಚಕ್ರದಲ್ಲಿ ಸೇರಿ ಬ್ರಹ್ಮನಾಡಿಯಲ್ಲಿ ನಿವಾಸವಿರುತ್ತದೆ. ನಿದ್ರೆಯಲ್ಲಿಯೂ, ಸ್ವಪ್ನದಲ್ಲಿಯೂ ಗುಣಚಕ್ರಕ್ಕೆ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ನಿವಾಸಿಸುತ್ತಿದೆ. ಈ ವಿಧವಾಗಿ ಮನಸ್ಸಿಗೆ ಶರೀರದಲ್ಲಿ ನಿದ್ರೆ, ಸ್ವಪ್ನದಲ್ಲಿದ್ದಾಗ ಬ್ರಹ್ಮನಾಡಿಯಲ್ಲಿಯೂ, ಎಚ್ಚರದಲ್ಲಿದ್ದಾಗ ಶರೀರದಲ್ಲಿಯೂ, ಎರಡು ನಿವಾಸಗಳಿವೆಯೆಂದು ಹೇಳಬಹುದು. ನಾವು ಈಗ ಬಹಳ ಸುಲಭವಾಗಿ ಹೇಳಿಕೊಂಡ ವಿಷಯವನ್ನು ಪೂರ್ವದಲ್ಲಿ ಮನುಷ್ಯರ್‍ಯಾರೂ ತಿಳಿಯಲಾರದೆ ಹೋಗಿದ್ದಾರೆ.

ಈಗ ಮನಸ್ಸಿಗೆ ಶರೀರದಲ್ಲಿ ಎರಡು ನಿವಾಸ ಸ್ಥಳಗಳು ಇವೆಯೆಂದು ತಿಳಿದುಕೊಂಡಿದ್ದೇವೆ. ಶರೀರದಲ್ಲಿ ಎರಡು ನಿವಾಸಗಳು ಇರುವುದು ಒಂದೇವೊಂದು ಮನಸ್ಸು ಮಾತ್ರವೇ ಇದೆ. ಶರೀರದಲ್ಲಿ ಮುಖ್ಯಪಾತ್ರವನ್ನು ಪೋಷಿಸುವ ಮನಸ್ಸಿಗೆ ಪ್ರತ್ಯೇಕಿಸಿ ಎರಡು ನಿವಾಸಗಳು ಇರುವುದಲ್ಲದೆ, ಮನಸ್ಸಿಗೆ ಕೆಲಸಗಳು ಕೂಡಾ ಎರಡು ವಿಧಗಳಿವೆ. ಕೆಲಸಗಳೆ ಅಲ್ಲ ಆಕಾರಗಳು ಕೂಡಾ ಎರಡು ಇವೆ. ಪೂರ್ವದಲ್ಲಿ ಬ್ರಹ್ಮಯೋಗ ಸಾಧಕರಾದವರೂ ಮನಸ್ಸೊಂದರ ಒಂದು ಕೆಲಸವನ್ನು ಮಾತ್ರ ಚೆನ್ನಾಗಿ ಗುರುತಿಸಿದ್ದಾರೆ. ಎರಡನೆ ಕೆಲಸವನ್ನು ಗುರುತಿಸಲಾರದೆಹೋಗಿದ್ದಾರೆ. ಎಲ್ಲಿಯಾದರೂ ಮನಸ್ಸೊಂದರ ಎರಡು ಕೆಲಸಗಳನ್ನು ಗುರುತಿಸಿದವರು ಅಪರೂಪವಾಗಿ ಇರಬಹುದೇನೊ ಆಗಲಿ, ಮನಸ್ಸೊಂದರ ಎರಡು ಆಕಾರಗಳನ್ನೂ, ಮನಸ್ಸೊಂದರ ಎರಡು ನಿವಾಸಗಳನ್ನೂ ಗುರುತಿಸಿದವರು ಯಾರೂ ಇಲ್ಲವೆಂದು ಹೇಳಬಹುದು.

ಮನಸ್ಸೊಂದರ ಎರಡು ಆಕಾರಗಳನ್ನೂ, ಎರಡು ನಿವಾಸಸ್ಥಳಗಳನ್ನು ಕುರಿತು ಬಹಳಕಡೆ ಬಹಳ ಗ್ರಂಥಗಳಲ್ಲಿ ನಾವು ಬರೆಯುವುದು ನಡೆದಿದೆ. ನಮ್ಮ ಬೋಧನೆಗಳಲ್ಲಿ ಹೊರತು ಇನ್ನೆಲ್ಲೂ ಸಹ ಮನಸ್ಸಿಗೆ ಆಕಾರವಿದೆಯೆಂದಾಗಲಿ, ಅದೂ ಎರಡಾಕಾರಗಳೆಂದಾಗಲಿ, ಮನಸ್ಸಿಗೆ ನಿವಾಸ ಸ್ಥಳವಿದೆಯೆಂದಾಗಲಿ, ಅದು ಎರಡು ನಿವಾಸಗಳೆಂದಾಗಲಿ ಯಾರೂ ಹೇಳಲಲಿಲ್ಲವೆಂದು ಜ್ಞಾಪಕವಿಟ್ಟುಕೊಳ್ಳಬೇಕು.

ಈಗ ನಾವು ಮುಖ್ಯವಾಗಿ ಮನಸ್ಸು ಮಾಡುತ್ತಿರುವ ಎರಡು ವಿಧಗಳ ಕೆಲಸಗಳನ್ನು ಕುರಿತು ಹೇಳಿಕೊಳ್ಳಬೇಕಾಗಿದೆ. ಅದರಲ್ಲಿ ಒಂದು ಕೆಲಸವನ್ನು ಕುರಿತು ಹೇಳಿಕೊಳ್ಳೋಣ. ಮನುಷ್ಯ ಹೊರಗಿನ ಕಾರ್ಯಗಳನ್ನು ಮಾಡುವಾಗ, ಕರ್ಮ ಆಚರಣೆ ಇರುವಾಗ ಶರೀರಕ್ಕೆ ಹೊರಗಿರುವ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ ಎಂಬ ಐದು ಜ್ಞಾನೇಂದ್ರಿಯಗಳು ತಿಳಿಸಿದ ಸಮಾಚಾರವನ್ನು ಮನಸ್ಸು ಸ್ವೀಕರಿಸಿ, ಆ ಸಮಾಚಾರವನ್ನು ಒಳಗೆ ಗುಣಚಕ್ರದಲ್ಲಿರುವ ಬುದ್ಧಿಗೆ ಸೇರಿಸುತ್ತದೆ. ಶರೀರವೆಲ್ಲಾ ಅಣುವಣುವಿನಲ್ಲಿ ವ್ಯಾಪಿಸಿರುವ ಮನಸ್ಸು ಐದು ಜ್ಞಾನೇಂದ್ರಿಯಗಳಲ್ಲಿ ಯಾವೊಂದರ ಸಮಾಚಾರವನ್ನಾದರೂ ಒಳಗಿರುವ ಬುದ್ಧಿಗೆ ಸೇರಿಸಿದಾಗ, ಬುದ್ದಿ ಗುಣಗಳನ್ನನುಸರಿಸಿ ಆಲೋಚಿಸಿದಾಗ, ಒಳ್ಳೆಯಗುಣಗಳು ಒಂದುಕಡೆ ಕೆಟ್ಟ ಗುಣಗಳು ಒಂದುಕಡೆ ಹೇಳಿದ ಎರಡು ವಿಧಾನಗಳಲ್ಲಿ ಯಾವುದೊ ಒಂದನ್ನು ಅಲ್ಲಿಯೇ ಇರುವ ಚಿತ್ತವು ನಿರ್ಣಯಿಸಿದಾಗ, ನಿರ್ಣಯಿಸಿದ ವಿಷಯವನ್ನು ಬುದ್ಧಿ ಮನಸ್ಸಿಗೆ ತಿಳಿಸಿದಾಗ, ಮನಸ್ಸು ಒಳಗಿರುವ ಬುದ್ಧಿ ಒದಗಿಸಿದ ಸಮಾಚಾರವನ್ನು ಹೊರಗೆ ಶರೀರಕ್ಕಿರುವ ಕರ್ಮೇಂದ್ರಿಯಗಳಾದ ಕಾಲು, ಕೈಗಳು, ಬಾಯಿ, ಗುದ, ಗುಹ್ಯ ಎನ್ನುವವುಗಳಿಗೆ ತಿಳಿಸಿ ಕಾರ್ಯವನ್ನು ನಡೆಯುವಹಾಗೆ ಮಾಡುತ್ತಿದೆ. ಈ ವಿಧವಾಗಿ ಮನುಷ್ಯ ಎಚ್ಚರದಲ್ಲಿರುವ ಸಮಯದಲ್ಲಿ ಹೊರಗಿನ ಜ್ಞಾನೇಂದ್ರಿಯಗಳು ಕೊಟ್ಟಿರುವ ಸಮಾಚಾರವನ್ನು ಒಳಗೆ ಬುದ್ದಿಗೆ ಸೇರಿಸುತ್ತಿದೆ. ಹಾಗೆಯೇ ಒಳಗಿನ ಬುದ್ದಿ ಒದಗಿಸಿದ ಸಮಾಚಾರವನ್ನು ಹೊರಗಿನ ಕರ್ಮೇಂದ್ರಿಯಗಳು ಒದಗಿಸುತ್ತವೆ.

ಶರೀರವೆಲ್ಲಾ ವ್ಯಾಪಿಸಿರುವ ಮನಸ್ಸು ಶರೀರದಲ್ಲಿನ ಸಮಾಚಾರವನ್ನು ರವಾನೆ ಮಾಡುತ್ತಿದೆ. ಮನುಷ್ಯ ಎಚ್ಚರ ಸಮಯದಲ್ಲಿ ಸಮಾಚಾರವಿರುವಾಗ ಅದನ್ನು ಒಳಗೂ ಹೊರಗೂ ಸೇರಿಸುವ ಕೆಲಸವನ್ನು ಮಾಡುತ್ತಾ, ಕೆಲಸವೇನು ಇಲ್ಲದಿರುವಾಗ, ಮನುಷ್ಯ ಒಂದುಕಡೆ ಕುಳಿತುಕೊಂಡೊ, ಮಲಗಿಕೊಂಡೊ ವಿಶ್ರಾಂತಿ ತೆಗೆದುಕೊಳ್ಳುವಾಗ, ಮನಸ್ಸಿಗೆ ಸಮಾಚಾರವನ್ನು ರವಾನೆ ಮಾಡುವ ಕೆಲಸ ಇರುವುದಿಲ್ಲ. ಅಂತಹ ಸಮಯದಲ್ಲಿ ಗತದಲ್ಲಿ ನಡೆದ ವಿಷಯಗಳೆಲ್ಲವನ್ನು ಜ್ಞಾಪಕ ಇಟ್ಟುಕೊಂಡ ಮನಸ್ಸು, ಆ ವಿಷಯಗಳನ್ನು ಒಂದೊಂದನ್ನು ಜ್ಞಾಪಕತಂದು ಬುದ್ದಿಗೆ ತೋರಿಸುತ್ತಿರುತ್ತದೆ. ಆಗ ಬುದ್ಧಿ ಮನಸ್ಸು ತೋರಿಸಿದ ವಿಷಯಗಳಲ್ಲಿ ಲಗ್ನವಾಗಿಹೋಗುತ್ತಿರುತ್ತದೆ. ಬುದ್ದಿ ಮನಸ್ಸು ನೀಡಿದ ವಿಷಯವನ್ನು ನೋಡುವಸಮಯದಲ್ಲಿಯೇ ಮನಸ್ಸು ಮತ್ತೊಂದು ವಿಷಯವನ್ನು ಕೂಡಾ ಒದಗಿಸುತ್ತದೆ. ಹಾಗೆಯೆ ಮನಸ್ಸು ನೀಡಿದ ಜ್ಞಾಪಕ ವಿಷಯವನ್ನು ಬುದ್ಧಿ ನೋಡುತ್ತಿರುವಷ್ಟುಕಾಲ ಮನಸ್ಸು ವಿಷಯಗಳನ್ನು ಬದಲಿಸಿ ಬದಲಿಸಿ ಬುದ್ಧಿಗೆ ತೋರಿಸುತ್ತಿರುತ್ತದೆ. ಹೀಗೆ ಜ್ಞಾಪಕದ ನಂತರ ಮತ್ತೊಂದು ವಿಷಯ ಜ್ಞಾಪಕವನ್ನು ಬುದ್ಧಿಗೆ ನೀಡುತ್ತದೆ. ಒಂದುವೇಳೆ ಬುದ್ಧಿ ಒಂದೇ ವಿಷಯದಮೇಲೆ ಲಗ್ನವಾದಾಗ ಮನಸ್ಸಿಗೆ ಅದರಲ್ಲಿ ಜ್ಞಾಪಕಮಾಡಿ ತೋರಿಸುವುದು ಏನು ಇಲ್ಲದಿರುವಾಗ, ಹೊಸ ವಿಷಯವನ್ನು ನೀಡುತ್ತದೆ. ಅಲ್ಲಿಗೆ ಬುದ್ಧಿಮುಂದಿರುವ ವಿಷಯ ಇಲ್ಲದಂತೆಹೋಗಿ ಹೊಸ ವಿಷಯದೊಳಗೆ ಬದ್ಧಿಯೊಂದರ ಧ್ಯಾಸ ಮರಳುತ್ತದೆ. ಈ ವಿಧವಾಗಿ ಮನಸ್ಸು ಬುದ್ಧಿಗೆ ವಿಷಯ ಜ್ಞಾಪಕಗಳನ್ನು ಎಡಬಿಡದೆ ಬದಲಿಸಿ ಬದಲಿಸಿ ತೋರಿಸುತ್ತಿರುತ್ತದೆ. ಕೆಲವು ಸಮಯಗಳಲ್ಲಿ ಬುದ್ಧಿ ಈ ಸಮಾಚಾರಗಳು ನನಗೆ ಬೇಡವೆಂದುಕೊಂಡರೂ ಮನಸ್ಸು ಮಾತ್ರ ಸುಮ್ಮನಿರದೆ ಬುದ್ಧಿಮುಂದೆ ವಿಷಯಗಳನ್ನು ಒಂದರನಂತರ ಒಂದನ್ನು ತರುತ್ತಿರುತ್ತದೆ. ಮನಸು ಒದಗಿಸಿದ ವಿಷಯಗಳನ್ನು ನೋಡಲಾರದೆ ಬುದ್ಧಿ ಬಿಸಿಯಾದರೂ ಮನಸ್ಸು ಬಿಡುವುದಿಲ್ಲ. ಮನಸ್ಸು ತನ್ನಿಷ್ಟಕ್ಕೆತಾನು ತನ್ನ ಕೆಲಸವನ್ನು ಬಿಟ್ಟು ಖಾಲಿಯಾಗಿ ಶರೀರದಲ್ಲಿ ಯಾವಾಗಲೂ ಇರುವುದಿಲ್ಲ. ಮನಸ್ಸು ಶರೀರವೆಲ್ಲಾ ವ್ಯಾಪಿಸಿರುವಾಗ ಮೊದಲ ಕೆಲಸವಾದ ಸಮಾಚಾರವನ್ನು ಒಳಗೂ

ಹೊರಗೂ ಸೇರಿಸುವ ಕೆಲಸವನ್ನು ಮಾಡುತ್ತಿರುತ್ತದೆ. ಆ ಕೆಲಸ ಇಲ್ಲದಿರುವಾಗ ತನ್ನ ಎರಡನೆ ಕೆಲಸವಾದ ವಿಷಯ ಜ್ಞಾಪಕಗಳನ್ನು ಬುದ್ಧಿಗೆ ಒದಗಿಸಿರುತ್ತದೆ.

ಯಾವಾಗಾದರೆ ಶರೀರದ ಚರ್ಮದ ಅಂಚುವರೆಗೂ ವ್ಯಾಪಿಸಿರುವ ಮನಸ್ಸು, ಶರೀರವೆಲ್ಲಾ ಇಲ್ಲದೆ ಸ್ವಲ್ಪಸ್ವಲ್ಪವಾಗಿ ಮುಕಳಿಸಿಕೊಂಡು, ಒಂದು ಚಿಕ್ಕ ಬಿಂದುವಿನ ಆಕಾರದೊಳಗೆ ಬದಲಾಗಿಹೋಗುತ್ತದೊ, ಆಗ ತನ್ನ ಎರಡು ಕಾರ್ಯಗಳನ್ನು ಮಾಡುವುದಿಲ್ಲ. ಮನಸ್ಸು ತನ್ನ ಎರಡು ವಿಧಗಳ ಕಾರ್ಯಗಳನ್ನು ಬಿಟ್ಟು ಒಂದು ಬಿಂದುವಾಗಿ ಬದಲಾಗಿಹೋದಾಗ, ಶರೀರದಲ್ಲಿ ಇಲ್ಲದಂತೆ ಗುಣಚಕ್ರಕ್ಕೆ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ಸೇರಿಹೋಗಿ, ಯಾವ ಕೆಲಸಮಾಡದಂತಿರುತ್ತದೆ. ಅದನ್ನೆ ಮನುಷ್ಯನ ನಿದ್ರೆಸ್ಥಿತಿ ಅನ್ನುತ್ತೇವೆ. ನಿದ್ರೆಸ್ಥಿತಿಯಲ್ಲಿ ಮನುಷ್ಯನಲ್ಲಿನ ಮನಸ್ಸು ಬ್ರಹ್ಮನಾಡಿಯಲ್ಲಿ ಕೇಂದ್ರಿಕೃತವಾಗಿ ಒಂದು ಬಿಂದುವಾಗಿದ್ದು ಎರಡು ಕೆಲಸಗಳಲ್ಲಿ ಯಾವ ಕೆಲಸವನ್ನು ಮಾಡುವುದಿಲ್ಲ. ಅಂತಹ ಸಮಯದಲ್ಲಿ ಬುದ್ಧಿಗೆ ಯಾವ ಸಮಾಚಾರವೂ ತಿಳಿಯುವುದಿಲ್ಲ. ಆದ್ದರಿಂದ ಬುದ್ಧಿಗು ಕೂಡ ವಿಶ್ರಾಂತಿ ಲಭಿಸುತ್ತದೆ. ಶರೀರದಲ್ಲಿ ಬುದ್ಧಿ ಪಕ್ಕದಲ್ಲಿಯೇ ಇರುವ ಜೀವಿಯು ಯಾವಾಗಲೂ ಬುದ್ಧಿಗೆ ಸೇರಿದ ವಿಷಯಗಳೆಲ್ಲವನ್ನು ನೋಡಿ ನಗುವುದೊ, ಅಳುವುದೊ ಮಾಡುತ್ತಿರುತ್ತಾನೆ. ಬುದ್ಧಿಗೆ ಸಮಾಚಾರ ಇಲ್ಲದಿರುವುದರಿಂದ, ನಿದ್ರೆಸಮಯದಲ್ಲಿ ಜೀವಿಗೆ ಸುಖದುಃಖಗಳು ಇಲ್ಲದಿರುವುದರಿಂದ, ಜೀವಿಯು ಕೂಡಾ ವಿಶ್ರಾಂತಿ ಹೊಂದುತ್ತಿರುತ್ತಾನೆ. ಬುದ್ಧಿಗು ಜೀವಿಗು ವಿಶ್ರಾಂತಿ ದೊರೆಯಬೇಕೆಂದರೆ ಅದು ಮನಸ್ಸೊಂದರ ಸ್ಥಿತಿಯನ್ನನುಸರಿಸಿ ಇರುತ್ತದೆ. ಕೆಲವರ ಮನಸ್ಸು ಯಾವಾಗಲೂ ಚುರುಕಾಗಿದ್ದು ಸಮಾಚಾರಗಳನ್ನಾಗಲಿ, ಸಮಾಚಾರ ಜ್ಞಾಪಕಗಳನ್ನಾಗಲಿ ಒದಗಿಸಿರುತ್ತದೆ. ಅಂತಹ ಮನಸ್ಸನ್ನು ಶರೀರದಲ್ಲಿನ ಬುದ್ದಿಗು ಅದರಪಕ್ಕದಲ್ಲಿರುವ ಜೀವಿಗು ಸ್ವಲ್ಪವೂ ವಿಶ್ರಾಂತಿ ಇರುವುದಿಲ್ಲ. ಕೆಲವರ ಶರೀರದಲ್ಲಿನ ಮನಸ್ಸು ಹೆಚ್ಚು ಚುರುಕುತನ ಇಲ್ಲದ್ದಾಗಿ, ಹೆಚ್ಚುಕಾಲ ಶರೀರವೆಲ್ಲಾ ಇರದೆ ಬ್ರಹ್ಮನಾಡಿಯಲ್ಲಿ ಸೇರಿಹೋಗಿ ವಿಶ್ರಾಂತಿ ತೆಗೆದುಕೊಳ್ಳುವುದ (ನಿದ್ರೆಹೋಗುವುದ) ರಿಂದ ಆ

ಶರೀರದಲ್ಲಿರುವ ಜೀವಿಯು ಕೂಡಾ ಹೆಚ್ಚಾಗಿ ನಿದ್ರೆಯಲ್ಲಿಯೇ ಕಳೆದಂತಾಗುತ್ತಿದೆ. ಈ ವಿಧವಾಗಿ ಮನಸ್ಸಿಗೆ ಯಾವಾಗ ನಿದ್ರೆಬಂದರೆ, ಆಗ ಬುದ್ಧಿಗು ಜೀವಿಗು ಕೂಡಾ ನಿದ್ರೆಬಂದಂತೆ ಆಗುತ್ತಿದೆ.

ಇಲ್ಲಿ ಎಲ್ಲರಿಗೂ ತಿಳಿಯದ ಮತ್ತೊಂದು ರಹಸ್ಯ ಕೂಡಾ ಒಂದಿದೆ. ಅದೇನೆಂದರೆ! ಮನಸ್ಸು ಕೆಲಸ ಮಾಡದಂತೆ ಬ್ರಹ್ಮನಾಡಿಯೊಳಗೆ ಹೋಗಿ ಒಂದು ಬಿಂದುವಾಗಿ ಇದ್ದಾಗ ಮನಸ್ಸಿಗೆ ಸ್ವಲ್ಪ ಎಚ್ಚರಬಂದು ಸ್ವಲ್ಪ ನಿದ್ರೆಮತ್ತು ಇರುವಾಗ ಬ್ರಹ್ಮನಾಡಿಯಲ್ಲಿಯೇ ಇರುತ್ತಾ ಆ ಮತ್ತಿನಲ್ಲಿಯೇ ಯಾವುದೊ ಒಂದು ವಿಷಯವನ್ನು ಬುದ್ಧಿಗೆ ಒದಗಿಸುತ್ತದೆ. ಹಾಗೆ ಐದು ಅಥವಾ ಹತ್ತು ನಿಮಿಷಗಳಾಗಲಿ, ಅರ್ಧಗಂಟೆ ಅಥವಾ ಗಂಟೆಯವರೆಗಾಗಲಿ ಮನಸ್ಸು ಬ್ರಹ್ಮನಾಡಿಯಲ್ಲಿಯೇ ಇದ್ದು ತನಗೆ ಅಲ್ಲಿ ತಿಳಿದ ಸಮಾಚಾರವನ್ನು ಬುದ್ಧಿಗೆ ತಿಳಿಸಿದಾಗ ಅದನ್ನು ಜೀವಿಯು ಸಹಾ ನೋಡುತ್ತಿರುತ್ತಾನೆ. ಬ್ರಹ್ಮನಾಡಿಯಲ್ಲಿನ ಮನಸ್ಸಿಗೆ ಹೊರಗಿನ ಇಂದ್ರಿಯ ಸಮಾಚಾರಗಳು ಸೇರುವುದಿಲ್ಲ. ಅದು ನಿದ್ದೆಮತ್ತಿನಲ್ಲಿ ಇರುವುದರಿಂದ ಗತ ಜ್ಞಾಪಕಗಳೂ ಸಹಾ ಮನಸ್ಸಿಗೆ ಬರುವುದಿಲ್ಲ. ಹಾಗಿರುವಾಗ ಮನಸ್ಸು ಯಾವ ಸಮಾಚಾರವನ್ನು ಬುದ್ಧಿಗೆ ತೋರಿಸುತ್ತಿದೆ? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಬ್ರಹ್ಮನಾಡಿಯಲ್ಲಿ ಆತ್ಮ ನಿವಾಸವಿದೆ. ಬ್ರಹ್ಮನಾಡಿಯಲ್ಲಿ ಸೇರಿ ನಿದ್ರೆಮತ್ತಿನಲ್ಲಿರುವ ಮನಸ್ಸಿಗೆ ಬ್ರಹ್ಮನಾಡಿಯಲ್ಲಿನ ಆತ್ಮವೇ ಸ್ವತಹವಾಗಿ ಕೆಲವು ವಿಷಯಗಳನ್ನು ತೋರಿಸುತ್ತಿರುತ್ತದೆ. ಆತ್ಮ ಬ್ರಹ್ಮನಾಡಿಯಲ್ಲಿ ಮನಸ್ಸಿಗೆ ತಿಳಿಸುವ ಸಮಾಚಾರ ಕೆಲವುಬಾರಿ ವೇಗವಾಗಿ ನಡೆದಂತಿರುತ್ತದೆ. ಕೆಲವುಬಾರಿ ನಿಧಾನವಾಗಿ ನಡೆದಂತಿರುತ್ತದೆ. ಆತ್ಮ ಚಿತ್ರ ವಿಚಿತ್ರ ಸಮಾಚಾರವನ್ನು ಮನಸ್ಸಿಗೆ ನೀಡಿದಾಗ, ಆ ಸಮಾಚಾರವನ್ನು ಜೀವಿಯು ಕೂಡಾ ನೋಡುತ್ತಾ ಇರುತ್ತಾನೆ. ಹಾಗೆ ತಿಳಿದಿರುವುದೇ ಸ್ವಪ್ನ. ಮನಸ್ಸು ಬ್ರಹ್ಮನಾಡಿಯಲ್ಲಿರುವಾಗ ಮನಸ್ಸಿಗೆ ಆತ್ಮ ತಿಳಿಸುವ ವಿಷಯವನ್ನೆ ಸ್ವಪ್ನ ಎನ್ನುತ್ತೇವೆ. ಸ್ವಪ್ನದಲ್ಲಿ ಬುದ್ಧಿಗೆ ಸೇರುವ ವಿಷಯಗಳು ಜೀವಿಗೆ ತಿಳಿಯುತ್ತಿರುತ್ತವೆ. ಆದಕಾರಣ ಜೀವಿಯು ಎಚ್ಚರದಲ್ಲಿ ಜಾಗ್ರತ್ತಾವಸ್ಥೆ ಯನ್ನು ಅನುಭವಿಸಿದಂತೆಯೆ ಆತ್ಮ ತಿಳಿಸುವ ಸ್ವಪ್ನಾವಸ್ಥೆಯಲ್ಲಿ ಕೂಡಾ ಜೀವಿಗೆ

ಸ್ವಪ್ನದಲ್ಲಿನ ವಿಷಯ ಸುಖದುಃಖಗಳು ತಿಳಿಯುತ್ತಿರುತ್ತದೆ. ಆ ಸಮಯದಲ್ಲಿ ಸ್ವಪ್ನದಲ್ಲಿ ಜೀವಿಯು ಆತ್ಮ ತಿಳಿಸುವ ಹೊಸ ವಿಷಯಗಳಿಂದ ಬರುವ ಹೊಸ ಅನುಭವಗಳನ್ನು ಅನುಭವಿಸುತ್ತಾನೆ. ಆದ್ದರಿಂದ ನಿದ್ರೆಯಲ್ಲಿನ ಸ್ವಪ್ನದಲ್ಲಿ ಅಸಾಧಾರಣ ವಿಷಯಗಳು ಅನುಭವಕ್ಕೆ ಬರುತ್ತವೆ. ಈ ವಿಧವಾಗಿ ಮನಸ್ಸು ನಿದ್ರೆ, ಸ್ವಪ್ನ, ಎಚ್ಚರ ಎಂಬ ಮೂರು ಅವಸ್ಥೆಗಳನ್ನು ಹೊಂದುತ್ತಾ, ಆ ಮೂರು ಅವಸ್ಥೆಯಲ್ಲಿನ ವಿಷಯಗಳನ್ನೆ ಒಳಗೆ ಗುಣಚಕ್ರದಲ್ಲಿರುವ ಬುದ್ಧಿಗೆ, ಜೀವಿಗೆ ತಿಳಿಸುತ್ತದೆ. ಆಗ ಜೀವಿಯು ಆ ಮೂರು ಸ್ಥಿತಿಗಳಲ್ಲಿ ಲಭಿಸಿದವುಗಳನ್ನೆ ಅನುಭವಿಸುತ್ತಾನೆ. ಮನಸ್ಸು ಯಾವಾಗಾದರೆ ಬ್ರಹ್ಮನಾಡಿಯನ್ನು ಬಿಟ್ಟು ಹೊರಗಿನ ಶರೀರದೊಳಗೆ ಬರುತ್ತದೊ ಆಗ ಮನಸ್ಸು ಎಚ್ಚರವಾದಂತೆ ಲೆಕ್ಕಿಸಬೇಕು. ಮನಸ್ಸು ಯಾವಾಗಾದರೆ ಎಚ್ಚರದೊಳಗೆ ಬಂದಿದೆಯೋ, ಆಗ ಮನಸ್ಸು ತನ್ನ ಕೆಲಸವನ್ನು ತಾನು ಮಾಡುವುದಕ್ಕೆ ಪ್ರಾರಂಭಿಸುತ್ತದೆ. ಶರೀರದಲ್ಲಿ ಮನಸ್ಸಿಗೆ ಮಾತ್ರವೇ ನಿದ್ರೆ, ಎಚ್ಚರ, ಸ್ವಪ್ನಗಳಿವೆ. ಬುದ್ಧಿಗಾಗಲಿ, ಜೀವಿಗಾಗಲಿ ನಿದ್ರೆ, ಎಚ್ಚರ, ಸ್ವಪ್ನಗಳು ಇಲ್ಲ. ಮನಸ್ಸು ಒದಗಿಸಿರುವವುಗಳನ್ನು ಬುದ್ಧಿ ತಿಳಿದುಕೊಂಡು, ಬುದ್ಧಿ ಒದಗಿಸಿದವುಗಳನ್ನು ಜೀವಿಯು ಅನುಭವಿಸುತ್ತಿದ್ದಾನೆ. ಮನಸ್ಸಿಗಿರುವ ನಿದ್ರೆ ಎಚ್ಚರಗಳನ್ನು ಜೀವಿಯು ಅಜ್ಞಾನದಿಂದ ತನ್ನವಾಗಿ ಭಾವಿಸಿಕೊಳ್ಳುತ್ತಿದ್ದಾನೆ. ಇಲ್ಲಿಯವರೆಗೂ ಮನಸ್ಸಿಗೆ ಸಂಬಂಧಿಸಿದ ಸಮಾಚಾರ ಸಮೂಲಾಗ್ರವಾಗಿ ಹೇಳುವುದು ನಡೆದಿದೆ.

ಈಗ ಮೇಲಿನ ಪ್ರಶ್ನೆಯಲ್ಲಿ ಮನಸ್ಸಿಗೆ ಇವು ಇವೆಯೆಂದು ಒಬ್ಬ ನಾಸ್ತಿಕವಾದಿ ಹೇಳಿದಮಾತು ನಿಜವೊ ಅಲ್ಲವೊ ನೋಡೋಣ. ನಾಸ್ತಿಕವಾದಿ ತನ್ನಮಾತುಗಳಲ್ಲಿ ನಿರ್ಣಯ ಮನಸ್ಸಿನದೆ ಅಂದಿದ್ದಾನೆ. ಆತನು ಈ ಮಾತನ್ನು ಕುರುಡನಂತೆ ಹೇಳಿರುವುದೇಯಾಗಲಿ, ಪೂರ್ತಿ ತಿಳಿದಾಗಲಿ, ಶಾಸ್ತ್ರಬದ್ಧತೆಯಾಗಿ ಹೇಳಲಿಲ್ಲವೆಂದು ತಿಳಿದುಹೋಗುತ್ತಿದೆ. ಏಕೆಂದರೆ! ಶರೀರದಲ್ಲಿ ಮನಸ್ಸಿಗೆ ನಿರ್ಣಯವನ್ನು ತೆಗೆದುಕೊಳ್ಳುವ ಅಧಿಕಾರವಾಗಲಿ, ಅವಕಾಶವಾಗಲಿ ಇಲ್ಲವೇ ಇಲ್ಲ. ಚಿತ್ತವು ನಿರ್ಣಯಿಸಿದ ವಿಷಯವನ್ನು ಬುದ್ಧಿ ಗ್ರಹಿಸಿ, ಅದನ್ನು ಮನಸ್ಸಿಗೆ ತಿಳಿಸಿದಾಗ, ಮನಸ್ಸು ಹೊರಗಿನ ಶರೀರ ಅವಯವಗಳಿಗೆ ತಿಳಿಸುತ್ತಿದೆ.

ಅಷ್ಟೇಯಾಗಲಿ ಮನಸ್ಸಿಗೆ ಎಂಥಹ ಸಂದರ್ಭದಲ್ಲಿ ಕೂಡಾ ಸ್ವಂತ ನಿರ್ಣಯಗಳು ತೆಗೆದುಕೊಳ್ಳುವ ಅಧಿಕಾರವಾಗಲಿ, ಅವಕಾಶವಾಗಲಿ ಇಲ್ಲವೆಂದು ಹೇಳುತ್ತಿದ್ದೇವೆ. ನಾಸ್ತಿಕವಾದಿ ಮನುಷ್ಯನಿಗಿರುವ ತಿಳುವಳಿಕೆಗಳೆಲ್ಲ ಮನಸ್ಸಿಂದ ಉಂಟಾಗುತ್ತಿವೆ ಯೆಂದು ಹೇಳಿದ್ದಾನೆ. ನಾಸ್ತಿಕವಾದಿಯಾದವನು ಭೌತಿಕಶಾಸ್ತ್ರವನ್ನು ಓದಿ ಎಲ್ಲಾ ನನಗೆ ತಿಳಿದಿದೆ ಎಂಬ ಭ್ರಮೆಯಲ್ಲಿ ಹೇಳಿದಮಾತುಗಳೆಂದು ತಿಳಿಯುತ್ತಿದೆ. ಭೌತಿಕಶಾಸ್ತ್ರವನ್ನು ಓದಿದರೆ ಭೌತಿಕವಾಗಿರುವ ಗುಂಡಿಗೆ, ಪಿತ್ತಕೋಶ(ಲಿವರ್), ಮೂತ್ರಪಿಂಡಗಳನ್ನು ಕುರಿತು ತಿಳಿಯಬಹುದೇನೋ ಆದರೆ, ಕಾಣಿಸಿದ ಮನಸ್ಸನ್ನು ಕುರಿತು ಏನು ತಿಳಿಯದು. ಮನಸ್ಸು ಅಭೌತಿಕಕ್ಕೆ ಸಂಬಂಧಿಸಿರುವುದು. ಆದ್ದರಿಂದ ನಾಸ್ತಿಕವಾದಿಗೆ ಮನಸ್ಸೊಂದರ ಸಾಮರ್ಥ್ಯವೇನೊ ತಿಳಿಯದು. ಆದ್ದರಿಂದ ತಿಳುವಳಿಕೆಗಳು ಮನಸ್ಸಿನದೆಂದು ಹೇಳಿದ್ದಾನೆ. ತಿಳುವಳಿಕೆಗಳು ಬುದ್ಧಿಗಿರುತ್ತವಾಗಲಿ ಮನಸ್ಸಿಗಿರುವುದಿಲ್ಲ. ಮನಸ್ಸಿಗೆ ಎರಡು ಕೆಲಸಗಳು ಹೊರೆತು ಇತರ ಯಾವ ಕೆಲಸಗಳೂ ತಿಳಿಯದು. ಬುದ್ಧಿಯೊಂದರ ಚಾಕಚಕ್ಯವನ್ನು ಅನುಸರಿಸಿ ಮಾತಿನರೀತಿ ಇರುತ್ತದೆ. ಆದರೆ ನಾಸ್ತಿಕವಾದಿಯ ಮಾತಿನರೀತಿ ಕೂಡಾ ಮನಸ್ಸಿನದೇ ಅಂದಿದ್ದಾನೆ. ಆ ಮಾತು ಬಹಳತಪ್ಪು. ಭಾವನೆಗಳು, ಅವೇಶಗಳು ಕೂಡಾ ಮನಸ್ಸಿನವೇಯೆಂದು ಆತನು ಹೇಳುವುದು ನಡೆದಿದೆ. ಆ ಮಾತು ಸಹಾ ಪೂರ್ತಿ ತಪ್ಪಾಗುತ್ತದೆ. ಮನಸ್ಸಿಗೆ ಭಾವಗಳು ಗುಣಗಳಿಂದ ಬರುತ್ತವಾಗಲಿ, ಮನಸ್ಸಿಂದ ಬರುವುದಿಲ್ಲ. ಅವೇಶ ಎಂಬುದು ಕೋಪಗುಣವಾಗುತ್ತದೆ. ಕೋಪ ಗುಣಚಕ್ರದಲ್ಲಿನ 12 ಗುಣಗಳಲ್ಲಿ ಒಂದು ಗುಣವಾಗುತ್ತದೆ. ಮನಸ್ಸಿಗು ಗುಣಕ್ಕು ಯಾವ ಸಂಬಂಧವೂ ಇಲ್ಲ. ಮನಸ್ಸೆಂದರೆ ಏನೊ ತಿಳಿಯದವರು, ಕೆಲವು ಓದುಗಳು ಓದಿ ತಮಗಿಂತ ಮೇಧಾವಿಗಳು, ವಿದ್ಯಾವಂತರಿಲ್ಲ ಎಂಬ ಭಾವನೆಯಿಂದ, ತಮ್ಮ ಸ್ಥಾನಯನ್ನು ತಾವು ಗುರುತಿಸಿಕೊಳ್ಳದೆ, ಎಲ್ಲರಿಗಿಂತ ದೊಡ್ಡವರೆಂದುಕೊಂಡು, ಮನಸ್ಸನ್ನು ಕುರಿತು ಹೇಳಿದ ಮಾತುಗಳು ತಲೆ ಬಾಲ ಇಲ್ಲದಂತೆ ಮಾತನಾಡಿದ ಮಾತುಗಳೆಂದು ಅರ್ಥವಾಗುತ್ತಿದೆ.

ಎಷ್ಟೋ ಶಾಸ್ತ್ರಬದ್ಧವಾಗಿ ಮಾತನಾಡಬೇಕಾದ ಮಾತುಗಳನ್ನು ಯಾವ ಶಾಸ್ತ್ರೀಯತೆಯಾಗಲಿ, ವಿವೇಕವಾಗಲಿ ಇಲ್ಲದಹಾಗೆ ಮಾತನಾಡಿ, ತಮಗೆ

ತಿಳಿದಷ್ಟು ಯಾರಿಗೂ ತಿಳಿಯದೆಂದುಕೊಳ್ಳುವುದು ಈದಿನ ಕೆಲವರಿಗೆ ಅಭ್ಯಾಸವಾಗಿಹೋಗಿದೆ. ಅವರ ದೃಷ್ಟಿಯಲ್ಲಿ ಅವರಷ್ಟಕ್ಕೆ ಅವರು ದೊಡ್ಡ ವಿಜ್ಞಾನಿಗಳೆಂದುಕೊಂಡು, ಉಳಿದವರೆಲ್ಲರನ್ನು ಶಾಸ್ತ್ರ ತಿಳಿಯದವರಾಗಿ ಹೋಲಿಸಿಕೊಳ್ಳುತ್ತಿದ್ದಾರೆ. ಕೊನೆಗೆ ಅವರು ಪೂರ್ತಿಯಾಗಿ ಶಾಸ್ತ್ರವನ್ನು ಬಿಟ್ಟು ಯಾವ ಶಾಸ್ತ್ರೀಯತೆ ಇಲ್ಲದ ಮಾತುಗಳನ್ನು ಮಾತನಾಡುತ್ತಿದ್ದಾರೆ. ಅಂಥಹ ಶಾಸ್ತ್ರೀಯತೆಯಿಲ್ಲದ ಮಾತುಗಳನ್ನು ಆಧಾರ ಮಾಡಿಕೊಂಡು, ದೇವರು ಇಲ್ಲವೆಂದು ಇದ್ದಾನೆಂದು ಯಾರೂ ನಿರೂಪಿಸಲಾರರೆಂದು ಹೇಳುತ್ತಿದ್ದಾರೆ. ದೇವರನ್ನು ಯಾರೂ ನಿರೂಪಿಸಲಾರರೆಂದು ನಾವೂ ಕೂಡಾ ಹೇಳುತ್ತಿದ್ದೇವೆ. ಏಕೆಂದರೆ ದೇವರಿಗೆ ರೂಪವಿಲ್ಲ, ಆತನು ತಿಳಿಯುವಂತೆ ಇದ್ದಾನೆಂದು ನಾವೂ ಸಹಾ ಹೇಳಲಿಲ್ಲ ಅಲ್ಲವೆ! ಯಾರೊ ಏನೊ ಹೇಳಿದರೆ ಅದರಪ್ರಕಾರ ಮಾತನಾಡಿ ನಾವು ನಾಸ್ತಿಕರು, ವಿಜ್ಞಾನಿಗಳು ಎಂದು ಮಾತನಾಡಿದರೆ, ಅವರಿಗೆ ನಾಸ್ತಿಕರೆಂಬ ಹೆಸರು ಸರಿಹೋಗುತ್ತಾದಾಗಲಿ, ಅವರಿಗೆ ವಿಜ್ಞಾನಿಗಳು ಎಂಬ ಹೆಸರು ಸರಿಹೋಗುವುದಿಲ್ಲ. ಅವರನ್ನು ಒಂದುವಿಧ ಅಜ್ಞಾನಿಗಳೆಂದು ಹೇಳಬಹುದು. ವಿಜ್ಞಾನಿಗಳಾದವರು ಏನನ್ನಾದರೂ ಶಾಸ್ತ್ರಬದ್ಧತೆಯಾಗಿ ಮಾತನಾಡುತ್ತಾ ಅದರಲ್ಲಿ ಸತ್ಯವಿರುವಂತೆ ನೋಡಿಕೊಳ್ಳುತ್ತಾರಾಗಲಿ, ತಮಗೆ ಇಷ್ಟಬಂದಂತೆ ಮಾತನಾಡುವುದಿಲ್ಲ. ದೇಶದಲ್ಲಿ ಎಷ್ಟೋಜನ ಅಜ್ಞಾನಿಗಳು ನಾವು ಆಸ್ತಿಕರೆಂದು ಹೇಳಿಕೊಳ್ಳುತ್ತಾ, ಸ್ವಾಮೀಜಿಗಳಾಗಿ ಕಾಣಿಸುತ್ತಾ, ದೇವರನ್ನು ಕುರಿತು ಅವರಿಗೆ ತಿಳಿಯದ ವಿಷಯಗಳನ್ನು ಶಾಸ್ತ್ರ ಆಧಾರ ಇಲ್ಲದೆ ಹೇಳಿದರೆ, ಕೆಲವರು ಅವರ ಬದುಕುಬಾಳಿಗೋಸ್ಕರ ನಾವು ಗುರುಗಳು ನಮಗೆ ದೇವರ ವಿಷಯ ಗೊತ್ತು, ದೇವರು ನಾವು ಹೇಳಿದಂತೆ ಹುಳಿಯಾಗೆ ಬೆಳ್ಳಗೆ ಇದ್ದಾನೆಂದು ಹೇಳಿದರೆ, ಅಂಥವರ ಮಾತುಗಳನ್ನು ಆಧಾರ ಮಾಡಿಕೊಂಡು ಎಲ್ಲರಿಗೂ ಇಲ್ಲಿಯವರೆಗೆ ಗೊತ್ತು ಅವರು ಹೇಳಿದಮಾತುಗಳಲ್ಲಿ ಯಾವ ಶಾಸ್ತ್ರೀಯತೆ ಇಲ್ಲವೆಂದು ಪ್ರಚಾರ ಮಾಡಬಹುದು. ಹಾಗೆ ಹೇಳಿದ ಗುರುಗಳ ಮಾತುಗಳಲ್ಲಿ ಶಾಸ್ತ್ರೀಯತೆ ಇಲ್ಲದಷ್ಟುಮಾತ್ರಕ್ಕೆ ದೇವರನ್ನು ಕುರಿತು ಆದಿಯಲ್ಲಿ ಹೇಳಿದ ಶಾಸ್ತ್ರವನ್ನು ಇಲ್ಲವೆನ್ನುತ್ತೀರಾ? ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ದೇವರನ್ನು ಕುರಿತು ಹೇಳುವವರು

ಇಲ್ಲವೆನ್ನುತ್ತೀರಾ? ನಾಸ್ತಿಕರು, ದೇಶ ವಿಜ್ಞಾನಿಗಳೆಂದುಕೊಳ್ಳುವವರು ಕೆಲವರು ಗುರುಗಳು ಮಾಡುವ ಮೋಸಗಳನ್ನು ಬಹಿರ್ಗತ ಮಾಡಿ ಸಮಾಜಕ್ಕೆ ತೋರಿಸಿ, ದೇವರನ್ನು ಕುರಿತು ಹೇಳುವವರೆಲ್ಲರೂ ಹೀಗೆ ಇರುತ್ತಾರೆನ್ನುವುದು ಅಶಾಸ್ತ್ರೀಯ ವಾದ ಮಾತಾಗುತ್ತದೆ. ದೇವರ ಹೆಸರು ಹೇಳಿ ಮೋಸ ಮಾಡುವ ಬೂಟಕದ ಸ್ವಾಮೀಗಳು, ಗುರುಗಳು ಇದಷ್ಟುಮಾತ್ರಕ್ಕೆ ದೇವರು ಇಲ್ಲದಂತೆ ಹೋಗುತ್ತಿಲ್ಲ. ಹಾಗೆ ದೇವರು ಕಳಂಕನು ಅಲ್ಲ.

ನಾವು ಈ ವಿಧವಾಗಿ ಹೇಳಿದಾಗ ಒಬ್ಬ ವ್ಯಕ್ತಿ ಒಬ್ಬ ಸ್ವಾಮಿಜೀ ವಿಷಯವನ್ನು ಕುರಿತು, ಆ ಸ್ವಾಮಿಜೀ ಕೊಡುತ್ತೇನೆಂದ ದೈವಶಕ್ತಿಯನ್ನು ಕುರಿತು ಎಷ್ಟೋ ಪ್ರಶ್ನೆಗಳನ್ನು ಕೇಳಿದ್ದಾನೆ. ಆತನು ಕೇಳಿದ ಪ್ರಶ್ನೆಗಳಲ್ಲಿ ಒಂದು ಪ್ರಶ್ನೆಯನ್ನು ಕೆಳಗೆ ನೋಡಿರಿ.

**ಪ್ರಶ್ನೆ :–** ಕೆಲವರು ಸ್ವಾಮೀಜಿಗಳು ತಾವು ತಪಶ್ಶಕ್ತಿ ಸಂಪನ್ನರೆಂದು, ತಾನು ಇತರರನ್ನು ತಾಕುವುದರಿಂದ ಅವರೊಳಗೆ ಶಕ್ತಿಪಾತ ನಡೆಯುತ್ತದೆಂದು, ಆಗ ಅವರಿಗೆ ಕೋಟಿವರ್ಷಗಳು ತಪಸ್ಸುಮಾಡಿ ಸಂಪಾದಿಸಿಕೊಂಡ ಶಕ್ತಿಗಿಂತ ಹೆಚ್ಚು ಶಕ್ತಿ ಲಭಿಸುತ್ತದೆಂದು, ಹಾಗೆ ಶಕ್ತಿಪಾತ ನಡೆಯುವುದರಿಂದ ಅವರಿಗಿರುವ ಸಮಸ್ಯಗಳೆಲ್ಲ ತನ್ನ ಶಕ್ತಿಯಿಂದ ನಿರ್ವಾಣೆಯಾಗುತ್ತವೆಂದು, ಹಾಗೆಯೇ ಅವರ ರೋಗಗಳು ಕೂಡಾ ಹೋಗುತ್ತವೆಂದು ಹೇಳುತ್ತಾ, ತಾವು ಶಕ್ತಿಪಾತ ಸ್ವಾಮೀಗಳಾಗಿ ಹೆಸರು ತಂದುಕೊಂಡಿದ್ದಾರೆ. ಹಾಗೆ ತಮ್ಮ ಶಕ್ತಿಯನ್ನು ಇತರರೊಳಗೆ ಕಳಿಸುವುದು ಸಾಧ್ಯವಾ? ಆತನು (ಆ ಸ್ವಾಮಿಯವರು) ಹೇಳಿರುವುದೆಲ್ಲಾ ಸತ್ಯವಾ?

**ಉತ್ತರ :–** ಜಲಪಾತ ಎಂದರೆ ಮೇಲಿರುವ ನೀರು ಅಡ್ಡಿಆತಂಕವಿಲ್ಲದೆ ಕೆಳಗೆ ದೂಕುವುದೆಂದು ಅರ್ಥ. ಶಕ್ತಿಪಾತ ಎಂದರೆ ಮೇಲಿರುವ ಶಕ್ತಿ ಕೆಳಗೆ ದೂಕುವುದೊ, ಹರಡುವುದೊವುದೂ ಎಂದು ಅರ್ಥ. ನೀರೆಂದರೆ ಎಲ್ಲರಿಗೂ ತಿಳಿದಿದೆ ನೀರು ಎತ್ತರದಿಂದ ಕೆಳಗೆ ಬೀಳುತ್ತದೆಂದು ತಿಳಿದಿದೆ. ಹಾಗೆ ಬೀಳುವ ನೀರು ಎಲ್ಲಿಂದ ಬಂದಿದೆಯೋ ಕೂಡಾ ಎಲ್ಲರಿಗೂ ತಿಳಿದಿದೆ. ಆದರೆ ಒಬ್ಬ ಮನುಷ್ಯನಿಂದ (ಒಬ್ಬ ಸ್ವಾಮಿಯಿಂದ) ಮತ್ತೊಬ್ಬ ಮನುಷ್ಯನೊಳಗೆ ಪ್ರವಹಿಸುವ

ಇಲ್ಲವೆ ದೂಕುತ್ತದೆಂಬ ಶಕ್ತಿ ಎಲ್ಲಿನದೆಂಬ ವಿಷಯ ಯಾರಿಗೂ ತಿಳಿಯದು. ಅಷ್ಟೇಯಲ್ಲದೆ ಶಕ್ತಿ ಎಂಬುದು ಇದೆಯಾ? ಇದ್ದರೆ ಅದು ಯಾವ ಶಕ್ತಿ? ಆ ಶಕ್ತಿ ಎಲ್ಲಿಂದ ಹುಟ್ಟಿಬಂದಿದೆ? ಮತ್ತೊಬ್ಬ ಮನುಷ್ಯನೊಳಗೆ ಪ್ರವಹಿಸಿದ ಶಕ್ತಿ ಆ ಮನುಷ್ಯನಲ್ಲಿ ಏನು ಮಾಡುತ್ತದೆ? ಕೊನೆಗೆ ಆ ಶಕ್ತಿ ಸೇರಿದಮನುಷ್ಯನಲ್ಲಿ ಏನಾಗಿಹೋಗುತ್ತದೆ? ಇಷ್ಟು ಪ್ರಶ್ನೆಗಳಿಗೆ ಶಾಸ್ತ್ರಬದ್ಧವಾದ ಉತ್ತರವನ್ನು ಹೊಂದಿದರೆ ಅವರು ಹೇಳಿರುವವೆಲ್ಲ ನಂಬಬೇಕಾಗಿದ್ದೆ. ಒಂದುವೇಳೆ ಶಾಸ್ತ್ರಪದ್ಧತಿ ಯಾದ ಉತ್ತರ ಇಲ್ಲದಿದ್ದರೆ ಅದೆಲ್ಲವೂ ಅಸತ್ಯವೆಂದು ಹೇಳಬೇಕಾಗಿದ್ದೆ. ಒಂದುವೇಳೆ ಕೆಲವು ಪ್ರಶ್ನೆಗಳಿಗೆ ಮಾತ್ರ ಉತ್ತರವಿದ್ದು ಕೆಲವು ಪ್ರಶ್ನೆಗಳಿಗೆ ಉತ್ತರ ಇಲ್ಲದಿದ್ದರೆ ಅದು ಸ್ವಲ್ಪವೇ ಸತ್ಯವೆಂದೂ, ಉಳಿದಿರುವುದು ಅಸತ್ಯವೆಂದೂ ಹೇಳದೆ ತಪ್ಪುವುದಿಲ್ಲ. ನಾವು ಕೂಡಾ ಈ ದಿನ 11.06.2013 ಸೋಮವಾರ ನ್ಯೂಸ್ ಪೇಪರ್‌ನಲ್ಲಿ ಶಕ್ತಿಪಾತ ಎಂಬ ವಾರ್ತೆಯನ್ನು ನೋಡಿದ್ದೇನೆ. ಆದ್ದರಿಂದ ನನಗೆ ತಿಳಿದಮಟ್ಟಿಗೆ ಶಕ್ತಿಯನ್ನು ಕುರಿತು, ಶಕ್ತಿಪಾತವನ್ನು ಕುರಿತು ವಿವರಿಸಬೇಕೆಂದುಕೊಂಡಿದ್ದೇನೆ.

ಹೊರಗಿನ ಸಮಾಜದಲ್ಲಿ ಕೂಲಿಕೆಲಸಕ್ಕೆ ಹೋಗಿ ಕಷ್ಟಪಟ್ಟರೆ ಅದಕ್ಕೆ ತಕ್ಕಾದ ಫಲಿತ (ಕೂಲಿ) ಸ್ವಲ್ಪ ಹಣದರೂಪದಲ್ಲಿ ಬರುತ್ತದೆ. ದಿನಕೂಲಿ ಒಬ್ಬನಿಗೆ 100 ರೂಪಾಯಿಗಳಿದ್ದರೆ, ಅದೇ ಕೆಲಸ ತಿಂಗಳ ಜೀತ (ಸಂಬಳ) ವಾಗಿ 300 ರೂಪಾಯಿಗಳಿರುತ್ತದೆ. ಹಾಗೆ ಅವರು ಅವರು ಮಾಡುವ ಕೆಲಸಗಳನ್ನನುಸರಿಸಿ ಫಲಿತವಿರುತ್ತದೆ. ಕಾಣಿಸುವ ಕೆಲಸಕ್ಕೆ ಕಾಣಿಸುವ ಫಲಿತವಿರುವಂತೆ, ಕಾಣಿಸದ ಫಲಿತವು ಸಹಾ ಇರುತ್ತದೆ. ಒಂದು ಹೊಲದಲ್ಲಿ ಕೂಲಿಕೆಲಸಕ್ಕೆ ಹೋದರೆ ಕೆಲಸಮಾಡಿದವನಿಗೆ ಫಲಿತವನ್ನು ಕಾಣಿಸುವ ಹಣದ ರೂಪವಾಗಿಯೋ, ಧಾನ್ಯರೂಪವಾಗಿಯೋ ಕೊಡುವುದು ಅನವಾಯಿತಿಯಾಗಿದೆ. ಹಾಗೆಯೇ ಒಬ್ಬ ಮನುಷ್ಯ ಯಾವ ಕಾರ್ಯ ಮಾಡಿದರೂ ಅದಕ್ಕೆ ಕಾಣಿಸದ ದೇವರು ಕಾಣಿಸದ ಫಲಿತವನ್ನು ಕೊಡುತ್ತಿದ್ದಾನೆ. ಕಾಣಿಸುವ ಫಲಿತ ಧನವಾಗಿಯೋ, ಧಾನ್ಯ ವಾಗಿಯೋ ಇದ್ದಂತೆ ದೇವರುಕೊಡುವ ಕಾಣಿಸದ ಫಲಿತವೂ ಕೂಡಾ

ಪಾಪಪುಣ್ಯಗಳೆಂಬ ಎರಡು ವಿಧಗಳ ಫಲಿತಗಳಾಗಿದೆ. ಪ್ರಪಂಚ ಕಾರ್ಯಗಳಲ್ಲಿ ಯಾವ ಕೆಲಸದಲ್ಲಾದರೂ, ಯಾರಿಗಾದರೂ ಕಾಣಿಸುವ ಫಲಿತ ಕೆಲವರಿಗೆ ದಿನಕೂಲಿ ಹೆಸರಿನಿಂದ ಹಣದರೂಪದಲ್ಲಿ ಬರುತ್ತಿದೆ. ಕೆಲವರಿಗೆ ತಿಂಗಳಿಗೆ ಸಂಬಳ ಎಂಬ ಹೆಸರಿನಿಂದ ಹಣದ ರೂಪದಲ್ಲಿ ಬರುತ್ತಿದೆ. ಕಾಣಿಸುವ ಫಲಿತ ದಿನಕೂಲಿಯಾಗಾಗಲಿ, ತಿಂಗಳ ಸಂಬಳಕ್ಕಾಗಲಿ ಪಂಚಾಯಿತಿಯಲ್ಲಿ ಪಾರಿಶುದ್ಯ ಉದ್ಯೋಗಿಯಿಂದ ದೇಶಕ್ಕೆ ಪ್ರೆಸಿಡೆಂಟ್‌ವರೆಗೂ ಧನರೂಪದಲ್ಲಿ ಪಡೆಯುತ್ತಿದ್ದಾರೆ. ಆದರೆ ಗ್ರಾಮದಿಂದ ದೇಶ ರಾಜಧಾನಿವರೆಗೂ ಯಾರು ಕೆಲಸ ಮಾಡಿದರೂ ಅವರಿಗೆ ಕಾಣಿಸುವ ಫಲಿತವು ಜೀತದ ರೂಪದಲ್ಲಿಯೇ ಅಲ್ಲದೆ, ಕಾಣಿಸದ ಫಲಿತವು ಕರ್ಮರೂಪದಲ್ಲಿ ಬರುತ್ತಿದೆ. ಈ ವಿಷಯ ಬಹಳಜನರಿಗೆ ತಿಳಿದಿಲ್ಲ.

ಒಂದು ಕಾರ್ಯದಲ್ಲಿ ಕಾಣಿಸುವ ಫಲಿತದ ಮೂಲಕ ಆ ಕೆಲಸವನ್ನು ಮಾಡಿದವನು ತೃಪ್ತಿ ಹೊಂದುತ್ತಿದ್ದಾನೆ. ಅದೇ ಕಾರ್ಯದಲ್ಲಿ ಬಂದಿರುವ ಕಾಣಿಸದ ಫಲಿತವಾದ ಪಾಪಪುಣ್ಯಗಳನ್ನು ಕುರಿತು ಕಾರ್ಯ ಮಾಡಿದವನಿಗೆ ತಿಳಿಯದು. ಆದ್ದರಿಂದ ಪಾಪಪುಣ್ಯಗಳನ್ನು ಕುರಿತು ಯಾರೂ ಹೇಳಿಕೊಳ್ಳುವುದಿಲ್ಲ. ಒಬ್ಬ ಬಾಡಿಗೆ ಹಂತಕನು ಒಂದು ಹತ್ಯೆಯನ್ನು ಮಾಡುವುದಕ್ಕೆ ಕೋಟಿ ರೂಪಾಯಿಗಳಿಗೆ ಒಪ್ಪಿಕೊಂಡಿದ್ದಾನೆ. ಅಡ್ವಾನ್ಸಾಗಿ ಹತ್ತುಲಕ್ಷಗಳು ತೆಗೆದುಕೊಂಡು, ನಿತ್ಯ ಅದೇ ಕೆಲಸವನ್ನು ಮಾಡುವುದಕ್ಕೆ ಕಾದುಕೊಂಡಿದ್ದು, ಒಂದುದಿನ ಎಲ್ಲಾ ಅನುಕೂಲಿಸಿದಾಗ, ಆತನ ಒಪ್ಪಂದದ ಪ್ರಕಾರ ಮನುಷ್ಯನನ್ನು ಹತ್ಯೆಮಾಡುವುದು ನಡೆದಿದೆ. ಹತ್ಯೆ ಮಾಡಿದ ಹಂತಕನು ತನ್ನ ಸ್ನೇಹಿತನಹತ್ತಿರಕ್ಕೆ ಹೋಗಿ "ನನಗೆ ಈ ಹತ್ಯೆಯಲ್ಲಿ ಏನು ಖರ್ಚಾಗಲಿಲ್ಲ. ಅಡ್ವಾನ್ಸು ಹತ್ತು ಲಕ್ಷಗಳು ತೆಗೆದುಕೊಂಡರೂ ಅದರೊಳಗಿನಿಂದ ಪೂರ್ತಿಯಾಗಿ ಐವತ್ತುಸಾವಿರ ಕೂಡಾ ಮುಗಿದುಹೋಗಲಿಲ್ಲ. ನಾನು ಕೆಲಸಕ್ಕೆ ಸಿದ್ದವಾದನಂತರ ನಾಲ್ಕುದಿನಗಳಿಗೇ ಕೆಲಸ ಪೂರ್ತಿಯಾಗಿದೆ. ಅದರಲ್ಲಿಯೂ ಬಹಳ ಸುಲಭವಾಗಿ ನಡೆದುಹೋಗಿದೆ. ಆದ್ದರಿಂದ ಈ ಹತ್ಯಾ ಒಪ್ಪಂದದಲ್ಲಿ ನನಗೆ ಚೆನ್ನಾಗಿ ಲಾಭ ಬಂದಿದೆ. ನಿನಗೆ ನಾನು ಬಾಕೀಯಿರುವ ಲಕ್ಷರೂಪಾಯಿಗಳು ತೆಗೆದುಕೊ" ಎಂದು ಅಂದನಂತೆ. ಇಲ್ಲಿ ಹಂತಕನು ತನಗೆ

ಬಂದಿರುವ ಫಲಿತವನ್ನು ಕುರಿತು ತನ್ನ ಸ್ನೇಹಿತನಿಗೆ ಹೇಳಿದ್ದಾನೆ ಆದರೆ, ತನಗೆ ಬಂದಿರುವ ಪಾಪವನ್ನು (ಕರ್ಮವನ್ನು) ಕುರಿತು ಏನು ಪ್ರಸ್ತಾವಿಸಲಿಲ್ಲ. ಆ ಕಾರ್ಯದಲ್ಲಿ ತನಗೆ ತಿಳಿದ ಫಲಿತ, ಕಾಣಿಸುವ ಫಲಿತ ಹಣ. ಆದ್ದರಿಂದ ಅದನ್ನು ಕುರಿತು ಹೇಳಿದ್ದಾನೆ. ಪಾಪಫಲಿತವು ಕಾಣಿಸುವುದಿಲ್ಲ ಆದ್ದರಿಂದ ಅದನ್ನು ಕುರಿತು ಹೇಳಲಿಲ್ಲ.

ಈ ವಿಧವಾಗಿ ಮನುಷ್ಯ ಯಾವ ಕೆಲಸವನ್ನು ಮಾಡಿದರೂ ಅದರಲ್ಲಿ ಕಾಣಿಸುವ ಫಲಿತವೇ ಅಲ್ಲದೆ, ಕಾಣಿಸದ ಕರ್ಮ ಫಲಿತವೂ ಸಹಾ ಇರುತ್ತದೆ. ನಡೆದ ಕೆಲಸ ಒಳ್ಳೆಯದಾದರೆ ಕಾಣಿಸದ ಫಲಿತವಾಗಿ ಪುಣ್ಯ ಬರುತ್ತದೆ. ಒಂದುವೇಳೆ ಮಾಡಿದ ಕೆಲಸ ಕೆಟ್ಟದಾದರೆ ಅದರ ಫಲಿತವಾಗಿ ಕಾಣಿಸದ ಪಾಪ ಬರುತ್ತದೆ. ಪಾಪಪುಣ್ಯಗಳನ್ನು ಎರಡನ್ನು ಸೇರಿಸಿ ಕರ್ಮ ಅನ್ನುತ್ತೇವೆ. ಆ ವಿಧವಾಗಿ ವರ್ತಮಾನ ಕಾಲದಲ್ಲಿ (ನಡೆಯುತ್ತಿರುವ ಜೀವನದಲ್ಲಿ) ಸಂಪಾದಿಸಿಕೊಂಡ ಕರ್ಮವನ್ನು ಆಗಾಮಿಕರ್ಮ ಅನ್ನುತ್ತೇವೆ. ಇದೆಲ್ಲವನ್ನು ಗಮನಿಸಿದರೆ ಕಾರ್ಯಾಚರಣೆಯಲ್ಲಿ ಯಾರಿಗಾದರೂ ಕಾಣಿಸುವ ಫಲಿತವು ಧನ ಅಥವಾ ಇತರೆ ರೂಪದಲ್ಲಿ ಇರುವಾಗ, ಕಾಣಿಸದ ಫಲಿತವು ಪಾಪಪುಣ್ಯರೂಪದಲ್ಲಿ ಇದೆಯೆಂದು ತಿಳಿಯುತ್ತಿದೆ. ಕಾಣಿಸುವ ಫಲಿತವಾದ ಧನವನ್ನು ಬಚ್ಚಿಡುವುದಕ್ಕೆ ಬ್ಯಾಂಕು ಇದೆ. ಕಾಣಿಸದ ಫಲಿತವನ್ನು ಕುರಿತು ಕಾರ್ಯಮಾಡಿ ಅದನ್ನು ಸಂಪಾದಿಸಿಕೊಂಡವನಿಗೆ ತಿಳಿಯದು. ಆದ್ದರಿಂದ ಆತನು ಅದನ್ನು ಬಚ್ಚಿಡದಿದ್ದರೂ ಅದೇ (ಕರ್ಮವೇ) ಅವನ ತಲೆಯೊಳಗೆ ಸೇರಿ ಅಲ್ಲಿ ನಾಲ್ಕು ಚಕ್ರಗಳ ಸಮುದಾಯದಲ್ಲಿ ಕೆಳಗಿನಿಂದ ಎರಡನೆ ಚಕ್ರವಾಗಿ ಹೇಳಲಾಗುತ್ತಿರುವ ಕರ್ಮಚಕ್ರದಲ್ಲಿ ಸೇರಿಹೋಗುತ್ತಿದೆ. ಇದೆಲ್ಲವೂ ಒಂದು ಕಾರ್ಯದ ಬಗ್ಗೆ ನಡೆಯುವ ವಿಧಾನ.

ಈ ಪ್ರಪಂಚವೆಲ್ಲವೂ ಪ್ರಕೃತಿ ಮತ್ತು ಪರಮಾತ್ಮರಿಂದ ಸೃಷ್ಟಿಸಲ್ಪಟ್ಟಿದೆ. ಪರಮಾತ್ಮ ಸೃಷ್ಟಿಕರ್ತನಾದರೆ ಆತನಿಗೆ ಸಹಕರಿಸುವುದು ಪ್ರಕೃತಿಯೆಂದು ಗೀತೆಯಲ್ಲಿ ತಿಳಿದುಹೋಗಿದೆ. ಪ್ರಕೃತಿ ಕಾಣಿಸುತ್ತಿದೆ. ಪರಮಾತ್ಮ ಕಾಣಿಸುವುದಿಲ್ಲ, ಆತನು

ಕಾಣಿಸುವವನು ಅಲ್ಲ. ಈ ವಿಶ್ವವೆಲ್ಲವೂ ಕಾಣಿಸುವ ಆಕೃತಿಯಾಗಿ ಪ್ರಕೃತಿ ಇರುವಾಗ, ಕಾಣಿಸದ ಪರಮಾತ್ಮ ಪ್ರಕೃತಿಯೆಲ್ಲವೂ ಆವಹಿಸಿ ಪ್ರಕೃತಿಗೆ ಶಕ್ತಿಕೊಡುತ್ತಿದ್ದಾನೆ. ಈ ವಿಧವಾಗಿ ಸೃಷ್ಟಿ ಎರಡು ಭಾಗಗಳಾಗಿದೆ. ಪರಮಾತ್ಮ ಪ್ರಕೃತಿ ಎಂಬ ಎರಡು ಭಾಗಗಳಿಂದ ಏರ್ಪಟ್ಟ ಸೃಷ್ಟಿಯಲ್ಲಿ ನಡೆಯುವ ಕಾರ್ಯಗಳನ್ನು ಕೂಡಾ ಎರಡು ವಿಧಗಳಾಗಿ ವಿಭಜಿಸಬಹುದು. ಅವುಗಳನ್ನು ಪ್ರಕೃತಿ ಕಾರ್ಯಗಳೆಂದು, ಪರಮಾತ್ಮ ಕಾರ್ಯಗಳೆಂದು ಹೇಳಬಹುದು. ಮನುಷ್ಯ ತನ್ನ ಜೀವನದಲ್ಲಿ ತನ್ನ ಜೀವನೋಪಾಯಕ್ಕಾಗಿ ಮಾಡುವ ಕೆಲಸಗಳನ್ನೆಲ್ಲ, ಪ್ರಕೃತಿ ಕೆಲಸಗಳೆಂದು ಹೇಳಬಹುದು. ನೂರಕ್ಕೆ 99.9 ರಷ್ಟು ಜನರಿಗೆ ದೈವಜ್ಞಾನ (ಪರಮಾತ್ಮ ಜ್ಞಾನ) ತಿಳಿಯದು, ಆದ್ದರಿಂದ ಅವರೆಲ್ಲರೂ ತಾವು ಜೀವಿಸುವುದಕ್ಕೆ ಪ್ರಕೃತಿಯೊಂದರ ಕಾರ್ಯಗಳನ್ನೇ ಮಾಡುತ್ತಿರುತ್ತಾರೆ. ದೈವಜ್ಞಾನವನ್ನು ತಿಳಿದವರು ಶೇ.0.1 ರಷ್ಟು ಸಹಾ ಅಪರೂಪವಾಗಿ ಇದ್ದಾರೆ. ಆದ್ದರಿಂದ ಯಾರೋ ಪರಮಾತ್ಮ ಜ್ಞಾನದ ಮೇಲೆ ಆಸಕ್ತಿ ಇರುವವರು ಮಾತ್ರವೇ ದೈವವನ್ನು ತಿಳಿಯುವುದಕ್ಕೋಸ್ಕರ ಆಚರಿಸುವ ಕೆಲಸಗಳನ್ನು ದೈವಕಾರ್ಯಗಳೆಂದು ಹೇಳುತ್ತಿದ್ದೇವೆ. ಪ್ರಕೃತಿ ಕಾರ್ಯಗಳನ್ನು ಮಾಡುವವರಿಗೆ ಬರುವ ಫಲಿತ ಕಾಣಿಸುವ ಮತ್ತು ಕಾಣಿಸದ ಎರಡು ವಿಧಗಳೆಂದು ಹೇಳಿಕೊಂಡಿದ್ದೇವೆ. ತನಗೋಸ್ಕರವಾಗಲಿ, ಇತರರಿಗೋಸ್ಕ ರವಾಗಲಿ. ದೈವಸಂಬಂಧ ಇಲ್ಲದಂತೆ ಮಾಡುವ ಕಾರ್ಯಗಳೆಲ್ಲ ಪ್ರಪಂಚ ಕಾರ್ಯಗಳಾಗುತ್ತವೆ. ಆ ಕಾರ್ಯಗಳಲ್ಲಿಯೇ ಸ್ಥೂಲಧನವಾಗಲಿ, ಸೂಕ್ಷ್ಮಕರ್ಮ ವಾಗಲಿ ಬರುತ್ತದೆಂದು ಹೇಳಿಕೊಂಡಿದ್ದೇವೆ. ಕಾರ್ಯದಿಂದ ಬರುವ ಸ್ಥೂಲಧನ ವನ್ನು ಮನುಷ್ಯ ತನಗೆ ತಿಳಿದು ಎಲ್ಲಿಯಾದರೂ ಬಚ್ಚಿಡಬಹುದು. ಆದರೆ ಸೂಕ್ಷ್ಮವಾಗಿ ಕಾಣಿಸದೆ ಬರುವ ಕರ್ಮವನ್ನು ಮನುಷ್ಯ ಬಚ್ಚಿಡದಿದ್ದರೂ ಅದಷ್ಟಕ್ಕದೇ ತಲೆಯಲ್ಲಿನ ಕರ್ಮಚಕ್ರದಲ್ಲಿ ಸೇರಿ ನೆಲೆಯಿರುತ್ತದೆ. ಇದೆಲ್ಲವೂ ಪ್ರಕೃತಿ ಕಾರ್ಯಗಳ ವಿಷಯಗಳಲ್ಲಿ ಮಾಡಿಕೊಂಡ ಸಮಾಚಾರವೆಂದು ತಿಳಿಯಬೇಕು.

ಪರಮಾತ್ಮನನ್ನು ಸೇರುವುದಕ್ಕೆ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ಆತ್ಮಜ್ಞಾನವನ್ನು ತಿಳಿಯುವುದಕ್ಕೆ ಜೀವಾತ್ಮ ದೈವಸಂಬಂಧ, ಯೋಗಸಂಬಂಧ,

ಆತ್ಮ ಸಂಬಂಧ, ಮಾಯಸಂಬಂಧ ಜ್ಞಾನಗಳೆಲ್ಲವೂ ತಿಳಿಯಬೇಕು. ದೈವಿಕವಾದ ಜ್ಞಾನ ತಿಳಿಯುವುದಕ್ಕೆ ಎಷ್ಟೋ ಕೆಲಸಗಳನ್ನು, ಎಷ್ಟೋ ಕಾಲ ಮಾಡಬೇಕಾಗಿದೆ. ಹಾಗೆ ದೈವಸಂಬಂಧ ಕಾರ್ಯಗಳನ್ನು ಮಾಡಿದಾಗ, ಆ ಕಾರ್ಯಗಳಿಗೂ ಸಹಾ ಫಲಿತ ಬರುತ್ತದಲ್ಲವೆ! ಆ ಫಲಿತ ಕೂಡಾ ಸೂಕ್ಷ್ಮವಾದುದಾಗಿ, ಕಣ್ಣಿಗೆ ಕಾಣಿಸದ್ದಾಗಿರುತ್ತದೆ. ಕಣ್ಣಿಗೆ ಕಾಣಿಸದ ಕರ್ಮ ಫಲಿತದಂತೆ ಪಾಪಪುಣ್ಯ ಎಂಬ ಎರಡು ಭಾಗಗಳಂತೆ ಅಲ್ಲದೆ ಪ್ರತ್ಯೇಕವಾಗಿರುತ್ತದೆ. ದೈವಕಾರ್ಯಗಳಲ್ಲಿ ಬರುವ ಫಲಿತವನ್ನು ಜ್ಞಾನಶಕ್ತಿ ಅನ್ನುತ್ತೇವೆ. ಅದನ್ನೇ ಜ್ಞಾನಾಗ್ನಿ ಎಂದೂ ಸಹಾ ಭಗವದ್ಗೀತೆಯಲ್ಲಿ ಹೇಳುವುದು ನಡೆದಿದೆ. ಅದನ್ನೆ ಮತ್ತೊಂದು ಹೆಸರಿನಲ್ಲಿ ದೈವಶಕ್ತಿ ಎಂದೂ ಸಹಾ  ಅಂದಿದ್ದಾರೆ. ದೇವರಿಗೋಸ್ಕರ ಎಂದು ಹೆಸರಿಟ್ಟು ಮಾಡುವ ಪ್ರಕೃತಿ ಕಾರ್ಯಗಳಲ್ಲಿ ಕೂಡಾ ಶಕ್ತಿಬರುತ್ತದೆ. ಆದರೆ ಅದು ಪೂರ್ತಿ ದೇವರ ಕಾರ್ಯ ಅಲ್ಲದಿರುವುದರಿಂದ ಬಂದಿರುವ ಶಕ್ತಿ ದೈವಶಕ್ತಿ ಅಲ್ಲ. ದೈವ ಸಂಬಂಧ ಕಾರ್ಯಗಳು ದೇವರ ಧರ್ಮಗಳಿಂದ ಕೂಡಿಕೊಂಡಿರುತ್ತವೆ. ಹಾಗೆಯೇ ಕೆಲವರು ದೈವಸಂಬಂಧ ಕಾರ್ಯಗಳೆಂದು ನಂಬಿ ಅಧರ್ಮಗಳಿಂದ ಕೂಡಿದ ಕಾರ್ಯಗಳನ್ನು ಮಾಡಿದರೂ ಅವರಿಗೆ ಶಕ್ತಿ ಲಭಿಸುತ್ತಿದೆ. ಆದರೆ ಅದು ದೈವಕ್ಕೆ ಸಂಬಂಧಿಸಿರುವುದಲ್ಲದೆ ಬೇರೆಶಕ್ತಿಯಾಗಿರುತ್ತದೆ. ದೇವರ ಶಕ್ತಿಗೆ ಸಂಬಂಧಿಸಿದ ಧರ್ಮಗಳು ಮೂರು ಇರುವಾಗ, ಅಧರ್ಮಗಳು ನಾಲ್ಕುಇವೆ. ದೇವರ ಧರ್ಮಗಳು ಮೂರೂ ಮೂರು ಯೋಗಗಳ ರೂಪದಲ್ಲಿ ಇರುವಾಗ, ಧರ್ಮಗಳಿಗೆ ವಿರುದ್ಧದಿಕ್ಕಿನಲ್ಲಿರುವ ನಾಲ್ಕು ಅಧರ್ಮಗಳು ನಾಲ್ಕು ಆರಾಧನೆಗಳ ರೂಪದಲ್ಲಿ ಇವೆ. ದೇವರ ಧರ್ಮಗಳು ಕ್ರಮವಾಗಿ ಕರ್ಮ, ಬ್ರಹ್ಮ, ಭಕ್ತಿಯೋಗಗಳಾಗಿದ್ದು, ಅಧರ್ಮಗಳು ವೇದಾಧ್ಯಯನ, ಯಜ್ಞ, ದಾನ, ತಪಸ್ಸುಗಳಾಗಿವೆ. ದೈವ ಧರ್ಮಗಳಾದ ಮೂರು ಯೋಗಗಳಲ್ಲಿ ಲಭಿಸುವ ದೈವಶಕ್ತಿ ಮನುಷ್ಯನ ಕರ್ಮವನ್ನು ನಾಶಮಾಡಿ ಮೋಕ್ಷವನ್ನು ಸೇರಿಸುವುದಾಗಿ ಇರುತ್ತದೆ. ಉಳಿದ ನಾಲ್ಕು ಅಧರ್ಮಗಳಿಂದ ಬರುವಶಕ್ತಿ ಪ್ರಕೃತಿ ಶಕ್ತಿಯಾಗಿದ್ದು, ಅದು ಅವರು ಆಚರಿಸುವ ಆಚರಣೆಯನ್ನನುಸರಿಸಿ ಲಭಿಸುತ್ತದೆ. ಯಜ್ಞಗಳು ಮಾಡಿದರೆ ಯಜ್ಞಶಕ್ತಿ, ತಪಸ್ಸು ಮಾಡಿದರೆ ತಪಶ್ಶಕ್ತಿ, ದಾನಗಳಿಂದ ದಾನ ಶಕ್ತಿ,

ವೇದಾಧ್ಯಯನದಿಂದ ಆಧ್ಯಾಯನ ಶಕ್ತಿ ಬರುತ್ತದಾಗಲಿ ಅದು ಬಹಳ ಕಡಿಮೆಶಕ್ತಿಯಾಗಿರುತ್ತದೆ. ಯಜ್ಞಗಳಿಂದ ಬರುವ ಶಕ್ತಿ ದಾನಗಳ ವೇದಾಧ್ಯನಗಳಿಂದ ಬರುವ ಶಕ್ತಿಗಿಂತ ಸ್ವಲ್ಪ ದೊಡ್ಡದಾಗಿರುತ್ತದೆ. ತಪಸ್ಸುನಿಂದ ಬರುವಶಕ್ತಿ ಯಜ್ಞಗಳಿಂದ ಬರುವ ಶಕ್ತಿಗಿಂತ, ಹೆಚ್ಚು ಬಲಹೊಂದಿದ ಶಕ್ತಿಯಾಗಿರುತ್ತದೆ. ತಪೋಶಕ್ತಿ, ಯಜ್ಞಶಕ್ತಿ, ದಾನಶಕ್ತಿ ಅಧ್ಯಾಯನ ಶಕ್ತಿಗಳು ಯಾವು ದೈವಶಕ್ತಿಗೆ ಸಮಾನವಲ್ಲ.

ನಾಲ್ಕು ಅಧರ್ಮಗಳಿಂದ ಬರುವಶಕ್ತಿ ನಾಲ್ಕು ವಿಧಗಳು ಇರುತ್ತದೆ. ಅಧರ್ಮಗಳ ಕಾರ್ಯಗಳಿಂದ ಫಲಿತ ಬಂದರೂ, ಅದು ಕರ್ಮಗಳನ್ನು ನಾಶಮಾಡುವುದಾಗಿರುತ್ತದೆ. ಮೂರು ಧರ್ಮಗಳಾದ ಧರ್ಮಕಾರ್ಯಗಳಲ್ಲಿ ಅಂದರೆ ಯೋಗಕಾರ್ಯಗಳಲ್ಲಿ ಬರುವಶಕ್ತಿ ಕರ್ಮವನ್ನು ಸುಟ್ಟುಹಾಕುವು ದಾಗಿರುತ್ತದೆ. ಈ ದಿನ ಬಹಳಜನ ಸ್ವಾಮೀಜಿಗಳಾಗಿ, ಗುರುಗಳಾಗಿ, ಬಾಬಾಗಳಾಗಿ ಇರುವವರೂ, ಉಳಿದವರು ಎಲ್ಲರೂ ದೇವರ ಧರ್ಮಗಳ್ಯಾವೊ ತಿಳಿಯದೆ ಅಧರ್ಮಗಳನ್ನು ಧರ್ಮಗಳೆಂದು ನಂಬಿ ಅವುಗಳನ್ನೇ ಆಚರಿಸುತ್ತಾ, ತಮ್ಮದು ಒಳ್ಳೆಯಮಾರ್ಗವೆಂದು ತಿಳಿಯುತ್ತಿದ್ದಾರೆ. ನಾಲ್ಕು ಅಧರ್ಮಕಾರ್ಯಗಳೆ ಈದಿನ ಧರ್ಮಗಳಾಗಿ ಪ್ರಚಾರವಾಗಿಹೋಗಿವೆ. ಅವುಗಳನ್ನೇ ಧರ್ಮಗಳೆಂದು ಎಲ್ಲರೂ ಆಚರಿಸುತ್ತಾ ಅಸಲಾದ ಧರ್ಮಗಳನ್ನು ಮರೆತುಹೋಗಿದ್ದಾರೆ. ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು, ಅಧರ್ಮಗಳ ಸ್ಥಾನದಲ್ಲಿ ಧರ್ಮಗಳು ಸೇರಿಹೋಗಿವೆ. ಆದ್ದರಿಂದ ಈ ದಿನ ಭಕ್ತಿ, ಜ್ಞಾನ ಎನ್ನುವವರಾಗಲಿ, ಸ್ವಾಮಿ ಗುರುಗಳು ಎನ್ನುವವರಾಗಲಿ ಹೆಚ್ಚಾಗಿ ನಾಲ್ಕು ಅಧರ್ಮಗಳಲ್ಲಿ ತಪಸ್ಸು ಎಂಬುವುದನ್ನೇ ಧ್ಯಾನ ಎಂದು ತಪೋಸಾಧನೆ ಎಂದು, ಮೆಡಿಟೇಷನ್ ಎಂದು ಅನೇಕ ವಿಧಗಳ ಹೆಸರುಗಳಿಂದ ಧ್ಯಾನಸಾಧನೆ ಮಾಡುತ್ತಿದ್ದಾರೆ. ಹಾಗೆ ಮಾಡುವುದರಿಂದ ಅವರು ತಪಸ್ಸು ಮಾಡಿದಂತಾಗುತ್ತಿದೆ. ಆದ್ದರಿಂದ ಅವರಿಗೆ ತಪೋಶಕ್ತಿ ಬರುತ್ತಿದೆ. ಧ್ಯಾನ ದೊಡ್ಡವಾದುದೆಂದು ಅಂದುಕೊಂಡರೂ ಅದರಿಂದ ದೈವಶಕ್ತಿ ಬರುತ್ತಿಲ್ಲ. ಧ್ಯಾನಮಾಡುವುದರಿಂದ ಸ್ವಲ್ಪಮಟ್ಟಿನ ತಪೋಶಕ್ತಿ ಲಭಿಸಿದಂತೆ ಅರ್ಥವಾದವರು

ತಾವು ಭೂಮಿಮೇಲೆ ದೊಡ್ಡವರೆಂದು, ತಾವು ದೇವರಿಗೆ ಸಮಾನವೆಂದು, ದೊಡ್ಡ ಗುರುಗಳೆಂದು, ದೊಡ್ಡ ಸ್ವಾಮಿಗಳೆಂದು ಪ್ರಚಾರ ಮಾಡಿಕೊಳ್ಳುವುದು ಪರಂಪರೆಯಾಗಿದೆ. ಅಂತಹವರನ್ನು ಕುರಿತು ದೊಡ್ಡ ಸ್ವಾಮೀಜಿಗಳೆಂದು ಪ್ರಚಾರ ಮಾಡುವುದು ಅವರ ಶಿಷ್ಯರಿಗೆ ಅಭ್ಯಾಸವಾಗಿದೆ.

ಅಂತಹ ಸ್ವಾಮೀಜಿಗಳಲ್ಲಿ ಕೆಲವರು ತಮಗೆ ಶಕ್ತಿ ಇದೆಯೆಂದು, ಆ ಶಕ್ತಿಯನ್ನು ನಿಮಗೆ ಕೊಡುತ್ತೇವೆಂದು ಹೇಳುತ್ತಿರುತ್ತಾರೆ. ಹಾಗೆ ತಮ್ಮ ಶಕ್ತಿಯನ್ನು ಕುರಿತು ಹೇಳಿಕೊಂಡು ಆಧ್ಯಾತ್ಮಿಕವನ್ನು ವ್ಯಾಪಾರವೃತ್ತಿಯಾಗಿ ಬದಲಿಸುವವರು ಸಹಾ ಇದ್ದಾರೆ. ಒಂದುವೇಳೆ ಅಂಥವರಹತ್ತಿರ ಶಕ್ತಿ ಇದ್ದರೆ ತಪೋಶಕ್ತಿ ಹೊರತು ಮತ್ತೊಂದು ಇರುವುದಿಲ್ಲ. ಆ ಶಕ್ತಿಯಿಂದ ಪ್ರಪಂಚ ಕೆಲಸಗಳು ನೇರವೇರಬಹುದು ಆದರೆ, ಕರ್ಮಗಳು ನಾಶವಾಗುವುದಿಲ್ಲ. ಧ್ಯಾನ ಮಾಡದೆ ಯೋಗವಾಚರಿಸಿದ ಯೋಗಿಗಳು ಯೋಗಶಕ್ತಿಯನ್ನು ಹೊಂದಿರುತ್ತಾರೆ. ಯೋಗಶಕ್ತಿಯನ್ನು ದೈವಶಕ್ತಿ ಎಂದೂ, ಜ್ಞಾನಶಕ್ತಿ ಎಂದೂ ಹೇಳಬಹುದು. ದೈವಶಕ್ತಿ ಯೋಗಿಯಲ್ಲಿ ಸೇರಿ ಆತನ ಶಿರಸ್ಸಿನಲ್ಲಿನ ಬ್ರಹ್ಮನಾಡಿಯಲ್ಲಿ ಸೇರಿರುತ್ತದೆ. ದೈವ ಜ್ಞಾನ ತಿಳಿದು ಧರ್ಮಗಳ ಪ್ರಕಾರ ಯೋಗವಾಚರಿಸಿದ ವರು ಯೋಗಶಕ್ತಿಯನ್ನು ಇತರರಿಗೆ ದಾನ ಮಾಡುವುದಿಲ್ಲ. ಹಾಗೆ ದಾನ ಮಾಡುವುದು ಅಧರ್ಮವಾಗುತ್ತದೆ. ಆದ್ದರಿಂದ ದೈವಶಕ್ತಿಯನ್ನು ದಾನ ಮಾಡುವುದಿಲ್ಲ. ಪೂರ್ವದಲ್ಲಿ ದೊಡ್ಡ ಯೋಗಿಗಳಾದವರು ದೈವಶಕ್ತಿಗೆ ಕರ್ಮಗಳನ್ನು ಸುಡುವ ಸಾಮರ್ಥ್ಯ ಇದೆಯೆಂದು ಹೇಳಿದ ಭಗವದ್ಗೀತೆ ಮಾತು ಸತ್ಯವಾದುದೆಂದು ಆಧಾರ ತೋರಿಸುವುದಕ್ಕೆ, ತಮ್ಮ ಜೀವನದಲ್ಲಿ ಯಾವುದೊ ಒಂದು ಸಂದರ್ಭದಲ್ಲಿ ತಾವು ಸ್ವತಃವಾಗಿ ಇತರರ ಕರ್ಮಮೇಲೆ ಶಕ್ತಿಯನ್ನು ಉಪಯೋಗಿಸಿ, ಅವರಕರ್ಮವನ್ನು ಸುಟ್ಟುಹಾಕಿದವರು ಇದ್ದಾರೆ. ಅದೂ ಅವರ ಜೀವನದಲ್ಲಿ ಯಾವುದೊ ಒಂದುಬಾರಿ ನಿರೂಪಿಸುವುದಕ್ಕಾಗಿ ಮಾಡಿರುವುದು ಹೊರೆತು ನಂತರ ಇನ್ನೆಂದಿಗೂ ಅವರು ಮಾಡಲಿಲ್ಲವೆಂದು ಚರಿತ್ರೆಯಲ್ಲಿ ತಿಳಿಯುತ್ತಿದೆ. ಬೈಬಲ್‌ನಲ್ಲಿ ಏಸು ಒಬ್ಬ ಕುರುಡನಿಗೆ ದೃಷ್ಟಿಬರುವಂತೆ ಮಾಡಿದ್ದಾನೆ. ನಂತರ ಎರಡನೆ

ಕುರುಡನನ್ನು ಎಲ್ಲಿಯೂ ದೃಷ್ಟಿ ಕೊಡಲಿಲ್ಲ. ಹಾಗೆಯೇ ಒಬ್ಬ ಕುಷ್ಟರೋಗಿ ಯೊಂದರ ಪಾಪಗಳನ್ನು ಕ್ಷಮಿಸುತ್ತಿದ್ದೇನೆಂದು ಹೇಳಿ ಆತನನ್ನು ಆ ರೋಗದಿಂದ ವಿಮುಕ್ತನನ್ನು ಮಾಡಿದ್ದಾನೆ ಹೊರತು ಎರಡನೆ ಕುಷ್ಟರೋಗಿಯನ್ನು ಎಲ್ಲಿಯೂ ಗುಣಪಡಿಲಿಲ್ಲ. ಈ ವಿಧವಾಗಿ ಗತ ಚರಿತ್ರೆಯಲ್ಲಿ ಎಷ್ಟೊಜನ ದೊಡ್ಡ ಯೋಗಿಗಳಾದವರು ತಮ್ಮ ಯೋಗಶಕ್ತಿಯಿಂದ ನಿರೂಪಣೆಗೋಸ್ಕರ ಒಂದು ಸಂದರ್ಭದಲ್ಲಿ ಯಾರಿಗೋ ಒಬ್ಬರಿಗೆ ಕರ್ಮವನ್ನು ಸುಟ್ಟುಹಾಕಿ, ಜ್ಞಾನಶಕ್ತಿಗೆ ಇಂಥಹ ಸಾಮರ್ಥ್ಯ ಇದೆಯೆಂದು ತೋರಿಸಿದ್ದಾರೆ. ಹಾಗೆ ತೋರಿಸಿದಾಗ ನೋಡಿದವರು ಅದನ್ನು ಆಧಾರ ಮಾಡಿಕೊಂಡು ದೈವಶಕ್ತಿಗೋಸ್ಕರ ಅವರು ಸಹಾ ಹುಡುಕಾಡುತ್ತಾ ದೈವಮಾರ್ಗದಲ್ಲಿ ಪ್ರಯಾಣಿಸುತ್ತಿದ್ದರು. ಇತರರನ್ನು ದೈವಮಾರ್ಗದೊಳಗೆ ಮರಳಿಸುವುದಕ್ಕೆ ಕೆಲವರು ಯೋಗಿಗಳು ಹಾಗೆ ಮಾಡಿ ತೋರಿಸಿದ್ದಾರೆ. ಹಾಗೆ ಮಾಡಿರುವುದು ಸಾಧಾರಣ ಯೋಗಿಗಳಾದವರು ಅಲ್ಲದೆ ಭಗವಂತನ ಅಂಶದಿಂದ ಕೂಡಿದವರು ಮಾತ್ರವೇ ಹಾಗೆ ಮಾಡಿದ್ದಾರೆ. ಅಜ್ಞಾನಿಗಳನ್ನು ಜ್ಞಾನದಕಡೆ ಮರಳಿಸಿ ದೈವಮಾರ್ಗದಲ್ಲಿ ಪ್ರಯಾಣಿಸುವುದಕ್ಕೆ ಅವರು ಎಲ್ಲಿಯೋ ಒಂದುಕಡೆ ಹಾಗೆ ತಮ್ಮ ಯೋಗಶಕ್ತಿಯಿಂದ ಇತರರ ಕರ್ಮವನ್ನು ಸುಟ್ಟು ತೋರಿಸಿದ್ದಾರೆ.

ಈಗ ಒಬ್ಬ ಸ್ವಾಮೀಜಿ ಶಕ್ತಿಪಾತ ಎಂಬ ಹೆಸರಿನಲ್ಲಿ ಹಣಕ್ಕೆ ಶಕ್ತಿಯನ್ನು ಇತರರಿಗೆ ಕೊಡುತ್ತೇನೆಂಬುದು ಆಧ್ಯಾತ್ಮಿಕರಂಗದಲ್ಲಿ ಚೋದ್ಯವಾದ ಮಾತಾಗಿದೆ. ಕೆಲವರು ಅಜ್ಞಾನಿಗಳನ್ನು ಜ್ಞಾನಮಾರ್ಗದಲ್ಲಿ ಪ್ರವೇಶಿಸುವುದಕ್ಕೆ ಜ್ಞಾನಶಕ್ತಿ ಇಂತಹ ಸಾಮರ್ಥ್ಯಹೊಂದಿದೆಯೆಂದು ತೋರಿಸುವುದಕ್ಕಾಗಿ ಪೂರ್ವದಲ್ಲಿ ಮಾಡಲ್ಪಟ್ಟ ಕಾರ್ಯ, ಈದಿನ ಅಂಗಡಿ ವಸ್ತುವಿನಂತೆ ಎಷ್ಟುಮಾತ್ರ ದೈವಜ್ಞಾನದ ಮೇಲೆ ಆಸಕ್ತಿ ಇಲ್ಲದವರಿಗೆ ಹಣಕ್ಕೆ ಶಕ್ತಿಯನ್ನು ದಾನ ಮಾಡುತ್ತೇವೆನ್ನುವುದು, ಯಾವಾಗಂದರೆ ಆಗ ಎಲ್ಲಂದರೆ ಅಲ್ಲಿ, ಶಕ್ತಿಪಾತ ಮಾಡುತ್ತೇವೆನ್ನುವುದು ವಿಚಿತ್ರವಲ್ಲದೆ ಏನಾಗುತ್ತದೆ? ಯೋಗಶಕ್ತಿ ಎಂಥದೋ, ಅದರಬೆಲೆ ಏನೊ, ಅದು ಹೇಗೆ ಲಭಿಸುತ್ತದೊ ಯೋಗಿಗಳಿಗೆ ಮಾತ್ರವೇ ತಿಳಿಯುತ್ತದೆ.

ಯೋಗಿಗಳಲ್ಲದವರಿಗೆ ಆ ಶಕ್ತಿ ಏನೊ ಹೇಗಿರುತ್ತದೊ, ಹೇಗೆ ಲಭಿಸುತ್ತದೊ ಕೂಡಾ ತಿಳಿಯದು. ಈಗ ಶಕ್ತಿಪಾತ ಮಾಡುತ್ತೇನೆಂದು, ಶಕ್ತಿಪಾತ ಸ್ವಾಮೀಜಿ ಎಂದುಹೆಸರು ಇಟ್ಟುಕೊಳ್ಳುವುದರಲ್ಲಿಯೇ ಇತನು ಯೋಗಿಯಲ್ಲ ಎಂದು ತಿಳಿದುಹೋಗುತ್ತಿದೆ. ಆತನು ಸ್ವಾಮೀಜಿಯಾಗಿ ಪ್ರಚಾರವಾದರೂ, ನಿಜಕ್ಕೆ ಆತನು ಒಬ್ಬ ಭಕ್ತನು. ದೇವರ್ಯಾರೋ ತಿಳಿಯದೆ ಮಹಿಮೆಗಳನ್ನು ತೋರಿಸುವವನನ್ನೆ ದೇವರೆಂದು ನಂಬಿ, ಆತನನ್ನು ಆರಾಧಿಸುತ್ತಾ, ಆತನ ಹಾಡುಗಳನ್ನೇ ಹಾಡಿಕೊಳ್ಳುತ್ತಾ ಇಂತಹವರ ಅನುಗ್ರಹದಿಂದ ಇರುವವನೆಂದು ಹೇಳಿಕೊಂಡಾಗ, ಆತನನ್ನು ಯೋಗಿ ಎಂದು ಅಂದುಕೊಳ್ಳಬೇಕಾದ ಅವಶ್ಯಕತೆಯಿಲ್ಲ. ಯೋಗಿ ಅದವನು ರೂಪ, ನಾಮ, ಕ್ರಿಯೆಗಳಿಲ್ಲದ ದೇವರನ್ನು ಕುರಿತು ಆತನ ಜ್ಞಾನವನ್ನು ಕುರಿತು ಹೇಳುತ್ತಾನಾಗಲಿ, ರೂಪ ನಾಮ ಕ್ರಿಯೆಗಳಿರುವ ವ್ಯಕ್ತಿಗಳನ್ನು ಕುರಿತಾಗಲಿ, ದೇವತೆಗಳನ್ನು ಕುರಿತಾಗಲಿ ಹೇಳುವುದಿಲ್ಲ. ಶಕ್ತಿಪಾತ ಸ್ವಾಮೀಜಿ ಎಂದು ಹೆಸರುವಾಸಿಯಾದ ಸ್ವಾಮಿಯನ್ನು ಒಬ್ಬ ಭಕ್ತನನ್ನಾಗಿ ಹೇಳಬಹುದೆ ಆದರೆ ಯೋಗಿಯಾಗಿ ಹೇಳುವುದಕ್ಕೆ ಎಷ್ಟುಮಾತ್ರ ಸಾಧ್ಯವಿಲ್ಲ. ಅಂತಹ ಸ್ವಾಮೀಜಿಗಳ ಮುಂದೆ ಸೂಕ್ಷ್ಮಶರೀರಗಳಿರುವ ದೆವ್ವಗಳು ಆವಹಿಸಿಬಂದು ಕೆಲವರು ಓಲಾಡುತ್ತಿರುವಾಗ, ಕೆಲವರು ತೂಗುತ್ತಾ, ಕೆಲವರು ಕದಲುತ್ತಾ, ಕೆಲವರು ಎಗರುತ್ತಾ ಇರುತ್ತಾರೆ. ದೆವ್ವಗಳು ಅಂಥಹ ಸ್ವಾಮೀಜಿಗಳ ಮುಂದೆ ತಮ್ಮ ಇರುವಿಕೆಯನ್ನು ತೋರಿಸಿಕೊಳ್ಳುವುದಕ್ಕೆ ಯಾವ ಭಯವಿಲ್ಲದೆ ಪ್ರವರ್ತಿಸುತ್ತಿರುತ್ತಾನೆ. ಈ ವಿವರ ತಿಳಿಯದ ಪ್ರಜೆಗಳಿಗೆ ಅದೊಂದು ವಿಚಿತ್ರವಾಗಿ ಕಾಣಿಸುತ್ತದೆ. ಆ ವಿಚಿತ್ರ ಸ್ವಾಮೀಜಿಯೊಂದರ ದೊಡ್ಡಸ್ತಿಕೆಯೆಂದುಕೊಳ್ಳುತ್ತಿದ್ದರು. ಯೋಗಿಗಳನ್ನು ನೋಡುತ್ತಲೇ ದೆವ್ವಗಳಾಗಲಿ, ಚಿಕ್ಕಚಿಕ್ಕ ದೇವತೆಗಳಾಗಲಿ, ಭಯಪಟ್ಟು ದೂರವಾಗಿ ಹೋಗುತ್ತಾರೆ. ಯೋಗಿಗಳಲ್ಲದವರ ಹತ್ತಿರವೇ ಹಾಗೆ ಎಲ್ಲಾ ವಿಕಾರಗಳನ್ನು ಪ್ರದರ್ಶಿಸುತ್ತಿರುತ್ತವೆ. ಒಂದುವೇಳೆ ಯೋಗಿಗಳಾದವರ ಮುಂದಕ್ಕೆ ದೆವ್ವಗಳು ಬಂದರೂ ಭಯಪಡುತ್ತಾ ವಿನಯ ವಿಧೇಯತೆಗಳು ಹೊಂದಿರುತ್ತಾರೆ. ಆ ವಿಷಯ ತಿಳಿಯದವರು ಯಾವ ಸ್ವಾಮೀಜಿಯಹತ್ತಿರ

ದೆವ್ವಗಳು ಭಯವಿಲ್ಲದೆ ಬಂದು ತಮ್ಮ ಇಷ್ಟಬಂದಂತೆ ಪ್ರವರ್ತಿಸುತ್ತಿರುತ್ತಾರೊ, ಆ ಸ್ವಾಮೀಜಿಗಳನ್ನೆ ದೊಡ್ಡದಾಗಿ ಹೇಳಿಕೊಳ್ಳುತ್ತಾರೆ. ಅಂತಹ ಸ್ವಾಮೀಜಿಗಳು ದೈವಜ್ಞಾನದ ಬೆಲೆ ತಿಳಿಯದೆ, ದೈವಶಕ್ತಿಯನ್ನು ಸಂಪಾದಿಕೊಳ್ಳಬೇಕೆಂದು ಪ್ರಯತ್ನ ಮಾಡದೆ, ಪ್ರಪಂಚ ಧನವನ್ನು ಸಂಪಾದಿಸಿಕೊಳ್ಳುವುದರಲ್ಲಿ ಲಗ್ನವಾಗಿಹೋಗಿ, ದೇವರು ಹೇಳಿದ ಜ್ಞಾನವನ್ನು (ತುಂಗೆಯಲ್ಲಿ ತುಳಿದು) ಹಾಳುಮಾಡಿ, ಅವರಿಗೆ ಅನುಕೂಲವಾದುದು, ಪ್ರಜೆಗಳಿಗೆ ಸುಲಭವಾದುದು ಮತ್ತು ಅವರಿಗೆ ಬೇಕಾದುದನ್ನು ಹೇಳುತ್ತಾ, ತಾವು ಹಣವನ್ನು ಸಂಪಾದಿಸಿಕೊಳ್ಳುವುದರಲ್ಲಿಯೇ ಲಗ್ನವಾಗಿಹೋಗುತ್ತಾರೆ. ಈ ವಿಧಾನವನ್ನು ನೋಡಿದ ಹೇತುವಾದಿಗಳೆನ್ನುವವರಿಗೆ, ನಾಸ್ತಿಕವಾದಿಗಳೆನ್ನುವವರಿಗೆ ಜ್ಞಾನಮಾರ್ಗವೆಂದರೆ ಅದೇನೆಯೆಂದೂ ತಿಳಿದು ಜ್ಞಾನಮಾರ್ಗವನ್ನು ದೈವಶಕ್ತಿಯನ್ನು ಕುರಿತು ಪ್ರಶ್ನಿಸಿ, ಅವರಿಗೆ ಸರಿಯಾದ ಸಮಾಧಾನ ದೊರೆಯದಿರುವಾಗ ದೇವರು, ಜ್ಞಾನ ಎಂಬುದು ಬೂಟಕ ಅದರಲ್ಲಿ ಎಂತಹ ಸತ್ಯವಿಲ್ಲ ಎಂದು ಹೇಳುವುದಕ್ಕೆ ಅವರಿಗೆ ಸಾಧ್ಯವಾಗುತ್ತಿದೆ. ಕಾಣಿಸುವ ಧನಾರ್ಜನೆ, ಸಮಾಧಾನವಿಲ್ಲದ ಆಚರಣೆ, ಪ್ರಶ್ನಿಸಿದರೆ ಉತ್ತರಕೊಡದೆ ನೀನು ಅರ್ಹನಲ್ಲ ಎಂದು ದಾಟಾಕಿ ಮಾತನಾಡುವುದು, ಹೋಲಿಕೆಯಿಲ್ಲದ ಕಥೆಗಳನ್ನು ಜ್ಞಾನವೆಂದು ಹೇಳುವುದು, ಶಾಸ್ತ್ರವೊಂದರ ಆಧಾರ ಏನು ಇಲ್ಲದೆ ಮಾತನಾಡುವುದು ಮೊದಲಾದ ಕಾರ್ಯಗಳೆಲ್ಲವನ್ನು ನೋಡಿದ ನಂತರ, ಹೇತುವಾದಿಗಳಿಗೆ ಇದು ಸರಿಯಾದ ಪದ್ಧತಿ ಅಲ್ಲವೆಂದು ತಿಳಿದುಹೋಗುತ್ತಿದೆ.

ಅಸಲು ವಿಷಯಕ್ಕೆ ಬಂದು ಶಕ್ತಿಯನ್ನು ಕುರಿತು ಹೇಳಿದರೆ ಶಕ್ತಿ ಎನ್ನುವುದು ಸ್ಥೂಲವಾಗಿದೆ, ಸೂಕ್ಷ್ಮವಾಗಿದೆ. ಸ್ಥೂಲವಾಗಿರುವವು ಮುಖ್ಯವಾಗಿ ಎರಡು ಇವೆ. ಒಂದು ಧನಶಕ್ತಿ, ದೇಹಶಕ್ತಿ ಅವುಗಳನ್ನೆ ಧನಬಲ, ಶರೀರಬಲ ಎಂದುಸಹಾ ಹೇಳಬಹುದು. ಇತರರಿಗೆ ಉಚಿತವಾಗಿ ಹಣಕೊಟ್ಟರೆ ಧನವನ್ನು ದಾನ ಮಾಡಿದಂತಾಗುತ್ತದೆ. ನಂತರ ಇತರರಿಗೋಸ್ಕರ ಶರೀರ ಬಲವನ್ನು ಉಪಯೋಗಿಸಿದರೆ ಅದನ್ನು ಶ್ರಮದಾನ ಎನ್ನುತ್ತೇವೆ. ಧನವನ್ನಾಗಲಿ, ಬಲವನ್ನಾಗಲಿ ಸುಲಭವಾಗಿ ದಾನ ಮಾಡಬಹುದು. ಧನಶಕ್ತಿ, ದೇಹಶಕ್ತಿ ಎರಡೂ ಸ್ಥೂಲವಾದವೇ ಆದ್ದರಿಂದ ಅವುಗಳನ್ನು ತಿಳಿದು ಇತರರಿಗೆ ದಾನ

ಮಾಡಬಹುದು. ಸೂಕ್ಷ್ಮವಾದಶಕ್ತಿ ದೈವಶಕ್ತಿ. ಸೂಕ್ಷ್ಮವಾದ ಶಕ್ತಿಗಳು ಭೂಮಿಮೇಲೆ ಎಷ್ಟೊ ಇವೆ. ಆದರೂ ಅವುಗಳೆಲ್ಲವುಗಳಲ್ಲಿ ಉತ್ತಮವಾದುದು, ದೊಡ್ಡದು ದೈವಶಕ್ತಿ ಮಾತ್ರವೇ. ದೈವಶಕ್ತಿಯನ್ನು ಕಷ್ಟಪಟ್ಟು ಧರ್ಮಗಳ ಪ್ರಕಾರ ಸಂಪಾದಿಸಿಕೊಳ್ಳಬಹುದು. ಆದರೆ ಸ್ಥೂಲಶಕ್ತಿಗಳಾದ ಧನ, ದೇಹ ಬಲಗಳನ್ನು ಇತರರಿಗೆ ಕೊಡುವಂತೆ ದೈವಬಲವನ್ನು ಇತರರಿಗೆ ಕೊಡುವುದಕ್ಕೆ ಸಾಧ್ಯ ವಾಗುವುದಿಲ್ಲ. ಒಬ್ಬ ಮನುಷ್ಯ ಯೋಗವಾಚರಿಸಿ ಧರ್ಮದ ಪ್ರಕಾರ ದೈವಶಕ್ತಿಯನ್ನು ಸಂಪಾದಿಸಿದರೆ, ಅದು ಆ ಮನುಷ್ಯ ಶರೀರದಲ್ಲಿನ ತಲೆಯಲ್ಲಿ ಸೇರಿ ಅಲ್ಲಿ ಬ್ರಹ್ಮನಾಡಿಯಲ್ಲಿ ನಿಂತುಹೋಗುತ್ತದೆ. ಬ್ರಹ್ಮನಾಡಿಯಲ್ಲಿ ಆತ್ಮವಿದೆ. ಬ್ರಹ್ಮನಾಡಿಯಲ್ಲಿ ಸೇರಿದಶಕ್ತಿ ಅಲ್ಲಿಯೇ ಇರುವ ಆತ್ಮ ಆಧೀನದಲ್ಲಿರುತ್ತದೆ. ಆತ್ಮ ಅನುಮತಿ ಇಲ್ಲದೇ ದೈವಶಕ್ತಿ ಅಲ್ಲಿಂದ ಹೊರಗೆ ಬರುವುದಿಲ್ಲ. ಶರೀರದಲ್ಲಿ ಆತ್ಮ ಆಧೀನದಲ್ಲಿ ಇರುವಶಕ್ತಿ ಆದ್ದರಿಂದ ಅದನ್ನು ಆತ್ಮಶಕ್ತಿ ಎಂದುಸಹಾ ಹೇಳಬಹುದು. ವಾಸ್ತವಕ್ಕೆ ಯೋಗದಿಂದ ಲಭಿಸಿದ ಶಕ್ತಿಯನ್ನು ಅರ್ಥವಾಗುವುದಕ್ಕೆ ಪರಮಾತ್ಮಶಕ್ತಿ, ದೈವಶಕ್ತಿ ಎಂದು ಹೇಳಿದ್ದೇವೆ. ವಾಸ್ತವಕ್ಕೆ ಹಾಗೆ ಹೇಳಬಾರದು. ದೇವರು ಏನು ಅಲ್ಲದವನಾದ್ದರಿಂದ ಆತನ ಶಕ್ತಿ ಎಂದೂ ಕೂಡಾ ಹೇಳಬಾರದು. ಲಭಿಸಿದ ಯೋಗಶಕ್ತಿಯನ್ನು ಆತ್ಮಶಕ್ತಿ ಎಂದು ಹೇಳುವುದು ಒಳ್ಳೆಯದು. ಆತ್ಮಶಕ್ತಿ ಎಂಥಹ ಭಯಂಕರವಾದ ಪಾಪವನ್ನಾದರೂ ಸುಟ್ಟು ಬೂದಿ ಮಾಡಬಲ್ಲದು. ಆದರೂ ಆ ಕೆಲಸ ಜೀವಾತ್ಮ ಇಷ್ಟದ ಪ್ರಕಾರ ನಡೆಯುವುದಿಲ್ಲ. ಆತ್ಮಕ್ಕೆ ಇಷ್ಟವಾದಾಗ ಆತ್ಮಶಕ್ತಿ ಹೊರಗೆ ಬಂದು ಇತರರ ಕರ್ಮವನ್ನು ಸುಡಬಲ್ಲದು.

ಎಲ್ಲಿಯಾದರೂ ಯಾರಲ್ಲಾದರೂ ಆತ್ಮಶಕ್ತಿಯಿಂದ ಕರ್ಮಹೋಗಿದೆಯೆಂದರೆ ಅದು ಆತ್ಮಗೆ ತಿಳಿಯದೆ ನಡೆಯಲಿಲ್ಲವೆಂದು, ನಡೆದಿರುವುದು ಸಾಕ್ಷಿಯಾಗಿರುವ ದೇವರಿಗೆ ತಿಳಿಯುತ್ತದೆಂದು ಗ್ರಹಿಸಬೇಕು. ಹಾಗೆಯೇ ಸಾಕ್ಷಿಯಾಗಿ ನೋಡುತ್ತಿರುವ ಜೀವಿಗೂ ಕೂಡಾ ತಿಳಿಯುತ್ತದೆ. ಆದರೆ ಪೂರ್ತಿ ಶರೀರ ಅಂತರ್ಗತ ಜ್ಞಾನವಿಲ್ಲದವನು ನಡೆದ ಕೆಲಸವನ್ನು ತಾನೇ

ಮಾಡಿದ್ದೇನೆಂದು, ತಾನು ಇತರರ ಕರ್ಮವನ್ನು ಇಲ್ಲದಹಾಗೆ ಮಾಡಿದ್ದೇನೆಂದು ಅಂದುಕೊಳ್ಳುತ್ತಾನೆ. ಆತ್ಮ ಜ್ಞಾನವನ್ನು ತಿಳಿದವನು, ಆ ಕೆಲಸಕ್ಕೆ ತಾನು ಕರ್ತನು ಅಲ್ಲವೆಂದು, ಆತ್ಮವೇ ಅದಕ್ಕೆ ಕಾರಣವೆಂದುಕೊಳ್ಳುತ್ತಾನೆ. ಸ್ಥೂಲಶಕ್ತಿ ಆದರೂ, ಸೂಕ್ಷ್ಮಶಕ್ತಿ ಆದರೂ, ಒಬ್ಬರಿಂದೊಬ್ಬರಿಗೆ ಸೇರಿದರೆ ಅವು ಜೀವಿಗೆ ತಿಳಿದೆ ಸೇರುತ್ತಿವೆ. ಅಷ್ಟುಮಾತ್ರಕ್ಕೆ ಜೀವಿಯು ಆ ಕೆಲಸವನ್ನು ನಾನೇ ಮಾಡಿದ್ದೇನೆ, ನಾನೇ ಕೊಟ್ಟಿದ್ದೇನೆ ಅಂದುಕೊಂಡರೆ ತಪ್ಪೇಯಾಗುತ್ತದೆ. ಶರೀರದಲ್ಲಿ ಜೀವಿಯಿದ್ದರೂ ಶರೀರಕ್ಕೆ ಅಧಿಪತಿ ಆತ್ಮವೇ. ಆತ್ಮ ಎಂಬುದು ಒಂದಿದೆಯೆಂಬ ವಿಷಯ ಕೂಡಾ ತಿಳಿಯದವರು ಎಲ್ಲಾ ಕೆಲಸಗಳನ್ನು ತಾವೇ ಮಾಡುತ್ತಿದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ಶರೀರದಲ್ಲಿ ಯಾವ ಚಿಕ್ಕ ಕೆಲಸ ನಡೆದರೂ, ದೊಡ್ಡ ಕೆಲಸ ನಡೆದರೂ, ಏನಾದರೂ ಆತ್ಮಗೆ ತಿಳಿದೆ ನಡೆಯುತ್ತದೆ. ಆತ್ಮ ಮಾಡಿದರೇನೆ ನಡೆಯುತ್ತದೆ. ಆತ್ಮ ಮಾಡದೆ ಶರೀರದಲ್ಲಿ ಯಾವ ಕೆಲಸ ನಡೆಯುವುದಿಲ್ಲ. ಆದ್ದರಿಂದ ಇತರರಿಗೆ ಧನವನ್ನು ಕೊಟ್ಟರೂ, ದೈವಶಕ್ತಿಯನ್ನು ಕೊಟ್ಟರೂ ಎಲ್ಲಾ ಆತ್ಮ ಕೊಡಬೇಕಾಗಿದ್ದೆ. ಆತ್ಮ ನಾನು ಎಂದು ಹೊರಬೀಳದಂತೆ ಕಾರ್ಯಗಳನ್ನು ಮಾಡುತ್ತಿರುವಾಗ, ಶರೀರದಲ್ಲಿನ ಕೆಲಸಗಳೆಲ್ಲ ತನಗೆ ತಿಳಿದು ನಡೆಯುತ್ತಿರುವುದರಿಂದ, ಶರೀರದಲ್ಲಿ ತಾನು ಹೊರೆತು ಆತ್ಮವೆನ್ನುವುದು ಮತ್ತೊಂದಿದೆಯೆಂದು ತಿಳಿಯದಿರುವುದರಿಂದ ಜೀವಾತ್ಮ ಎಲ್ಲವನ್ನು ನಾನೇ ಮಾಡುತ್ತಿದ್ದೇನೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಒಬ್ಬ ಸ್ವಾಮೀಜಿಯಾಗಿರುವ ಜೀವಿಯು ತನ್ನ ಶರೀರದಲ್ಲಿ ಆತ್ಮ ಎಲ್ಲಾ ಕೆಲಸಗಳು ಮಾಡುತ್ತಿದೆಯೆಂದು ತಿಳಿಯದೆ, ತಾನೇ ಶಕ್ತಿಪಾತ ಮಾಡುತ್ತಿದ್ದೇನೆಂದು ತಪ್ಪಾಗಿ ಅಂದುಕೊಂಡು ತನ್ನ ಹೆಸರಿನಮುಂದೆ ಶಕ್ತಿಪಾತ ಎಂದು ಬರೆದುಕೊಳ್ಳುವುದು ನಡೆದಿದೆ.

ಪೂರ್ತಿ ಜ್ಞಾನ ತಿಳಿಯಲ್ಪಟ್ಟರೆ ಆತ್ಮಶಕ್ತಿ (ದೈವಶಕ್ತಿ) ಎಂಬುದು ಪಾತ ಅಲ್ಲವೆಂದು, ಮೇಲಿಂದ ನೀರಿನಂತೆ ಕೆಳಗೆಬೀಳುವ ಜಲಪಾತದಂಥದ್ದು ಅಲ್ಲವೇ ಅಲ್ಲವೆಂದು ತಿಳಿದುಹೋಗುತ್ತಿದೆ. ಅಂತಹ ಶಕ್ತಿಯನ್ನು ಶಕ್ತಿಪಾತ ಎಂದು ಹೆಸರು ಇಡುವುದೇ ತಪ್ಪಾಗುತ್ತದೆ. ದೈವಜ್ಞಾನ ಎಷ್ಟೋ ಶಾಸ್ತ್ರೀಯವಾದುದು,

ಆದ್ದರಿಂದ ಯಾವ ಹೇತುವಾದಿಯಾಗಲಿ, ಯಾವ ನಾಸ್ತಿಕವಾದಿಯಾಗಲಿ ಅದನ್ನು ಮಿಮರ್ಶಿಸಲಾರನು. ಶಾಸ್ತ್ರಬದ್ಧತೆ ಇಲ್ಲದಿರುವುದನ್ನು ಯಾರಾದರೂ ವಿಮರ್ಶಿಸಬಹುದಾಗಲಿ, ಶಾಸ್ತ್ರೀಯವಾದ ದೈವಜ್ಞಾನವನ್ನು ಪ್ರಶ್ನಿಸಲಾರರು. ಪ್ರಶ್ನಿಸಿದರೂ ಎಲ್ಲವುಗಳಿಗೂ ಎಲ್ಲಾ ಉತ್ತರಗಳಿರುತ್ತವೆ. ಆದ್ದರಿಂದ ದೈವಜ್ಞಾನವನ್ನು ಯಾರೂ ತಪ್ಪು ಹಿಡಿಯಲಾರರು. ಸ್ವಾಮೀಜಿಗಳು ತಪ್ಪಾಗ ಬಹುದಾಗಲಿ, ಜ್ಞಾನ ಎಂದಿಗೂ ತಪ್ಪಾಗುವುದಿಲ್ಲ, ಪೂರ್ತಿ ಶಾಸ್ತ್ರೀಯವಾದುದು.

ಇಲ್ಲಿಯವರೆಗೂ ಶಕ್ತಿಪಾತವನ್ನು ಕುರಿತು ಹೇಳಿಕೊಳ್ಳುತ್ತಾ, ಶಕ್ತಿಪಾತ ನಡೆಯುತ್ತದೆಂಬುದು ಶಾಸ್ತ್ರವಿರುದ್ಧವೆಂದು ಹೇಳಿಕೊಂಡಿದ್ದೇವೆ. ದೇವರ ಜ್ಞಾನವೆಲ್ಲವೂ ಶಾಸ್ತ್ರಬದ್ಧವಾಗಿದೆಯೆಂದು, ಅದನ್ನು ಆ ವಿಧವಾಗಿ ದೇವರೆ ಹೇಳಿದ್ದಾನೆಂದು ಆದ್ದರಿಂದ ಅಶಾಸ್ತ್ರೀಯವಾದುದು ಯಾವುದಾಗಲಿ ದೇವರ ಜ್ಞಾನವಲ್ಲವೆಂದು ಹೇಳಿಕೊಂಡಿದ್ದೇವೆ. ಅಷ್ಟೇಅಲ್ಲದೆ ಯಾರೊ ಕೆಲವರು ದೇವರ ಧರ್ಮಗಳಲ್ಲಿ ಇಲ್ಲದವುಗಳನ್ನು ಪ್ರಚಾರಮಾಡಿ ಇದೇ ಜ್ಞಾನವೆಂದು, ನಾವೇ ಜ್ಞಾನಿಗಳೆಂದು, ಸಿದ್ಧಪುರುಷರೆಂದು ಹೇಳಿಕೊಂಡಷ್ಟುಮಾತ್ರಕ್ಕೆ ಅವರನ್ನು ಆಧಾರ ಮಾಡಿಕೊಂಡು, ಜ್ಞಾನ ಆಗಿರುತ್ತದೆಂದು ಅಂದುಕೊಳ್ಳಬಾರದು. ದೇವರು ಜ್ಞಾನ ಯಾವಾಗಾದರೂ ಶಾಸ್ತ್ರಪದ್ಧತಿ ಯಾಗಿರುತ್ತದಾಗಲಿ, ಇತರರು ವಿಮರ್ಶಿಸುವಷ್ಟು ಅಶಾಸ್ತ್ರೀಯವಾಗಿ ಇರುವುದಿಲ್ಲ. ನಾವು ಅಶಾಸ್ತ್ರೀಯವಾದುದನ್ನಾಗಲಿ, ಅಶಾಸ್ತ್ರೀಯವಾಗಿ ಪ್ರಚಾರವಾಗುತ್ತಿರುವ ಸ್ವಾಮಿಗಳನ್ನು, ಗುರುಗಳನ್ನಾಗಲಿ ಒಪ್ಪಿಕೊಳ್ಳುವುದಿಲ್ಲ. ಹಾಗೆಯೇ ಮೂಢವಾಗಿ ದೇವರ ವಿಷಯ ಅಸತ್ಯವೆಂಬುವ ನಾಸ್ತಿಕರನ್ನಾಗಲಿ, ವಿವೇಕವಿಲ್ಲದಂತೆ ಮಾತನಾಡುವವರನ್ನಾಗಲಿ, ನಾವು ಸತ್ಯವಾದಿಗಳೆಂದು ಅಸತ್ಯಗಳನ್ನು ಮಾತನಾಡುವವರನ್ನಾಗಲಿ ಸ್ವಲ್ಪವೂ ಒಪ್ಪಿಕೊಳ್ಳುವುದಿಲ್ಲ. ಯಾವ ವಿಧವಾಗಿಯಾದರೂ ದೇವರ ಜ್ಞಾನಕ್ಕೆ ಅಗೌರವ ಏರ್ಪಟ್ಟರೂ, ದೇವರ ಗೌರವಕ್ಕು ಧರ್ಮಕ್ಕು ಹಾನಿಏರ್ಪಡಿಸುವವರಿದ್ದರೂ, ಅಂಥಹವರು ಸ್ವಾಮಿಗಳಾಗಿದ್ದರೂ, ನಾಸ್ತಿಕರಾಗಿದ್ದರೂ, ಹೇತುವಾದಿಗಳೆಂಬ ಹೆಸರಿನಿಂದಿ ಇದ್ದರೂ, ಸತ್ಯವಾದಿಗಳೆಂದು ಹೇಳಿಕೊಳ್ಳುತ್ತಿದ್ದರೂ, ನಾವು ಮಾತ್ರ

ಅವರ ಮಾತುಗಳನ್ನೂ, ಅವರ ವಿಧಾನವನ್ನೂ ಸ್ವಲ್ಪವೂ ಸಮ್ಮತಿಸದೆ ಪೂರ್ತಿಯಾಗಿ ಖಂಡಿಸುತ್ತಿದ್ದೇವೆ. ಅದೇ ಪದ್ಧತಿಯಲ್ಲಿ ನಾವು ವಿಜ್ಞಾನಿಗಳೆಂದು, ಸೈನ್ಸನ್ನು ಕುರಿತು ತಪ್ಪಾಗಿ ಮಾತನಾಡುತ್ತಿರುವವರನ್ನು, ಈಗ ನಾವು ಖಂಡಿಸಿ ಹೇಳಬೇಕಾಗಿ ಬಂದಿದೆ. ಕೆಲವರು ವಿಜ್ಞಾನಿಗಳು ಸೈನ್ಸನ್ನು ಕುರಿತು ಏನನ್ನುತ್ತಿದ್ದಾರೊ, ನಾವು ಹೇಗೆ ಅವರನ್ನು ಅಲ್ಲವೆನ್ನುತ್ತಿದ್ದೇವೊ ಈಗ ಸಮಗ್ರವಾಗಿ ವಿವರಿಸುತ್ತೇವೆ. ಈಗ ಈ ವಿವರವನ್ನು ಕೊಡುವುದರಿಂದ ನಾವು ಯಾರ ಪಕ್ಷವಲ್ಲವೆಂದು, ಶಾಸ್ತ್ರವನ್ನು ಬಿಟ್ಟು ಮಾತನಾಡುವವರನ್ನು ಯಾರನ್ನಾದರೂ ಖಂಡಿಸುತ್ತೇವೆಂದು ಎಲ್ಲರಿಗೂ ಅರ್ಥವಾಗುತ್ತದೆ. ಒಬ್ಬ ವಿಜ್ಞಾನಿ ಏನನ್ನುತ್ತಿದ್ದಾನೊ ಅದಕ್ಕೆ ನಾವು ಏನನ್ನುತ್ತಿದ್ದೇವೊ ಕೆಳಗೆ ನೋಡಿರಿ.

**ವಿಜ್ಞಾನಿ :–** ಸೈನ್ಸು ಪ್ರಕಾರ ತಿಳಿದುಕೊಳ್ಳುವುದು, ಬದಲಾಯಿಸಿಕೊಳ್ಳುವುದು, ತಿದ್ದುಕೊಳ್ಳುವುದು ನಿರಂತರ ನಡೆಯುವಕೆಲಸ. ಸೈನ್ಸು ಎಂದಿಗೂ ಒಂದೇರೀತಿ ಇರುವುದಿಲ್ಲ. ಪವಿತ್ರ ಗ್ರಂಥಗಳ ಹೆಸರಿನಲ್ಲಿ ಎಲ್ಲವೂ ಅದರಲ್ಲಿಯೇ ಇದೆಯೆಂದು ಸೈನ್ಸು ಎಂದಿಗೂ ಅನ್ನುವುದಿಲ್ಲ. ಆದ್ದರಿಂದ ಸೈನ್ಸು ಮಾನವಾಳಿಗೆ ಸಹಾಯಪಡುತ್ತದೆ. ಪಾರಾಸೈಕಾಲಜಿ ಮಾನವ ಬೆಂಬಲ ಮಾಡಿದ ಉದಾಹರಣೆ ಒಂದು ಸಹಾ ಇಲ್ಲ. (ಈ ವಿಷಯವನ್ನು ಒಬ್ಬ ವಿಜ್ಞಾನಿ 2001 ವರ್ಷ ಜುಲೈ ತಿಂಗಳಲ್ಲಿ 'ಮಿಸಿಮಿ' ಎಂಬ ಮಾಸ ಪತ್ರಿಕೆಯಲ್ಲಿ ಹೇಳಿದ್ದಾನೆ,)

**ನಾವು :–** ಸೈನ್ಸು ಎಂದರೆ ಮೇಲ್ನೋಟಕ್ಕೆ ಹೇಳಿಕೊಂಡರೆ ವಿಜ್ಞಾನ ಎಂದೂ, ಆಳವಾಗಿ ಹೇಳಿಕೊಂಡರೆ ಶಾಸ್ತ್ರ ಎಂದೂ ಹೇಳಬಹುದು. ಸೈನ್ಸು ಒಂದುಬಾರಿ ತಿಳಿಯಲ್ಪಟ್ಟರೆ ಅದು ಎಂದಿಗೂ ಬದಲಾಗುವುದಿಲ್ಲ. ಆದ್ದರಿಂದ ಅದನ್ನು ಶಾಸ್ತ್ರ ಎಂದು ಅನ್ನುತ್ತಿದ್ದೇವೆ. ಸೈನ್ಸು ರುಜುವು ಮಾಡಿದೆ. ಒಂದುಬಾರಿ ರುಜುವು ಮಾಡಿದ ನಂತರ ಬದಲಾಗುವುದಲ್ಲ. ಹಾಗೆ ಬದಲಾಗುವುದಾದರೂ, ಆಗಾಗ ಬದಲಿಸಿಕೊಳ್ಳುವುದು, ತಿದ್ದುಕೊಳ್ಳುವುದು ನಡೆದರೂ ಅದು ಸೈನ್ಸೇಅಲ್ಲ, ಅಂತಹದನ್ನು ಸೈನ್ಸು ಎಂದು ಅನ್ನಬಾರದು. ನಿರಂತರ ಒಂದೇರೀತಿ ಇರುವುದೇ ಸೈನ್ಸು. ಸೈನ್ಸು ಅಥವಾ ಶಾಸ್ತ್ರ ಸಿದ್ಧಾಂತಗಳು ಎಂಬ ಶಾಸನಗಳ ಮೇಲೆ

ಆಧಾರಪಟ್ಟಿರುತ್ತದೆ. ಸಿದ್ಧಾಂತ ಬದಲಾಗುವುದಿಲ್ಲ. ಆದ್ದರಿಂದ ಸೈನ್ಸು ಬದಲಾಗುವುದಿಲ್ಲ. ಸೈನ್ಸು ಆದರೂ (ಸಾಮಾನ್ಯ ಶಾಸ್ತ್ರವಾದರೂ), ಸೂಪರ್ ಸೈನ್ಸಾದರೂ (ಅಸಾಮಾನ್ಯಶಾಸ್ತ್ರವಾದರೂ) ಎರಡೂ ಶಾಸ್ತ್ರಗಳೇ ಆದ್ದರಿಂದ ಎರಡೂ ಬದಲಾಗುವವಲ್ಲ. ಸೈನ್ಸು ಗಣಿತ, ಖಗೋಳ, ರಸಾಯನ, ಭೌತಿಕಶಾಸ್ತ್ರ ಎಂಬ ನಾಲ್ಕು ಸಾಮಾನ್ಯ ಶಾಸ್ತ್ರಗಳ ರೂಪದಲ್ಲಿ ಇವೆ. ಸೂಪರ್ ಸೈನ್ಸು ಎನ್ನುವುದು ಒಂದೇ ಒಂದು ಬ್ರಹ್ಮವಿದ್ಯಾಶಾಸ್ತ್ರ ರೂಪದಲ್ಲಿ ಇದೆ. ಸೂಪರ್‌ಸೈನ್ಸು ಮುಖ್ಯವಾಗಿ ಮೂರು ಗ್ರಂಥಗಳ ರೂಪದಲ್ಲಿ ಇದೆ. ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳ ರೂಪದಲ್ಲಿ ಬ್ರಹ್ಮವಿದ್ಯೆ (ಸೂಪರ್‌ಸೈನ್ಸು) ಇದೆಯೆಂದು ಹೇಳಬಹುದು. ಈ ಮೂರು ಗ್ರಂಥಗಳು ಮೂರು ಮತಗಳಲ್ಲಿ ಪವಿತ್ರ ಗ್ರಂಥಗಳೆಂದು ಹೆಸರುವಾಸಿಯಾಗಿವೆ. ಪವಿತ್ರ ಗ್ರಂಥಗಳೆಂದು ಹೆಸರುವಾಸಿ ಯಾದವುಗಳಲ್ಲಿ ಗ್ರಂಥವೆಲ್ಲಾ ಸೂಪರ್‌ಸೈನ್ಸಾಗಿ ಇರುವುದಿಲ್ಲ. ಪೂರ್ತಿ ವಿಜ್ಞಾನಕ್ಕೆ ಸಂಬಂಧಿಸಿದ ವಾಕ್ಯಗಳು ಅಲ್ಲಲ್ಲಿ ಇರುತ್ತವೆ. ಗ್ರಂಥದಲ್ಲಿ ಪ್ರತಿ ವಾಕ್ಯದಲ್ಲಿಯೂ ಪವಿತ್ರತೆ ಇಲ್ಲದಿದ್ದರೂ, ಅಲ್ಲಲ್ಲಿ ಕೆಲವು ವಾಕ್ಯಗಳಲ್ಲಿ ಪವಿತ್ರತೆ ಇರುವುದರಿಂದ, ಅವುಗಳನ್ನು ಪವಿತ್ರಗ್ರಂಥಗಳೆಂದು ಹೇಳುತ್ತಿದ್ದೇವೆ. ಮೂರು ಗ್ರಂಥಗಳಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆಯಾಗಿ ಒಂದೇ ಪವಿತ್ರತೆ ಇರುವುದರಿಂದ ಅವುಗಳಿಗೆ ಪವಿತ್ರಗ್ರಂಥಗಳೆಂದು ಹೆಸರುಬಂದಿದೆ. ಪವಿತ್ರ ಗ್ರಂಥಗಳಲ್ಲಿ ಎಲ್ಲಾ ಇದೆಯೆಂದು ಸೈನ್ಸು ಎಂದಿಗೂ ಅನ್ನುವುದಿಲ್ಲ ಎಂದು ಮೇಲೆ ವಿಜ್ಞಾನಿ ಹೇಳಿದ ಮಾತನ್ನು ತಪ್ಪು ಹಿಡಿಯಬಹುದು. ಪವಿತ್ರಗ್ರಂಥ ಸಹಾ ಒಂದು ಸೈನ್ಸು ಆದಾಗ, ಆ ಗ್ರಂಥವನ್ನು ಸೈನ್ಸು ಒಪ್ಪಿಕೊಳ್ಳುವುದಿಲ್ಲ ಎನ್ನುವುದು ತಿಳುವಳಿಕೆಯಿಲ್ಲದ ಕೆಲಸವಾಗುತ್ತದೆ.

ಪವಿತ್ರಗ್ರಂಥಗಳಲ್ಲಿ ಹೇಳಿದವುಗಳನ್ನು ಎಂದಿಗೋ ನಂತರದ ಕಾಲದಲ್ಲಿ ಎಷ್ಟೋಜನ ಸಂಶೋಧಕರು ಕಂಡುಹಿಡಿದಿದ್ದಾರೆ ಹಾಗೆ ಕಂಡುಹಿಡಿದಿರುವವು ಕೆಲವಿರುವಾಗ, ಈಗಲೂ ಪವಿತ್ರಗ್ರಂಥಗಳಲ್ಲಿ ಹೇಳಿದ ವಿಷಯಗಳು ಕಂಡುಹಿಡಿಯದೆ ಇರುವವು ಬಹಳ ಇವೆ. ಉದಾಹರಣೆಗೆ ಭಗವದ್ಗೀತೆಯಲ್ಲಿ

ಸಾಂಖ್ಯಯೋಗದಲ್ಲಿ ಹೇಳಿದ 22ನೆ ಶ್ಲೋಕಕ್ಕು, ಖುರಾನ್ ಗ್ರಂಥದಲ್ಲಿ 6ನೆ ಸುರಾ 95ನೆ ವಾಕ್ಯಕ್ಕು ಈಗಿನ ಭೌತಿಕಶಾಸ್ತ್ರತಜ್ಞರು ಸಾವಿರ ವರ್ಷಗಳ ಕೃಷಿಮಾಡಿದರೂ ಕಂಡುಹಿಡಿಯಲಾರದ ಸೈನ್ಸು ಇದೆ. ಇಲ್ಲಿಯವರೆಗೂ ಕಂಡುಹಿಡಿಯದ ವಿಷಯಗಳು ಆ ಗ್ರಂಥಗಳಲ್ಲಿ ಇರುವಾಗ, ಎಲ್ಲಾ ಅದರಲ್ಲಿಯೇ ಇದೆಯೆಂದು ಹೇಳುವುದರಲ್ಲಿ ತಪ್ಪೇನಿದೆ. ಉದಾಹರಣೆಗೆ ಭಗವದ್ಗೀತೆಯನ್ನು ತೆಗೆದುಕೊಂಡು ನೋಡೋಣ. ಅದರಲ್ಲಿ ಒಂದು ಶ್ಲೋಕವನ್ನು ತೆಗೆದುಕೊಂಡು ನೋಡಿದರೆ ಮೇಲ್ನೋಟಕ್ಕೆ ಅದರಲ್ಲಿ ಯಾವ ಸೈನ್ಸು ಕಾಣಿಸುವುದಿಲ್ಲ. ಅದೇ ಶ್ಲೋಕವನ್ನು ಪೂರ್ತಿಯಾಗಿ ವಿಶಧೀಕರಿಸಿ ಆಳವಾಗಿ ನೋಡಿದರೆ ಅದು ಪೂರ್ತಿ ವಿಜ್ಞಾನವಾಗಿ ಕಾಣಿಸುತ್ತದೆ. ಭೂಮಿಯಲ್ಲಿ ಒಂದುರೀತಿಯ ಕಲ್ಲು ಕಾಣಿಸಿದಾಗ ಅದು ಕಬ್ಬಿಣವಾಗಿ ಕಾಣಿಸುವುದಿಲ್ಲ. ಆ ಕಲ್ಲನ್ನು ಚೆನ್ನಾಗಿ ಪರಿಶೀಲಿಸಿ ಅದನ್ನು ಬಿಸಿಮಾಡಿ ಕಬ್ಬಿಣಲೋಹವಾಗಿ ಬದಲಿಸಿಬಹುದು. ಮೊದಲು ಸಾಧಾರಣ ಕಲ್ಲಾಗಿ ಕಾಣಿಸಿದೆ, ಕೊನೆಗೆ ಕಬ್ಬಿಣವಾಗಿ ತಯಾರಾಗಿದೆ. ಹಾಗೆಯೇ ಭೂಮಿಯಿಂದ ಚಿನ್ನ ಒಂದೇಬಾರಿ ಚಿನ್ನವಾಗಿ ಲಭಿಸುವುದಿಲ್ಲ. ಹಾಗೆಯೇ ಕಲ್ಲಿನಿಂದ ಕಬ್ಬಿಣ, ಮಣ್ಣಿನಿಂದ ಚಿನ್ನ ಲಭಿಸಿದಂತೆ ಶ್ಲೋಕಗಳಿಂದಾಗಲಿ, ವಾಕ್ಯದಿಂದಾಗಲಿ ಎಷ್ಟೋ ಬೆಲೆಯುಳ್ಳ ವಿಜ್ಞಾನ ಕಾಣಿಸುತ್ತಿದೆ. ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿರುವ 22ನೆ ಶ್ಲೋಕ, ಖುರಾನ್ ಗ್ರಂಥದಲ್ಲಿನ 6ನೆ ಸೂರಾದಲ್ಲಿನ 95ನೆ ವಾಕ್ಯ ಎರಡೂ ಒಂದೇ ಭಾವಹೊಂದಿರುವವೆಂದು, ಅವುಗಳನ್ನು ಓದಿದವರು ಯಾರೂ ಗ್ರಹಿಸಲಾರರು. ಮೇಲ್ನೋಟಕ್ಕೆ ಮಾತ್ರ ಎರಡೂ ಒಂದೇ ವಿವರ ಕೊಡುವವೆಂದು, ಎರಡು ಒಂದೇ ವಿಷಯವನ್ನು ಕುರಿತು ಹೇಳುವವೆಂದು ಯಾರಿಗೂ ತಿಳಿಯದಂತಿವೆ. ಅಷ್ಟೇಯಲ್ಲದೆ ಗೀತೆಯಲ್ಲಿನ ಸಾಂಖ್ಯಯೋಗದಲ್ಲಿರುವ 22ನೆ ಶ್ಲೋಕವೂ, ಖುರಾನ್‌ನಲ್ಲಿನ 6ನೆ ಸುರಾ 95ನೆ ವಾಕ್ಯವೂ ಎರಡೂ ಇಲ್ಲಿಯವರೆಗೂ ಯಾರೂ ಕಂಡುಕೊಳ್ಳದ ವಿಜ್ಞಾನ ಅವುಗಳಲ್ಲಿ ಇದೆಯೆಂದು ಯಾರಿಗೂ ತಿಳಿಯದು. ಈಗಲೇ ಅಲ್ಲದೆ ನಂತರ ಸಾವಿರವರ್ಷಗಳಿಗಾಗಲಿ ಅದರಲ್ಲಿನ ಸೈನ್ಸನ್ನು (ವಿಜ್ಞಾನ ಸಿದ್ಧಾಂತವನ್ನು) ಶಾಸ್ತ್ರಜ್ಞರು ಕಂಡುಕೊಳ್ಳುತ್ತಾರೆಂದು ಸಹಾ ಹೇಳಲಾರೆವು. ಒಂದುವೇಳೆ ಸಾವಿರ

ವರ್ಷಗಳಿಗೋ ಅಥವಾ ಎರಡುಸಾವಿರ ವರ್ಷಗಳಿಗೋ ಪರಿಶೋಧಕರು ಗೀತೆಯಲ್ಲಿನ ಸಿದ್ಧಾಂತವನ್ನು ಕಂಡುಕೊಂಡರೂ ಅದು ಮೊದಲೇ ಗೀತೆ ಯಲ್ಲಿಯೂ, ಖುರಾನ್ ಗ್ರಂಥದಲ್ಲಿಯೂ ಹೇಳಲಾಗಿದೆಯೆಂದು ಆಗಲೂ ಕೂಡಾ ಹೇಳಲಾರರು. ಹಾಗೆಯೇ ಈದಿನ ಅಭಿವೃದ್ಧಿ ಹೊಂದಿದ ಸೈನ್ಸು ಮೂರು ಗ್ರಂಥಗಳಲ್ಲಿ ಎಲ್ಲಿಯೋ ಒಂದುಕಡೆ ನಿಕ್ಷಿಪ್ತವಾಗಿದೆಯೆಂದು ಯಾರಿಗೂ ತಿಳಿಯದು. ಭವಿಷ್ಯತ್ತಿನಲ್ಲಿ **ಜನನ ಸಿದ್ಧಾಂತವನ್ನು** ಯಾರಾದರೂ ಎಷ್ಟುಕಾಲಕ್ಕಾದರೂ ಕಂಡುಕೊಂಡರೂ ಆ ವಿಷಯ ಗೀತೆಯಲ್ಲಿ ಸಾಂಖ್ಯ ಯೋಗದಲ್ಲಿ 22ನೆ ಶ್ಲೋಕದಲ್ಲಿ, ಖುರಾನಲ್ಲಿ ಸುರಾ ಆರರಲ್ಲಿ ಆಯತ್ 95 ರಲ್ಲಿ ಇದೆಯೆಂದು ತಿಳಿಯದೆಹೋಗಬಹುದು.

ಮೂಲ ಗ್ರಂಥಗಳಲ್ಲಿ ಕೆಲವು ವಾಕ್ಯಗಳಲ್ಲಿ ಎಷ್ಟೋ ವಿಜ್ಞಾನ ಒಳಗೊಂಡಿದೆಯೆಂದು ತಿಳಿಯವಹಾಗೆ, ನಮ್ಮ ಮಾತು ಎಲ್ಲರಿಗೂ ಸಾಕ್ಷಿಯಾಗಿ ಇರುವಂತೆ ಭಗವದ್ಗೀತೆಯಲ್ಲಿನ ಸಾಂಖ್ಯಯೋಗವೆಂಬ ಅಧ್ಯಾಯದಲ್ಲಿರುವ 22ನೆ ಶ್ಲೋಕವನ್ನು ತೆಗೆದುಕೊಂಡು, ಅದರಲ್ಲಿ ಅಡಕವಾಗಿರುವ ಸೈನ್ಸನ್ನು ವಿವರಿಸುತ್ತಾ, ಜನನ ಸಿದ್ಧಾಂತವನ್ನು ತಿಳಿಸುತ್ತಾ **ಜನನ ಮರಣ ಸಿದ್ಧಾಂತ"** ಎಂಬ ಒಂದು ಚಿಕ್ಕ ಗ್ರಂಥವನ್ನು ಬರೆದಿದ್ದೇವೆ. ಭವಿಷ್ಯತ್ತಿನಲ್ಲಿ ಯಾರಾದರೂ ತಮ್ಮ ಪರಿಶೋಧನೆಗಳಲ್ಲಿ ಜನನ ಸಿದ್ಧಾಂತವನ್ನು ಕಂಡುಕೊಂಡರೂ, ಅದು ಇಲ್ಲಿಗೆ 33 ವರ್ಷಗಳ ಕೆಳಗೆ ಅಂದರೆ ಕ್ರಿ.ಶ. 1980ನೆ ವರ್ಷದಲ್ಲಿಯೇ ನಾವು ಭೌತಿಕಶಾಸ್ತ್ರವನ್ನು ಅನುಸರಿಸಿ ಮತ್ತು ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಬರೆದಂತೆ, ಅವರು ಕಂಡುಕೊಂಡಿರುವುದು ನಾವು ಮೊದಲೇ ಹೇಳಿದ ವಿಷಯವೇಯೆಂದು ತಿಳಿದುಹೋಗುತ್ತದೆ. ಅಂತಹದರಲ್ಲಿ ಮೂಲಗ್ರಂಥಗಳಲ್ಲಿ ಎಲ್ಲಾ ಇದೆಯೆಂದು, ಈದಿನ ಅವುಗಳಲ್ಲಿ ಏನುಇಲ್ಲ ಎಂದವರಿಗೆ ಕೂಡಾ ತಿಳಿಯುತ್ತದೆ. ಈದಿನ ವಿಜ್ಞಾನಿಗಳು ಹೇಳಿದಹಾಗೆ ಸೈನ್ಸು ಮಾನವಾಳಿಗೆ ಸಹಾಯವಾಗುತ್ತದೆ ಎಂದು ನಾವು ಸಹಾ ಹೇಳುತ್ತಿದ್ದೇವೆ. ಸೈನ್ಸು ಎನ್ನುವುದು ಒಂದು ಶಾಸ್ತ್ರಕ್ಕೆ ಸಂಬಂಧಿಸಿರುವುದಲ್ಲ. ಸೈನ್ಸು ಆರು ಶಾಸ್ತ್ರಗಳಿಗೆ

ಸಂಬಂಧಿ ಸಿರುವುದು. ಆರುಶಾಸ್ತ್ರಗಳು ಮನುಷ್ಯನಿಗೆ ಉಪಯೋಗಪಟ್ಟಾಗ ಸೈನ್ಸು ಎಲ್ಲಾ ವಿಧಗಳು ಉಪಯೋಗಪಡುತ್ತಿದೆಯೆಂದು ಹೇಳಬಹುದು.

ಮೇಲಿನ ಪ್ರಶ್ನೆಯಲ್ಲಿ "ಪಾರಾಸೈಕಾಲಜೀ ಮಾನವ ಅಭಿವೃದ್ಧಿಗೆ ಸಹಾಯಕರವಾಗಿದೆಯೆಂದು ತೋರಿಸುವುದಕ್ಕೆ ಒಂದು ಉದಾಹರಣೆ ಕೂಡಾ ಇಲ್ಲ" ಎಂದು ಹೇಳಿದ್ದಾರೆ. ಆ ಮಾತನ್ನು ಕೂಡಾ ನಾವು ಖಂಡಿಸುತ್ತಿದ್ದೇವೆ. ಮೇಲಿನ ಮಾತನ್ನು ಹೇಳಿದವರು ವಿಜ್ಞಾನಿಗಳೇ ಆದರೂ, ಅವರಿಗೆ ಆರು ಶಾಸ್ತ್ರಗಳನ್ನು ಕುರಿತು ತಿಳಿಯದು. ಅವರಿಗೆ ತಿಳಿದಿರುವುದು ನಾಲ್ಕು ಶಾಸ್ತ್ರಗಳ ಬಗ್ಗೆ ಮಾತ್ರವೇ. ಉಳಿದ ಎರಡು ಶಾಸ್ತ್ರಗಳ ಬಗ್ಗೆ ತಿಳಿಯದೆಂದೇ ಹೇಳಬಹುದು. ಈದಿನ ವಿಜ್ಞಾನಿಗಳೆಂದು ಹೇಳಿಕೊಳ್ಳುವವರಿಗೆ ಬ್ರಹ್ಮವಿದ್ಯಾಶಾಸ್ತ್ರವನ್ನು ಕುರಿತು, ಹಾಗೆಯೇ ಜ್ಯೋತಿಷ್ಯಶಾಸ್ತ್ರವನ್ನು ಕುರಿತು ತಿಳಿಯದೆಂದು ಹೇಳುತ್ತಿದ್ದೇವೆ. ಏಕೆಂದರೆ! ಅವರಿಗೆ ಜ್ಯೋತಿಷ್ಯದ ಮೇಲೆ ನಂಬಿಕೆಯಿಲ್ಲ. ನಂತರ ಅವರಿಗೆ ಬ್ರಹ್ಮವಿದ್ಯಾಶಾಸ್ತ್ರ ಎನ್ನುವುದು ಇದ್ದಂತೆ ಕೂಡಾ ತಿಳಿಯದು. ಕೆಲವರು ಜ್ಯೋತಿಷ್ಯವನ್ನು ಶಾಸ್ತ್ರವಲ್ಲವೆಂದು ಹೇಳುತ್ತಿದ್ದಾರೆ. ಅಂತಹವರು ಗಣಿತ, ಖಗೋಳ, ರಸಾಯನ, ಭೌತಿಕಶಾಸ್ತ್ರ ನಾಲ್ಕು ಶಾಸ್ತ್ರಗಳು ಹೊರತು ಮತ್ತ್ಯಾವುದು ಇಲ್ಲದಂತೆ ಹೇಳುತ್ತಿರುತ್ತಾರೆ. ಆದ್ದರಿಂದ ಸೈಕಾಲಜೀಯಾಗಲಿ, ಪಾರಾಸೈ ಕಾಲಜೀಯಾಗಲಿ ಯಾವ ಶಾಸ್ತ್ರಗಳಿಗೆ ಸಂಬಂಧಿಸಿರುವವೊ ಅವರಿಗೆ ತಿಳಿಯದು. ಭೌತಿಕಶಾಸ್ತ್ರದಲ್ಲಿ ಸೈಕಾಲಜೀ ಎನ್ನುವುದು ಒಂದು ಭಾಗವೆಂದು ಕೆಲವರು ವಿಜ್ಞಾನಿಗಳು ಹೇಳುತ್ತಿದ್ದರೂ ಪಾರಾಸೈಕಾಲಜಿ ಎನ್ನುವುದು ಇಲ್ಲವೇಯಿಲ್ಲವೆಂದು, ಅದು ಮೂಢನಂಬಿಕೆಯೆಂದು ಹೇಳುತ್ತಿರುತ್ತಾರೆ. ಸೈಕಾಲಜೀ ಎನ್ನುವುದು ಒಂದು ಭಾಗವೆಂದು ಕೆಲವರು ವಿಜ್ಞಾನಿಗಳು ಹೇಳುವವರು ಕೂಡಾ ಇದ್ದಾರೆ. ಭೌತಿಕಶಾಸ್ತ್ರದ ಪ್ರಕಾರ ಸೈಕಾಲಜೀ ಎಂಬ ಪಾಠವನ್ನು (ಕೋರ್ಸನ್ನು) ಓದಿ ಸೈಕಾಲಜೀ ಡಾಕ್ಟರ್‌ಗಳಾಗಿ ಇರುವವರು ಎಷ್ಟೋಜನ ಇದ್ದಾರೆ. ಅಂತಹವರಲ್ಲಿ ಅಪರೂಪವಾಗಿ ಪಾರಾಸೈಕಾಲಜಿಯನ್ನು ಒಪ್ಪಿಕೊಳ್ಳುವವರಿದ್ದರೂ, ಬಹಳಜನ ಅದು ಇಲ್ಲವೇಯಿಲ್ಲ ಎನ್ನುವವರು ಕೂಡಾ ಇದ್ದಾರೆ. ಬಹಳಜನರಿಗೆ ಪಾರಾಸೈಕಾಲಜೀ ಎನ್ನುವುದು ಒಂದಿದೆಯೆಂದೂ, ಅದುಕೂಡ ಒಂದು ಶಾಸ್ತ್ರಕ್ಕೆ

ಸಂಬಂಧಿಸಿರುವುದೆಂದು ತಿಳಿಯದು. ಅಂತಹವರೇ ಪಾರಾಸೈಕಾಲಜೀಯಿಂದ ಯಾವುದೆ ಒಳ್ಳೆಯದಾಗಲಿಲ್ಲವೆಂದು ಹೇಳುತ್ತಿರುತ್ತಾರೆ.

ಸೈಕಾಲಜೀ ಎಂದರೆ ಮನಸ್ತತ್ವವೆಂದು ಅರ್ಥ. ಕೆಲವರು ಸೈಕಾಲಜೀಯನ್ನು (ಮನಸ್ಸು ಎಂಬುವುದನ್ನು) ನಂಬದಂತೆ ಮೂಢತ್ವದ ಕೆಳಗೆ ಜಮಕಟ್ಟುತ್ತಿದ್ದಾರೆ. ಪಾರಾಸೈಕಾಲಜೀ ಎಂದರೆ ಸೈಕಾಲಜೀಯಂತೆ, ಅದನ್ನು ಅನುಸರಿಸಿ, ಅದರಂತೆ ಇರುವುದೆಂದು ಅರ್ಥ. ಸೈಕಾಲಜೀಯಲ್ಲಿ ಜೀವಿಯು ಬುದ್ಧಿ, ಮನಸ್ಸು, ಎನ್ನುವುದನ್ನು ಕುರಿತು ಹೇಳುತ್ತಿರುವಾಗ, ಪಾರಾಸೈಕಾಲಜೀಯಲ್ಲಿ ದೇವರು, ದೆವ್ವ, ಆತ್ಮ ಎನ್ನುವವುಗಳನ್ನು ಕುರಿತು ಹೇಳುತ್ತಿದ್ದೇವೆ. ಮೊದಲಿಗೆ ಸೈಕಾಲಜೀ ಮೇಲೆ ನಂಬಿಕೆಯಿಲ್ಲದವರು ಪಾರಾಸೈಕಾಲಜೀಯನ್ನು ಸ್ವಲ್ಪವೂ  ನಂಬುವುದಿಲ್ಲ. ಸೈಕಾಲಜೀಯನ್ನು ಕೆಲವರು ಭೌತಿಕಶಾಸ್ತ್ರವೆಂದು ಒಪ್ಪಿಕೊಳ್ಳುತ್ತಿದ್ದರೂ, ಪಾರಾಸೈಕಾಲಜೀಯನ್ನು ಒಪ್ಪಿಕೊಳ್ಳುತ್ತಿಲ್ಲ. ಆದರೆ ಇಲ್ಲಿ ನಾವು ಹೇಳುವುದು ಏನೆಂದರೆ! ಯಾರು ಒಪ್ಪಿಕೊಂಡರೂ ಒಪ್ಪಿಕೊಳ್ಳದಿದ್ದರೂ, ಪಾರಾಸೈಕಾಲಜೀ ಎನ್ನುವುದು ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿರುವುದೆಂದು ಹೇಳುತ್ತಿದ್ದೇವೆ. ಭಗವದ್ಗೀತೆಯಾಗಲಿ, ಬೈಬಲ್ ಆಗಲಿ, ಖುರಾನ್‌ಆಗಲಿ ಮೂರು ಗ್ರಂಥಗಳಲ್ಲಿ ಸ್ವಲ್ಪ ಸೈಕಾಲಜೀಗೆ ಸಂಬಂಧಿಸಿದ ವಿಷಯವಿರುವಾಗ, ಹೆಚ್ಚು ಭಾಗ ಪಾರಾಸೈಕಾಲಜೀಗೆ ಸಂಬಂಧಿಸಿದ ವಿಷಯಗಳೇ ಇವೆ. ಆದ್ದರಿಂದ ಪ್ರತಿಯೊಬ್ಬರೂ ಸೈಕಾಲಜೀಯನ್ನು ನಂಬಬೇಕಾಗಿದ್ದೆ. ಹಾಗೆಯೇ ಪಾರಾ ಸೈಕಾಲಜೀಯನ್ನು ನಂಬಬೇಕಾಗಿದ್ದೆ. ಇಂತಹ ಪ್ರಶ್ನೆಯನ್ನೆ ಮತ್ತೊಂದನ್ನು ಕೆಳಗೆ ನೋಡೋಣ.

**ಪ್ರಶ್ನೆ :–** ಅತೀಂದ್ರಿಯಶಕ್ತಿ ಕೆಲವುಬಾರಿಯೇ ಕೆಲಸಮಾಡುವುದು, ಕೆಲವುಬಾರಿ ಕೆಲಸ ಮಾಡದೆಹೋಗುವುದು ನಡೆಯುತ್ತದೆ. ಏಕೆ ಹಾಗೆ ನಡೆಯುತ್ತದೆ? ವಾಸ್ತವಕ್ಕೆ ಅತೀಂದ್ರಿಯಶಕ್ತಿಗಳು ಎನ್ನುವವು ಇವೆಯಾ?

**ಉತ್ತರ :–** ಇಂದ್ರಿಯ ಎಂದರೆ ಶರೀರದಲ್ಲಿ ಒಂದು ಭಾಗವೆಂದು ಹೇಳಬಹುದು. ಶರೀರದಲ್ಲಿ ಹತ್ತು ಇಂದ್ರಿಯಗಳು ಎಲ್ಲರಿಗೂ ಕಾಣಿಸುವಂತೆ ಇವೆ. ಅವು

ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು ಎಂಬ ಎರಡು ಭಾಗಗಳಾಗಿ ಇವೆ. ಕಾಲು, ಕೈಗಳು, ಬಾಯಿ, ಗುದ, ಲಿಂಗ ಎಂಬ ಐದು ಕೆಲಸಮಾಡುವ ಇಂದ್ರಿಯಗಳನ್ನು ಕರ್ಮೇಂದ್ರಿಯಗಳೆಂದು ಹೇಳುತ್ತೇವೆ. ಹಾಗೆಯೇ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ ಎಂಬ ಐದು ಹೊರಗಿನ ವಿಷಯಗಳನ್ನು ತಿಳಿಸುವ ಇಂದ್ರಿಯಗಳನ್ನು ಜ್ಞಾನೇಂದ್ರಿಯಗಳೆಂದು ಹೇಳುತ್ತೇವೆ. ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳನ್ನು ಸೇರಿಸಿ ಒಟ್ಟಾರೆ ಭೌತಿಕಶರೀರ ಅನ್ನುತ್ತೇವೆ. ಹತ್ತು ಇಂದ್ರಿಯಗಳು ಹೊರಗೆ ಕಾಣಿಸುವವಾಗಿ ಇರುತ್ತಾ ಶರೀರಕ್ಕೆ ಆಕಾರವನ್ನು ಕೊಟ್ಟಿವೆ. ಆದ್ದರಿಂದ ಹತ್ತು ಭಾಗಗಳನ್ನು ಸ್ಥೂಲಶರೀರ ಅಥವಾ ಭೌತಿಕಶರೀರ ಅನ್ನುತ್ತೇವೆ. ಕಾಣಿಸದ ಇಂದ್ರಿಯಗಳು ಇನ್ನುಕೆಲವು ಶರೀರಗಳಲ್ಲಿ ಇವೆ. ಅವುಗಳನ್ನು ಸೂಕ್ಷ್ಮಶರೀರ ಅನ್ನುತ್ತಿದ್ದೇವೆ. ಸೂಕ್ಷ್ಮಶರೀರ ಅಥವಾ ಅಭೌತಿಕ ಶರೀರ ಎನ್ನುವುದರಲ್ಲಿ ಒಟ್ಟು 14 ಭಾಗಗಳು ಅಥವಾ 14 ವಿಧಗಳ ಕಾಣಿಸದ ಇಂದ್ರಿಯಗಳು ಇವೆ. ಮನುಷ್ಯನ ಶರೀರ ಹೊರಗೆ ಕಾಣಿಸುವ ಸ್ಥೂಲಶರೀರವಾಗಿ ಸ್ವಲ್ಪ, ಹೊರಗೆ ಕಾಣಿಸದ ಸೂಕ್ಷ್ಮಶರೀರವಾಗಿ ಸ್ವಲ್ಪ ಇದೆ. ಶರೀರದಲ್ಲಿ ಜೀವಾತ್ಮನನ್ನು ಪಕಕ್ಕೆ ಇಟ್ಟರೆ ಶರೀರ ಭಾಗಗಳು ಸ್ಥೂಲವಾಗಿ 10, ಸೂಕ್ಷ್ಮವಾಗಿ 14 ಒಟ್ಟು 24 ಇವೆಯೆಂದು ತಿಳಿಯುತ್ತಿದೆ. 24 ಭಾಗಗಳನ್ನು ಇಂದ್ರಿಯಗಳೆಂಬ ಹೆಸರಿನಿಂದಲೇ ಕರೆಯುತ್ತೇವೆ. ಬಾಹ್ಯೇಂದ್ರಿಯಗಳು, ಅಂತರೇಂದ್ರಿಯಗಳೆಂದು ಹೊರಗಿರುವವುಗಳನ್ನು ಒಳಗಿರುವವುಗಳನ್ನು ಹೇಳುತ್ತಿರುತ್ತೇವೆ. ಹೇಗಾದಾರೇನು ಇಂದ್ರಿಯ ಎಂಬ ಹೆಸರು 24 ಭಾಗಗಳಿಗೆ ಇದೆ.

ಮೊದಲು ಇಂದ್ರಿಯ ಎನ್ನುವುದಕ್ಕೆ ಪೂರ್ತಿ ಅರ್ಥ ತಿಳಿದುಕೊಂಡರೆ, ನಂತರ ಅತೀಂದ್ರಿಯ ಅಂದರೆ ಅರ್ಥವೇನೊ ಸುಲಭವಾಗಿ ತಿಳಿಯಬಲ್ಲದು. ಇಂದ್ರಿಯ ಎಂಬ ಪದವನ್ನು ಎರಡು ಭಾಗಗಳಾಗಿ ವಿಭಜಿಸಬಹುದು. ಂದ್+ರಿಯ=ಇಂದ್ರಿಯ ಆಗುತ್ತಿದೆ. **ಇಂದ್** ಎಂದರೆ ಆತ್ಮ ಅಥವಾ ಆತ್ಮ ಶಕ್ತಿ ಎಂದು ಅರ್ಥ. **ಇಂದು ಎಂದರೆ ಚಂದ್ರನು** ಎಂದು ಅರ್ಥವಿದೆ. ಚಂದ್ರನು ಜ್ಞಾನಕ್ಕೆ ಚಿಹ್ನೆಯಾಗಿ ಇದ್ದಾನೆ. ರಾತ್ರಿಸಮಯ ಕಾಣಿಸದ ಸೂರ್ಯಕಿರಣಗಳು

ಚಂದ್ರನ ಮೇಲೆಬಿದ್ದು ಚಂದ್ರಕಿರಣಗಳಾಗಿ ಬದಲಾಗಿ ಬೆಳದಿಂಗಳ(ಕಾಂತಿ) ರೂಪದಲ್ಲಿ ಭೂಮಿಮೇಲೆ ವ್ಯಾಪಿಸುತ್ತಿವೆ. ಹಾಗೆಯೇ ಕಾಣಿಸದ ಪರಮಾತ್ಮ ಶಕ್ತಿ ಆತ್ಮಮೇಲೆಬಿದ್ದು ಅದು ಜ್ಞಾನಶಕ್ತಿಯಾಗಿ ಬದಲಾಗಿ ಶರೀರವೆಲ್ಲಾ ವ್ಯಾಪಿಸಿದೆ. ಸೂರ್ಯಕಿರಣ ಚಂದ್ರಕಿರಣವಾಗಿ ಬೆಳದಿಂಗಳಾಗಿ ಭೂಮಿಮೇಲೆ ಪ್ರಕಾಶಿಸಿದಂತೆ, ಪರಮಾತ್ಮಶಕ್ತಿ ಆತ್ಮಶಕ್ತಿಯಾಗಿ ಬದಲಾಗಿ ಅದು ಇಂದ್ರಿಯಗಳ ಜ್ಞಾನವಾಗಿ ಪ್ರಕಾಶಿಸುತ್ತಿದೆ. ಶರೀರ ಭಾಗಕ್ಕೆ ಆತ್ಮಶಕ್ತಿ ಸೇರಿದಾಗ ಅದು ಇಂದ್ರಿಯಶಕ್ತಿಯಾಗಿ ತಯಾರಾಗುತ್ತಿದೆ. ಶರೀರದಲ್ಲಿ ಯಾವ ಭಾಗವನ್ನಾದರೂ ಆತ್ಮಶಕ್ತಿ ಸೇರಿರುವುದರಿಂದ ಅದನ್ನು ಇಂದ್ರಿಯ ಎನ್ನುತ್ತೇವೆ. ಈ ವಿಧವಾಗಿ ಸ್ಥೂಲವಾಗಿ 10 ಭಾಗಗಳನ್ನೂ, ಸೂಕ್ಷ್ಮವಾಗಿ 14 ಭಾಗಗಳನ್ನೂ ಒಟ್ಟು 24 ಭಾಗಗಳನ್ನು 24 ಇಂದ್ರಿಯಗಳೆಂದು ಹೇಳುತ್ತಿದ್ದೇವೆ. ಬಾಹ್ಯೇಂದ್ರಿಯಗಳು ಮತ್ತು ಅಂತರೇಂದ್ರಿಯಗಳು ಎರಡೂ ಆತ್ಮಶಕ್ತಿ ವ್ಯಾಪಿಸಿರುವವಾಗಿ ಇವೆ. ಶರೀರದಲ್ಲಿ ಪ್ರತಿ ಭಾಗಕ್ಕು ಇಂದ್ರಿಯಶಕ್ತಿ ಇದೆ. ಆದ್ದರಿಂದ ಅದನ್ನು ಇಂದ್ರಿಯ ಅನ್ನುತ್ತಿದ್ದೇವೆ. ಹುಟ್ಟಿನಿಂದಲೇ ಸಹಜವಾಗಿ ಪ್ರತಿ ಇಂದ್ರಿಯಕ್ಕು ಶಕ್ತಿ ಇದೆ. ಅದು ಇಂದ್ರಿಯಕ್ಕೆ ಸಂಬಂಧಿಸಿದ ಜ್ಞಾನಶಕ್ತಿಯಾಗಿರುವುದನ್ನು ಆತ್ಮಶಕ್ತಿ ಅನ್ನುತ್ತಿದ್ದೇವೆ. ಆ ಆತ್ಮಶಕ್ತಿಯನ್ನೆ ಬದಲಾದ ಪರಮಾತ್ಮಶಕ್ತಿ ಎನ್ನುತ್ತಿದ್ದೇವೆ. ಇದರಿಂದ ಪರಮಾತ್ಮಶಕ್ತಿ ಆತ್ಮಶಕ್ತಿಯಾಗಿ, ಆತ್ಮಶಕ್ತಿ ಜ್ಞಾನಶಕ್ತಿಯಾಗಿ ಬದಲಾಗಿದೆಯೆಂದು ಅರ್ಥ.

ಭೂಮಿಮೇಲಾಗಲಿ, ವಿಶ್ವದಲ್ಲಾಗಲಿ ದೇವರೂ ದೇವರಶಕ್ತಿಯನ್ನು ಮೀರಿದ ಶಕ್ತಿ ಯಾವುದು ಇಲ್ಲ. ಶರೀರದಲ್ಲಿರುವ ಪರಮಾತ್ಮಶಕ್ತಿ ಆತ್ಮಶಕ್ತಿಯಾಗಿ ಬದಲಾಗಿ, ಆತ್ಮಶಕ್ತಿ ಇಂದ್ರಿಯಶಕ್ತಿಯಾಗಿ ಪ್ರತಿ ಶರೀರ ಭಾಗದಲ್ಲಿಯೂ ಇದೆಯೆಂದು ತಿಳಿದುಕೊಂಡಿದ್ದೇವೆ. ಶರೀರದಲ್ಲಿ ಪರಮಾತ್ಮ ಇದ್ದರೂ ಆತನು ರೂಪ, ನಾಮ, ಕ್ರಿಯಾ ರಹಿತನಾಗಿದ್ದಾನೆ. ಆದ್ದರಿಂದ ಶರೀರದಲ್ಲಿನ ಪರಮಾತ್ಮ ಏನು ಮಾಡದೆ ಸಾಕ್ಷಿಯಾಗಿ ಸುಮ್ಮನಿದ್ದಾನೆ. ದೇವರಾದ ಪರಮಾತ್ಮ ಶರೀರದಲ್ಲಿ ಸುಮ್ಮನಿದ್ದು ಹೋದರೆ, ಪರಮಾತ್ಮಶಕ್ತಿಯನ್ನು ಹೊಂದಿ ಚೈತನ್ಯವಂತವಾದ ಆತ್ಮ, ತನ್ನಶಕ್ತಿಯನ್ನು ಶರೀರವೆಲ್ಲಾ ವ್ಯಾಪಿಸುವಂತೆಮಾಡಿ, ಶರೀರಕ್ಕೆ

ಅಧಿಪತಿಯಾಗಿ ಇದ್ದೂ, ಶರೀರವನ್ನು ಕರ್ಮಪ್ರಕಾರ ಪಾಲಿಸುತ್ತಿದೆ. ಪರಮಾತ್ಮ ಯಾವುದಕ್ಕು ಕೆಲಸಕ್ಕೆಬಾರದೆ, ಏನು ಮಾಡದೆ, ಸುಮ್ಮನೆ ಶರೀರದಲ್ಲಿ ಏಕಿರಬೇಕೆಂದು ಪ್ರಶ್ನಿಸಿಕೊಂಡರೂ, ಅದಕ್ಕೆ ಈ ವಿಧವಾಗಿ ಸಮಾಧಾನ ದೊರೆಯುತ್ತಿದೆ. ಚಂದ್ರನು ಪ್ರಕಾಶಿಸಬೇಕೆಂದರೆ ಚಂದ್ರನ ಮೇಲೆ ಸೂರ್ಯ ಕಿರಣಗಳು ಬೀಳಬೇಕು. ಚಂದ್ರನ ಮೇಲೆ ಬಿದ್ದ ಸೂರ್ಯಕಿರಣಗಳು ಚಂದ್ರಕಿರಣಗಳಾಗಿ ಭೂಮಿಮೇಲಕ್ಕೆ ಬೆಳಕಿನ ರೂಪದಲ್ಲಿ ಬರುತ್ತೀವೆ. ರಾತ್ರಿಸಮಯ ಚಂದ್ರನು ಪ್ರಕಾಶಿಸುವಾಗ ಸೂರ್ಯನು ಎಲ್ಲಿಯೂ ಕಾಣಿಸುವುದಿಲ್ಲ. ಹಾಗೆಯೇ ಆತ್ಮ ಶರೀರಭಾಗಳೆಲ್ಲವನ್ನು ಕದಲಿಸಿ ಕೆಲಸ ಮಾಡುತ್ತಿರುವಾಗ ಪರಮಾತ್ಮನ ಜೋಕೆ ಎಲ್ಲಿಯೂ ಇರುವುದಿಲ್ಲ. ಆತ್ಮ ಕೆಲಸ ಮಾಡುತ್ತಿದೆ ಯೆಂದರೂ, ಆತ್ಮ ಶರೀರಕ್ಕೆ ಅಧಿಪತಿಯಾಗಿ ಇದೆಯೆಂದರೂ, ದೇವರು ಮಾಡಬೇಕಾದ ಕೆಲಸಗಳೆಲ್ಲವನ್ನು ದೇವರಂತೆ ಆತ್ಮ ಮಾಡುತ್ತಿದೆಯೆಂದರೂ, ಅದು ಪರಮಾತ್ಮಶಕ್ತಿಯಿಂದಲೇ ಆತ್ಮಕ್ಕೆ ಸಾಧ್ಯವಾಗುತ್ತಿದೆ. ಪರಮಾತ್ಮ (ದೇವರು) ಎಲ್ಲಿಯಾಗಲಿ, ಯಾವ ಕೆಲಸದಹತ್ತಿರವಾಗಲಿ ಕಾಣಿಸುವುದಿಲ್ಲ. ಎಲ್ಲವುಗಳಹತ್ತಿರ ಆತ್ಮವೇ ಕಾಣಿಸುತ್ತಿದೆ. ಆತ್ಮ ಶರೀರವೆಲ್ಲಾ ವ್ಯಾಪಿಸಿರುವುದಕ್ಕೆ ಕಾರಣ ಪರಮಾತ್ಮ. ಪರಮಾತ್ಮ ಶರೀರವೆಲ್ಲಾ ಆವಹಿಸಿದ್ದು ತಾನು ಎಲ್ಲಿಯೂ ಕಾಣಿಸದೆ ಆತ್ಮವನ್ನು ಶರೀರವೆಲ್ಲಾ ವಿಸ್ತರಿಸುವಂತೆ ಮಾಡಿದೆ. ದೈವಶಕ್ತಿಯೇ ಶರೀರವೆಲ್ಲಾ ಇದ್ದರೂ ಅದು ಆತ್ಮಶಕ್ತಿಯಾಗಿ ತಿಳಿಯುತ್ತಿದೆ. ಸೂರ್ಯಕಿರಣಗಳು ಚಂದ್ರನಮೇಲೆ ಬಿದ್ದು, ಸೂರ್ಯಕಿರಣವಾಗಿ ಅಲ್ಲದೆ ಚಂದ್ರಕಿರಣದಂತೆ ಭೂಮಿಮೇಲೆ ವ್ಯಾಪಿಸಿದಂತೆ, ಶರೀರವೆಲ್ಲಾ ವ್ಯಾಪಿಸಿರುವ ದೈವಶಕ್ತಿ, ಶರೀರವೆಲ್ಲಾ ವ್ಯಾಪಿಸಿರುವ ಆತ್ಮಮೇಲೆ ಬಿದ್ದು ಆತ್ಮಶಕ್ತಿಯಂತೆ ಕಾಣಿಸುತ್ತಾ, ದೈವಶಕ್ತಿಯಾಗಿ ಎಲ್ಲಿಯೂ ಕಾಣಿಸದೆ, ಶರೀರವೆಲ್ಲಾ ಆತ್ಮ ಚೈತನ್ಯವೆಂಬ ಹೆಸರಿನಿಂದ ವ್ಯಾಪಿಸಿದೆ, ಆತ್ಮಶಕ್ತಿ ಎಂಬ ಹೆಸರಿನಿಂದ ವ್ಯಾಪಿಸಿರುವ ಪರಮಾತ್ಮಶಕ್ತಿ (ದೈವಶಕ್ತಿ) ಪ್ರತಿ ಅವಯವಕ್ಕು ಹರಡಿದೆ. ಶರೀರದಲ್ಲಿನ ಹೊರಗಿನ ಮತ್ತು ಒಳಗಿನ ಅವಯವಗಳು 24ನ್ನು ಇಂದ್ರಿಯಗಳೆಂಬ ಹೆಸರಿನಿಂದ ಕರೆಯುತ್ತಿದ್ದೇವೆ. ಇಂದ್ರಿಯಗಳೆಂದರೆ ಆತ್ಮಶಕ್ತಿ ಯಿಂದ ಕೂಡಿಕೊಂಡಿರುವವೆಂದೂ ಇಲ್ಲವೆ ದೈವಶಕ್ತಿಯಿಂದ ಕೂಡಿಕೊಂಡಿರುವ ವೆಂದು ಹೇಳಬಹುದು.

ಪ್ರತಿ ಇಂದ್ರಿಯ ಆತ್ಮಶಕ್ತಿಯಿಂದ ಕೂಡಿಕೊಂಡಿದೆ, ಆದ್ದರಿಂದ ಅದು ಸ್ವಲ್ಪ ಕೆಲಸವನ್ನು ಮಾಡುತ್ತಿದೆ. ಪ್ರತಿ ಇಂದ್ರಿಯ ಸ್ವಲ್ಪ ಪರಿಮಿತಿಯಿಂದ ಕೂಡಿಕೊಂಡ ಕೆಲಸವನ್ನು ಮಾಡುತ್ತಿದೆ. ಯಾವ ಇಂದ್ರಿಯದ ಮೂಲಕ ಯಾವ ಕೆಲಸ ನಡೆದರೂ, ಅದು ಆತ್ಮಶಕ್ತಿಯಿಂದಲೇ (ದೈವಶಕ್ತಿಯಿಂದಲೇ) ನಡೆಯುತ್ತಿದೆ. ಇದು ಸರ್ವಸಾಧಾರಣವಾಗಿ ಶರೀರದಲ್ಲಿ ನಡೆಯುವ ಇಂದ್ರಿಯ ಯಂತ್ರಾಂಗ. ಆದರೆ ಗಮನಿಸಬೇಕಾದ ವಿಷಯವೊಂದಿದೆ. ಒಬ್ಬ ವ್ಯಕ್ತಿಯ ಸ್ಪರ್ಶೆಯಿಂದ ಇನ್ನೊಬ್ಬನ ಶರೀರದಲ್ಲಿನ ರೋಗ ಹೋದರೂ, ಒಬ್ಬನ ನೋಟದಿಂದ ಇನ್ನೊಬ್ಬರಲ್ಲಿರುವ ದೆವ್ವಗಳು ಓಡಿಹೋದರೂ, ಒಬ್ಬರ ಬಾಯಿ ಮಾತಿನಿಂದ ಅದ್ಭುತ ನಡೆದರೂ, ಆ ಮನುಷ್ಯನನ್ನು ಪ್ರತ್ಯೇಕವಾದವನೆನ್ನುತ್ತಾರೆ. ಅವನಿಗೆ ಅತೀಂದ್ರಿಯಶಕ್ತಿಗಳಿವೆಯೆಂದು ಹೇಳುತ್ತಾರೆ. ಅಲ್ಲಿಗೆ ಅಂತಹ ಇಂದ್ರಿಯಗಳಿರುವ ವ್ಯಕ್ತಿ ತನಗೆ ತಾನಾಗಿ ದೊಡ್ಡದಾಗಿ ಭಾವಿಸಿಕೊಳ್ಳುತ್ತಾನೆ. ಕೆಲವು ಸಂದರ್ಭಗಳಲ್ಲಿ ತಾನೇ ದೇವರೆಂದು ಅಂದುಕೊಳ್ಳುತ್ತಾನೆ. ಈಗ ನಮಗೆ ಒಂದು ಪ್ರಶ್ನೆ ಬರುತ್ತದೆ. ಅದೇನೆಂದರೆ! ಒಬ್ಬ ಮನುಷ್ಯ ಇಂದ್ರಿಯಗಳಿಗೆ ಅತೀಂದ್ರಿಯಶಕ್ತಿಗಳಿರುತ್ತವಾ? ಅಂತಹ ಇಂದ್ರಿಯಗಳಿರುವ ವ್ಯಕ್ತಿ ದೇವರಿಗೆ ಸಮಾನವಾ? ಎಂದು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ಮನುಷ್ಯನ ಜನ್ಮಂದಲೇ ಆತನ ಶರೀರಕ್ಕಿರುವ 24 ಭಾಗಗಳಿಗೆ ಆತ್ಮಶಕ್ತಿ ಹರುಡುತ್ತಿದೆ. 24 ಭಾಗಗಳಲ್ಲಿ ಆತ್ಮಶಕ್ತಿ ಇರುವುದರಿಂದ ಅವುಗಳನ್ನು ಇಂದ್ರಿಯಗಳು ಅನ್ನುತ್ತಿದ್ದೇವೆ. ಎಲ್ಲಿಯಾದರೂ ಅಪರೂಪವಾಗಿ 24 ಇಂದ್ರಿಯಗ ಳಲ್ಲಿ ಶರೀರಕ್ಕೆ ಹೊರಗಿರುವ ಮೂರು ಜ್ಞಾನೇಂದ್ರಿಯಗಳು ಅವುಗಳಿರುವ ಶಕ್ತಿಗಿಂತ ಹೆಚ್ಚು ಶಕ್ತಿಇರುವವಾಗಿದ್ದು ಅವುಗಳಿಂದ ಕೆಲವು ಪ್ರತ್ಯೇಕವಾದ ಕೆಲಸಗಳು ನಡೆಯುತ್ತವೆ. ಹಾಗೆಯೆ ಶರೀರದೊಳಗಿರುವ ಮನಸ್ಸಿಗು ಕೂಡಾ ಹೊರಗಿನ ಮೂರು ಜ್ಞಾನೇಂದ್ರಿಯಗಳಿಗು ಇರುವ ಪ್ರತ್ಯೇಕತೆ ಬರುತ್ತದೆ. ಶರೀರದ ಹೊರಗಿರುವ ಕಣ್ಣು, ಚರ್ಮ, ನಾಲಿಗೆಗೆ ಪ್ರತ್ಯೇಕತೆ ಬರಬಹುದು. ಹಾಗೆಯೇ ಶರೀರದೊಳಗೆ ಈ ಮೂರು ಜ್ಞಾನೇಂದ್ರಿಗಳಿಂದ ಸಂಬಂಧವಿರುವ ಮನಸ್ಸಿಗೂ

ಕೂಡಾ ಪ್ರತ್ಯೇಕತೆ ಉಂಟಾಗಬಹುದು. ಈ ನಾಲ್ಕು ಇಂದ್ರಿಯಗಳಲ್ಲಿ ಯಾವುದೊಂದಾದರೂ ಹೆಚ್ಚಿನಶಕ್ತಿ ಇರುವುದಾಗಿ ಕಾಣಿಸಬಹುದು. ಹಾಗೆ ಕಾಣಿಸುವುದರಿಂದ ಅವನನ್ನು ಅತೀಂದ್ರಿಯ ಶಕ್ತಿ ಇರುವವನೆಂದು ಅನ್ನುವುದು ನಡೆಯುತ್ತಿದೆ. ಆದರೆ ನಾವು ಏನನ್ನುತ್ತಿದ್ದೇವೆಂದರೆ! ಶರೀರದಲ್ಲಿ ಒಂದು ಇಂದ್ರಿಯಕ್ಕೆ ಆತ್ಮಶಕ್ತಿ ಹುಟ್ಟಿನಿಂದಲೇ ಬಂದಿದೆ. ಮಧ್ಯದಲ್ಲಿ ಕೆಲವರಿಗೆ ಹೆಚ್ಚು ಎಂದಾಗಲಿ, ಕೆಲವರಿಗೆ ಕಡಿಮೆ ಎಂದಾಗಲಿ ಇರುವುದಿಲ್ಲ. ಎಲ್ಲಿಯಾದರೂ ಪ್ರತ್ಯೇಕವಾದ ಕೆಲಸವನ್ನು ಮಾಡುವ ಇಂದ್ರಿಯಗಳು ಯಾರಿಗಾದರೂ ಇದ್ದರೂ, ಅವನನ್ನು ದೊಡ್ಡವನೆಂದಾಗಲಿ, ದೇವರಿಗೆ ಸಮಾನನೆಂದಾಗಲಿ ಹೇಳುವುದಕ್ಕೆ ಸಾಧ್ಯವಿಲ್ಲ.

ಮಾನವನ ಶರೀರ ಭಾಗಗಳಲ್ಲಿ ಆತ್ಮಶಕ್ತಿ ಇಂದ್ರಿಯಶಕ್ತಿಯಾಗಿ ನಿಂತಿದೆ. ಆತ್ಮಶಕ್ತಿ ಪರಮಾತ್ಮಶಕ್ತಿ ಆಗಿರುವುದರಿಂದ ಅದನ್ನು ಮೀರಿದಶಕ್ತಿ ಇರುವುದಿಲ್ಲ. ಮನುಷ್ಯನಿಗಿರುವ ಇಂದ್ರಿಯ ಸಾಮರ್ಥ್ಯಕ್ಕೆ ಮೀರಿದ ಹೆಚ್ಚಿನ ಕೆಲಸಮಾಡಿದರೂ, ಸಾಧಾರಣ ಕೆಲಸ ಮಾಡಿದರೂ, ಅದ್ಭುತವಾದ ಕಾರ್ಯವನ್ನು ಮಾಡಿದರೂ, ಎಲ್ಲಾ ಕೆಲಸಗಳು ಆತ್ಮಶಕ್ತಿಯೇ ಮಾಡುತ್ತಿದೆ. ಆತ್ಮ ಅಂದುಕೊಂಡರೆ ಒಂದು ಇಂದ್ರಿಯದ ಮೂಲಕ ಎಂತಹ ಅದ್ಭುತ ಕಾರ್ಯವನ್ನಾದರೂ ಮಾಡಬಹುದು. ಆತ್ಮಕ್ಕೆ ಅಸಾಧ್ಯವಾದ ಕೆಲಸವಂತೂ ಯಾವುದು ಇಲ್ಲ. ಆತ್ಮಕ್ಕೆ ಎಲ್ಲಾ ಸಾಧ್ಯವಾದ ಕೆಲಸಗಳಾದಾಗ ಇಂದ್ರಿಯಶಕ್ತಿಗೆ ಮೀರಿದ ಶಕ್ತಿಯಿಂದ ಕೆಲಸವಿಲ್ಲ ಅಲ್ಲವೆ! ಎಂತಹ ಕೆಲಸವಾದರೂ ಅವಯವಕ್ಕಿರುವ ಇಂದ್ರಿಯಶಕ್ತಿಯೇ ಮಾಡುತ್ತದೆ. ಅಂತಹದರಲ್ಲಿ ಅತಿ+ಇಂದ್ರಿಯ=ಅತೀಂದ್ರಿಯಶಕ್ತಿ ಅಗತ್ಯವಿಲ್ಲ. ಯಾವ ಮನುಷ್ಯನಲ್ಲಾದರೂ ಆತ್ಮ ಅಂದುಕೊಂಡರೆ ಎಂಥಹ ಅದ್ಭುತ ಕಾರ್ಯವನ್ನಾದರೂ ಕ್ಷಣಗಳಲ್ಲಿ ಮಾಡುತ್ತದೆ. ಆತ್ಮಜ್ಞಾನ ತಿಳಿದವನಿಗೆ ಎಲ್ಲವನ್ನು ಆತ್ಮವೇ ಮಾಡುತ್ತಿದೆಯೆಂದು ತಿಳಿದರೂ, ಆತ್ಮ ಹಿಂದೆ ಪರಮಾತ್ಮ ಇದೆಯೆಂದು, ಪರಮಾತ್ಮ ಶಕ್ತಿಯೇ ಜೀವಿಗಳೆಲ್ಲರನ್ನು ಆತ್ಮದಿಂದ ಆಡಿಸುತ್ತಿದೆಂದು ಅವನಿಗೆ ತಿಳಿಯುತ್ತದೆ. ಶರೀರದಲ್ಲಿ ನಡೆಯುವ ಕೆಲಸಗಳೆಲ್ಲ ಆತ್ಮಯಿಂದ ನಡೆಯುತ್ತಿದ್ದರೂ, ಆತ್ಮ ಕೆಲಸಗಳನ್ನು ಮಾಡುತ್ತಿರುವಂತೆ ಎಲ್ಲಿಯೂ ಕಾಣಿಸುವುದಿಲ್ಲ. ಶರೀರದಲ್ಲಿ

ಆತ್ಮ ಎಲ್ಲಾ ಕೆಲಸಗಳನ್ನು ಮಾಡುತ್ತಿದ್ದರೂ ಸ್ವಲ್ಪವೂ ಹೊರಗೆ ತಿಳಿಯುತ್ತಿಲ್ಲ. ಹಾಗೆಯೇ ಆತ್ಮಕ್ಕೆ ಆಧಾರವಾಗಿರುವ ಪರಮಾತ್ಮಕೂಡಾ ಯಾರಿಗೂ ತಿಳಿಯುತ್ತಿಲ್ಲ. ಶರೀರದಲ್ಲಿ ಮುಖ್ಯಪಾತ್ರಗಳನ್ನು ಪೋಷಿಸುತ್ತಿರುವ ಆತ್ಮ ಮತ್ತು ಅದರಹಿಂದಿರುವ ಪರಮಾತ್ಮ ಕೂಡಾ ಯಾರಿಗೂ ತಿಳಿಯದಿರುವುದರಿಂದ ಯಾವ ಕಾರ್ಯವೂ ಮಾಡದ ಜೀವಾತ್ಮ, ಯಾವ ಶಕ್ತಿಯಿಲ್ಲದ ಜೀವಾತ್ಮ ತಾನೇ ಎಲ್ಲಾ ಮಾಡುತ್ತಿದ್ದೇನೆಂದು ತಿಳಿಯುತ್ತಿದೆ. ನಾನೇ ಮಾಡುತ್ತಿದ್ದೇನೆಂದು ಇತರರೊಂದಿಗು ಸಹಾ ಹೇಳುತ್ತಿದೆ. ತನಗೆ ಯಾವ ಶಕ್ತಿ ಇಲ್ಲದಿದ್ದರೂ, ತಾನು ಯಾವ ಕೆಲಸಗಳೂ ಮಾಡದಿದ್ದರೂ, ಯಾವಾಗಾದರೂ ತನ್ನ ಇಂದ್ರಿಯಗಳ ಮೂಲಕ ಏನಾದರೂ ಅದ್ಭುತ ಕಾರ್ಯ ನಡೆದರೆ, ಆ ಅದ್ಭುತವನ್ನು ತಾನೇ ಮಾಡಿದಂತೆ, ಆ ಶರೀರದಲ್ಲಿನ ಜೀವಿಯು ಅಂದುಕೊಳ್ಳುವುದು ನಡೆಯುತ್ತಿದೆ. ತಾನು ಅದ್ಭುತ ಕಾರ್ಯಗಳನ್ನು ಮಾಡಿದ್ದೇನೆಂದು ಅಂದುಕೊಂಡವನು ತನ್ನನ್ನು ತಾನು ದೊಡ್ಡದಾಗಿ ಹೇಳಿಕೊಳ್ಳುವುದಕ್ಕೆ ಮೊದಲುಮಾಡುತ್ತಾನೆ. ಅದರಿಂದ ತನ್ನನ್ನು ಎಷ್ಟು ದೊಡ್ಡವನನ್ನಾಗಾದರೂ ಹೋಲಿಸಿಕೊಳ್ಳಬಹುದು. ಕೊನೆಗೆ ತನ್ನನ್ನೇ ದೇವರನ್ನಾಗಿಯೂ ಊಹಿಸಿಕೊಳ್ಳಬಹುದು.

ಇಂದ್ರಿಯಗಳ ಮೂಲಕ ಆತ್ಮ ಮಹತ್ಯವಾದ ಅಥವಾ ಅದ್ಭತವಾದ ಕಾರ್ಯಗಳನ್ನು ಮಾಡಿದರೂ, ಅದು ಆತ್ಮ ಇಷ್ಟದ ಪ್ರಕಾರ ನಡೆದ ಕಾರ್ಯವೇಯಾಗಲಿ, ಇಂದ್ರಿಯಗಳಿಗಿರುವ ಪ್ರತ್ಯೇಕಶಕ್ತಿಯಿಂದ ಅಲ್ಲವೆಂದು ತಿಳಿಯಬೇಕು. ಇಂದ್ರಿಯಗಳಿಗೆ ಆತ್ಮಶಕ್ತಿ ಹೊರತು ಪ್ರತ್ಯೇಕಿಸಿ ಯಾವ ಶಕ್ತಿ ಇಲ್ಲ. ಆದ್ದರಿಂದ ಇಂದ್ರಿಯಗಳಿಗೆ ಅತೀಂದ್ರಿಯಶಕ್ತಿಗಳು ಇಲ್ಲವೆಂದು, ಇಂದ್ರಿಯಗಳು ಅಂದುಕೊಂಡರೆ ಏನು ನಡೆಯುವುದಿಲ್ಲವೆಂದು ಹೇಳುತ್ತಿದ್ದೇವೆ. ಶರೀರದಲ್ಲಿ ಪರಮಾತ್ಮಶಕ್ತಿ ಎಲ್ಲವನ್ನು ಮಾಡುತ್ತದೆನ್ನುವುದಕ್ಕೆ ಗೀತೆಯಲ್ಲಿ ವಿಭೂತಿಯೋಗದಲ್ಲಿರುವ 20ನೆ ಶ್ಲೋಕದಲ್ಲಿ ಹೀಗಿದೆ.

**ಶ್ಲೋ॥ ಅಹಮಾತ್ಮಾ ಗುಡಾಕೇಶ! ಸರ್ವಭೂತಾಶಯ ಸ್ಥಿತಃ**
**ಅಹ ಮಾದಿಶ್ಚ ಮಧ್ಯಂಚ ಭೂತಾನಾ ಮಂತ ಏವಚ.**

**ಭಾವನೆ :–** "ಎಲ್ಲಾ ಜೀವರಾಶಿಗಳಿಗು ಆತ್ಮ ನಾನೇ ಆಗುತ್ತಾ ಅವುಗಳಿಗೆ ಆಧಾರವಾಗಿದ್ದೇನೆ. ಭೂಮಿಮೇಲೆ ಸೃಷ್ಟಿಯನ್ನು, ಸ್ಥಿತಿಯನ್ನು, ಮರಣವನ್ನು ಜೀವರಾಶಿಗಳು ನನ್ನಿಂದಲೇ ಪಡೆಯುತ್ತಿವೆ." ಈ ಶ್ಲೋಕದಲ್ಲಿ ಸ್ವತಹವಾಗಿ ಪರಮಾತ್ಮನೇ ತಾನು ಎಲ್ಲಾ ಜೀವ ಶರೀರಗಳಲ್ಲಿಯೂ ಆತ್ಮನಾಗಿದ್ದೇನೆಂದು, ಅವೆಲ್ಲ ಹುಟ್ಟುವುದಕ್ಕೆ, ಬದುಕುವುದಕ್ಕೆ, ಸಾಯಿವುದಕ್ಕು ಆತ್ಮವಾಗಿರುವ ತನ್ನ ಶಕ್ತಿಯೇ ಕಾರಣವಾಗಿದೆಯೆಂದು ತಿಳಿಸಿದ್ದಾನೆ.

ಪರಮಾತ್ಮ ಏನು ಅಂದುಕೊಂಡರೆ ಅದು ಶಾಸನವಾಗಿ ನಡೆದೇತೀರುತ್ತದೆ. ಪ್ರಪಂಚದಲ್ಲಿ ಮನುಷ್ಯನ ಶರೀರದಲ್ಲಿ ದೇವರಿದ್ದರೂ ಆತನ ಇರುವುಕೆ ಎಲ್ಲಿಯೂ ಯಾರಿಗೂ ತಿಳಿಯಲಿಲ್ಲ. ಎಲ್ಲಾ ನಾನೇ ಮಾಡುತ್ತಿದ್ದೇನೆಂದು ಹೇಳುತ್ತಾನೆ ಆದರೇ, ಏನು ಮಾಡುವುದಿಲ್ಲ. ಎಲ್ಲವನ್ನು ತನ್ನ ಆತ್ಮದಿಂದ ಮಾಡಿಸುತ್ತಾನೆ. ಆತ್ಮಶ್ಮಕ್ತಿಯಾಗಿ ಎಲ್ಲಾ ಶರೀರಗಳಲ್ಲಿರುವ ಪರಮಾತ್ಮ ಶರೀರ ಇಂದ್ರಿಯಗಳಿಗೆ ಶಕ್ತಿಯನ್ನು ಕೊಟ್ಟು ನಡೆಸುತ್ತಿದ್ದಾನೆ. ಎಲ್ಲರನ್ನು ಆಡಿಸುವವನು ದೇವರೆ ಆದರೂ, ತಾನು ಏನು ಮಾಡದಂತೆ ಎಲ್ಲಾ ಆತ್ಮವೇ ಮಾಡುತ್ತಿದೆಯೆಂದು, ಆತ್ಮಶಕ್ತಿಯೇ ಶರೀರ ಅವಯುವಗಳನ್ನು ನಡೆಸುತ್ತಿದೆಂದು ಬೋಧಿಸಿದ್ದಾನೆ. ಭಗವದ್ಗೀತೆಯಲ್ಲಿ ಮೋಕ್ಷಸನ್ಯಾಸ ಯೋಗವೆಂಬ ಅಧ್ಯಾಯದಲ್ಲಿ 61ನೆ ಶ್ಲೋಕ ಹೀಗೆ ಇದೆ.

**ಶ್ಲೋ॥ ಈಶ್ವರ ಸ್ಸರ್ವಭೂತಾನಾಂ ಹೃದ್ದೇಶರ್ಜುನ ತಿಷ್ಠತಿ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ.**

**ಭಾವನೆ :–** "ಸರ್ವಜೀವರಾಶಿಗಳನ್ನು ಇಂತಹವನು ದೇವರು ಎಂದು ತಿಳಿಯದಂತೆ ಭ್ರಮಿಸುವಂತೆಮಾಡುತ್ತಾ, ಅವರ ಶರೀರದಲ್ಲಿನ ಹೃದಯದಲ್ಲಿ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ನಿವಾಸಿಸುತ್ತಾ, ಮಾಯೆ ಅನ್ನುವುದರಿಂದ ಮಾಂತ್ರಿಕನು ಬೊಂಬೆಗಳನ್ನು ಆಡಿಸಿದಂತೆ ಸರ್ವಜೀವಿಗಳನ್ನು ನಾನು ಆಡಿಸುತ್ತಿದ್ದೇನೆ." ಎಂದು ದೇವರು ಹೇಳುವುದು ನಡೆದಿದೆ. ಯಾರಿಗೂ ತಿಳಿಯದ ವಿಧವಾಗಿ ಮಾಯೆ ಎಂಬ ಗುಣಗಳಿಂದ ಭ್ರಮಿಸುವಂತೆ ಮಾಡುತ್ತಾ ಶರೀರದಲ್ಲಿ

ಬ್ರಹ್ಮನಾಡಿಯಲ್ಲಿ ಆತ್ಮವಾಗಿ ನಿವಾಸಿಸುತ್ತಾ ಎಲ್ಲರನ್ನು ಬೊಂಬೆಗಳನ್ನು ಆಡಿಸಿದಂತೆ ಆಡಿಸುತ್ತಿದ್ದಾನೆ. ಆದರೂ ನಾನು ಕಾರ್ಯ ಮಾಡದವನೆಂದು ಆತ್ಮವೇ ಎಲ್ಲವೂ ಮಾಡುತ್ತಿದೆಯೆಂದು ಹೇಳುತ್ತಿದ್ದಾನೆ. ನಾನು ಏನು ಮಾಡಲಿಲ್ಲವೆಂದು ಹೇಳುತ್ತಿರುವ ಪರಮಾತ್ಮ, ಎಲ್ಲಾ ತಾನೇ ಮಾಡುತ್ತಿರುವಂತೆ ತಾನು ಹೇಳದಿದ್ದರೂ, ತನ್ನನ್ನು ಅನ್ವೇಷಿಸುವ ಕೆಲವರಿಗಾದರೂ ತಿಳಿಯುವುದಕ್ಕೆ, ಎಲ್ಲಾದರೂ ಯಾವಗಲಾದರೂ ಮನುಷ್ಯ ಶರೀರದಲ್ಲಿನ ಅವಯವಗಳಿಂದ ಅದ್ಭುತಕಾರ್ಯ ಗಳು ನಡೆಯುವಂತೆ ಮಾಡುತ್ತದೆ. ಇಲ್ಲಿ ಚೆನ್ನಾಗಿ ಆಲೋಚಿಸಿದರೆ ಶರೀರದಲ್ಲಿ ಯಾವ ಕಾರ್ಯವನ್ನು ಮಾಡಿದರೂ ಆತ್ಮವೇ ಮಾಡಬೇಕು. ಆದರೆ ಆತ್ಮ ಆ ಶರೀರದಲ್ಲಿನ ಜೀವಾತ್ಮನ ಕರ್ಮವನ್ನು ಅನುಸರಿಸಿಯೇ ಮಾಡಬೇಕು. ತನ್ನ ಇಷ್ಟಪ್ರಕಾರ ಮಾಡುವುದಕ್ಕೆ ಸಾಧ್ಯವಿಲ್ಲ. ಕರ್ಮವನ್ನನುಸರಿಸಿ ಶರೀರವನ್ನು ಕದಲಿಸಿ, ಕರ್ಮವನ್ನು ಜೀವಿಯು ಅನುಭವಿಸುವಂತೆ ಮಾಡುವುದು ಆತ್ಮ ಯೊಂದರ ವಿಧಿ ವಿಧಾನ. ಉದಾಹರಣೆಗೆ ಒಬ್ಬ ಜೀವಿಯು ಮಾಡಿಕೊಂಡ ಕರ್ಮಪ್ರಕಾರ (ಪಾಪದ ಪ್ರಕಾರ) ಭಯಂಕರವಾದ ಕ್ಯಾನ್ಸರ್ ರೋಗದಿಂದ ಕ್ರೂರವಾಗಿ ಬಾಧೆ ಅನುಭವಿಸಿ ಮರಣಿಸುವುದು ನಡೆಯಬೇಕಾಗಿದೆ. ಆಗ ಕರ್ಮಪ್ರಕಾರ ಆತನ ಶರೀರದಲ್ಲಿನ ಆತ್ಮ ಅವನಿಗೆ ಕ್ಯಾನ್ಸರ್ ರೋಗ ಬರುವಂತೆ ಮಾಡಿ ಸ್ವಲ್ಪಕಾಲ ದುಃಖವನ್ನು ಅನುಭವಿಸುವಂತೆ ಮಾಡಿದೆ. ಕೆಲವು ವರ್ಷಗಳು ಕ್ಯಾನ್ಸರ್ ಬಾಧೆಯನ್ನು ಅನುಭವಿಸಿದವನು ಕುಗ್ಗಿ ಕೃಶಿಸಿಹೋಗಿ ಕೊನೆಗೆ ಮರಣಕ್ಕೆ ಹತ್ತಿರವಾಗಿದ್ದಾನೆ. ಆತನನ್ನು ನೋಡಿದವರೆಲ್ಲರೂ ಆತನು ಕೆಲವುದಿನಗಳಲ್ಲಿ ಮರಣಿಸುತ್ತಾನೆಂದು ಅಂದುಕೊಂಡಿದ್ದಾರೆ. ಆ ಕ್ಯಾನ್ಸರ್ ರೋಗಿ ಕೂಡಾ ತಾನು ವಾರ ಇಲ್ಲವೆ ಹತ್ತುದಿನಗಳಿಗಿಂತ ಹೆಚ್ಚಾಗಿ ಬದುಕುವುದಿಲ್ಲವೆಂದು ಅಂದುಕೊಂಡಿದ್ದಾನೆ. ಅದೇ ವಿಷಯವನ್ನೆ ಡಾಕ್ಟರ್ಸ್ ಕೂಡಾ ಆತನ ಸಂಬಂಧಿಕರಿಗೆ ಹೇಳಿಕಳಿಸಿದ್ದಾರೆ. ಶರೀರದಲ್ಲಿನ ಆತ್ಮ ಕೂಡಾ ಅವನ ಕರ್ಮಾ ನುಸಾರ ಅವನನ್ನು ಸಾಯಿಸಬೇಕಾಗಿದೆ. ನಾಳೆ ಆತನು ಸಾಯುತ್ತಾನೆ ಎಂದು ಇರುವಾಗ ಉಳಿದ ಪ್ರಜೆಗಳಿಗೆಲ್ಲರಿಗೂ ತಿಳಿಯುವಂತೆ ಒಂದು ಅದ್ಭುತ ನಡೆದಿದೆ. ಅದು ಏನೆಂದರೆ!

ಕ್ಯಾನ್ಸರ್ ರೋಗಿ ಇರುವ ಮನೆಗೆ ಊಹಿಸದ ವಿಧವಾಗಿ ಅಂದುಕೊಳ್ಳದೆ ಒಬ್ಬ ವ್ಯಕ್ತಿ ಬರುವುದು ನಡೆದಿದೆ. ಬಂದಿರುವ ವ್ಯಕ್ತಿ ಆಧ್ಯಾತ್ಮಿಕವನ್ನು ಚೆನ್ನಾಗಿ ತಿಳಿದವನು. ತಾನ್ಯಾರೊ ತನಗೆ ತಿಳಿದು, ತಾನು ಅಲ್ಲದಿರುವವನ್ಯಾರೊ ಕೂಡಾ ಚೆನ್ನಾಗಿ ತಿಳಿದವನು. ಅಂತಹ ವ್ಯಕ್ತಿ ರೋಗಿ ಇರುವ ಮನೆಗೆಬಂದು ಆತನು ಪಡುತ್ತಿರುವ ಬಾಧೆಯನ್ನು ನೋಡಿ, ಆ ರೋಗಿಗೆ ಸ್ವಲ್ಪ ಜ್ಞಾನವನ್ನು ತಿಳಿಸಿದ್ದಾನೆ. ಹೋದ ಜನ್ಮದಲ್ಲಿ ಮಾಡಿಕೊಂಡ ಪಾಪ ಈ ಜನ್ಮದಲ್ಲಿ ರೋಗವಾಗಿ ಬಂದಿದೆಯೆಂದು ತಿಳಿಸಿದ್ದಾನೆ. ಅಜ್ಞಾನದಿಂದ ಮಾಡಿಕೊಂಡ ಪಾಪವನ್ನು ಅನುಭವಿಸದಂತೆ ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿದೆಯೆಂದು, ಆ ವಿಷಯವನ್ನೇ ಭಗವಂತನು ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 36, 37ನೆ ಶ್ಲೋಕಗಳಲ್ಲಿ ಹೀಗೆ ಹೇಳಿದ್ದಾನೆಂದು ತಿಳಿಸಿದ್ದಾನೆ.

**ಶ್ಲೋ॥ 36** **ಅಪಿ ಚೇದಸಿ ಪಾಪೇಭ್ಯಸ್ಸರ್ವೇಭ್ಯಃ ಪಾಪಕೃತ್ತಮಃ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸನ್ತರಿಷ್ಯಸಿ ॥**

**ಶ್ಲೋ॥ 37.** **ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರು ತೇರ್ಜುನ।**
**ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥**

**ಭಾವನೆ :–** "ಪಾಪಗಳನ್ನು ಮಾಡಿದವರಲ್ಲಿ ಎಲ್ಲರಿಗಿಂತ ನೀನು ಹೆಚ್ಚಾಗಿ ಪಾಪ ಮಾಡಿರುವವನಾದರೂ, ಪಾಪ ಎಂಬ ದೊಡ್ಡ ಸಮುದ್ರವನ್ನು ಜ್ಞಾನ ಎಂಬ ಚಿಕ್ಕ ದೋಣಿಯಿಂದ ದಾಟುತ್ತೀಯಾ,"

"ಅಗ್ನಿಯಲ್ಲಿ ಎಷ್ಟುಕಟ್ಟಿಗೆಗಳು ಹಾಕಿದರೂ ಅವು ಉರಿದು ಬೂದಿಯಾಗಿ ಹೋದಂತೆ, ಜ್ಞಾನವೆಂಬ ಅಗ್ನಿಯಲ್ಲಿ ಎಲ್ಲ ಪಾಪಗಳು (ಎಲ್ಲಾ ಕರ್ಮಗಳು) ಪೂರ್ತಿಯಾಗಿ ಸುಟ್ಟುಹೋಗಿ ಭಸ್ಮವಾಗಿಹೋಗುತ್ತವೆ." ಇಲ್ಲಿ ಹೇಳಿರುವುದು ಚೆನ್ನಾಗಿ ಗ್ರಹಿಸಿದರೆ ಪಾಪಗಳನ್ನು ಹೆಚ್ಚಾಗಿ ಮಾಡಿಕೊಂಡವನು ಬಾಧೆಗಳನ್ನು ಅನುಭವಿಸದೆ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲದವನು, ಎಂಥಹ ಕರ್ಮವನ್ನಾದರೂ ಅನುಭವಿಸುವವನು, ಕೊನೆಗೆ ಸಾವು ಹತ್ತಿರಕ್ಕೆ ಬಂದವನು ಯಾರಾದರೂ,

ಎಂಥಹ ಪಾಪಾತ್ಮನಾದರೂ ದೈವಜ್ಞಾನ ಎನ್ನುವುದರೊಂದಿಗೆ ಆ ಕರ್ಮದಿಂದ ತಪ್ಪಿಸಿಕೊಳ್ಳಬಹುದೆಂದು ಹೇಳುವುದು ನಡೆದಿದೆ. ಆ ವಿಷಯ ಅರ್ಥವಾಗುವುದಕ್ಕೆ ಕೊಳಕು ಸಮುದ್ರವನ್ನಾದರೂ ಚಿಕ್ಕ ದೋಣಿಯಿಂದ ದಾಟಿದಂತೆ ಪಾಪ ಎಂಬ ಸಮುದ್ರವನ್ನು ಜ್ಞಾನವೆಂಬ ದೋಣಿಯಿಂದ ದಾಟಬಹುದು ಎಂದು ಉದಾಹರಣೆ ಹೇಳುವುದು ನಡೆದಿದೆ. ಹಾಗೆಯೇ ಅಗ್ನಿಯಲ್ಲಿ ಎಷ್ಟುಕಟ್ಟಿಗೆಗಳಾದರೂ ಸುಟ್ಟುಹೋದಂತೆ, ಜ್ಞಾನವೆಂಬ ಅಗ್ನಿಯಲ್ಲಿ ಎಷ್ಟೋ ಭಯಂಕರವಾದ ಪಾಪಗಳು ಕೂಡಾ ಹೋಗುತ್ತವೆಂದು ಕೂಡಾ ಉದಾಹರಣೆಯಾಗಿ ಹೇಳುವುದು ನಡೆದಿದೆ. ಶರೀರದಲ್ಲಿನ ಆತ್ಮವಾಗಿದ್ದೂ ಪಾಪಗಳನ್ನು ಅನುಭವಿಸುವಂತೆ ಮಾಡುವ ದೈವವು, ನಾನು ಮಾಡದೆಯೇ ಇನ್ನೊಂದು ಕೆಲಸವನ್ನು ಕೂಡಾ ಮಾಡುತ್ತೇನೆಂದು, ಇಲ್ಲಿ ಆತ್ಮವಾಗಿ ಅನುಭವವನ್ನು ಹೊಂದಿಸುವವನಾಗಿದ್ದು ಇನ್ನೊಂದು ವಿಧವಾಗಿ ಕರ್ಮಗಳ ಅನುಭವಗಳಿಂದ ತಪ್ಪಿಸುವವನಾಗಿ ಇದ್ದೇನೆಂದು ಕೂಡಾ ಹೇಳಿದ್ದಾನೆ. ಆತ್ಮವಾಗಿದ್ದು ಅನುಭವಿಸುವಂತೆ ಮಾಡುವವನು, ಆತ್ಮಜ್ಞಾನವಾಗಿದ್ದು ತಪ್ಪಿಸುವವನಾಗಿ ಸಹಾ ಇದ್ದಾನೆ.

ತನ್ನ ಆತ್ಮ ಎಷ್ಟೊ ಕಠಿಣವಾದುದೆಂದು ಯಾವ ದಯಾದಾಕ್ಷಿಣ್ಯ ಇಲ್ಲದೆ ಕ್ರೂರವಾಗಿ ಪಾಪವನ್ನು ಅನುಭವಿಸುವಂತೆ ಮಾಡುತ್ತೇನೆಂದು ಹೇಳಿದವನೆ, ತನ್ನ ಗೀತೆಯಲ್ಲಿ, ತನ್ನ ಶ್ಲೋಕಗಳಲ್ಲಿ, ತನ್ನ ಜ್ಞಾನ ಎಂತಹ ಕರ್ಮವನ್ನಾದರೂ ಇಲ್ಲದಹಾಗೆ ಮಾಡುತ್ತದೆಂದು ಹೇಳಿ, ಅದನ್ನು ನಿರೂಪಿಸುವುದಕ್ಕೆ ಕ್ಯಾನ್ಸರ್ ರೋಗದಿಂದ ನಾಳೆ ಮರಣಿಸುವವನ ಮನೆಗೆ ಜ್ಞಾನವನ್ನು ತಿಳಿದ ವ್ಯಕ್ತಿಯನ್ನು ಕಳಿಸಿದ್ದಾನೆ. ಹಾಗೆ ಹೋದ ವ್ಯಕ್ತಿ ಜ್ಞಾನವೊಂದರ ಶ್ರೇಷ್ಠತ್ವವನ್ನು ಕುರಿತು ಕ್ಯಾನ್ಸರ್‌ರೋಗಿಗೆ ಹೇಳಿ, ನೀನು ಇಂದಿನಿಂದ ಜ್ಞಾನ ತಿಳಿದುಕೊಳ್ಳಿಯೆಂದು, ಹಾಗಾದರೆ ನಿನ್ನ ರೋಗ ಹೋಗುತ್ತದೆಯೆಂದು ಹೇಳುವುದು ನಡೆದಿದೆ. ರೋಗಿಯ ಮನೆಗೆಹೋದ ಜ್ಞಾನಿ ಹೇಳಿದ ಮಾತು ನಿಜವೇ ಆದರೂ, ಅವನು ಜ್ಞಾನ ತಿಳಿದುಕೊಳ್ಳುವುದಕ್ಕೆ ಕನಿಷ್ಟ ವರ್ಷದಕಾಲವಾದರೂ ಬೇಕಾಗುತ್ತದೆ. ಅವನು ಜ್ಞಾನವನ್ನು ತಿಳಿದುಕೊಂಡು, ಅವನ ಕರ್ಮವನ್ನು ಅವನು ಹೋಗ

ಲಾಡಿಸಿಕೊಳ್ಳುವುದಕ್ಕೆ ಅಲ್ಲಿಯವರೆಗೂ ಅವನು ಬದುಕುವ ಅವಕಾಶವೇ ಇಲ್ಲ. ನಾಳೆಯೇ ಮರಣಿಸಬೇಕು. ಕರ್ಮಪ್ರಕಾರ ಅವನ ಶರೀರದಲ್ಲಿನ ಆತ್ಮ ಅವನನ್ನು ಸಾಯಿಸಿತೀರಬೇಕು. ಹಾಗಿರುವಾಗ ಜ್ಞಾನ ಎಂತಹ ಕರ್ಮವನ್ನಾದರೂ ತೆಗೆದುಹಾಕಬಲ್ಲದೆಂದು ಅವನಿಗೆ ಹೇಗೆ ತಿಳಿಯಬಲ್ಲದು? ದೇವರಮಾತು ನಿಜವೆಂದು ರೋಗಿಗೆ ತಿಳಿಯಬೇಕೆಂದರೆ ಅವನು ಬದುಕಬೇಕು. ಕರ್ಮಪ್ರಕಾರ ಆತ್ಮ ಬದುಕಿಸುವುದಿಲ್ಲ. ಆಗ ಏನೊವೊಂದು ಅದ್ಭುತ ನಡೆದುತೀರಬೇಕು. ಅಂತಹ ಸಂದರ್ಭದಲ್ಲಿ ರೋಗಿ ಮನೆಗೆಹೋದ ಜ್ಞಾನಿ, ರೋಗಿಯನ್ನು ತನ್ನ ಮುಂದೆ ಕುಳಿತುಕೊಯೆಂದು ಆತನನ್ನು ಒಂದುಬಾರಿ ನೇರವಾಗಿ ನೋಡುವುದು ನಡೆದಿದೆ. ಹಾಗೆ ನೋಡಿದಾಗ ಜ್ಞಾನಿಯ ಕಣ್ಣಿನಿಂದ ಹೊರಬಿದ್ದ ಇಂದ್ರಿಯಶಕ್ತಿ ರೋಗಿ ಶರೀರದೊಳಗೆ ಹೋಗಿ, ಆತನ ಕರ್ಮವನ್ನು (ಪಾಪವನ್ನು) ಸುಟ್ಟುಹಾಕುವುದು ನಡೆದಿದೆ. ಹಾಗೆ ಒಂದೇಬಾರಿಗೆ ಆತನು ರೋಗರೂಪದಲ್ಲಿ ಅನುಭವಿಸುತ್ತಿರುವ ಕರ್ಮವೆಲ್ಲವೂ ಸುಟ್ಟುಹೋಗುವುದರಿಂದ, ಆತ್ಮಕ್ಕೆ ಆತನನ್ನು ಸಾಯಿಸುವ ಕಾರ್ಯ ತಪ್ಪಿಹೋಗಿದೆ. ಆದ್ದರಿಂದ ಅವನು ಸಾಯುವುದು ನಡೆಯದಿರುವುದಲ್ಲದೆ, ಅಂದಿನಿಂದ ಪೂರ್ತಿಯಾಗಿ ಆರೋಗ್ಯವನ್ನು ಹೊಂದಿದ್ದಾನೆ. ಆಗಿನಿಂದ ಅತನು ದೇವರ ಜ್ಞಾನದ ಮೇಲೆ ನಂಬಿಕೆಬಂದು ಜ್ಞಾನವನ್ನು ತಿಳಿದುಕೊಂಡಿದ್ದಾನೆ.

ರೋಗಿಗೆ ತಾನು ಮರಣಿಸುತ್ತೇನೆಂದು ತಿಳಿದುಹೋಗಿದೆ. ಡಾಕ್ಟರ್ಸ್ ಕೂಡಾ ಆತನು ಮರಣಿಸುತ್ತಾನೆಂದು ನಿರ್ಧರಿಸಿದ್ದಾರೆ. ಆತನ ಶರೀರದಲ್ಲಿ ಕರ್ಮಪ್ರಕಾರ ಆತನು ನಾಳೆ ಮರಣಿಸಬೇಕಾಗಿದೆ. ಅಂತಹ ಸಮಯದಲ್ಲಿ ಒಬ್ಬ ಜ್ಞಾನಿಯೊಂದರ ಕಣ್ಣದೃಷ್ಠಿ ಮೂಲಕ ಜ್ಞಾನಶಕ್ತಿ ಆತನೊಳಗೆ ಪ್ರವೇಶಿಸಿ ಆತನ ಕರ್ಮವನ್ನು ಸುಟ್ಟುಹಾಕುವುದು ನಡೆದಿದೆ. ಹಾಗೆ ನಡೆದಿರುವುದನ್ನು ಅದ್ಭುತವೆಂದೇ ಹೇಳಬಹುದು. ಕಣ್ಣಿನಲ್ಲಿನ ಇಂದ್ರಿಯಶಕ್ತಿ ದೃಷ್ಠಿಯ ಮೂಲಕ ಹೋಗಿ ಆತನ ಕರ್ಮವನ್ನು ಇಲ್ಲದಹಾಗೆ ಮಾಡಿದೆ. ಕಣ್ಣಿನಲ್ಲಿನ ಇಂದ್ರಿಯಶಕ್ತಿ ಯನ್ನು ಆತ್ಮಶಕ್ತಿಯೇ ಎಂದು ಹೇಳಬಹುದು. ಆತ್ಮಶಕ್ತಿಯಾಗಿರುವ ಇಂದ್ರಿಯಶಕ್ತಿ

ಎದುರುಗಿರುವವನಲ್ಲಿ ಸೇರಿ, ಜ್ಞಾನಶಕ್ತಿಯಾಗಿ ಕರ್ಮವನ್ನು ಸುಟ್ಟುಹಾಕಿದೆಯೆಂದು ಅರ್ಥವಾಗುತ್ತಿದೆ. ಶರೀರದಲ್ಲಿ ಕರ್ಮವನ್ನು ಜಾರಿ ಮಾಡುವುದು ಅದೇ (ಆತ್ಮವೇ), ಒಂದೇ ಶಕ್ತಿ ಎರಡು ವಿಧಗಳು ಕೆಲಸ ಮಾಡುತ್ತಿದೆ. ಇಲ್ಲಿ ಕರ್ಮದಮೇಲೆ ಕೆಲಸಮಾಡಿದ ಶಕ್ತಿ ಜ್ಞಾನಿ ಶರೀರದಿಂದ ಹೊರಗೆ ಬಂದ ಜ್ಞಾನಶಕ್ತಿ ಎಂದು ತಿಳಿಯುತ್ತಿದೆ. ಜ್ಞಾನಿ ಸಂಪಾದಿಸಿಕೊಂಡಿರುವುದು ಆತ್ಮಜ್ಞಾನ, ಆತನು ಮಾಡಿದ ಸಾಧನೆ ಯೋಗಸಾಧನೆ. ಆದ್ದರಿಂದ ಆತನಿಗೆ ಯೋಗಶಕ್ತಿ ಲಭಿಸುತ್ತಿದೆ. ಆ ಯೋಗಶಕ್ತಿಯೇ ಕಣ್ಣಿನೋಟದಿಂದ ಹೊರಗೆ ಬಂದು, ರೋಗಿಯ ಶರೀರದಲ್ಲಿ ಸೇರಿ, ಆತನ ರೋಗವನ್ನು ಇಲ್ಲದಹಾಗೆ ಮಾಡುವುದು ನಡೆದಿದೆ.

ಆದರೆ ಕೆಲವರು ಜ್ಞಾನವೆಂದು, ಸಾಧನೆಯೆಂದು ತಪ್ಪಾಗಿ ತಿಳಿದು ಮಂತ್ರಗಳನ್ನು ಜಪಿಸುವವರಿಗೆ ಮಂತ್ರಶಕ್ತಿ ಬರುತ್ತದೆ. ಧ್ಯಾನ ಮಾಡುವವರಿಗೆ ತಪೋಶಕ್ತಿ ಬರುತ್ತದೆ. ಮಂತ್ರಶಕ್ತಿ, ತಪೋಶಕ್ತಿ ಪ್ರಪಂಚದಲ್ಲಿನ ಕಾರ್ಯಗಳನ್ನು ನೇರವೇರುವಂತೆ ಮಾಡುತ್ತದಾಗಲಿ, ಅವುಗಳಿಗೆ ಕರ್ಮವನ್ನು ಸುಡುವಶಕ್ತಿಯಿಲ್ಲ. ಯೋಗಶಕ್ತಿ ಯೋಗ ಮಾಡುವವರಿಗೆ ಮಾತ್ರವೇ ಬರುತ್ತದೆ. ಧ್ಯಾನ ಮಾಡುವ ವರಿಗೆ ಯೋಗಶಕ್ತಿ ಬರುವುದಿಲ್ಲ. ಯೋಗಶಕ್ತಿಯೇ ದೈವಶಕ್ತಿ ಆದ್ದರಿಂದ, ಅದನ್ನು ಜ್ಞಾನಶಕ್ತಿ ಎಂದೂ, ಆತ್ಮಶಕ್ತಿ ಎಂದೂ, ಇಂದ್ರಿಯಶಕ್ತಿ ಎಂದೂ ಜ್ಞಾನಾಗ್ನಿ ಎಂದೂ ಹೇಳಬಹುದು. ಧ್ಯಾನ ಇಲ್ಲವೆ ಮೆಡಿಟೇಷನ್ ಮಾಡುವವರಿಗೆ ಯೋಗಶಕ್ತಿ ಬರುವುದಿಲ್ಲ. **"ತಪಸ್ವಿಭ್ಯೋಧಿಕೋ ಯೋಗಿ"** ಎಂದು ಗೀತೆಯಲ್ಲಿ ಆತ್ಮಸಂಯಮಯೋಗವೆಂಬ ಅಧ್ಯಾಯದಲ್ಲಿ 46ನೆ ಶ್ಲೋಕದಲ್ಲಿ ಹೇಳಿದಂತೆ "ತಪಸ್ಸುಗಳು ಮಾಡುವವರಿಗಿಂತ ಯೋಗಿ ಅಧಿಕನು" ಎಂಬ ಮಾತನ್ನು ಮರೆಯಬಾರದು. ಅಷ್ಟೋ ಇಷ್ಟೋ ತಪಸ್ಸು ಮಾಡಿದವರಿಗೆ ಸ್ವಲ್ಪ ತಪೋಶಕ್ತಿ ಇರಬಹುದು. ಅಷ್ಟುಮಾತ್ರಕ್ಕೆ ಅವರು ಯೋಗಿಗಳು ಆಗಲಾರರು. ಅವರಲ್ಲಿ ಯೋಗಶಕ್ತಿ ಇರುವುದಿಲ್ಲ. ಈದಿನ ಶಕ್ತಿಪಾತ ಮಹಾರ್ಷಿಗಳೆಂದು ಹೆಸರುವಾಸಿ ಯಾದವರೆ ಸ್ವತಹ "ನೀವು ಕೋಟಿ ವರ್ಷಗಳು ಮಾಡಿದರೂ ಪಡೆಯಲಾರದ ತಪೋಶಕ್ತಿಯನ್ನು ನಾವು ಮಾಡುವ ಶಕ್ತಿಪಾತದ ಮೂಲಕ ಪಡೆಯಬಹುದು"

ಎಂದು ಹೇಳುತ್ತಿದ್ದಾರೆ. ಹಾಗೆ ಅವರು ಹೇಳುವ ಮಾತುಗಳಲ್ಲಿಯೇ ಅವರಹತ್ತಿರ ಇರುವುದು ತಪೋಶಕ್ತಿಯೆಂದು ತಿಳಿದುಹೋಗುತ್ತಿದೆ. ಅಂಥವರದು ಶಕ್ತಿಪಾತ ವಾದರೂ, ಅವರ ಮಾತು ಸತ್ಯವೇ ಆದರೂ, ಆ ಶಕ್ತಿ ಕರ್ಮಗಳನ್ನು ಸುಡುವ ಯೋಗಶಕ್ತಿ ಅಲ್ಲವೆಂದು ತಿಳಿದುಹೋಗಿದೆ. ಕ್ಯಾನ್ಸರ್ ರೋಗಿ ಮನೆಗೆ ಬಂದ ಜ್ಞಾನಿಯಾದವನು ಆತ್ಮಗಳ ವಿವರ ತಿಳಿದವನಾಗಿರುವುದರಿಂದ, ತಾನು ಯೋಗವನ್ನು ಆಚರಿಸಿರುವುದರಿಂದ, ಆತನ ಶರೀರದಲ್ಲಿನ ಯೋಗಶಕ್ತಿ ಇಲ್ಲವೆ ದೈವಶಕ್ತಿ ಇಂದ್ರಿಯಶಕ್ತಿಯಾಗಿ ಕಣ್ಣು ಎಂಬ ಇಂದ್ರಿಯದಿಂದ ಹೊರಗೆಹೋಗಿದೆ ಯೆಂದು ತಿಳಿದುಕೊಂಡಿದ್ದೇವೆ. ಆತನು ನಿಜಕ್ಕೆ ನಿಜಯೋಗಿ ಆಗಿರುವುದರಿಂದ ಆತನಲ್ಲಿನ ಶಕ್ತಿ ಕರ್ಮಗಳನ್ನು ಸುಡುವುದಾಗಿದೆ. ಆತನ ಕಣ್ನೋಟದಿಂದ ಕ್ಯಾನ್ಸರ್ ಬಿಟ್ಟುಹೋಗಿ, ಆತನ ಬಾಯಿಮಾತಿನಿಂದ ಈದಿನ ಭಯಂಕರ ರೋಗವಾಗಿ ಹೆಸರುವಾಸಿಯಾದ ಎಯಿಡ್ಸ್ ರೋಗವೂ ಕೂಡಾ ಆತನ ಮಾತಿನಪ್ರಕಾರ ಎಯಿಡ್ಸ್ ರೋಗಿಯಿಂದ ಹೊರಗೆ ಹೋಗುವುದು ನಡೆದಿದೆ. ಹಾಗೆಯೇ ಅದೇ ಯೋಗಿ ಸ್ಪರ್ಶದಿಂದ ಕ್ಷಯ ಇಲ್ಲವೆ ಟಿ.ಬಿ (ಟ್ಯುಬರ್‌ಕ್ಯು ಲೋಸಿಸ್) ಎಂಬ ರೋಗ ರೋಗಿಯಿಂದ ದೂರಹೋಗುವುದು ನಡೆದಿದೆ. ಆ ಯೋಗಿ ಜ್ಞಾನವನ್ನು ಬೋಧಿಸಿ ಜ್ಞಾನಕ್ಕೆ ಇಂತಹ ಶಕ್ತಿ ಇದೆಯೆಂದು ನಿರೂಪಿಸುವುದಕ್ಕೋಸ್ಕರ ಅವರ ರೋಗಗಳನ್ನು ಹೋಗೆಂದು ಹೇಳುತ್ತಿದ್ದನು. ಅಷ್ಟೇಯಾಗಲಿ ಯಾವಾಗಾದರೂ ಹಣಕ್ಕೆ ಆ ಕೆಲಸ ಮಾಡಲಿಲ್ಲ. ಜ್ಞಾನಪ್ರಚಾರ ದಲ್ಲಿ ಒಂದು ಭಾಗವಾಗಿ ಅದೂ ಅಪರೂಪವಾಗಿ ಹಾಗೆ ಮಾಡುತ್ತಿದ್ದನು. ಅಷ್ಟೇಯಾಗಲಿ ಎಂತಹ ಸಾಮರ್ಥ್ಯದಿಂದಲೂ ತನ್ನ ಜ್ಞಾನವನ್ನು ವಿನಿಯೋಗಿಸಲಿಲ್ಲ. ಅಂತಹ ದೊಡ್ಡ ಜ್ಞಾನಿಯಾದರೂ ಆತನು ಯೋಗಿ ಅಂದರೆ ಹೀಗೆ ಇರಬೇಕೆಂಬುವಹಾಗೆ ಯೋಗಿಗೆ ಚಿಹ್ನೆಯಾಗಿ ಇರುತ್ತಿದ್ದನು.

ಆ ಯೋಗಿ ಅಷ್ಟು ದೊಡ್ಡವನಾದ್ದರಿಂದ ಆತನನ್ನು ದರ್ಶಿಸುವುದರಿಂದ, ಆತನನ್ನು ಮುಟ್ಟಿಕೊಳ್ಳುವುದರಿಂದ, ಆತನೊಂದಿಗೆ ಮಾತನಾಡುವುದರಿಂದ ಕೆಲವು ರೋಗಗಳು ಹೋಗುತ್ತಿದ್ದವು. ಅಂತಹ ಶಕ್ತಿಪರನಾದರೂ, ಆತನು

ತನ್ನನ್ನು ತಾನು ಗುರುತುಇಟ್ಟುಕೊಂಡು, ಆತ್ಮಜ್ಞಾನ ಚೆನ್ನಾಗಿ ತಿಳಿದವನಾಗಿ, ಎಂದೂ ಅಹಂಅನ್ನು ಹೊಂದದೆ ಜೀವನವನ್ನು ಸಾಗಿಸುತ್ತಿದ್ದನು. ಯಾರಿಗಾದರೂ ಚೇಳುಕಚ್ಚಿದರೆ ಆತನಹತ್ತಿರಕ್ಕೆ ಬಂದು ಆತನನ್ನು ನೋಡಿದಷ್ಟುಮಾತ್ರಕ್ಕೆ ಅವರಲ್ಲಿನ ಚೇಳಿನ ವಿಷ ಇಲ್ಲದಂತೆಹೋಗಿ ಬಾಧೆಯಿಂದ ಹೊರಬೀಳುತ್ತಿದ್ದರು. ಆದರೆ ಒಂದು ದಿನ ಒಬ್ಬ ವೃದ್ಧನು ಚೇಳಿನ ನೋವಿನಿಂದ ಬಾಧೆಪಡುತ್ತಾ ಆ ಯೋಗಿ ಹತ್ತಿರಕ್ಕೆ ಬಂದಿದ್ದಾನೆ. ಯೋಗಿಯನ್ನು ವೃದ್ಧನು ನೋಡಿದರೂ, ಯೋಗಿ ವೃದ್ಧನನ್ನು ನೋಡಿದರೂ ಆ ಬಾಧೆಹೋಗಲಿಲ್ಲ. ಆಗ ಯೋಗಿಯಾದ ಆತನು ತಾನೇ ಸ್ವತಹವಾಗಿ ವೃದ್ಧನ ಕೈಹಿಡಿದುಕೊಂಡು, ಚೇಳುಕಚ್ಚಿದ ಕಡೆ ತಾಕಿ ಆ ವಿಷದ ಬಾಧೆ ಇಲ್ಲದಹಾಗೆ ಹೋಗಬೇಕೆಂದು ಹೇಳಿದರೂ ಆ ಬಾಧೆ ಹಾಗೆಯೇ ಇದೆ. ಆ ಯೋಗಿ ಹೇಳಿದರೆ ದೆವ್ವಗಳು ಓಡಿಹೋಗುತ್ತವೆ, ರೋಗಗಳು ಗುಣವಾಗುತ್ತವೆ. ಅಂಥಹದ್ದು ಆ ಯೋಗಿ ಬಂದು ಸ್ವತಃವಾಗಿ ಮುಟ್ಟಿಕೊಂಡರೂ, ಚೇಳಿನ ಬಾಧೆಹೋಗಲಿಲ್ಲ. ಯೋಗಿ ಶರೀರದಲ್ಲಿನ ಯೋಗಶಕ್ತಿಯನ್ನು ಯೋಗಿ ಸಂಕಲ್ಪಿಸಿಕೊಂಡರೂ, ಚೇಳಿನ ಬಾಧೆ ಹಾಗೆಯೇ ಇದ್ದುಹೋಗಿದೆ. ಆಗ ಆ ಯೋಗಿ ಅದನ್ನು ಏನು ಮಾಡಲಾರದೆ ಹಾಗೆಯೇ ಬಿಟ್ಟನು. ಅದನ್ನು ನೋಡಿದ ಕೆಲವರು ಹೇತುವಾದಿಗಳು, ನಾಸ್ತಿಕವಾದಿಗಳು ಹೀಗೆ ಪ್ರಶ್ನಿಸಲು ಮೊದಲು ಮಾಡಿದ್ದಾರೆ.

**ನಾಸ್ತಿಕವಾದಿ, ಹೇತುವಾದಿ :–** ಒಬ್ಬ ಪರಿಶೋಧಕನು ಏನನ್ನಾದರೂ ಹೊಸ ವಿಷಯವನ್ನು ಸಿದ್ಧಾಂತವಾಗಿ ಕಂಡುಹಿಡಿದಾಗ ಅದು ಶಾಸ್ತ್ರಸಂಬಂಧ ವಾಗಿರುತ್ತದೆ. ಅದು ಒಬ್ಬರಿಗೆ ಹೇಗೆ ಉಪಯೋಗಪಟ್ಟರೆ ಎಲ್ಲರಿಗೂ ಹಾಗೆಯೆ ಉಪಯೋಗಪಡುತ್ತದೆ. ಒಂದುಬಾರಿ ಹೇಗೆ ಉಪಯೋಗಪಟ್ಟರೆ ನಂತರ ಎರಡನೆಬಾರಿ ಕೂಡಾ ಹಾಗೆಯೇ ಉಪಯೋಗಪಡುತ್ತದೆ. ಶಾಸ್ತ್ರಬದ್ಧವಾದುದು ಎಲ್ಲರಿಗೂ ಒಂದೇ ವಿಧಾನ ಹೊಂದಿರುತ್ತದೆ. ಶಾಸ್ತ್ರ ಅಲ್ಲದಿರುವುದನ್ನು ಶಾಸ್ತ್ರವೆಂದು ನಂಬಿಸಿದರೆ ಅದು ಸಾಗಿದಷ್ಟುದಿನ ಸಾಗುತ್ತದೆ. ಯಾವಾಗಲೋ ಒಂದುಬಾರಿ ಅದು ನಡೆಯದಂತೆ ಹೋಗುತ್ತದೆ. ಇಲ್ಲಿಯವರೆಗೂ ಮಾಡಿರುವುದು

ಮೋಸ ಎಂದು ತಿಳಿದುಹೋಗುತ್ತಿದೆ. ಅದರಿಂದ ಅದು ಶಾಸ್ತ್ರವಲ್ಲವೆಂದು, ಸತ್ಯವಲ್ಲವೆಂದು ತಿಳಿದುಹೋಗುತ್ತದೆ. ಹಾಗೆಯೇ ಈಗ ಆ ಯೋಗಿ ವಿಷಯದಲ್ಲಿ ನಡೆದಿದೆ. ಆತನು ತಾನು ದೊಡ್ಡವನೆಂದು ತಾನು ಹೇಳಿದರೂ, ಮುಟ್ಟಿಕೊಂಡರೂ ರೋಗಗಳು ಹೋಗಿವೆಯೆಂದಾಗ, ಅದು ಎಲ್ಲರಿಗೂ ಸಮಾನವಾಗಿ ಏಕೆ ನಡೆಯಲಿಲ್ಲ. ಕ್ಯಾನ್ಸರ್, ಎಯಿಡ್ಸ್ ಮೊದಲಾದ ರೋಗಗಳು ದೀರ್ಘಕಾಲ ರೋಗಗಳು ಆದ್ದರಿಂದ ಒಂದುಬಾರಿ ಅವು ಹೋಗಿರುವುದು ತಿಳಿಯದು, ಹೋಗದಿರುವುದು ತಿಳಿಯದು. ಆದ್ದರಿಂದ ಅವುಗಳ ವಿಷಯದಲ್ಲಿ ಹೋಗಿವೆಯೆಂದು ಮಸಿಬಳಿದು ಬಿಲ್ವಪತ್ರಿಮರದಕಾಯಿ ಮಾಡಿದ್ದಾರೆ. ತಲೆನೊವು ಆಗಿಂದಾಗ ಕಾಣಿಸುತ್ತಿತ್ತು. ಆದ್ದರಿಂದ ಅದರ ವಿಷಯದಲ್ಲಿ ಯೋಗಿಯೆಂದು ಕೊಳ್ಳುವವನ ವಿಷಯ ಹೊರಬಿದ್ದಿದೆ. ಆತನು ಯೋಗಿಯಲ್ಲವೆಂದು ತಿಳಿದುಹೋಗಿದೆ. ಒಂದುವೇಳೆ ಯೋಗಿ ಆದರೂ ಆತನಿಗೆ ರೋಗಗಳನ್ನು ಹೋಗಲಾಡಿಸುವ ಶಕ್ತಿಯಿಲ್ಲವೆಂದು ಅರ್ಥವಾಗಿಹೋಗಿದೆ. ಕೆಲವರು ಆಸ್ತಿಕರು ಇಂತಹ ಯೋಗಿಗಳನ್ನು ಅಡ್ಡ ಇಟ್ಟುಕೊಂಡು ಮಾತನಾಡುತ್ತಾರೆ. ಅಂಥಹವರೆಲ್ಲರಿಗೂ ಚೇಳಿನ ಬಾಧೆ ಕಡಿಮೆಯಾಗದಿರುವುದು ಒಳ್ಳೆಯ ಗುಣಪಾಠವಾಗಿದೆ. ಶಾಸ್ತ್ರೀಯತೆ ಇಲ್ಲದಿರುವುದು ಏನಾದರೂ, ಈ ವಿಧವಾಗಿ ಯಾವಾತ್ತೊ ಒಂದುದಿನ ಹೊರಬಿದ್ದುಹೋಗುತ್ತದೆ. ಅದು ಶಾಸ್ತ್ರಬದ್ಧತೆ ಇಲ್ಲದಿರುವುದೆಂದು ತಿಳಿದುಹೋಗುತ್ತದೆ.

(ಈ ವಿಧವಾಗಿ ಹೇತುವಾದಿ, ನಾಸ್ತಿಕವಾದಿ ಇಬ್ಬರೂ ಜೊತೆಯಾಗಿ ಅವರಿಗೆ ಅವಕಾಶ ಇರುವುದೆಲ್ಲಾ ಮಾತನಾಡಿ ಯೋಗವನ್ನು ಯೋಗಿಯನ್ನು ಹೇಳನವಾಗಿ ಮಾತನಾಡಿ, ಯೋಗ ಎನ್ನುವುದು ಶಾಸ್ತ್ರವಲ್ಲವೆಂದು, ಅದರಲ್ಲಿ ಯಾವ ಶಕ್ತಿಯಿಲ್ಲವೆಂದು ಋಜುವಾಗಿಹೋಗಿದೆಯೆಂದು ಹೇಳಿದ್ದಾರೆ. ಇದನ್ನೆಲ್ಲ ಗಮನಿಸಿದ ನಾವು, ಮೊದಲಿನಿಂದ ಯೋಗ ಎನ್ನುವುದು ಶಾಸ್ತ್ರಪದ್ಧತಿ ಯಾದುದೆಂದು ತಿಳಿಸಿದ ನಾವು, ಯೋಗವು ಹೇಳನಕ್ಕೊಳಗಾಗುವುದನ್ನು ಸಹಿಸಿಕೊಳ್ಳಲಾರದೆ, ಇಲ್ಲಿಯವರೆಗೂ ಮಾತನಾಡಿದವರಿಗೆ ಉತ್ತರ ಕೊಡಬೇ ಕೆಂದು ಈ ವಿಧವಾಗಿ ಹೇಳಿದ್ದೇನೆ.)

**ನಾನು :–** ಯೋಗವಾದರೂ ಅದಕ್ಕೆ ಸಂಬಂಧಿಸಿದ ವಿಷಯಗಳಾದರೂ ಬಹಳ ರಹಸ್ಯಗಳಾಗಿವೆ. ಎಲ್ಲರಿಗೂ ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲ. ಆದ್ದರಿಂದ ಭಗವದ್ಗೀತೆಯಲ್ಲಿ ಯೋಗವಿಷಯಗಳನ್ನು ತಿಳಿಸುವಾಗ ಭಗವಂತನಾದ ಶ್ರೀಕೃಷ್ಣನು ತನ್ನ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ. ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 1,2 ಶ್ಲೋಕಗಳನ್ನು ಕೆಳಗೆ ನೋಡೋಣ.

**ಶ್ಲೋ॥ 1. ಇದಂತುತೇ ಗುಹ್ಯತಮಂ ಪ್ರವಕ್ಷ್ಯಾ ಮ್ಯನಸೂಯವೇ,**
**ಜ್ಞಾನಂ ವಿಜ್ಞಾನ ಸಹಿತಂ ಯಜ್ಞಾತ್ವಾ ಮೋಕ್ಷ್ಯಸೇ ಶುಭಾತ್.**

**ಶ್ಲೋ॥ 2. ರಾಜವಿದ್ಯಾ ರಾಜಗುಹ್ಯಂ ಪವಿತ್ರ ಮಿದ ಮುತ್ತಮಮ್.**
**ಪ್ರತ್ಯಕ್ಷಾವಗಮಂಧರ್ಮ್ಯಂ ಸುಸುಖಮ್ ಕರ್ತುಮವ್ಯಯಮ್.**

**1, 2 ಭಾವನೆಗಳು :–** "ಇದು ಅತಿ ರಹಸ್ಯವಾದ ಜ್ಞಾನ. ಯಾರಿಗೂ ತಿಳಿಯದೆ ರಹಸ್ಯವಾಗಿರುವ ಜ್ಞಾನವನ್ನು ವಿಜ್ಞಾನಸಹಿತವಾಗಿ ವಿಶಧೀಕರಿಸಿ ಹೇಳುತ್ತೇನೆ ಶ್ರದ್ಧೆಯಿಂದ ಕೇಳು. ಇದನ್ನು ತಿಳಿಯುವುದರಿಂದ ಎಲ್ಲ ಅಶುಭಗಳ ಪ್ರಶ್ನೆಗಳು ಇಲ್ಲದಹಾಗೆ ಹೋಗುತ್ತವೆ." "ಎಲ್ಲಾ ವಿದ್ಯೆಗಳಲ್ಲಿ ಮತ್ತು ಎಲ್ಲಾ ರಹಸ್ಯಗಳಲ್ಲಿ ಉನ್ನತವಾದುದು ಮತ್ತು ಉತ್ತಮವಾದುದು, ಪವಿತ್ರವಾದುದು, ಪ್ರತ್ಯಕ್ಷವಾಗಿ ತಿಳಿಯುವುದು, ನಾಶವಿಲ್ಲದ ಧರ್ಮವಾಗಿದ್ದೂ, ಎಲ್ಲರೂ ಆಚರಿಸುವಂತಹದ್ದು ಸಂತೋಷಗಳಲ್ಲಿ ಹೆಚ್ಚು ಒಳ್ಳೆಯ ಸಂತೋಷವಾದುದು ಆಗಿರುವುದನ್ನು ತಿಳಿಸುತ್ತಿದ್ದೇನೆ ಕೇಳು."

ಕೃಷ್ಣನು ತಾನು ಭಗವದ್ಗೀತೆಯನ್ನು ಹೇಳುವಾಗ ಯೋಗವಿದ್ಯೆ ಬಹಳ ರಹಸ್ಯವಾದುದೆಂದು ಪ್ರಾರಂಭಮಾಡಿ, ಇದು ಎಲ್ಲಾ ವಿದ್ಯೆಗಳಿಗಿಂತ ಉತ್ತಮವಾದ ವಿದ್ಯೆ ಎಂದು ಹೇಳಿದ್ದಾನೆ. ಭಗವಂತನಾದ ಶ್ರೀಕೃಷ್ಣನು ಹೇಳಿದ ವಿದ್ಯೆ ಏನೊ ಭಗವದ್ಗೀತೆಯಲ್ಲಿ ತಿಳಿದುಕೊಂಡರೆ, ಯಾವ ಪ್ರಶ್ನೆಗಾದರೂ ಉತ್ತರವನ್ನು ಹೇಳಬಹುದು. ಆದ್ದರಿಂದ ಯೋಗವು, ಯೋಗಿ ವಿಷಯದಲ್ಲಿ ಎಷ್ಟೊ ಪ್ರಶ್ನೆಗಳನ್ನು ಪ್ರಶ್ನಿಸಿದ ಹೇತುವಾದಿಗು ನಾಸ್ತಿಕವಾದಿಗು ಅರ್ಥವಾಗುವಂತೆ ವಿಶಧೀಕರಿಸಿ

ಹೇಳಬೇಕೆಂದು ಈ ವಿಧವಾಗಿ ಹೇಳುತ್ತಿದ್ದೇನೆ. ಉತ್ತಮಯೋಗಿ ಎಂದು ಹೆಸರುವಾಸಿಯಾದವನು ಒಂದು ಚಿಕ್ಕ ವಿಷಯದಲ್ಲಿ ಚೇಳಿನ ಬಾಧೆಯನ್ನು ನಿವಾರಿಸಲಾರದೆಹೋಗಿದ್ದಾನೆಂದು ಕೆಲವರು ವಿಮರ್ಶಿಸುವುದರಲ್ಲಿ ಸ್ವಲ್ಪ ಒಳ್ಳೆಯದಿದ್ದರೂ, ಸ್ವಲ್ಪ ಕೆಟ್ಟದ್ದಿದೆ. ಸಂಶಯ ಬಂದಾಗ ಪ್ರಶ್ನಿಸುವುದು ಒಳ್ಳೆಯದೇ ಅದರೂ, ಮುಂದೆ ಹಿಂದೆ ಆಲೋಚಿಸದಂತೆ, ಒಂದು ವಿಷಯವನ್ನು ಕುರಿತು ಸಮಗ್ರವಾಗಿ ನೋಡದಂತೆ, ಅವಕಾಶ ಬಂದಿದೆಯಲ್ಲವೇ ಎಂದು ಅಡ್ಡವಾಗಿ ಪ್ರಶ್ನಿಸುವುದು ಪೂರ್ತಿ ಕೆಟ್ಟದಾಗಿದೆಯೆಂದು ಹೇಳುತ್ತಿದ್ದೇವೆ.

ಯೋಗಿಯೊಂದರ ಶರೀರದಲ್ಲಿ ಯೋಗಶಕ್ತಿ ನೆಲೆ ಇರುವುದು ನಿಜವೇ. ಯೋಗಶಕ್ತಿ ಎನ್ನುವುದು ಯೋಗಿ ತನ್ನ ಶಕ್ತಿಯನ್ನು ದಾನ ಮಾಡಬೇಕೆಂದುಕ ೊಂಡಾಗಾಗಲಿ, ಒಬ್ಬ ರೋಗಿಯಿಂದ ರೋಗವನ್ನು ಇಲ್ಲದಹಾಗೆ ಮಾಡಬೇಕೆಂದು ಕೊಂಡಾಗಾಗಲಿ, ತನ್ನಲ್ಲಿನ ಯೋಗಶಕ್ತಿ (ಜ್ಞಾನಶಕ್ತಿ) ರೋಗಿ ಶರೀರದೊಳಗೆ ಹೋಗಿ ಆತನ ರೋಗವನ್ನು ಇಲ್ಲದಂತೆ ಮಾಡುತ್ತದೆಂಬುದು ನಿಜವೇ. ಆದರೆ ಆ ಸಮಯದಲ್ಲಿ ಯೋಗಿ ಶರೀರದಲ್ಲಿ ಏನು ನಡೆಯುತ್ತಿರುವುದು ಯೋಗಿಗೆ ತಿಳಿದಿದೆ. ಎಷ್ಟೋ ರಹಸ್ಯವಾದ ಜ್ಞಾನವನ್ನು ಸ್ವಲ್ಪವಾದರೂ ತಿಳಿಯದ ಮನುಷ್ಯರು, ತಿಳಿಯದ ವಿಷಯವನ್ನು ಕುರಿತು ಮಾತನಾಡುವುದು ಅವಿವೇಕವಾಗುತ್ತದೆ. ವಿವೇಕದಿಂದ ಆಲೋಚಿಸಿದರೆ, ಯೋಗಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಗಮನಿಸಿದರೆ, ಯೋಗಿಯಾದವನು ಯೋಗವನ್ನು ಆಚರಿಸುವವರೆಗೂ ತನ್ನ ಇಷ್ಟ ಪ್ರಕಾರ ಮಾಡಬಹುದು. ಯೋಗವನ್ನು ಆಚರಿಸುವುದು, ಜ್ಞಾನವನ್ನು ತಿಳಿಯುವುದು, ಜೀವಿಯೊಂದರ ಇಷ್ಟಾಯಿಷ್ಟದ ಮೇಲೆ (ಶ್ರದ್ಧಾಶ್ರದ್ಧೆಗಳ ಮೇಲೆ) ಆಧಾರಪಟ್ಟಿರುತ್ತದೆ. ಜೀವಿಯು ಶ್ರದ್ಧೆಹೊಂದಿ ದೇವರ ಜ್ಞಾನವನ್ನು ತಿಳಿಯಬಹುದು. ಹಾಗೆಯೇ ಯೋಗವನ್ನು ಆಚರಿಸಬಹುದು. ಯೋಗವನ್ನು ಆಚರಿಸುವವರೆಗೇ ಜೀವಿಯ ಇಷ್ಟ. ನಂತರ ಯೋಗಶಕ್ತಿ ಲಭಿಸುವುದಾಗಲಿ, ಲಭಿಸದಿರುವುದಾಗಲಿ ಜೀವಿಯ ಇಷ್ಟದ ಮೇಲೆ ಆಧಾರಪಟ್ಟಿರುವುದಿಲ್ಲ. ಯೋಗಶಕ್ತಿ (ಜ್ಞಾನಶಕ್ತಿ) ಎಂಬುವ ದೈವಶಕ್ತಿ ಲಭಿಸುವುದು ದೇವರ ಇಷ್ಟದ

ಮೇಲೆ ಆಧಾರಪಟ್ಟಿರುತ್ತದೆ. ದೈವಶಕ್ತಿ ಅನ್ನುವ ಯೋಗಶಕ್ತಿ ದೇವರಿಂದ ಲಭಿಸುವುದು, ಆದ್ದರಿಂದ ಯೋಗಿ ಇಷ್ಟದ ಮೇಲೆ ಆಧಾರಪಟ್ಟಿರುವುದಿಲ್ಲ. ಯೋಗ ಮಾಡುವುದರಿಂದ ಫಲಿತವಾಗಿ ಯೋಗಶಕ್ತಿ ಲಭಿಸುತ್ತದೆ ಎಂದು ಹೇಳಿದ್ದೇವಾಗಲಿ ಇಷ್ಟು ಬರುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಅದು ಕೊಡುವವನನ್ನು ಅನುಸರಿಸಿ ಇರುತ್ತದೆ.

ಯೋಗಿ ಆದವನು ಯೋಗ ಮಾಡುವುದರಲ್ಲಿಯೇ ಸ್ವತಂತ್ರನಾಗಲಿ, ಯೋಗಶಕ್ತಿಯನ್ನು ಸಂಪಾದಿಸುವುದರಲ್ಲಿ ಸ್ವತಂತ್ರನು ಅಲ್ಲ. ಆದ್ದರಿಂದ ಯೋಗವನ್ನು ಆಚರಿಸಿದ ಯೋಗಿಗೆ ಎಷ್ಟುಶಕ್ತಿ ಲಭಿಸಿದೆಯೋ ತಿಳಿಯದು. ಹಾಗೆಯೇ ಸ್ವಲ್ಪ ಕಾಲದಿಂದ ಯೋಗಸಾಧನೆಯಲ್ಲಿರುವವನಿಗೆ ಎಷ್ಟು ಯೋಗಶಕ್ತಿ ತನ್ನಹತ್ತಿರ ಇದೆಯೋ ತಿಳಿಯದು. ಯೋಗಶಕ್ತಿಯನ್ನು ಸಂಪಾದಿಸುವು ದರಲ್ಲಿಯೂ, ನೆಲೆ ಇಟ್ಟುಕೊಳ್ಳುವುದರಲ್ಲಿಯೂ ಸ್ವತಂತ್ರವಿಲ್ಲದ ಯೋಗಿಗೆ ಖರ್ಚು ಇಡುವುದರಲ್ಲಿಯೂ ಸ್ವತಂತ್ರತೆ ಇಲ್ಲ. ಯೋಗಿ ಆದವನು ಸಂಪೂರ್ಣಜ್ಞಾನಿ ಆಗಿರುತ್ತಾನೆ, ಆದ್ದರಿಂದ ಈ ವಿಷಯಗಳೆಲ್ಲವೂ ಯೋಗಿಗೆ ತಿಳಿದಿರುತ್ತವೆ. ಶಕ್ತಿಯನ್ನು ಸಂಪಾದಿಸುವುದರಲ್ಲಿಯೂ, ಇತರರಿಗೆ ಕೊಡುವುದರಲ್ಲಿಯೂ ಯೋಗಿಯೊಂದರ ಪ್ರಮೇಯ ಸ್ವಲ್ಪವೂ ಇರುವುದಿಲ್ಲ. ಅದಿ ಎಲ್ಲಾ ದೇವರಿಗೆ ಸಂಬಂಧಿಸಿದ ವಿಷಯ. ಶಕ್ತಿಯನ್ನು ದಾನ ಮಾಡಿ, ರೋಗವನ್ನು ಗುಣಪಡಿ ಸುವುದು, ತನ್ನ ಇಷ್ಟ ಪ್ರಕಾರ ನಡೆಯುವ ಕೆಲಸ ಅಲ್ಲವೆಂದು, ಯೋಗಿಯಾ ದವನಿಗೆ ಗೊತ್ತು. ಆದ್ದರಿಂದ ಏಸು ಯೋಗಶಕ್ತಿಯಿಂದ ಒಬ್ಬ ಕುಷ್ಟರೋಗಿಯನ್ನು ಗುಣಪಡಿಸಿದ್ದಾನೆ. ಎರಡನೆಯವನನ್ನು ಗುಣಪಡಿಸಲಿಲ್ಲ. ಹಾಗೆಯೇ ಒಬ್ಬ ಕುರುಡನನ್ನು ಚೆನ್ನಾಗಿ ಮಾಡಿದ್ದಾನಾಗಲಿ, ಎರಡನೆ ಕುರುಡನನ್ನು ಗುಣಪಡಿಸುವುದಕ್ಕೆ ಕನಿಷ್ಟ ಪ್ರಯತ್ನ ಕೂಡಾ ಮಾಡಲಿಲ್ಲ. ಏಕೆಂದರೆ ಆ ಕೆಲಸಗಳು ತನ್ನ ಇಷ್ಟಪ್ರಕಾರ ನಡೆಯುವವು ಅಲ್ಲವೆಂದು ಆತನಿಗೆ ತಿಳಿದಿದೆ.

ಯೋಗ ಮಾಡುವ ಸಮಯದಲ್ಲಿ ಲಭಿಸುವ ಶಕ್ತಿ ಆದ್ದರಿಂದ ಅದನ್ನು ಯೋಗಶಕ್ತಿ ಎಂದು ಕರೆಯುತ್ತೇವೆ. ಯೋಗಶಕ್ತಿ ಎಂಬುದು ನಿಜಕ್ಕೆ ದೈವಶಕ್ತಿಯೇ

ಎಂದು ಹೇಳಬಹುದು. ದೈವಶಕ್ತಿಯನ್ನು ಜೀವಿಯು ಯೋಗ ಮಾಡಿದಕ್ಕೆ ಫಲಿತವಾಗಿ ಪಡೆಯುತ್ತಿದ್ದಾನೆ. ಜೀವಿಯು ಹೊಂದಿದರೂ ಅದು ಜೀವಶಕ್ತಿ ಎನ್ನಲಾಗುವುದಿಲ್ಲ, ದೈವಶಕ್ತಿಯಾಗಿಯೇ ಹೇಳಲಾಗುತ್ತಿದೆ. ದೈವಶಕ್ತಿ ಮೇಲೆ ಜೀವಿಗೆ ಯಾವ ಅಧಿಕಾರ ಇಲ್ಲ, ದೈವಶಕ್ತಿ ಮೇಲೆ ಪೂರ್ತಿ ಅಧಿಕಾರ ದೇವರದೇ ಆದರೂ ಆತನು ಏನು ಮಾಡುವವನಲ್ಲ. ಆದ್ದರಿಂದ ಆತನ ಅಧಿಕಾರ ಆತ್ಮಕ್ಕೆ ಒಪ್ಪಿಸಲಾಗಿದೆ. ಆತ್ಮ ಆತ್ಮವಾಗಿ ಅಲ್ಲದೆ ದೇವರಂತೆ ನಟಿಸುತ್ತಾ, ಆತನ ಕಾರ್ಯಗಳನ್ನು ಮಾಡುತ್ತಿದೆ. ಮನುಷ್ಯರಲ್ಲಿ ಕೆಲವರು ದೇವರಿಗೆ ಇಷ್ಟವಾಗಿದ್ದಾರೆ. ಕೆಲವರು ಅಯಿಷ್ಟರಾಗಿದ್ದಾರೆ. ದೇವರಿಗೆ ಇಷ್ಟವಾದವರು ಅಯಿಷ್ಟರಾಗುವುದಕ್ಕೆ ಅವರವರ ಜ್ಞಾನವನ್ನನುಸರಿಸಿ ಇರುತ್ತದೆ. ಕರ್ಮಗಳಿರುವವನ ಮೇಲೆ ಯೋಗಿ ಶಕ್ತಿಯನ್ನು ದಾನಮಾಡಿದರೂ, ದೈವಶಕ್ತಿ ಆತ್ಮಶಕ್ತಿಯಾಗಿದ್ದೂ ಇಂದ್ರಿಯಶಕ್ತಿಯಾಗಿ ಬದಲಾಗಿ ಪಾಪ ಇರುವವನ ಶರೀರದಲ್ಲಿ ಸೇರುತ್ತದೆ. ಇಂದ್ರಿಯಶಕ್ತಿ ಎಷ್ಟು ಸೇರಿದೆ? ಮತ್ತೊಬ್ಬನ ಪಾಪವನ್ನು ಎಷ್ಟು ಇಲ್ಲದಹಾಗೆ ಮಾಡಿದೆ ಎಂಬುದು ದೇವರ ಇಷ್ಟದ ಮೇಲೆ ಆಧಾರಪಟ್ಟಿರುತ್ತದೆ. ಮನುಷ್ಯನ ಇಷ್ಟದ ಮೇಲೆ ಆದಾರಪಟ್ಟಿರುವುದಿಲ್ಲ. ಆದ್ದರಿಂದ ಯೋಗಿಯಾದವನು ಒಂದುಬಾರಿ ಕ್ಯಾನ್ಸರ್ ರೋಗವನ್ನು ಹೋಗಲಾಡಿಸಿದರೂ, ಎಯಿಡ್ಸ್ ರೋಗವನ್ನು ಬಾಯಿಮಾತಿನಿಂದ ಹೇಳಿ ಕಳಿಸಿದರೂ, ಎಷ್ಟೋ ದೊಡ್ಡಕರ್ಮಗಳನ್ನು ಇಲ್ಲದಹಾಗೆ ಮಾಡಿದರೂ, ಒಂದಾನ್ನೊಂದು ಸಮಯದಲ್ಲಿ ಚಿಕ್ಕ ಕರ್ಮವಾದರೂ ಚೇಳಿನ ನೋವನ್ನು ಕೂಡಾ ನಿವಾರಿಸಲಾರದೆಹೋಗುತ್ತದೆ. ಹಾಗೆ ಆಗುವುದಕ್ಕೆ ಕಾರಣವೇನೆಂದು ನೋಡಿದರು ಮತ್ತೊಬ್ಬ ವ್ಯಕ್ತಿಯ ಕರ್ಮಗಳು ಹೋಗುವುದೂ, ಹೋಗದಿರುವುದೂ ಎರಡೂ ಯೋಗಿ ಇಷ್ಟದಮೇಲೆ ಆಧಾರಪಟ್ಟಿರುವುದಿಲ್ಲ ವೆಂದು, ಅದು ಎಲ್ಲವೂ ದೇವರ ಇಷ್ಟದ ಮೇಲೆ ಆಧಾರಪಟ್ಟಿರುತ್ತದೆಂದು ತಿಳಿಯುತ್ತಿದೆ. ಚೇಳಿನ ಬಾಧೆ ಯೋಗಿ ಪ್ರಯತ್ನಿಸಿದರೂ ಹೋಗದಿರುವುದಕ್ಕೆ ಕಾರಣ ದೇವರಿಗೆ ಇಷ್ಟವಿಲ್ಲದಿರುವುದರಿಂದ ಹಾಗೆ ಆಗಿದೆಯೆಂದು ಹೇಳಬಹುದು. ಆತನು ಬಾಧೆಯನ್ನು ಅನುಭವಿಸಬೇಕಾಗಿದ್ದೆ ಎಂಬ ನಿರ್ಣಯ ದೇವರಿಗೆ ಇದೆ, ಆದ್ದರಿಂದ ಆತ್ಮ ಇಂದ್ರಿಯಶಕ್ತಿಯಾಗಿ ತನ್ನಶಕ್ತಿಯನ್ನು ಬಿಡುಗಡೆ

ಮಾಡಲಿಲ್ಲ. ಆದ್ದರಿಂದ ಆತನಿಗೆ ದೇವರಶಕ್ತಿ ಲಭಿಸಲಿಲ್ಲ. ಅವನಕರ್ಮ ಹೋಗಲಿಲ್ಲ.

ಇಲ್ಲಿ ಕೆಲವರಿಗೆ ಒಂದು ಪ್ರಶ್ನೆಬರಬಹುದು. ಅದೇನೆಂದರೆ! ಚೇಳಿನ ವಿಷವೊಂದರ ಬಾಧೆ ಒಂದು ಗಂಟೆ ಇಲ್ಲವೆ ಎರಡು ಗಂಟೆಗಳಿರುತ್ತದೆ. ಕ್ಯಾನ್ಸರ್, ಎಯಿಡ್ಸ್ ರೋಗವೊಂದರ ಬಾಧೆ ಕೆಲವು ವರ್ಷಗಳು ಅನುಭವಿಸಬೇಕಾಗಿರುತ್ತದೆ. ಎಯಿಡ್ಸ್ ರೋಗವಿರುವವನನ್ನು, ಚೇಳು ಕಚ್ಚಿದವನನ್ನು ಇಬ್ಬರಲ್ಲಿ ಯಾರು ಹೆಚ್ಚು ಪಾಪ ಮಾಡಿದವನೆಂದು ಲೆಕ್ಕಿಸಿದರೆ, ಚೇಳು ಕಚ್ಚಿದವನಿಗಿಂತ ಎಯಿಡ್ಸ್ ರೋಗದಿಂದ ಬಾಧೆಪಡುವವನು ಎಷ್ಟೋ ಹಂತಗಳು ಹೆಚ್ಚಿನ ಪಾಪ ಮಾಡಿದವನಾಗಿ ಇದ್ದಾನೆ. ಚೇಳು ಕಚ್ಚಿದವನು ಸ್ವಲ್ಪ ಪಾಪವನ್ನು ಮಾಡಿಕೊಂಡಿರುವಾಗ ಎಯಿಡ್ಸ್ ರೋಗ ಇರುವವನು ಭಯಂಕರವಾದ ಪಾಪ ಮಾಡಿಕೊಂಡಿದ್ದಾನೆ. ಎಷ್ಟೊ ದೊಡ್ಡಪಾಪವನ್ನು ಮಾಡಿಕೊಂಡ ಎಯಿಡ್ಸ್ ರೋಗಿಯನ್ನು ಗುಣಪಡಿಸುವುದಕ್ಕೆ ಇಷ್ಟಪಟ್ಟ ದೇವರು ಚಿಕ್ಕಪಾಪ ಮಾಡಿಕೊಂಡ ಚೇಳುಕಚ್ಚಿದವನನ್ನು ಗುಣಪಡಿಸುವುದಕ್ಕೆ ಏಕೆ ಇಷ್ಟಪಡಲಿಲ್ಲ? ಎಂದು ಪ್ರಶ್ನೆ ಬರುತ್ತದೆ. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಈ ವಿಷಯದಲ್ಲಿ ಯಾರಿಗಾದರೂ ಈ ಪ್ರಶ್ನೆ ಬರುವುದರಲ್ಲಿ ತಪ್ಪಿಲ್ಲ. ಆದರೆ ನಾವು ಇಲ್ಲಿ ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ! ದೇವರಿಗೆ ಮನುಷ್ಯರೆಲ್ಲರೂ ಸಮಾನವೇ, ಆದರೆ ಅವರವರ ಪಾಪಗಳನ್ನನುಸರಿಸಿ ಅವರವರ ಕರ್ಮಗಳನ್ನನುಸರಿಸಿ ಕೆಲವರು ದೇವರಿಗೆ ದೂರವಾಗಿ, ಕೆಲವರು ಹತ್ತಿರವಾಗಿರುತ್ತಾರೆ. ಆ ಲೆಕ್ಕಪ್ರಕಾರವಾದರೂ ಹೆಚ್ಚು ಪಾಪ ಮಾಡಿದ ಎಯಿಡ್ಸ್ ರೋಗಿ ದೂರವಾಗಿ, ಕಡಿಮೆ ಪಾಪವನ್ನು ಮಾಡಿಕೊಂಡ ಚೇಳಿನ ವಿಷದಿಂದ ಬಾಧೆಪಡುವವನು ಹತ್ತಿರವಾಗಿರುತ್ತಾರೆಂದು ಹೇಳಬಹುದು. ಆ ಲೆಕ್ಕಪ್ರಕಾರವಾದರೂ ಇಲ್ಲಿ ಉತ್ತರ ಸರಿಹೋಗುವುದಿಲ್ಲ. ಇಲ್ಲಿ ನಾವು ನೋಡಬೇಕಾಗಿರುವುದು ಯಾರು ಹತ್ತಿರ ಯಾರು ದೂರವೆಂದಲ್ಲ. ನಾವು ನೋಡಬೇಕಾಗಿರುವುದುದೇವರಿಗೆ ಯಾರು ಇಷ್ಟವಾದವರು, ಯಾರು ಅಯಿಷ್ಟವಾದವರು ಎಂದು ನೋಡಬೇಕಾದ

ಅಗತ್ಯವಿದೆ. ಆ ವಿಧವಾಗಿ ನೋಡಿದರೆ ಎಯಿಡ್ಸ್ ರೋಗಿಗಿಂತ ಚೇಳು ಕಚ್ಚಿದವನು ದೇವರಿಗೆ ಅಯಿಷ್ಟನಾಗಿದ್ದಾನೆ. ಎಯಿಡ್ಸ್ ರೋಗಿದು ದೊಡ್ಡ ಪಾಪವಾದರೂ ಅದು ಕ್ಷಮಿಸಲ್ಪಡುವ ಪಾಪ. ಜ್ಞಾನಾಗ್ನಿಯಿಂದ ಸುಟ್ಟುಹೋಗುವುದಾಗಿದೆ. ಚೇಳುಕಚ್ಚಿದವನ ಪಾಪ ಚಿಕ್ಕದಾದರೂ ಅದು ಕ್ಷಮಿಸಲಾರದ ಪಾಪವಾಗಿ ಇದೆ ಅದು ಜ್ಞಾನಾಗ್ನಿಯಿಂದ ಸುಟ್ಟುಹೋಗುವುದು ಅಲ್ಲ. ಈ ವಿಧವಾಗಿ ಅವರ ಗತ ಚರಿತ್ರೆಗಳಿರುವುದರಿಂದ ಅವರ ಚರಿತ್ರೆಗಳನ್ನನುಸರಿಸಿ ದೇವರಿಗೆ ಕೆಲವರು ಇಷ್ಟರಾಗಿ, ಕೆಲವರು ಅಯಿಷ್ಟರಾಗಿ ಇದ್ದಾರೆ. ಅದನ್ನನುಸರಿಸಿ ಅವರ ಪಾಪಗಳು ಹೋಗುವುದು, ಹೋಗದಂತಿರುವುದು ನಡೆಯುತ್ತಿರುತ್ತದೆ. ಹಿಂದಿನ ಚರಿತ್ರೆಗಳು ತಿಳಿಯದ ಮನುಷ್ಯರಿಗೆ, ನಡೆಯುತ್ತಿರುವ ವರ್ತಮಾನ ಮಾತ್ರ ಕಾಣಿಸುತ್ತಿರುತ್ತದೆ. ನಡೆದುಹೋದ ಭೂತಕಾಲ ಕಾಣಿಸುವುದಿಲ್ಲ. ಆದ್ದರಿಂದ ಕೆಲವುಬಾರಿ ಕೆಲಸಮಾಡಿದ ಶಕ್ತಿ, ಕೆಲವುಬಾರಿ ಏಕೆ ಕೆಲಸಮಾಡುತ್ತಿಲ್ಲ ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಕರ್ಮಗಳನ್ನು ದಹಿಸುವ ದೈವಶಕ್ತಿ (ಜ್ಞಾನಾಗ್ನಿ)ಯಲ್ಲಿ ಯಾವ ಲೋಪವು ಇಲ್ಲ. ಅದು ಎಲ್ಲದಕ್ಕು ಸಮಾನವೇ. ಅಯಸ್ಕಾಂತ ಕಬ್ಬಿಣವನ್ನು ಆಕರ್ಷಿಸುವುದರಲ್ಲಿ ಎಲ್ಲಾ ಕಬ್ಬಿಣದಚೂರುಗಳಿಗೆ ಸಮಾನವೇ ಆದರೂ, ತುಕ್ಕುಹಿಡಿದ ಕಬ್ಬಿಣದಚೂರುಗಳನ್ನು ಆಕರ್ಷಿಸಿಕೊಳ್ಳುವುದರಲ್ಲಿ ವ್ಯತ್ಯಾಸವಿರುತ್ತದೆ. ತುಕ್ಕು ಇಲ್ಲದಿರುವುದು ಆಕರ್ಷಿಸಲ್ಪಟ್ಟಂತೆ ತುಕ್ಕು ಇರುವುದು ಆಕರ್ಷಿಸಲ್ಪಡುವುದಿಲ್ಲ. ಅದೇ ವಿಧವಾಗಿ ಕ್ಷಮಿಸಲ್ಪಡುವ ಪಾಪ ಜ್ಞಾನಾಗ್ನಿಗೆ ಸುಟ್ಟುಹೋದಂತೆ, ಕ್ಷಮಿಸಲ್ಪಡದೆ ಇರುವ ಪಾಪ ಜ್ಞಾನಾಗ್ನಿಗೆ ಸುಟ್ಟುಹೋಗುವುದಿಲ್ಲ. ಅಗ್ನಿಯಲ್ಲಿ ವ್ಯತ್ಯಾಸ ಇಲ್ಲದಿದ್ದರೂ ಪಾಪಗಳಲ್ಲಿ ವ್ಯತ್ಯಾಸ ಇದೆಯೆಂದು ತಿಳಿಯುತ್ತಿದೆ. ಆದ್ದರಿಂದ ಒಂದುಬಾರಿ ಕೆಲಸ ಮಾಡಿದ ಇಂದ್ರಿಯಶಕ್ತಿ (ಆತ್ಮಶಕ್ತಿ) ಮತ್ತೊಂದುಬಾರಿ ಕೆಲಸ ಮಾಡದಂತೆ ಹೋಗುತ್ತಿದೆ.

ಇಂದ್ರಿಯಶಕ್ತಿ ಅತೀಂದ್ರಿಯಶಕ್ತಿ ಅನ್ನುವವುಗಳನ್ನು ಕುರಿತು ಇಲ್ಲಿಯ ವರೆಗೂ ವಿವರವಾಗಿ ಹೇಳಿಕೊಂಡಿದ್ದೇವೆ. ಈಗ ಬೈಬಲ್‌ನಲ್ಲಿನ ಒಂದು ಸಮಸ್ಯೆಯನ್ನು ಕುರಿತು ಇರುವ ಅನುಮಾನವನ್ನು ನಿವೃತ್ತಿ ಮಾಡಿಕೊಳ್ಳುವುದಕ್ಕೆ ಒಬ್ಬ ವ್ಯಕ್ತಿ ಎಬ್ಬಿಸಿದ ಪ್ರಶ್ನೆಯನ್ನು ತೆಗೆದುಕೊಂಡು ನೋಡೋಣ.

**ಪ್ರಶ್ನೆ :–** ಬೈಬಲ್‌ನಲ್ಲಿ ಹೇಳುವ ಸೃಷ್ಟಿವಾದ ಶಾಸ್ತ್ರೀಯವಾಗಿ ಎಲ್ಲಿಯೂ ನಿಲ್ಲದು. ಆದರೆ ಬೈಬಲ್ ಹೇಳಿರುವುದೆಲ್ಲಾ ಸತ್ಯ ಎಂದು ಮೂರ್ಖವಾಗಿ ಪಟ್ಟುಹಿಡಿದರೆ, ಶಾಸ್ತ್ರಜ್ಞರಿಗು ನಂಬಿಕಸ್ತರಿಗೂ ಘರ್ಷಣೆ ಬರದೆ ಇರುವುದಿಲ್ಲ. ಶಾಸ್ತ್ರವಾ, ಇಲ್ಲವೆ ನಂಬಿಕೆಯಾ ಏನನ್ನು ನೀವು ಒಪ್ಪಿಕೊಳ್ಳುತ್ತೀರಾ?

**ಉತ್ತರ :–** ಭೂಮಿಮೇಲೆ ಸತ್ಯವಾದಿಗಳು, ಅಸತ್ಯವಾದಿಗಳು ಎಂದು ಎರಡು ವಿಧಗಳ ಮನುಷ್ಯರಿದ್ದಾರೆ. ಸತ್ಯವಾದಿಗಳಿಗೆ ಸತ್ಯವನ್ನು ತಿಳಿಸುವುದಕ್ಕೆ ಶಾಸ್ತ್ರವನ್ನು ಹೇಳಬೇಕು. ಅಸತ್ಯವಾದಿಗಳಿಗೆ ಸತ್ಯವನ್ನು ತಿಳಿಸುವುದಕ್ಕೆ ಅಸತ್ಯವನ್ನು ಹೇಳಬೇಕು. ಅಸತ್ಯದ ಮೂಲಕ ಸತ್ಯವನ್ನು ಕೇಳಿಸಿಕೊಳ್ಳುವವರು ಬಹಳಜನ ಇದ್ದಾರೆ. ಸತ್ಯವನ್ನು ಹೇಳುವುದಕ್ಕೆ ಶಾಸ್ತ್ರವನ್ನು ಪ್ರಮಾಣವಾಗಿ ತೋರಿಸಿ ಹೇಳಿದರೆ ಸತ್ಯವನ್ನು ತಿಳಿದುಕೊಳ್ಳುವವರು ಇದ್ದಾರೆ. ಅಸತ್ಯವಾದಿಗಳಾದ ಕೆಲವರಿಗೆ ಸತ್ಯ ಅಸತ್ಯವಾಗಿ ಕಾಣಿಸುತ್ತದೆ, ಆಗ ಸತ್ಯವನ್ನು ಅನೇಕವಿಧಗಳಾಗಿ ಪ್ರಶ್ನಿಸುತ್ತಾರೆ. ಸತ್ಯವಾದಿಗಳಾದ ಕೆಲವರಿಗೆ ಸತ್ಯ ಶಾಸ್ತ್ರವಾಗಿ ಕಾಣಿಸುತ್ತದೆ. ಆದ್ದರಿಂದ ಅವರಿಗೆ ಹೆಚ್ಚಾಗಿ ಪ್ರಶ್ನೆಗಳು ಬರುವುದಿಲ್ಲ. ಉದಾಹರಣೆಗೆ ಮನುಷ್ಯ ಸತ್ಯ, ಆದರೆ ಮನುಷ್ಯನ ಹುಟ್ಟುವಿಕೆಯ ವಿಷಯ ಸತ್ಯ ಅಸತ್ಯವಾದನೆಗಳಿಂದ ಕೂಡಿಕೊಂಡು ಇದೆ. ಕೆಲವರು ಅಸತ್ಯವಾದನೆಯವನ್ನು ಸಮರ್ಥಿಸುತ್ತಾರೆ. ಇನ್ನುಕೆಲವರು ಸತ್ಯವಾದನೆಯನ್ನು ಸಮರ್ಥಿಸುತ್ತಾರೆ. ಕೆಲವರಿಗೆ ತಮ್ಮವಾದನೆ ಅಸತ್ಯವೆಂದು ತಿಳಿದರೂ ಅದೇ ಸರಿಯಾದ ವಾದನೆಯೆಂದು ಅಸತ್ಯದ ಮೂಲಕವೇ ಸತ್ಯ ತಿಳಿಯುತ್ತದೆಂದು ಅನ್ನುತ್ತಾರೆ. ಕೆಲವರಿಗೆ ತಮ್ಮ ವಾದನೆ ಸತ್ಯವಾದುದೆಂದು ಅರ್ಥವಾದರೂ ತಮ್ಮ ವಾದನೆಗೆ ಶಾಸ್ತ್ರ ಅಗತ್ಯವೆಂದು, ಶಾಸ್ತ್ರ ಇಲ್ಲದೆ ಸತ್ಯವನ್ನು ಹೇಳಲಾರೆವೆಂದು ಹೇಳುತ್ತಾರೆ. ಈ ವಿಧವಾಗಿ ಒಂದು ವಿಷಯವನ್ನು ಅಸತ್ಯದ ಮೂಲಕ ಕೆಲವರು ನಂಬಿದರೆ, ಸತ್ಯದ ಮೂಲಕ ಕೆಲವರು ನಂಬುತ್ತಿರುತ್ತಾರೆ.

ವಿಶ್ವ ಸೃಷ್ಟಿಸಲ್ಪಟ್ಟಿದೆ ಎಂಬ ವಿಷಯವನ್ನು ತಿಳಿಸುವುದಕ್ಕೆ ಅಸತ್ಯವಾದಿಗಳು ಪುರಾಣಗಳ ಮೂಲಕ ವಿಶ್ವವನ್ನು ದೇವರು ಸೃಷ್ಟಿಸಿದ್ದಾನೆಂದು ಕಟ್ಟು ಕಥೆಗಳನ್ನು ಹೇಳಿ ಒಪ್ಪಿಸಿದ್ದಾರೆ. ಸೃಷ್ಟಿ ವಿಷಯದಲ್ಲಿ ಸತ್ಯವಾದಿಗಳಾದವರು ಶಾಸ್ತ್ರದ ಮೂಲಕ

ಶೋಧಿಸಿ ಪರಿಶೋಧನೆ ಮೂಲಕ ವಿಶ್ವವನ್ನು ದೇವರು ಸೃಷ್ಟಿಸಿದ್ದಾನೆ ಎಂದು ಹೇಳುತ್ತಿದ್ದಾರೆ. ದೇವರು ವಿಶ್ವವನ್ನು ಸೃಷ್ಟಿಸಿದ್ದಾನೆ ಎಂಬಮಾತು ಪೂರ್ತಿ ವಾಸ್ತವವೇ ಆದರೂ, ಅದನ್ನು ಪುರಾಣಗಳ ಮೂಲಕ ಅಸತ್ಯವಾದಿಗಳು, ಶಾಸ್ತ್ರದ ಮೂಲಕ ಸತ್ಯವಾದಿಗಳು ಹೇಳಿಕೊಳ್ಳುತ್ತಿದ್ದಾರೆ. ವಿಶ್ವವು ದೇವರ ಮೂಲಕ ಸೃಷ್ಟಿಸಲ್ಪಟ್ಟಿದೆ ಎಂಬಮಾತು ನೂರಕ್ಕೆ ನೂರರಷ್ಟು ಸತ್ಯವೇ. ಆದರೆ ಆ ವಿಷಯ ಮನುಷ್ಯನಿಗೆ ಬೇಗ ಅರ್ಥವಾಗುವುದಕ್ಕೆ ಅಸತ್ಯಗಳಿಂದ, ಕಲ್ಪಿತಕಥೆಗಳಿಂದ ಕೂಡಿದ ಪುರಾಣಗಳನ್ನು ಹೇಳಿಕೊಳ್ಳಬೇಕಾಗಿ ಬರುತ್ತಿದೆ. ಸತ್ಯವನ್ನು ವೇಗವಾಗಿ ತಿಳಿಯುವುದಕ್ಕೆ ಅಸತ್ಯಮಾರ್ಗವನ್ನು ಅನುಸರಿಸಬೇಕಾಗಿರುತ್ತದೆ. ಸತ್ಯವನ್ನು ಬೇಗನೆ ಅಲ್ಲದಿದ್ದರೂ ಆಲಸ್ಯವಾಗಿ ಆದರೂ ತಿಳಿಯುವುದಕ್ಕೆ ಶಾಸ್ತ್ರವನ್ನು ಅನುಸರಿಸಬೇಕು. ಇನ್ನೊಂದು ವಿಧವಾಗಿ ಹೇಳಿಕೊಂಡರೆ ಮನುಷ್ಯನಿಗೆ ಅವಗಾಹನಶಕ್ತಿ ಕಡಿಮೆ ಇರುವಾಗ ಆತನಿಗೆ ಕಲ್ಪಿತ ಕಥೆಗಳಿಂದ, ಅಸತ್ಯ ಮಾತುಗಳಿಂದ ಸತ್ಯವನ್ನು ಬೇಗನೆ ತಿಳಿಸಬಹುದು. ಗ್ರಾಹಿತಶಕ್ತಿಯಿಲ್ಲದ ಮನುಷ್ಯರಿಗೆ ಶಾಸ್ತ್ರದ ಪ್ರಕಾರ ಸತ್ಯವನ್ನು ತಿಳಿಯುವುದು ಕಷ್ಟವಾಗುತ್ತದೆ. ಆದ್ದರಿಂದ ಶಾಸ್ತ್ರದಿಂದ ಆಲಸ್ಯವಾಗಿ, ಪುರಾಣಗಳಿಂದ ಬೇಗನೆ ಸತ್ಯ ತಿಳಿಯುತ್ತಿದೆ. ವಿವರವಾಗಿ ಹೇಳಬೇಕೆಂದರೆ ಅಸತ್ಯದ ಮೂಲಕ ಬೇಗನೆ, ಸತ್ಯದ ಮೂಲಕ ಅಲಸ್ಯವಾಗಿ ಒಂದು ವಿಷಯ ತಿಳಿಯಲ್ಪಡುತ್ತಿದೆಯೆಂದು ಹೇಳಬಹುದು.

ಉದಾಹರಣೆಗೆ ಒಂದು ವಿಷಯವನ್ನು ಹೇಳಿಕೊಳ್ಳೋಣ. ಒಂದು ಕುಟುಂಬದಲ್ಲಿ ಇಬ್ಬರು ಹಿರಿಯರು, ಇಬ್ಬರು ಮಕ್ಕಳು ಇದ್ದಾರೆ. ವಿವರವಾಗಿ ಹೇಳಿಕೊಂಡರೆ ಕುಟುಂಬದಲ್ಲಿ ಗಂಡಹೆಂಡತಿ ಇಬ್ಬರು ಹಿರಿಯರಿರುವಾಗ ನಾಲ್ಕು ವರ್ಷಗಳ ಮಗ ಒಬ್ಬನು, ಹತ್ತು ವರ್ಷಗಳ ಮಗ ಮತ್ತೊಬ್ಬನು ಒಟ್ಟು ನಾಲ್ಕುಜನ ಇದ್ದಾರೆ. ಅವರಿರುವ ಮನೆಗೆ ಎರಡು ಪ್ರವೇಶ ದ್ವಾರಗಳು ಇವೆ. ಒಂದು ಉತ್ತರದಕಡೆ, ಎರಡನೆಯದು ದಕ್ಷಿಣದಕಡೆ ಇದೆ. ಉತ್ತರಕಡೆಯ ದ್ವಾರದ ಮುಂದೆ ಕೊಳಚೆ ನೀರು ಪ್ರವಹಿಸುವುದಕ್ಕೆ ಮುನಿಸಿಪಾಲಿಟಿಯವರು ಹೊಸದಾಗಿ ಕಾಲುವೆಯನ್ನು ಅಗೆದಿದ್ದಾರೆ. ಅದರ ಕೆಲಸವೆಲ್ಲವೂ ಮುಗಿಯುವುದಕ್ಕೆ

ಒಂದು ತಿಂಗಳಕಾಲ ಹಿಡಿಯುತ್ತದೆ. ಅಲ್ಲಿಯವರೆಗೂ ಆಕಡೆಯ ದ್ವಾರದ ಮೂಲಕ ಹೊರಗೆ ಹೋಗುವುದಕ್ಕೆ ಕಷ್ಟವಾಗಿರುತ್ತದೆ. ಹಿರಿಯರು ಹೊರಗೆ ಹೋಗುವುದಕ್ಕೆ ಕಷ್ಟವಾಗಿರುವಾಗ ಮಕ್ಕಳು ಹೊರಗೆ ಹೋಗುವುದು ಅಪಾಯ ಕಾಲುವೆಯೊಳಗೆ ಬಿದ್ದುಹೋಗುವ ಅಪಾಯವಿದೆ. ಆದ್ದರಿಂದ ಹಿರಿಯರು ಇಬ್ಬರೂ ದಕ್ಷಿಣಕಡೆಯ ದ್ವಾರದ ಮೂಲಕ ಹೊರಗೆ ಹೋಗುವುದು ನಡೆಯುತ್ತಿತ್ತು. ಹತ್ತು ವರ್ಷದ ಹುಡುಗನಿಗೆ ಬುದ್ಧಿ ಬೆಳೆದಿದೆ. ಆದ್ದರಿಂದ ಅಪಾಯವನ್ನು ಕುರಿತು ಹೇಳಿದರೆ ಅರ್ಥವಾಗುತ್ತದೆ. ಆದ್ದರಿಂದ ದೊಡ್ಡಹುಡುಗನಿಗೆ ಉತ್ತರದಕಡೆಯ ದ್ವಾರದ ಮೂಲಕ ಹೊರಗೆ ಹೋಗಬೇಡವೆಂದು, ಕಾಲುವೆ ಇರುವುದರಿಂದ ಕಾಲುವೆಯಲ್ಲಿ ಬಿದ್ದು ಅಪಾಯ ನಡೆಯುವ ಅವಕಾಶವಿದೆ ಯೆಂದು ಹೇಳಿದ್ದಾರೆ. ದೊಡ್ಡಹುಡುಗನು ತಾಯಿತಂದೆ ಹೇಳಿದಮಾತನ್ನು ಅರ್ಥ ಮಾಡಿಕೊಂಡು, ಆಕಡೆ ಹೋಗದಂತೆ ದಕ್ಷಿಣ ದ್ವಾರದಕಡೆ ಹೊರಗೆ ಹೋಗುತ್ತೇನೆಂದು ಹೇಳಿದ್ದಾನೆ. ಇನ್ನು ನಾಲ್ಕುವರ್ಷಗಳ ಹುಡುಗನ ವಿಷಯದಲ್ಲಿಯೇ ಸ್ವಲ್ಪ ಆಲೋಚಿಸಬೇಕಾಗಿ ಬಂದಿದೆ. ಉತ್ತರ ದ್ವಾರದಕಡೆ ಹೊರಗೆ ಅಪಾಯವಿದೆ ಎಂದು ಹೇಳಿದರೆ ಗ್ರಹಿಸಿಕೊಳ್ಳುವ ಸಾಮರ್ಥ್ಯ ಇಲ್ಲ. ಆದ್ದರಿಂದ ಆ ಹುಡುಗನಿಗೆ ಅಪಾಯ ವಿಷಯ ಅರ್ಥವಾಗುವುದಿಲ್ಲ. ಅಂತಹದರಲ್ಲಿ ಆತನು ಹೊರಗೆಹೋಗದಂತೆ ಇರುವುದು ಮುಖ್ಯವಾದ ಉದ್ದೇಶ. ಆದ್ದರಿಂದ ಆ ಹುಡುಗನು ಹೊರಗೆ ಹೋಗದಂತಿರಲು ಸತ್ಯವನ್ನು ಹೇಳಿದರೆ ಅರ್ಥವಾಗುವುದಿಲ್ಲ. ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಇಲ್ಲ. ಆದ್ದರಿಂದ ಆತನಿಗೆ ಅಸತ್ಯವನ್ನು ಹೇಳಿದರೆ ಅದನ್ನು ಆತನು ಸುಲಭವಾಗಿ ನಂಬುತ್ತಾನೆ. ಆದ್ದರಿಂದ ಆತನಿಗೆ ಸತ್ಯದ ಬದಲು ಅಸತ್ಯವನ್ನು ಹೇಳಬೇಕಾಗಿ ಬಂದಿದೆ.

ಚಿಕ್ಕಹುಡುಗನು ಹೊರಗೆ ಹೋಗದಂತಿರುವುದಕ್ಕೆ ಆತನಿಗೆ ಅರ್ಥ ವಾಗುವ ವಿಧಾನದಲ್ಲಿಯೇ ಯಾವುದೊ ಒಂದು ಅಸತ್ಯವನ್ನು ಕಲ್ಪಿತ ಮಾಡಿ ಹೇಳಬೇಕಾಗಿ ಬಂದಿದೆ. ಆಗ ಆತನಿಗೆ ಅರ್ಥವಾಗುವಂತೆ ಒಂದು ವಿಷಯವನ್ನು ಹೇಳಿದ್ದಾರೆ. ಏನು ಹೇಳಿದ್ದಾರೆಂದರೆ! ಉತ್ತರದಕಡೆ ಬಾಗಿಲುದಾಟಿ ಹೊರಗೆ

ಹೋದರೆ ಅಲ್ಲಿ ಒಬ್ಬ ಕಳ್ಳ (ಗುಮ್ಮ) ಇದ್ದಾನೆಂದು, ಆ ಕಳ್ಳನು ಕಪ್ಪನೆಯ ಕಂಬಳಿ ಹೊದ್ದುಕೊಂಡು ಇದ್ದಾನೆಂದು, ಕಳ್ಳನಿಗೆ ಉದ್ದವಾದ ಕೈಗಳಿವೆಯೆಂದು, ಉದ್ದವಾದ ಕೈಗಳಿಗೆ ಉದ್ದವಾಗಿರುವ ಉಗುರುಗಳು ಇವೆಯೆಂದು, ಮನೆಯಲ್ಲಿನ ಮಕ್ಕಳು ಹೊರಗೆ ಬಂದರೆ ಬೂಚನು ಕಂಬಳಿಹೊದ್ದಿಸಿ ಯಾರೂ ನೋಡದಂತೆ ಎತ್ತುಕೊಂಡು ಹೋಗುತ್ತಾನೆಂದು, ಇಲ್ಲದ ವಿಷಯಗಳನ್ನು ಕಲ್ಪಿಸಿ ಅಸತ್ಯವನ್ನು ಹೇಳುವುದು ನಡೆದಿದೆ. ಹಾಗೆ ಹೇಳಿದಾಗ ಆ ಹುಡುಗನಿಗೆ ಆಕಡೆ ಹೋಗಬಾರದೆಂದು ಚೆನ್ನಾಗಿ ಅರ್ಥವಾಗಿದೆ. ಆಕಡೆ ಹೋದರೆ ಅಪಾಯವೆಂದು, ಕಳ್ಳನು ಎತ್ತಿಕೊಂಡು ಹೋಗುತ್ತಾನೆಂದು ತಿಳಿದಿದೆ. ಆಗಿನಿಂದ ಆ ಹುಡುಗನು ಆಕಡೆ ಬರಲಿಲ್ಲ. ಹೊರಗೆ ಹೋಗಬಾರದೆಂಬ ಸತ್ಯ ಹುಡುಗನಿಗೆ ಅಸತ್ಯದ ಮೂಲಕ ತಿಳಿದಿದೆ. ಹೊರಗೆ ಅಪಾಯ ಇದೆಯೆಂಬುದು ಮುಖ್ಯ ಅಂಶ. ಅದೇ ವಿಷಯವನ್ನು ದೊಡ್ಡ ಹುಡುಗನಿಗೆ ಇರುವುದು ಇದ್ದಂತೆ ಹೇಳುವುದರಿಂದ ಆತನಿಗೆ ಅಪಾಯದ ವಿಷಯ ತಿಳಿದುಹೋಗಿದೆ. ದೊಡ್ಡಹುಡುಗನಿಗೆ ಸತ್ಯದ ಮೂಲಕ ಇರುವ ವಿಷಯವನ್ನು ತಿಳಿಸಿದಾಗ, ಅದೇ ವಿಷಯವನ್ನೇ ಚಿಕ್ಕಹುಡುಗನಿಗೆ ಅಸತ್ಯದ ಮೂಲಕ ತಿಳಿಸುವುದು ನಡೆದಿದೆ. ಒಂದು ವಿಷಯವನ್ನು ಇಬ್ಬರಿಗೆ ತಿಳಿಸುವುದಕ್ಕೆ ಒಂದು ಶಾಸ್ತ್ರವನ್ನು (ಸತ್ಯವನ್ನು) ಎರಡು ಪುರಾಣವನ್ನು (ಅಸತ್ಯವನ್ನು) ಆರಿಸಿಕೊಳ್ಳಬೇಕಾಗಿದೆ. ಇದರಲ್ಲಿ ಯಾವುದು ಒಳ್ಳೆಯದು ಯಾವುದು ಕೆಟ್ಟದು ಎಂದು ಕೇಳಿದರೆ ಒಂದು ಸತ್ಯ ಎರಡನೆಯದು ಅಸತ್ಯವಾದರೂ ಕೇಳುವವರನ್ನನುಸರಿಸಿ, ಕೇಳುವವರ ಬುದ್ಧಿಯೊಂದರ ಗ್ರಾಹಿತಶಕ್ತಿಯನ್ನನುಸರಿಸಿ ಎರಡು ಸರಿಯಾದ ವಿಧಾನಗಳೆ ಎಂದು ಹೇಳಬಹುದು.

ಇಂದೂ, ಕ್ರೈಸ್ತವ, ಇಸ್ಲಾಮ್ ಸಮಾಜಗಳಲ್ಲಿನ ಪ್ರಜೆಗಳಲ್ಲಿ ಚಿಕ್ಕ ಹುಡುಗನಂತೆ ಬುದ್ಧಿಯೊಂದರ ಗ್ರಾಹಿತಶಕ್ತಿ ಇಲ್ಲದವರು ಇದ್ದಾರೆ. ಹಾಗೆಯೇ ದೊಡ್ಡ ಹುಡುಗನಂತೆ ಹೇಳುವ ವಿಷಯವನ್ನು ಕೇಳಿ ಚೆನ್ನಾಗಿ ಗ್ರಹಿಸಿಕೊಳ್ಳುವವರು ಸಹಾ ಇದ್ದಾರೆ. ಆದ್ದರಿಂದ ಆಯಾ ಸಮಾಜಗಳ ಅವರ ಮೂಲ ಗ್ರಂಥಗಳಲ್ಲಿ

ಸೃಷ್ಟಿಯನ್ನು ಕುರಿತು ಒಂದುಕಡೆ ಸತ್ಯವನ್ನು ಬೋಧಿಸಿದ್ದಾರೆ. ಮತ್ತೊಂದುಕಡೆ ಅಸತ್ಯವನ್ನು ಬೋಧಿಸಿದ್ದಾರೆ. ಹೇಳುವ ವಿಷಯವನ್ನು ತಿಳುವಳಿಕೆಯಿಲ್ಲದವರು ಕೂಡಾ ಗ್ರಹಿಸಿಕೊಳ್ಳುವಂತೆ, ಕಳ್ಳನಕಥೆಯನ್ನು ಹುಡುಗನಿಗೆ ಹೇಳಿದಂತೆ, ಕಲ್ಪಿತ ಅಸತ್ಯ ವಿಷಯವನ್ನು ಹೇಳಬೇಕಾಗಿಬಂದಿದೆ ಹಾಗೆಯೆ ಹೇಳಿದ್ದಾರೆ. ಪರಿಶುದ್ಧ ಬೈಬಲ್ ಗ್ರಂಥದಲ್ಲಿ ಸೃಷ್ಟಿವಾದನೆ ಪೂರ್ತಿ ಅಸತ್ಯವಾಗಿ, ಅಶಾಸ್ತ್ರೀಯವಾಗಿ ಕಾಣಿಸುತ್ತಿದೆ. ಅದೇ ವಿಷಯವನ್ನೆ ನಾವು ಬರೆದ **"ಸೃಷ್ಟಿಕರ್ತಕೋಡ್ 963"** ಎಂಬ ಗ್ರಂಥದಲ್ಲಿ ವಿಮರ್ಶಿಸುವುದು ನಡೆದಿದೆ. ಆದಿಕಾಂಡದಲ್ಲಿ ಬರೆಯಲ್ಪಟ್ಟ ಸೃಷ್ಟಿ ವಿಷಯವೆಲ್ಲವೂ ಪೂರ್ತಿ ಅಸತ್ಯವೆಂದು ನಾವು ಹೇಳುವುದು ನಡೆದಿದೆ. ನಮ್ಮ ದೃಷ್ಟಿಯಲ್ಲಿ ಅಲ್ಲಿ ಹೇಳಿದ ಸೃಷ್ಟಿ ವಿಧಾನವೆಲ್ಲವೂ ಪೂರ್ತಿ ಅಸತ್ಯ ಅದೇ ಸೃಷ್ಟಿ ವಿಷಯವನ್ನು ಭಗವದ್ಗೀತೆಯಲ್ಲಿ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ ಆರನೆ ಶ್ಲೋಕದಲ್ಲಿ ಸೃಷ್ಟಿರಹಸ್ಯ ಇದೆ. ಗೀತೆಯಲ್ಲಿ ಇರುವುದು ಮೇಲಕ್ಕೆ ಕಾಣಿಸುವುದಿಲ್ಲ. ಆದ್ದರಿಂದ ಅದನ್ನು ಪೂರ್ತಿಯಾಗಿ ವಿವರಿಸಿ ತಿಳಿದುಕೊಂಡರೆ ಪೂರ್ತಿ ಶಾಸ್ತ್ರಪದ್ಧತಿಯಾದ ಸೃಷ್ಟಿ ವಿಧಾನವೆಲ್ಲವೂ ಅದರಲ್ಲಿ ಇದೆ. ಬೈಬಲ್, ಖುರ್‌ಆನ್ ಗ್ರಂಥದಲ್ಲಿ ಒಂದು ವಿಧವಾಗಿ, ಭಗವದ್ಗೀತೆ ಗ್ರಂಥದಲ್ಲಿ ಮತ್ತೊಂದು ವಿಧವಾಗಿ ವಿಶ್ವವು ಸೃಷ್ಟಿಸಲ್ಪಟ್ಟ ವಿಧಾನ ಹೇಳಲ್ಪಟ್ಟಿದೆ. ಸೃಷ್ಟಿ ವಿಷಯ ಮಾನವರೆಲ್ಲರಿಗೂ ತಿಳಿಯುವಂತೆ, ತಿಳುವಳಿಕೆ ಇಲ್ಲದವರಿಗಾಗಲಿ, ತಿಳುವಳಿಕೆ ಇರುವವರಿಗಾಗಲಿ ಅರ್ಥವಾಗುವಂತೆ ಒಂದುಕಡೆ ಶಾಸ್ತ್ರಪದ್ಧತಿಯಾಗಿ, ಮತ್ತೊಂದುಕಡೆ ಶಾಸ್ತ್ರಪದ್ಧತಿ ಇಲ್ಲದಂತೆ ಪುರಾಣಗಳಂತೆ ಹೇಳುವುದು ನಡೆದಿದೆ. ಮೂಲ ಗ್ರಂಥಗಳನ್ನು ಬರೆದ ಜ್ಞಾನಿಗಳು ಎರಡು ವಿಧಗಳ ಮನುಷ್ಯರನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಹಾಗೆ ಬೇಕೆಂದೇ ಬರೆದಿದ್ದಾರೆ. ಆದ್ದರಿಂದ ಇದು ಸರಿಯಾದುದು, ಇದು ಸರಿಯಲ್ಲದಿರುವುದು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಒಂದು ಮನೆಯಲ್ಲಿನ ಇಬ್ಬರು ಮಕ್ಕಳಿಗೆ ಮನೆಮುಂದಿರವ ಪ್ರಮಾದವನ್ನು ಕುರಿತು ಹಿರಿಯರು ಎರಡು ವಿಧಗಳಾಗಿ ಏಕೆ ಹೇಳಬೇಕಾಗಿ ಬಂದಿದೆಯೋ, ಹಾಗೆಯೇ ಒಂದೇ ಮಾನವಜಾತಿಗೆ ಸೃಷ್ಟಿಯನ್ನು ಕುರಿತು ಎರಡು ವಿಧಗಳಾಗಿ ಹೇಳಬೇಕಾಗಿಬಂದಿದೆ. ಆದ್ದರಿಂದ ಒಂದನ್ನು ಸಮರ್ಥಿಸುವುದು ಮತ್ತೊಂದನ್ನು

ವಿಮರ್ಶಿಸುವುದು ವ್ಯರ್ಥ ಅಂದುಕೊಳ್ಳುತ್ತೇನೆ. ಅದರಲ್ಲಿ ಒಂದೇ ಕರೆಕ್ಟು, ಎರಡನೆಯದು ತಪ್ಪು ಎಂದು ಯಾರಾದರೂ ಅಂದರೆ, ಆಗ ವಿಮರ್ಶಿಸಿ ಕೇಳಬಹುದು. ಕ್ರೈಸ್ತರು ತಮಗೆ ತಿಳಿದ ಜ್ಞಾನ ಶ್ರೇಷ್ಠವಾದುದೆಂದು, ಉಳಿದವು ಕಡಿಮೆಯೆಂದು ಅಂದಾಗಲೇ, ನಾನು ಸೃಷ್ಟಿಯನ್ನು ಕುರಿತು ಬೈಬಲ್‌ನಲ್ಲಿ ಅಸತ್ಯ ಬರೆದಿದ್ದಾರೆಂದು ಹೇಳುವುದು ನಡೆದಿದೆ.

ಮೂಲಗ್ರಂಥಗಳಲ್ಲಿ ಇರುವವೆಲ್ಲ ಸತ್ಯಗಳೆಂದು ನಾವು ಹೇಳುತ್ತಿಲ್ಲ. ಕೆಲವುಕಡೆ ಅಸತ್ಯ ಕೂಡಾ ಇದೆ. ಬೈಬಲ್‌ನಲ್ಲಿ ಸೃಷ್ಟಿ ಆರು ದಿನಗಳಲ್ಲಿ ನಡೆದಿದೆಯೆಂದು ಅಸತ್ಯ ಹೇಳಿದಂತೆ ಉಳಿದ ಗ್ರಂಥಗಳಲ್ಲಿಯೂ ಸ್ವಲ್ಪ ಅಸತ್ಯ ಬೆರೆತಿರಬಹುದು. ಭಗವದ್ಗೀತೆಯಲ್ಲಿ ಯಜ್ಞಗಳ ಬಗ್ಗೆ ಅಸತ್ಯ ಹೆಚ್ಚಾಗಿದೆ. ಖುರಾನ್‌ನಲ್ಲಿ ಸ್ವರ್ಗ ನರಕಗಳನ್ನು ಕುರಿತಾದ ವಿಷಯ ಹೆಚ್ಚಾಗಿ ವಕ್ರೀಕರಿಸಲ್ಪಟ್ಟಿದೆ. ಇವೆಲ್ಲವೂ ದೇವರಿಗೆ ತಿಳಿಯದಂತೆ ಏನು ನಡೆದಿರುವುದಿಲ್ಲ. ದೇವರಮೇಲೆ ದೇವರ ಜ್ಞಾನದಮೇಲೆ ಶ್ರದ್ಧೆ ಇರುವವನಿಗೆ ಪ್ರತಿ ವಿಷಯದಲ್ಲಿಯು ಸತ್ಯ ಅರ್ಥವಾಗುತ್ತಿರುತ್ತದೆ. ಮೂಲಗ್ರಂಥದಲ್ಲಿ ದೇವರ ಜ್ಞಾನ ಇದ್ದಂತೆ, ಮಾಯಜ್ಞಾನ ಕೂಡಾ ಸ್ವಲ್ಪ ಇರುತ್ತದೆ. ಮನುಷ್ಯನ್ನೊಂದರ ಶ್ರದ್ಧೆಯನ್ನನುಸರಿಸಿ ದೇವರ ಜ್ಞಾನ ಅರ್ಥವಾಗುವುದೂ, ಆಗದಿರುವುದೂ ನಡೆಯುತ್ತದೆ. ಶ್ರದ್ಧೆ ಇಲ್ಲದವರಿಗೆ ಮಾಯಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ದೇವರ ಜ್ಞಾನ ಅರ್ಥವಾಗುವುದಿಲ್ಲ.

ಈಗ ಒಬ್ಬ ಹೇತುವಾದಿ ಕ್ರೈಸ್ತವಮತದಲ್ಲಿ ಮುಖ್ಯವಾಗಿ ಪ್ರಚಾರವಾದ ವಾಕ್ಯಗಳನ್ನು ಕುರಿತು ಕಾರಣವನ್ನು ಕೇಳುತ್ತಿದ್ದಾನೆ. ಕ್ರೈಸ್ತವ ಮತದಲ್ಲಿ ಸಾಧಾರಣ ವ್ಯಕ್ತಿ ಮೊದಲುಗೊಂಡು ಪಾಸ್ಟರ್‌ಗಳವರೆಗೂ, ಫಾದರ್ ಮೊದಲುಗೊಂಡು ಬಿಷಪ್‌ರವರೆಗೂ ಹೇಳಿಕೊಳ್ಳುವ ಮಾತು ಏಸು ಪಾಪಿಗಳಿಗಾಗಿ ರಕ್ತವನ್ನು ಚಿಮ್ಮಿಸಿದ್ದಾನೆ. ಏಸು ರಕ್ತವು ಪಾಪಿಗಳ ಪಾಪವನ್ನು ಇಲ್ಲದಂತೆ ಮಾಡಿರುವುದು. ಪಾಪಿಗಳ ಪಾಪ ಕ್ಷಮಾಪಣೆಗಾಗಿ ಏಸು ತನ್ನ ರಕ್ತವನ್ನು ಶಿಲುಬೆಮೇಲೆ ಬಲಿದಾನ ಮಾಡಿದ್ದಾನೆಂದು ಹೇಳುತ್ತಾರೆ. ಒಬ್ಬರ ರಕ್ತವನ್ನು ಚಿಂದಿಸಿದರೆ ಮತ್ತೊಬ್ಬರ

ಪಾಪ ಹೇಗೆ ಹೋಗುತ್ತದೆ ಎಂದು ಹೇತುವಾದಿಗಳು ಪ್ರಶ್ನಿಸುತ್ತಿದ್ದಾರೆ. ಅವರ ಪ್ರಶ್ನಗೆ ಶಾಸ್ತ್ರಪದ್ಧತಿಯಾದ ಸಮಾಧಾನ ಕೊಡುವಾಗ ಅದಕ್ಕೆ ಹೇತು ದೊರೆತಂತಾಗುತ್ತದೆ. ಹಾಗೆ ಸರಿಯಾದ ಉತ್ತರ ಲಭಿಸದೆಹೋದರೆ ಆ ಮಾತನ್ನು ಎಷ್ಟುಜನ ಹೇಳಿದರೂ ಅಸತ್ಯವೆಂದೇ ಹೇಳಬಹುದು. ಈಗ ಹೇತುವಾದಿ ಪ್ರಶ್ನೆಯನ್ನು ಗಮನಿಸೋಣ.

**ಪ್ರಶ್ನೆ :– ಏಸುಕ್ರಿಸ್ತು ಪಾಪಿಗಳ ರಕ್ಷಕನೆಂದು, ಆತನ ರಕ್ತದಿಂದ ಪಾಪಗಳು ಹೋಗುತ್ತವೆಂದು, ಕ್ರೈಸ್ತವರೆಲ್ಲರೂ ಹೇಳುವಮಾತು ಪೂರ್ತಿ ಅಸತ್ಯವೆಂದು ಹೇತುವಾದ ಅನ್ನುತ್ತಿದೆ. ಅದು ನಿಜವೆಂದು ಏಸು ಎಲ್ಲಿಯಾದರೂ ಬೋಧಿಸಿದ್ದಾನಾ?**

**ನಾವು :–** ಹೇತುವಾದಿ ಕೇಳುವ ಪ್ರಶ್ನೆಗಾಗಲಿ, ನಾಸ್ತಿಕವಾದಿ ಕೇಳುವ ಪ್ರಶ್ನೆಗಾಗಲಿ ಉತ್ತರ ಶಾಸ್ತ್ರಬದ್ಧವಾಗಿ ಇರಬೇಕು. ಹಾಗೆ ಇಲ್ಲದಿದ್ದರೆ ಯಾವ ವಿಧವಾದ ಉತ್ತರವನ್ನು ಹೇಳಿದರೂ ಅದು ಅಸತ್ಯವಾದ ಉತ್ತರವಾಗುತ್ತದೆ. ಈ ಪ್ರಶ್ನೆ ಕ್ರೈಸ್ತವ ಸಮಾಜದಲ್ಲಿ ಬಹಳ ಪ್ರಾಮುಖ್ಯವಾದ ಪ್ರಶ್ನೆ. ಅದರ ಉತ್ತರ ಕೂಡಾ ಎಷ್ಟೋಜನರಿಗೆ ಜ್ಞಾನವನ್ನು ಉಂಟುಮಾಡುವುದಾಗಿ, ಅಜ್ಞಾನವಾಗಿರುವವರ ಕಣ್ತೆರೆಸುವವಾಗಿರುತ್ತವೆ. ಆದ್ದರಿಂದ ಈ ಪ್ರಶ್ನೆಗೆ ಉತ್ತರವನ್ನು ಎಲ್ಲರಿಗೂ ಅರ್ಥವಾಗುವಂತೆ, ಶಾಸ್ತ್ರಬದ್ಧವಾಗಿ ಇರುವಂತೆ ಹೇಳಿಕೊಳ್ಳೋಣ.

ಈ ದಿನ ಕ್ರೈಸ್ತರೆಲ್ಲರೂ ಅರ್ಥಮಾಡಿಕೊಂಡಂತೆ ಏಸು ತನ್ನ ರಕ್ತದ ಮೂಲಕ ಮನುಷ್ಯರ ಪಾಪಗಳು ಕ್ಷಮಿಸಲ್ಪಡುತ್ತವೆಂದು ಬೈಬಲ್ ಗ್ರಂಥದಲ್ಲಿ ಎಲ್ಲಿಯೂ ಹೇಳಲಿಲ್ಲ. ತಾನು ಶಿಲುಬೆಗೆ ಹಾಕಲ್ಪಡುವುದಕ್ಕೆ ಹಿಂದಿನದಿನ ತನ್ನ 12 ಜನ ಶಿಷ್ಯರೊಂದಿಗೆ ಸೇರಿ ಊಟಮಾಡುವಾಗ, ಮತ್ತಯಿ ಸುವಾರ್ತೆ 26ನೆ ಅಧ್ಯಾಯ 28ನೆ ವಚನದಲ್ಲಿ **"ಇದರಲ್ಲಿರುವುದು ನೀವೆಲ್ಲರೂ ಕುಡಿಯಿರಿ, ಇದು ನನ್ನ ರಕ್ತ, ಅಂದರೆ ಪಾಪಕ್ಷಮಾಪಣೆಗಾಗಿ ಅನೇಕರಿಗೋಸ್ಕರ ಚಿಮ್ಮಿಸಲ್ಪಡುತ್ತಿರುವ ನಿಬಂಧನ ರಕ್ತ"** ಎಂದು ಏಸು ಅಂದಿದ್ದಾನೆ. ಇದೇ ವಿಷಯವನ್ನೆ ಮಾರ್ಕು ಸುವಾರ್ತೆ 14 ಅಧ್ಯಾಯ 24ನೆ ವಾಕ್ಯದಲ್ಲಿ "ಇದು ನನ್ನ ನಿಬಂಧನೆ ವಿಷಯವಾಗಿ ಅನೇಕರಿಗೋಸ್ಕರ ಚಿಂದಿಸಲ್ಪಡುತ್ತಿರುವ ನನ್ನ

ರಕ್ತ" ಎಂದು ಅಂದಿದ್ದಾನೆ. ಬೈಬಲ್‌ನಲ್ಲಿನ ಈ ವಾಕ್ಯಗಳು ಎಷ್ಟೋ ಪ್ರಾಧಾನ್ಯತೆ ಹೊಂದಿರುವಾಗ, ಅವುಗಳನ್ನು ತಮ್ಮ ಇಷ್ಟಬಂದಂತೆ ಹೇಳಿಕೊಳ್ಳುವುದಕ್ಕೆ ಮನುಷ್ಯರು ಅಭ್ಯಾಸವಾಗಿದ್ದಾರೆ. **"ಮೂರ್ಖನಿಗೆ ಕ್ಯಾದಿಗೆಯನ್ನು ಕೊಟ್ಟರೆ ಮಡಿಚಿ ಎಲ್ಲಿಯೋ ಇಟ್ಟುಕೊಂಡಂನಂತೆ"** ಹಾಗೆಯೇ ಎಷ್ಟೋ ಜ್ಞಾನಸಂದೇಶದಿಂದ ಕೂಡಿಕೊಂಡ ವಾಕ್ಯವನ್ನು ಏಸುಪ್ರಭು ಹೇಳಿದರೆ, ಅದನ್ನು ಹೇಗೆ ಅರ್ಥಮಾಡಿಕೊಳ್ಳಬೇಕೊ ಹಾಗೆ ಮಾಡಿಕೊಳ್ಳದೆ, ತಮಗೆ ಅನುಕೂಲವಾಗಿ, ತಮ್ಮ ಮತ ಪ್ರಚಾರಕ್ಕೆ ಅನುಕೂಲವಾಗಿ, ದೇವರ ಧರ್ಮಕ್ಕೆ ವಿರುದ್ಧವಾಗಿ ಹೇಳಿಕೊಳ್ಳುತ್ತಿದ್ದಾರೆ. ಹಾಗೆ ಹೇಳಿಕೊಳ್ಳುವುದರಿಂದ ದೇವರ ಜ್ಞಾನವನ್ನು ತಪ್ಪುದಾರಿ ಹಿಡಿಸಿದಂತಾಗುತ್ತದೆ. ಭಗವಂತನ ಉದ್ದೇಶವನ್ನು ಬದಲಾಯಿಸಿ ದಂತಾಗುತ್ತದೆ.

ಹನ್ನೆರಡು ಜನ ಶಿಷ್ಯರ ಮಧ್ಯೆಯಲ್ಲಿ ಕುಳಿತುಕೊಂಡ ಏಸು ಒಂದು ಬಟ್ಟಲಲ್ಲಿ ದ್ರಾಕ್ಷರಸವನ್ನು ಅವರಿಗೆ ಕೊಟ್ಟು "ಇದು ಪಾಪಕ್ಷಮಾಪಣೆಗೋಸ್ಕರ ಅನೇಕರಿಗೋಸ್ಕರ ಚಿಂದಿಸಲ್ಪಡುತ್ತಿರುವ ನಿಬಂಧನರಕ್ತ" ಅಂದಿದ್ದಾನೆ. ಇಲ್ಲಿ ಏಸುಪ್ರಭು ತನ್ನ ಶರೀರ ರಕ್ತ ಎಂದು ಹೇಳಲಿಲ್ಲ. ನನ್ನ ನಿಬಂಧನ ರಕ್ತ ಎಂದು ಅಂದಿದ್ದಾನೆ. ಎಷ್ಟೊ ಸ್ವಚ್ಛವಾಗಿ ಎಲ್ಲರಿಗೂ ಅರ್ಥವಾಗುವಂತೆ **"ನ್ನನ ನಿಬಂಧನ ರಕ್ತ"** ಎಂದು ಏಸು ಹೇಳಿರುವಾಗ, ಅದನ್ನು ಬೋಧಕರು ಶರೀರ ರಕ್ತವಾಗಿ ಬದಲಿಸಿ ಹೇಳಬೇಕಾದ ಅವಶ್ಯಕತೆಯೇನು ಬಂದಿದೆಯೆಂದು ನಾವು ಕೇಳುತ್ತಿದ್ದೇವೆ. ಅಷ್ಟೇಯಲ್ಲದೆ ನಾನು ಮರಣಿಸುವಾಗ ಚಿಮ್ಮಿಸಿಹೋಗುವ ರಕ್ತವೆಂದು ಆತನು ಹೇಳಲಿಲ್ಲ ಅಲ್ಲವೆ! ಪ್ರಸ್ತುತ ವರ್ತಮಾನ ಕಾಲದಲ್ಲಿ ಅಂದರೆ ನಡೆಯುತ್ತಿರುವ ಕಾಲದಲ್ಲಿ **"ಚಿಂದಿಸಲ್ಪಡುತ್ತಿರುವ ರಕ್ತ"** ಎಂದು ಹೇಳಿದ್ದಾನಾಗಲಿ, ಬರುವಂತಹ ಕಾಲದಲ್ಲಿ ಚಿಂದಿಸುವ ರಕ್ತವೆಂದು ಹೇಳಲಿಲ್ಲ. ಈದಿನ ಪ್ರಪಂಚದಲ್ಲಿರುವ ಎಷ್ಟೊ ತಿಳುವಳಿಕೆಯುಳ್ಳ ಬೋಧಕರು ಏಸು (ಭಗವಂತನು) ಹೇಳಿದ ವಾಕ್ಯವನ್ನು ತಿಳುವಳಿಕೆಯಿಲ್ಲದವರಂತೆ ಏಕೆ ಅರ್ಥ ಮಾಡಿಕೊಂಡಿದ್ದಾ ರೆಂದು ಪ್ರಶ್ನಿಸುತ್ತಿದ್ದೇನೆ. ಮನುಷ್ಯರ ಪಾಪಕ್ಕೋಸ್ಕರ ಆತನೇಕೆ ರಕ್ತವನ್ನು

ಚಿಮ್ಮಿಸಬೇಕು? ಎಂದುಕೂಡಾ ಕೇಳುತ್ತಿದ್ದೇನೆ. ಆತನು ಹೇಳಿರುವುದು ಯಾವ ರಕ್ತವೊ ತಿಳಿಯದೆ, ಕುರುಡರಂತೆ ಮಾತನಾಡುವವರಿಗೆ ದೇವರ ಜ್ಞಾನ ಎಷ್ಟುಮಟ್ಟಿಗೆ ತಿಳಿದಿರುತ್ತದೊ ಆಲೋಚಿಸಿಕೊಳ್ಳಿ.

ದೇವರ ಧರ್ಮಗಳ ಪ್ರಕಾರ, ದೇವರ ಪ್ರತಿನಿಧಿಯಾಗಿ ಬಂದವನು, ದೇವರ ಜ್ಞಾನವನ್ನು ತಿಳಿಸಿದರೆ, ಅದರಿಂದ ಜ್ಞಾನಸಂಪನ್ನರಾಗಿ ಜ್ಞಾನಾಗ್ನಿ ಇರುವವರಾಗಿ ತಮ್ಮ ಕರ್ಮಗಳನ್ನು (ಪಾಪಗಳನ್ನು) ಇಲ್ಲದಹಾಗೆ ಮಾಡಿಕೊಳ್ಳ ಬಹುದು. ಜ್ಞಾನದಿಂದಲೇ ಪಾಪಗಳು ನಶಿಸುತ್ತವಾಗಲಿ ಮತ ಬದಲಾದರೇನೊ, ಮನುಷ್ಯ ರಕ್ತಬಳಿದುಕೊಂಡರೇನೊ, ಪ್ರಾಣಿ ರಕ್ತವನ್ನು ಸುರಿಸಿದರೇನೋ ಪಾಪಗಳು ಹೋಗುವುದಿಲ್ಲ. ದೇವರು ಮನುಷ್ಯರ ಪಾಪಗಳನ್ನು ಇಲ್ಲದಂತೆ ಮಾಡುತ್ತೇನೆಂದು ಯಾವ ಗ್ರಂಥದಲ್ಲಾಗಲಿ, ಯಾವ ಸಂದರ್ಭದಲ್ಲಾಗಲಿ ಹೇಳಲಿಲ್ಲ. ಹಾಗೆ ಹೇಳುವುದು ಅಧರ್ಮವಾಗುತ್ತದೆಂದು ದೇವರಿಗೆ ಗೊತ್ತು ದೇವರ ಧರ್ಮಗಳನ್ನು ತಿಳಿಯದ ಮನುಷ್ಯ ದೇವರಿಗೆ ಕಳಂಕ ತರುವ ಮಾತುಗಳನ್ನು ಮಾತನಾಡುತ್ತಿದ್ದಾನೆ. ದೇವರ ಜ್ಞಾನವನ್ನು ದೇವರೇ ಹೇಳಿದರೂ, ಅದಕ್ಕೆ ಭಿನ್ನವಾಗಿ ವಕ್ರೀಕರಿಸಿ ಹೇಳಿದರೆ ದೇವರಿಗೆ ವಿರುದ್ಧವಾಗಿ ಅಧರ್ಮವನ್ನು ಬೋಧಿಸಿದಂತಾಗುತ್ತದೆ. ಆಗ ಅದರಿಂದ ಪಾಪ ಸಂಭವಿಸುತ್ತಿದೆ. ಈ ವಿಧವಾಗಿ ಬಹಳಜನ ಬೋಧಕರು ತಮಗೆ ತಿಳಿಯದಿದ್ದರೂ, ಏನು ಯೋಚಿಸದೆ ದೇವರ ಜ್ಞಾನವನ್ನು ಅಧರ್ಮಯುಕ್ತವಾಗಿ, ದೇವರು ಹೇಳಿರುವುದಕ್ಕೆ ವಿರುದ್ಧವಾಗಿ ಹೇಳುವುದರಿಂದ, ಬೋಧಕರೆಂದು ಹೇಸರುವಾಸಿಯಾದವರಿಗಾದರೂ, ದೇವರ ವಿಷಯದಲ್ಲಿ ಅಕ್ರಮವಾದ ಕೆಲಸವನ್ನು ಮಾಡಿದಂತಾಗುತ್ತದೆ. ಆದ್ದರಿಂದ ಬೋಧಕರಾದವರು ತಮಗೆ ಸಂಪೂರ್ಣವಾಗಿ ತಿಳಿದ ಜ್ಞಾನವನ್ನೇ ಬೋಧಿಸಿ ರೆಂದು ಹೇಳುತ್ತಿದ್ದೇವೆ. ಧರ್ಮಗಳಿಗೆ ವಿರುದ್ಧವಾದುದನ್ನು, ಶಾಸ್ತ್ರಬದ್ಧತೆ ಇಲ್ಲದಿರುವುದನ್ನು ಬೋಧಿಸಬಾರದೆಂದು ತಿಳಿಸುತ್ತಿದ್ದೇವೆ.

ದೇವರ ಜ್ಞಾನ ತನ್ನ ಶರೀರದಲ್ಲಿ ಪ್ರವಹಿಸುವ ರಕ್ತಕ್ಕೆ ಸಮಾನವೆಂದು ಏಸು ಹೇಳುತ್ತಾ, ಅದನ್ನು ನಿಬಂಧನ ರಕ್ತ ಎಂದು ಅಂದಿದ್ದಾನೆ. ದೇವರ

ಜ್ಞಾನ ಎಲ್ಲರಿಗೂ ಮುಖ್ಯವಾದುದೇ. ಆದ್ದರಿಂದ ಏಸು ದೇವರ ಜ್ಞಾನವನ್ನು ರಕ್ತಕ್ಕೆ ಸಮಾನವಾಗಿ ಹೋಲಿಸಿ ಹೇಳಿದ್ದಾನೆ. ಅದು ಹೋಲಿಕೆಯೇ ಆಗಲಿ, ನಿಜವಾಗಲೂ ಶರೀರ ರಕ್ತವೆಂದು ಹೇಳಲಿಲ್ಲ. ಆತನು ಪ್ರತಿ ದಿನ ದೇವರ ಜ್ಞಾನವನ್ನು ಪ್ರಜೆಗಳಿಗೆ ಹಂಚುತ್ತಾ, ಬೋಧಿಸುತ್ತಿರುವುದರಿಂದ, ಅನೇಕರಿಗೋಸ್ಕರ ಚಿಂದಿಸುತ್ತಿರುವ ನಿಬಂಧನ ರಕ್ತ ಅಂದಿದ್ದಾನೆ. ದೇವರ ಜ್ಞಾನವನ್ನು ನಿಬಂಧನ ರಕ್ತ ಎಂದು ಹೇಳುವುದು ನಡೆದಿದೆ. ದೇವರ ಜ್ಞಾನದಿಂದ ಪಾಪಗಳು ಸುಟ್ಟು ಹೋಗುತ್ತವೆ, ಆದ್ದರಿಂದ ಮನುಷ್ಯರ ಪಾಪಗಳು ಪರಿಹಾರವಾಗಿ ಹೋಗುವುದಕ್ಕೆ, ಆತನ ಜ್ಞಾನವನ್ನು ಎದೆಜಲ್ಲುತ್ತಾ ಇರುತ್ತಿದ್ದನು. ಆದ್ದರಿಂದ ಅನೇಕರ ಪಾಪಕ್ಷಮಾಪಣೆಗೋಸ್ಕರ ಚಿಮ್ಮಿಸಲ್ಪಡುವ ವ್ಯಾಪಿಸುವಾ ನನ್ನ ನಿಬಂಧನ ರಕ್ತ ಅಂದಿದ್ದಾನೆ. ದೇವರಲ್ಲಿ ಆತನು, ಆತನಲ್ಲಿ ದೇವರು ಬೆರೆತಿದ್ದಾರೆ. ಆದ್ದರಿಂದ ದೇವರ ಜ್ಞಾನವನ್ನು ನನ್ನಜ್ಞಾನ ಅಂದಿದ್ದಾನೆ. ಆ ಉದ್ದೇಶದಿಂದಲೇ ನನ್ನ ನಿಬಂಧನರಕ್ತ ಅಂದಿದ್ದಾನೆ. ಪ್ರಪಂಚದಲ್ಲಿ ಎಲ್ಲವೂ ಕರ್ಮ ಆಧೀನದಲ್ಲಿ ಇವೆ. ಕರ್ಮ ಆಧೀನದಲ್ಲಿ ಇಲ್ಲದಿರುವುದು ದೇವರ ಜ್ಞಾನವೊಂದೇ. ಎಲ್ಲವನ್ನು ಬಂಧಿಸುವ ಕರ್ಮ, ಜ್ಞಾನವನ್ನು ಮಾತ್ರ ಬಂಧಿಸಲಾರದು. ಜ್ಞಾನವೇ ಕರ್ಮವನ್ನು ಬಂಧಿಸುತ್ತದೆ. ಯಾವ ಕರ್ಮ ಬಂಧನ ಇಲ್ಲದಿರುವುದು ದೇವರ ಜ್ಞಾನ, ಆದ್ದರಿಂದ ದೇವರ ಜ್ಞಾನವನ್ನು "ನಿಬಂಧನ ರಕ್ತ" ಅಂದಿದ್ದಾನೆ. ಪ್ರತಿ ದಿನ ಜ್ಞಾನವನ್ನು ಏಸು ಬೋಧಿಸುತ್ತಿದ್ದಾನೆ. ಆದ್ದರಿಂದ ಚಿಂದಿಸುತ್ತಿರುವ ಇಲ್ಲವೆ ಚಿಂದಿಸಲ್ಪಡುತ್ತಿರುವ ನಿಬಂಧನ ರಕ್ತವೆಂದು, ಆಗಿನ ವರ್ತಮಾನ ಕಾಲಕ್ಕೆ ಸಂಬಂಧಿಸಿ ಸರಿಹೋಗುವಂತೆ ಹೇಳಿದಮಾತೆಂದು ತಿಳಿಯಬೇಕು. ಅಲ್ಲಿ ಚಿಂದಿಸಿಹೋಗುವ ರಕ್ತವೆಂದು ಹೇಳಲಿಲ್ಲವೆಂದು ಪ್ರತಿಯೊಬ್ಬರೂ ಜ್ಞಾಪಕ ವಿಟ್ಟುಕೊಳ್ಳಬೇಕು.

ಏಸುಪ್ರಭುವನ್ನು ಶಿಲುಬೆಮೇಲೆ ಇರಿಸಿ, ಕಾಲುಗಳಿಗು ಕೈಗಳಿಗು ಮೊಳೆಗಳು ಹೊಡೆದಾಗ ಆತನ ಶರೀರದಿಂದ ಸೋರಿರುವುದು ಸಾಧಾರಣವಾಗಿ ಎಲ್ಲರ ಶರೀರದಲ್ಲಿರುವ ರಕ್ತದಂತಹ ರಕ್ತವೇ ಸೋರಿದೆ. ಶರೀರ ರಕ್ತದಲ್ಲಿ ಯಾವ ಮಹತ್ವವಾಗಲಿ, ಯಾವ ಪ್ರತ್ಯೇಕತೆಯಾಗಲಿ ಇಲ್ಲ. ಆದ್ದರಿಂದ ಭೌತಿಕ

ರಕ್ತವನ್ನು ಕುರಿತು ಹೇಳಿಕೊಳ್ಳುವುದಕ್ಕೆ ಎಷ್ಟುಮಾತ್ರ ಸಾಧ್ಯವಿಲ್ಲ. ನಾವು ಪಾಪ ಮಾಡಿದರೆ, ಆ ಪಾಪವನ್ನು ನಾವೇ ಇಲ್ಲದಂತೆ ಮಾಡಿಕೊಳ್ಳುವುದಕ್ಕೆ, ಅಗತ್ಯವಾದ ಜ್ಞಾನವನ್ನು ಪ್ರಪಂಚವೆಲ್ಲಾ ಆತನು ವ್ಯಾಪಿಸಿ ಹೋಗಿದ್ದಾನೆ. ಆತನು ವ್ಯಾಪಿಸಿಹೋದ ಜ್ಞಾನ ಈದಿನ ಗ್ರಂಥರೂಪದಲ್ಲಿ ನಮ್ಮಮುಂದಿದೆ. ಆ ದಿನ ಆತನು ಚಿಮ್ಮಿಸಿದ್ದೇನೆಂದು ಹೇಳಿದ ನಿಬಂಧನ ರಕ್ತವೆನ್ನುವುದು ಈದಿನ ಬೈಬಲ್‌ನಲ್ಲಿ ಗ್ರಂಥರೂಪದಲ್ಲಿ ಇದೆ. ಈದಿನ ಅದನ್ನು ತಿಳಿದುಕೊಂಡರೆ ತಿಳಿದುಕೊಂಡವನು ಯಾರಾದಾರಾಗಲಿ, ಅವರು ಕೂಡಾ ಕರ್ಮ ಬಂಧನಗಳಿಂದ ಹೊರಬಿದ್ದು ನಿಬದ್ದನಾಗಿ ಮೋಕ್ಷವನ್ನು ಹೊಂದುತ್ತಾನೆ. ಆದರೆ ಕ್ರೈಸ್ತರಲ್ಲಿ ದೊಡ್ಡ ಬೋಧಕರಾದವರಿಗೆ ನಿಬಂಧನ ರಕ್ತಯಾವುದೊ, ಸಾಧಾರಣ ರಕ್ತಯಾವುದೊ ತಿಳಿಯದಂತೆಹೋಗಿದೆ. ಅಂತಹ ಸ್ಥಿತಿಯಲ್ಲಿ ಏಸೇ ಪುನಃಬಂದು ನಾನು ಹೇಳಿರುವುದು ಅದು ಅಲ್ಲ, ಇದು ಎಂದು ಹೇಳಿದರೂ, ಮನುಷ್ಯ ಕೇಳುವ ಪರಿಸ್ಥಿತಿಯಲ್ಲಿ ಇಲ್ಲ. ಹಾಗೆ ಬಂದು ಆತನೆ ಹೇಳಿದರೂ ಕೇಳದೆಹೋಗಿ, ನಮ್ಮ ಮತದಲ್ಲಿ ಸೇರಿದರೆ ನಿನಗೂ ಕೂಡಾ ಪಾಪಕ್ಷಮಾಪಣೆ ನಡೆಯುತ್ತದೆ. ಕ್ರೈಸ್ತವರಾದವರೆಲ್ಲರಿಗೂ, ಏಸುನನ್ನು ಒಪ್ಪಿಕೊಂಡವರೆಲ್ಲರಿಗೂ, ಪಾಪ ಪರಿಹಾರ ವಾಗುತ್ತದೆ ಎಂದು ಹೇಳಿ, ಏಸುನನ್ನು ಕೂಡಾ ಅವರ ಮತದಲ್ಲಿ ಸೇರೆಂದು ಹೇಳುತ್ತಾರೆ. ಈದಿನ ಕ್ರೈಸ್ತವ ಸಮಾಜದಲ್ಲಿನ ವರೆಲ್ಲರೂ, ಬೈಬಲ್ ಗ್ರಂಥದಲ್ಲಿರುವ ಜ್ಞಾನವನ್ನು ತಿಳಿಯುತ್ತಿಲ್ಲವಾಗಲಿ, ಕ್ರೈಸ್ತವಮತವನ್ನು ಸಬೇಕೆಂಬ ಚಿಂತೆಯಲ್ಲಿಯೇ ಇದ್ದಾರೆ. ಈ ರೋಗ ಒಂದು ಕ್ರೈಸ್ತವಮತದಲ್ಲಿಯೇ ಅಲ್ಲದೆ ಒಟ್ಟಾರೆ ಎಲ್ಲಾ ಮತಗಳಲ್ಲಿಯೂ ಇದೆ.

ಏಸುಪ್ರಭು ಬದುಕಿರುವ ದಿನಗಳಲ್ಲಿ ಕೂಡಾ ಆತನು ಇತರರ ಪಾಪಗಳನ್ನು ಇಲ್ಲದಂತೆ ಮಾಡುತ್ತೇನೆಂದು ಹೇಳಲಿಲ್ಲ. ದೇವರ ಜ್ಞಾನವನ್ನು ತಿಳಿದು ಅದನ್ನು ಆಚರಿಸುವುದರಿಂದ, ಎಂಥಹ ಪಾಪಗಳನ್ನಾದರೂ ತೊಲಗಿಹೋಗುತ್ತವೆಂದು ತಿಳಿಸಿದ್ದಾನೆ. ಅಷ್ಟೇಯಲ್ಲದೆ ತನ್ನ ಬೋಧನೆಯಲ್ಲಿ ನಾನು ಇರುವಾಗಲೇ ಜ್ಞಾನ ತಿಳಿಯದಿದ್ದರೆ, ನಾನು ಹೋದ ನಂತರ ನನ್ನನ್ನು

ಹುಡುಕಿದರೂ ಏನು ಪ್ರಯೋಜನೆ ಇರುವುದಿಲ್ಲ. ಎಂದು ಯೊಹಾನ್ ಸುವಾರ್ತೆ 8ನೆ ಅಧ್ಯಾಯದಲ್ಲಿ 21ನೆ ವಾಕ್ಯದಲ್ಲಿ ಹೇಳಿದ್ದಾನೆ. "ನಾನು ಹೊರಟು ಹೋಗುತ್ತಿದ್ದೇನೆ. ನೀವು ನನ್ನನ್ನು ಹುಡುಕುತ್ತೀರಿ ಆದರೆ ನಿಮ್ಮ ಪಾಪಗಳಲ್ಲಿಯೇ ಇದ್ದು ಮರಣಿಸುತ್ತೀರಾ. ನಾನು ಹೋಗುವ ಸ್ಥಳಕ್ಕೆ ನೀವು ಬರಲಾರರೆಂದು ಅವರೊಂದಿಗೆ ಹೇಳಿದನು." ಅದೇ ಸುವಾರ್ತೆಯಲ್ಲಿ ಅದೇ ಅಧ್ಯಾಯದಲ್ಲಿ 23,24 ವಾಕ್ಯಗಳಲ್ಲಿ ಕೂಡಾ ಹೀಗೆ ಇದೆ. (23) "ನೀವು ಕೆಳಗಿನವರು, ನಾನು ಮೇಲಿರುವವನು. ನೀವು ಈಲೋಕ ಸಂಬಂಧಿಗಳು, ನಾನು ಈ ಲೋಕ ಸಂಬಂಧಿಕನು ಅಲ್ಲ. ಆದ್ದರಿಂದ ನಿಮ್ಮ ಪಾಪಗಳಲ್ಲಿಯೇ ಇದ್ದು ನೀವು ಮರಣಿಸುತ್ತೀರೆಂದು ನಿಮ್ಮೊಂದಿಗೆ ಹೇಳಿದೆನು. (24) ನಾನು ಆತನೇಯೆಂದು (ದೇವರೇಯೆಂದು) ನೀವು ವಿಶ್ವಶಿಸದ ಪಕ್ಷದಲ್ಲಿ, ನೀವು ನಿಮ್ಮ ಪಾಪಗಳಲ್ಲಿಯೇ ಇದ್ದು ಮರಣಿಸುತ್ತೀರೆಂದು ಅವರೊಂದಿಗೆ ಹೇಳಿದನು." ಏಸುಪ್ರಭುವು ಬದುಕಿರುವಾಗ ಆತನೆ ಸ್ವತಃವಾಗಿ ಹೇಳಿದ ಮಾತುಗಳಿವು. ನೀವು ಜ್ಞಾನ ತಿಳಿಯದೆಹೋದರೆ ನಿಮ್ಮ ಪಾಪದಲ್ಲಿಯೇ ಮರಣಿಸುತ್ತೀರೆಂದು ಹೇಳಿದ್ದಾನೆ. ಅಷ್ಟೇಯಲ್ಲದೆ ಈ ಲೋಕ ಅಜ್ಞಾನದಿಂದ ತುಂಬಿದೆಯೆಂದು, ಮೇಲಿನ ಲೋಕ ಜ್ಞಾನದಿಂದ ತುಂಬಿದೆ ಎಂದು, ಜ್ಞಾನವಿರುವ ಆತನು ಮೇಲಿನ ಲೋಕ ಸಂಬಂಧಿಕನೆಂದು, ಜ್ಞಾನ ತಿಳಿಯದವರು ಕೆಳಗಿನಲೋಕ ಸಂಬಂಧಿಕರಾಗಿ ಪಾಪಗಳಲ್ಲಿಯೇ ಮರಣಿಸುತ್ತಾರೆಂದು ಹೇಳಿದ್ದಾನೆ. ಇನ್ನೂ ದೇವರ ಜ್ಞಾನ ಹೇಳುವವನು, ದೇವರೆ ಆಗಿರುತ್ತಾನೆಂದು ನಂಬದಿರುವವರು ಪಾಪಗಳಲ್ಲಿಯೇ ಇದ್ದು ಮರಣಿಸುತ್ತಾರೆಂದು ಹೇಳಿದ್ದಾನಾಗಲಿ, ತನ್ನ ರಕ್ತದಿಂದ ಪಾಪ ಕ್ಷಮಾಪಣೆ ಇದೆಯೆಂದು ಹೇಳಲಿಲ್ಲ. ದೈವಜ್ಞಾನ ತಿಳಿಯದವರು ಪಾಪಗಳಿಂದ ಹೊರಬೀಳದೆ, ಅವುಗಳಲ್ಲಿಯೇ ಮರಣಿಸುತ್ತಾರೆಂದು ಆತನು ಎಷ್ಟೊಬಾರಿ ಬೈಬಲ್ ಗ್ರಂಥದಲ್ಲಿಯೇ ಹೇಳಿದ್ದಾರೆ. ಅಂಥಹದರಲ್ಲಿ ಏಸು ರಕ್ತವು ನಮಗೋಸ್ಕರ ಸೋರಿಸಿದ್ದಾನೆಂದು, ಏಸು ನಮಗೋಸ್ಕರ ಮರಣಿಸಿದ್ದಾನೆಂದು, ಹೇಳಿಕೊಳ್ಳು ವುದು ತಪ್ಪು ಅಲ್ಲವೇ!

ಯೊಹಾನ್ ಸುವಾರ್ತೆ 9ನೆ ಅಧ್ಯಾಯದಲ್ಲಿ 41ನೆ ವಾಕ್ಯದಲ್ಲಿ "ನೀವು ಕುರುಡರಾದರೆ ನಿಮಗೆ ಪಾಪ ಇಲ್ಲದಾಗುತ್ತದೆ ಆದರೆ, ನೋಡುತ್ತಿದ್ದೇವೆಂದು ನೀವೀಗ ಹೇಳಿಕೊಳ್ಳುತ್ತೀದ್ದೀರಿ ಆದ್ದರಿಂದ ನಿಮ್ಮ ಪಾಪಗಳು ನಿಂತಿವೆಯೆಂದು ಹೇಳಿದನು." ಪ್ರಪಂಚ ವಿಷಯದಲ್ಲಿ ನೀವು ಕುರುಡರಾದರೆ ಆಗ ದೇವರ ವಿಷಯವಾದ ಜ್ಞಾನ ತಿಳಿಯುತ್ತದೆಂದು, ಪ್ರಪಂಚ ವಿಷಯದಲ್ಲಿ ನಿಮಗಿರುವ ಧ್ಯಾಸವನ್ನು ಬಿಡಲಾರದೆ, ಹೆಚ್ಚಿನ ಧ್ಯಾಸದಿಂದ ಪ್ರಪಂಚವನ್ನೇ ನೋಡುತ್ತಿದ್ದೇವೆಂದು ನೀವು ಹೇಳುತ್ತಿದ್ದೀರಾ. ಆದ್ದರಿಂದ ನಿಮ್ಮ ಪಾಪಗಳು ನಾಶವಾಗುವುದಕ್ಕೆ ಸಾಧ್ಯವಿಲ್ಲವೆಂದು ಏಸು ಹೇಳಿದ್ದಾನೆ. ಅಷ್ಟೇಯಾಗಲಿ ನೀವು ಹೇಗೆ ಇದ್ದರೂ ಫರವಾಗಿಲ್ಲ, ನನ್ನ ರಕ್ತದಿಂದ ನೀವು ಪಾಪಗಳಿಂದ ರಕ್ಷಿಸಲ್ಪಡುತ್ತೀರೆಂದು ಎಲ್ಲಿಯೂ ಹೇಳಲಿಲ್ಲ. ಬೈಬಲ್ ಗ್ರಂಥದಲ್ಲಿ ಇಲ್ಲದ ಮಾತುಗಳನ್ನು ಇದೆಯೆಂದು, ಏಸು ಹೇಳಿದ್ದಾನೆಂದು ಈಗಿನ ಬೋಧಕರು ಹೇಳುವುದಲ್ಲದೆ, ಹಿಂದೂಗಳ ವೇದಗಳಲ್ಲಿ ಕೂಡಾ "ರಕ್ತ ಪ್ರೋಕ್ಷಣಂ ಪಾಪಪರಿಹಾರಂ" ಎಂದು ಇದೆಯೆಂದು ಹೇಳುವುದು ಅವರ ಅಜ್ಞಾನಕ್ಕೆ ನಿದರ್ಶನ. ಇವುಗಳೆಲ್ಲವನ್ನು ಗಮನಿಸಿದರೆ ಕ್ರೈಸ್ತರು ಬೈಬಲ್ ಗ್ರಂಥವೊಂದರ ಜ್ಞಾನಕ್ಕೆ ಎಷ್ಟು ದೂರವಾಗಿದ್ದಾರೊ ತಿಳಿದುಹೋಗುತ್ತಿದೆ. ಈಗಲಾದರೂ ಮೀರಿಹೋಗಿರುವುದು ಇಲ್ಲ, ಕ್ರೈಸ್ತರು ಬೈಬಲ್ ಗ್ರಂಥವನ್ನು ಓದಿ ಅದರಲ್ಲಿ ಅಸಲು ಜ್ಞಾನವನ್ನು ತಿಳಿದುಕೊಂಡರೆ, ಹಾಗೆಯೇ ಹಿಂದೂಗಳು ಗೀತೆಯನ್ನು ಓದಿ ಅದರಲ್ಲಿನ ಜ್ಞಾನವನ್ನು ತಿಳಿದರೂ, ಮುಸ್ಲಿಮರು ದೇವರ ಪ್ರಾರ್ಥನೆ ಮಾಡುವುದಲ್ಲದೆ ಖುರ್‌ಆನ್ ಗ್ರಂಥದಲ್ಲಿ ಏನು ಹೇಳಿದ್ದಾರೆಂದು ನೋಡಿದರೆ ಸ್ವಲ್ಪಮಟ್ಟಿಗಾದರೂ ಜ್ಞಾನ ತಿಳಿಯುತ್ತದೆ. ಜ್ಞಾನ ತಿಳಿದಂತೆಲ್ಲ ಅದನ್ನು ಹೇಳಿದ ವ್ಯಕ್ತಿ ಈ ಲೋಕ ಸಂಬಂಧಿಕನಲ್ಲವೆಂದು ಅರ್ಥವಾಗುತ್ತದೆ. ಇನ್ನೂ ಮುಂದಕ್ಕೆ ಹೋದಂತೆಲ್ಲ ದೇವರೆ ಅದನ್ನು ಹೇಳಿದ್ದಾನೆಂದು, ಆತನೆ ಈತನೆಂದು ತಿಳಿಯಬಲ್ಲದು ಹಾಗೆ ತಿಳಿಯಲ್ಪಟ್ಟ ದಿನ ಮನುಷ್ಯರು ತಮ್ಮತಮ್ಮ ಪಾಪಗಳಿಂದ ವಿಮುಕ್ತಿ ಹೊಂದಿ ನಿಬದ್ದರಾಗಿ, ನಿಬದ್ಧವಾಗಿರುವ ದೇವರಲ್ಲಿ ಸೇರಿಹೋಗುತ್ತಾರೆ.

ಪ್ರಶ್ನಿಸುವುದು ಎಲ್ಲರಹಕ್ಕು, ನೀವು ಕೇಳಬಹುದು, ನೀವು ಕೇಳಬಾರದು ಎಂಬ ನಿಯಮವೇನು ಇರುವುದಿಲ್ಲ. ಕೇಳುವ ಪ್ರಶ್ನೆ ಹತ್ತುಜನರಿಗೆ ಉಪಯೋಗ ಕರವಾದುದಾಗಿರಬೇಕು. ಪ್ರಶ್ನೆ ಎಷ್ಟು ಒಳ್ಳೆಯದಾದರೆ ಅದರ ಉತ್ತರ ಕೂಡಾ ಅಷ್ಟೇ ಒಳ್ಳೆಯದಾಗಿರುತ್ತದೆ. ಮಳೆ ಮೇಲಿಂದ ಬಂದು ಎಲ್ಲಿಬೀಳುತ್ತದೆ? ಎಂಬುದು ಕೂಡಾ ಪ್ರಶ್ನೆಯೇ. ಆದರೆ ಅದರಿಂದ ಯಾರಿಗೂ ಏನು ಪ್ರಯೋಜನೆ ಇರುವುದಿಲ್ಲ. ಮೇಲಿಂದ ಬಂದಿರುವಮಳೆ ಬೀಳುವುದು ಕೆಳಗೆ ಅಲ್ಲವೆ! ಅದು ಎಲ್ಲರಿಗೂ ತಿಳಿದಿರುವ ವಿಷಯವೇ. ಅದರಿಂದ ಹೊಸದಾಗಿ ಯಾರಿಗೂ ಏನು ತಿಳಿದಂತಲ್ಲ. ಕೇಳುವ ಪ್ರಶ್ನೆ ಸಂಚಲನವಾಗಿದ್ದರೆ, ಬರುವ ಉತ್ತರ ಲೋಕಕ್ಕೆ ಹೊಸದಾಗಿ, ಕಣ್ತೆರೆಸುವಂತಾಗಿರುತ್ತದೆ. ಆದ್ದರಿಂದ ನಿಮಗೆ ಒಳ್ಳೆಯ ಪ್ರಶ್ನೆಗಳೂ, ಹಾಗೆಯೇ ಹೊಸ ಉತ್ತರಗಳು ಲಭಿಸುವಂತೆ ಪ್ರಯತ್ನಿಸಿ ಈ ಗ್ರಂಥವನ್ನು ಬರೆಯುವುದು ನಡೆಯುತ್ತಿದೆ. ಈ ವಿಧಾನದಲ್ಲಿ ಕುಲ ಮತಗಳಿಗೆ ಅತೀತವಾಗಿ, ಸಮಾಜದಲ್ಲಿನ ಎಲ್ಲರಿಗೂ ಉಪಯೋಗಪಡುವಂತೆ ಪ್ರಶ್ನೆಗಳನ್ನು ತೆಗೆದುಕೊಂಡು ಉತ್ತರಗಳು ಕೊಡುವುದು ನಡೆಯುತ್ತಿದೆ. ಆದ್ದರಿಂದ ಓದುವವರು ಪ್ರತಿ ವಿಷಯವನ್ನು ವಿಚಕ್ಷಣೆಯಿಂದ, ವಿವೇಕದಿಂದ ನೋಡಬೇಕೆಂದು ತಿಳಿಸುತ್ತಾ ಈಗ ಮನುಷ್ಯರೆಲ್ಲರಿಗೂ ಉಪಯೋಗಪಡುವ ಪ್ರಶ್ನೆಯನ್ನು ತೆಗೆದುಕೊಳ್ಳೋಣ. ಒಬ್ಬ ನಾಸ್ತಿಕವಾದಿ ಆತ್ಮವನ್ನು ಕುರಿತು ಏನನ್ನುತ್ತಿದ್ದಾನೊ ಕೆಳಗೆ ನೋಡೋಣ.

**ನಾಸ್ತಿಕವಾದಿ :-** ಆತ್ಮ ಎಂಬುದು ದೊಡ್ಡ ಅಬದ್ಧ (ಸುಳ್ಳು). ಆತ್ಮ ಎಂಬುದು ಪದಾರ್ಥ ಪರಿಣಾಮ ದಶೆಗಳಲ್ಲಿ ಎಲ್ಲಿಯೂ ಗೋಚರಿಸಲಿಲ್ಲ. ಆದಕಾರಣ ಆತ್ಮಕ್ಕೆ ಅಸ್ತಿತ್ವ ಇಲ್ಲ. ಆದ್ದರಿಂದ ಆತ್ಮ ಅಭೌತಿಕ, ಅಪಾಕೃತ, ಆತ್ಮ ಪದಾರ್ಥ ಅಲ್ಲ. ಸ್ಥಳ ಕಾಲಾದಿಗಳಲ್ಲಿ ಆತ್ಮ ಕಾಣಿಸುವುದಿಲ್ಲ. ಆದ್ದರಿಂದ ಆತ್ಮ ಅಬದ್ಧ. ಜೀವಿಗಳಲ್ಲಿ ಆತ್ಮ ಮಾಡುವ ಕೆಲಸ ಏನು ಇಲ್ಲವೆಂದು ತಿಳಿದುಹೋಗಿದೆ. ಆತ್ಮವಾದಿಗಳು ತಮ್ಮ ಮಾನಸಿಕ ಭ್ರಮೆಗಳಿಗೆ ವಿಧವಿಧಗಳ ಹೆಸರುಗಳನ್ನು ಆತ್ಮಕ್ಕೆ ಅಂಟಗಟ್ಟಿ ಕರೆಯುತ್ತಾ, ಜನರನ್ನು ಮೋಸಮಾಡುತ್ತಾ, ಇವೇ ಅವರು ಕರೆಯುವ ಆತ್ಮಗಳು ಪರಮಾತ್ಮ, ಪರಿಶುದ್ಧಾತ್ಮ, ಪಾವನಾತ್ಮ, ಪರಾತ್ಮ, ಪ್ರೇತಾತ್ಮ, ಭೂತಾತ್ಮ, ಬ್ರಹ್ಮಾತ್ಮ, ಭ್ರಷ್ಟಾತ್ಮ, ತದಾತ್ಮ, ಅಂತರಾತ್ಮ, ದುರಾತ್ಮ, ದುಷ್ಟಾತ್ಮ

ಎಂದು ಕರೆಯುತ್ತಿದ್ದಾರೆ. ಇದೆಲ್ಲಾ ಭಾವವಾದ ಮುಸುಗು ಪ್ರವಾಹದೊಳಗಿಂದ ಉರಿಳಿದ ಅಸತ್ಯ ಪದಜಾಲ. ಉಪನಿಷತ್ತಗಳಲ್ಲಿ ಆತ್ಮಕ್ಕೆ ಹುಚ್ಚುಮಾತುಗಳಿಂದ ಕೂಡಿದ ನಿರ್ವಚನಗಳೆಷ್ಟೋ ಬರೆದಿಟ್ಟಿದ್ದಾರೆ. ಈಗಿನ ಭೌತವಾದಿಗಳಲ್ಲದೆ ಪೂರ್ವದಲ್ಲಿ ಚಾರ್ವಾಕನು, ಲೋಕಾಯತರು, ಬೌದ್ಧರು, ಆತ್ಮ ಇರುವಿಕೆಯನ್ನು ಅಂಗೀಕರಿಸಲಿಲ್ಲ. ಆದರೆ ನೀವು ಆತ್ಮವನ್ನು ಇದೆಯೆನ್ನುತ್ತೀರಾ? ಇಲ್ಲವೆನ್ನುತ್ತೀರಾ?

**ನಮ್ಮ ಉತ್ತರ :–** ಯಾರ ಇಷ್ಟಬಂದಂತೆ ಅವರು ಆತ್ಮವನ್ನು ಇದೆಯೆಂದರೂ, ಇಲ್ಲವೆಂದರೂ ಆತ್ಮಕ್ಕೆ ಬಂದ ನಷ್ಟ ಏನುಯಿಲ್ಲ. ನಾವು ಹೇಳುವುದು ಏನೆಂದರೆ! ಆತ್ಮವನ್ನು ಯಾರೂ ಇಲ್ಲವೆಂದರೂ, ಯಾರು ಇದೆಯೆಂದರೂ ಅವರು ಕುರುಡರಂತೆ ಹೇಳದೆ ಶಾಸ್ತ್ರವನ್ನು ಆಧಾರ ಮಾಡಿಕೊಂಡು ಹೇಳಬೇಕಾಗಿರುತ್ತದೆ. ಆಗಲೇ ಅದು ಶಾಸ್ತ್ರೀಯತೆ ಆಗುತ್ತದೆ. ಆತ್ಮವನ್ನು ಇದೆಯೆಂಬುದಕ್ಕೆ ಶಾಸ್ತ್ರ ಆಧಾರಗಳಿರಬೇಕು. ಹಾಗೆ ಇಲ್ಲವೆಂಬುವವರು ಕೂಡಾ ಶಾಸ್ತ್ರ ಆಧಾರಗಳನ್ನು ತೋರಿಸಬೇಕು. ಹಾಗಲ್ಲದೆ ನಾಸ್ತಿಕನು ಹೇಳಿದ್ದಾನೆ. ಬುದ್ಧನು ಹೇಳಿದ್ದಾನೆ ಅವರ ಆಳಿಯನು ಕೂಡಾ ಹೇಳಿದ್ದಾನೆ ಅಂದರೆ ಸರಿಹೋಗುವುದಿಲ್ಲ. ಅದು ಶಾಸ್ತ್ರೀಯತೆ ಅಲ್ಲ. ಒಂದೇ ದಾರಿಯಲ್ಲಿ ಹೋದ ನಾಲ್ಕುಜನ ಕುರುಡರಿಗೆ ದಾರಿ ಪಕ್ಕದಲ್ಲಿಯೇ ಮಲಗಿರುವ ಹಾವು ಕಾಣಿಸದಿರುವಾಗ, ಅವರ ಮಾತುಗಳನ್ನನುಸರಿಸಿ ಹಾವು ಇಲ್ಲವೆನ್ನಬಹುದಾ? ನಿಜಕ್ಕೆ ಹಾವು ಇದೆ ಆದ್ದರಿಂದ ಕುರುಡರು ನೋಡದದಷ್ಟುಮಾತ್ರಕ್ಕೆ ಹಾವು ಇದೆಯೆನ್ನುವುದು ಅವಾಸ್ತವಲ್ಲ ಅಲ್ಲವೆ! ಹಾಗೆಯೆ ಆತ್ಮ ಇರುವಾಗ ಜ್ಞಾನದೃಷ್ಟಿ ಇಲ್ಲದವರು, ಅಜ್ಞಾನಾಂಧಕಾರಿಗಳು ನೋಡದಿರುವಾಗ, ಇರುವ ಸತ್ಯವನ್ನು ಅಸತ್ಯ ಅನ್ನಲಾರೆವು ಅಲ್ಲವೆ! ಮೇಲಿನ ಪ್ರಶ್ನೆಯಲ್ಲಿ ಹೇಳಿದ ನಾಸ್ತಿಕವಾದಿ ಆತ್ಮ ಪದಾರ್ಥವಲ್ಲ ಅಂದಿದ್ದಾನೆ. ಆತ್ಮ ಸ್ಥಳಕಾಲಾದಿಗಳಲ್ಲಿ ಕಾಣಿಸುವುದಿಲ್ಲ ಅಂದಿದ್ದಾರೆ. ಆತ್ಮ ಪದಾರ್ಥ ಅಲ್ಲವೆನ್ನುವುದಕ್ಕೆ ಆಧಾರವಿದೆಯಾ? ಆತ್ಮಕ್ಕೆ ಸ್ಥಳ ಕಾಲ ಇಲ್ಲವೆನ್ನುವುದಕ್ಕೆ ಶಾಸ್ತ್ರೀಯವಾದ ಆಧಾರ ಏನಾದರೂ ಇದೆಯಾ? ಎಂದು ಪ್ರಶ್ನಿಸುತ್ತಿದ್ದೇನೆ. ಆತ್ಮವನ್ನು ಕುರಿತು ನಾವು ಹೇಳುವುದು ಏನೆಂದರೆ! ಆತ್ಮ ಒಂದು ಪದಾರ್ಥ ಅಲ್ಲ ಎನ್ನುವುದನ್ನು ನಾವು ಸ್ವಲ್ಪ ಸತ್ಯವೆಂದು, ಸ್ವಲ್ಪ ಅಸತ್ಯವೆಂದು ಹೇಳುತ್ತಿದ್ದೇವೆ. ಅದುಹೇಗೆ

ಎಂದರೆ! ಪದಾರ್ಥ ಎನ್ನುವುದು ಎರಡು ಭಾಗಗಳಾಗಿ ಇರುತ್ತದೆ. ಸ್ವಲ್ಪ ಸ್ಥೂಲ ಭಾಗವಾಗಿ, ಸ್ವಲ್ಪ ಸೂಕ್ಷ್ಮ ಭಾಗವಾಗಿ ಇರುತ್ತದೆ. ಸ್ವಲ್ಪ ಸ್ಥೂಲ ಸೂಕ್ಷ್ಮ ಎರಡು ಭಾಗಗಳನ್ನು ಸೇರಿಸಿ ಒಂದು ಪದಾರ್ಥ ಎನ್ನುತ್ತಿದ್ದೇವೆ. ಉದಾಹರಣೆಗೆ ಒಂದು ಮೊಟ್ಟೆಯನ್ನು ತೆಗೆದುಕೊಳ್ಳೋಣ. ಮೊಟ್ಟೆ ಒಂದು ಪದಾರ್ಥವಾದರೂ, ಅದರಲ್ಲಿ ಕಾಣಿಸುವ ಮೊಟ್ಟೆ ಸ್ಥೂಲ, ಕಾಣಿಸದ ಮೊಟ್ಟೆ ಸೂಕ್ಷ್ಮವಾಗಿ ಇದೆಯೆಂದು ಹೇಳಬಹುದು. ಮನುಷ್ಯನ ಶರೀರವೂ ಸಹಾ ಒಂದು ಪದಾರ್ಥದಿಂದ ತಯಾರಾಗಿರುವುದೇ, ಅದರಲ್ಲಿ ಕೂಡಾ ಸ್ಥೂಲ, ಸೂಕ್ಷ್ಮ ಎರಡೂ ಇವೆ. ಸ್ಥೂಲವನ್ನು ಪದ ಎಂದೂ, ಸೂಕ್ಷ್ಮವನ್ನು ಅರ್ಥ ಎಂದೂ ಹೇಳಬಹುದು. ಪದ+ಅರ್ಥ=ಪದಾರ್ಥ ಎಂದು ಹೇಳಬಹುದು. ಆತ್ಮ ವಿಷಯದೊಳಗೆ ಬಂದರೆ ಆತ್ಮ ಸ್ಥೂಲವಾಗಿಲ್ಲ, ಸೂಕ್ಷ್ಮವಾಗಿ ಇದೆ. ಆದ್ದರಿಂದ ಆತ್ಮವನ್ನು ಕೇವಲ ಅರ್ಥ ಎಂದು ಅನ್ನಬಹುದಾಗಲಿ, ಪೂರ್ತಿಯಾಗಿ ಪದಾರ್ಥ ಎಂದು ಅನ್ನಬಾರದು.

ಆತ್ಮ ಸೂಕ್ಷ್ಮವಾದುದಾಗಿರುವಾಗ, ಆತ್ಮ ಅರ್ಥವಾಗಿ ಇರುವಾಗ, ಅದಕ್ಕು ಕೂಡಾ ಆಕಾರವಿದೆಯೆಂದೇ ಹೇಳಬಹುದು. ಆಕಾರವಿರುವಾಗ ಯಾವುದಕ್ಕಾದರೂ ಹೆಸರು, ಕೆಲಸ ಎರಡೂ ಇರುತ್ತವೆ. ಹಾಗೆಯೇ ಆತ್ಮಕ್ಕೆ ಆಕಾರವೇ ಅಲ್ಲದೆ, ಹೆಸರು ಕಾರ್ಯಗಳು ಎರಡೂ ಇವೆ. ಇದನ್ನನುಸರಿಸಿ ರೂಪ, ನಾಮ, ಕ್ರಿಯೆಗಳು ಆತ್ಮಕ್ಕೆ ಇವೆಯೆಂದು ಹೇಳಬಹುದು. ಜೀವಿಗಳಲ್ಲಿ ಆತ್ಮ ಮಾಡುವ ಕೆಲಸ ಏನು ಇಲ್ಲವೆಂದು ತಿಳಿದುಹೋಗಿದೆಯೆಂದು ಈಗ ಪ್ರಶ್ನಿಸಿದವರು ಹೇಳಿದ್ದಾರೆ. ಅದಕ್ಕೆ ಬದಲಾಗಿ ಆತ್ಮ ಕೆಲಸ ಮಾಡಲಿಲ್ಲವೆಂದು ನಿಮಗೆ ಹೇಗೆ ತಿಳಿದಿದೆ? ಎಂದು ನಾನು ಕೇಳುತ್ತಿದ್ದೇನೆ.ಆತ್ಮ ಕೆಲಸವನ್ನು ಮಾಡಲಿಲ್ಲವೆಂದು ಯಾವ ಶಾಸ್ತ್ರದ ಪ್ರಕಾರ ಹೇಳುತ್ತಿದ್ದೀರೆಂದು ಕೇಳುತ್ತಿದ್ದೇನೆ. ಆತ್ಮ ಕೆಲಸ ಮಾಡಲಿಲ್ಲವೆನ್ನುವುದು ಮೂಢನಂಬಿಕೆಯಿಂದ ಹೇಳಿದ ಮಾತಾಗಲಿ, ಶಾಸ್ತ್ರಬದ್ಧವಾದ ಮಾತಲ್ಲವೆಂದು ನಾವು ಹೇಳುತ್ತಿದ್ದೇವೆ. ಮನುಷ್ಯ ಶರೀರದೊಳಗೆ, ಶರೀರದ ಹೊರಗೆ ಇಂದ್ರಿಯಗಳ ಮೂಲಕ ನಡೆಯುವ ಕೆಲಸವನ್ನು ಮಾಡುವುದು ಆತ್ಮವೇಯೆಂದು, ಆತ್ಮ ಹೊರತು ಕೆಲಸ ಮಾಡುವವರು ಯಾರೂ ಇಲ್ಲವೆಂದು

ಹೇಳುತ್ತಿದ್ದೇವೆ. ಜೀವಿಯು ಶರೀರದಲ್ಲಿ ಯಾವ ಕೆಲಸ ಮಾಡುವವನಲ್ಲ. ಆದ್ದರಿಂದ ನಿತ್ಯ ನಡೆಯುವ ಕೆಲಸಗಳನ್ನೆಲ್ಲ ಆತ್ಮವೇ ಮಾಡುತ್ತಿದೆ. ಆದರೂ ಕೆಲಸಗಳೆಲ್ಲ ಆತ್ಮ ಮಾಡುತ್ತಿದೆಯೆಂದು ಯಾರಿಗೂ ತಿಳಿಯದು ಆತ್ಮಜ್ಞಾನ ತಿಳಿಯದ ಮನುಷ್ಯ ನಡೆದ ಕೆಲಸಗಳನ್ನೆಲ್ಲ ನಾನೇ ಮಾಡಿದ್ದೇನೆಂದು, ನಡೆಯುತ್ತಿರುವ ಕೆಲಸಗಳನ್ನೂ ನಾನು ಮಾಡುತ್ತಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ನಿಜಕ್ಕೆ ಜೀವಿಯಾಗಲಿ, ದೇವರಾಗಲಿ ಯಾವ ಕೆಲಸಗಳನ್ನೂ ಮಾಡಲಿಲ್ಲ. ಕೆಲಸಗಳು ನಡೆದಿವೆ ಮತ್ತು ನಡೆಯುತ್ತೀವೆ ಅಂದರೆ ಅವೆಲ್ಲವೂ ಆತ್ಮಯಿಂದಲೇ ನಡೆದಿವೆಯೆಂದು, ಹಾಗೆ ನಡೆಯುತ್ತೀವೆಯೆಂದು ತಿಳಿಯಬೇಕು. ಆತ್ಮ ಅಶಾಸ್ತ್ರೀಯವಾದುದು ಅಲ್ಲ. ಆತ್ಮ ಆರನೆಶಾಸ್ತ್ರ ಮತ್ತು ಆದಿಶಾಸ್ತ್ರ ಎಂದು ಹೆಸರುವಾಸಿಯಾದ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಇದೆ. ಶಾಸ್ತ್ರಗಳು ಎಷ್ಟೋ ಕೂಡಾ ತಿಳಿಯದವರು ತಮ್ಮನ್ನು ತಾವು ವಿಜ್ಞಾನಿಗಳೆಂದು ಹೇಳಿ ಕೊಳ್ಳುತ್ತಿದ್ದಾರೆ. ಶಾಸ್ತ್ರಜ್ಞಾನವೇ ಸರಿಯಾಗಿ ತಿಳಿಯದವರು ವಿಜ್ಞಾನಿಗಳೇಗೆ ಆಗುತ್ತಾರೆ? ಪರಮಾತ್ಮ ಮಾಡಬೇಕಾದ ಕೆಲಸಗಳೆಲ್ಲ ಆತ್ಮವೇ ಮಾಡುತ್ತಿದೆ. ಹಾಗೆ ಜೀವಾತ್ಮ ಕರ್ಮವನ್ನು (ಪಾಪವನ್ನು ಅಥವಾ ಪುಣ್ಯವನ್ನು) ಅನುಭವಿಸುವು ದಕ್ಕೆ ನಡೆಯಬೇಕಾದ ಕೆಲಸಗಳನ್ನೆಲ್ಲವನ್ನು ಆತ್ಮವೇ ಮಾಡುತ್ತಿದೆ. ಅಂಥಹದರಲ್ಲಿ ಆತ್ಮ ಯಾವ ಕೆಲಸವನ್ನು ಮಾಡುವುದಿಲ್ಲ ಎಂಬುದು ಕುರುಡರಂತೆ, ಮೂರ್ಖವಾಗಿ, ಮೂಢವಾಗಿ, ಅಶಾಸ್ತ್ರೀಯವಾಗಿ ಮಾತನಾಡಿದ ಮಾತಾಗುತ್ತದೆ. ಆದ್ದರಿಂದ ಆತ್ಮವನ್ನು ಕುರಿತು ಅದು ಕೆಲಸ ಮಾಡುವುದಿಲ್ಲ, ಆಕಾರವಿಲ್ಲ ಎಂಬ ನಾಸ್ತಿಕವಾದಿಗಳ ವಾದನೆಯನ್ನು ನಾವು ಪೂರ್ತಿಯಾಗಿ ಖಂಡಿಸುತ್ತಿದ್ದೇವೆ. ಕರೆಂಟಿಗೆ ಧನಧೃವ, ಋಣಧೃವ (ಪಾಜಿಟಿವ್, ನೆಗಿಟಿವ್) ಹೇಗೆ ಅಗತ್ಯವೊ ಹಾಗೆ ಶರೀರ ಸಜೀವವಾಗಿ ಇರಬೇಕೆಂದರೆ, ಶರೀರದಲ್ಲಿ ಜೀವಪ್ರಕ್ರಿಯೆ ನಡೆಯಬೇಕೆಂದರೆ, ಜೀವಾತ್ಮದೊಂದಿಗೆ ಆತ್ಮ ಇರಬೇಕು. ಆತ್ಮವಿಲ್ಲದೆ ಜೀವಾತ್ಮ ಒಂಟಿಯಾಗಿ ಯಾವ ಶರೀರದಲ್ಲಿಯೂ ಇಲ್ಲ. ಜೀವಾತ್ಮ ಆತ್ಮ ಎರಡು ಜೋಡಿ ಆತ್ಮಗಳೆಂದು ಹೆಸರುವಾಸಿಯಾಗಿವೆ. ನಾವು ಪ್ರತಿಪಾದಿಸಿದ ತ್ರೈತಾ ಸಿದ್ಧಾಂತದಲ್ಲಿ

ಶಾಸ್ತ್ರಬದ್ಧವಾಗಿ ಮೂರು ಆತ್ಮಗಳಿವೆ. ಆತ್ಮ ಎಂಬುದು ಅಹೇತುಕವಾದುದೆಂದು ಮಾತನಾಡಿದವರಲ್ಲಿ ಆ ಮಾತುಗಳನ್ನು ಮಾತನಾಡಿಸಿರುವುದು ಕೂಡಾ ಆತ್ಮವೇ. ಆತ್ಮ ಇಲ್ಲದ್ದು ಕಣ್ಣರೆಪ್ಪೆಕೂಡಾ ಕದಲುವುದಿಲ್ಲ, ಶ್ವಾಸಕೂಡಾ ಆಡುವುದಿಲ್ಲ. ಆತ್ಮವನ್ನು ಅಧ್ಯಾಯನ ಮಾಡುವುದೇ ಆಧ್ಯಾತ್ಮಿಕ ಎನ್ನುತ್ತೇವೆ.

ಈಗ ಮತ್ತೊಂದು ಪ್ರಶ್ನೆಯನ್ನು ತೆಗೆದುಕೊಂಡು ನೋಡೋಣ. ಮೇ ತಿಂಗಳು, 1989 ಹೇತುವಾದಿ ಎಂಬ ಪತ್ರಿಕೆಯಲ್ಲಿ ಒಬ್ಬ ಹೇತುವಾದಿ ಎನ್ನುವಾತನು ವೇದಗಳನ್ನು ಕುರಿತು ಬರೆದಿದ್ದಾನೆ. ಅದರಲ್ಲಿ ಆತನು ಬರೆದ ಸಾರಾಂಶದಲ್ಲಿ ವೇದಗಳನ್ನು ಕುರಿತು ಆತನ ಉದ್ದೇಶವನ್ನು ಹೇಳಿದರೂ, ಆತನು ವೇದಗಳನ್ನು ಕುರಿತು ಹಾಕಿದ ಪ್ರಶ್ನೆ ಸ್ಪಷ್ಟವಾಗಿ ಕಾಣಿಸುತ್ತಿದೆ. ಆ ಪ್ರಶ್ನೆ ಏನೊ ಕೆಳಗೆ ನೋಡೋಣ.

**ಹೇತುವಾದಿ :–** ದಯಾನಂದನು ಆರ್ಯಸಮಾಜವನ್ನು ಇಟ್ಟು, ಹಿಂದೂ ಗಳೆಲ್ಲರನ್ನು ವೇದಗಳೊಳಗೆ ನಡೆಸಬೇಕೆಂದುಕೊಂಡಿದ್ದಾನೆ. ಉಳಿದವು ಗಳೆಲ್ಲವನ್ನು ಅಲ್ಲವೆಂದು ದಯಾನಂದನು ವೇದಗಳನ್ನು ಹಿಡಿದುಕೊಳ್ಳುವುದಕ್ಕೆ ಅದರಲ್ಲಿ ಆತನಿಗೆ ಏನು ಕಾಣಿಸಿದೇಯೊ? ಪ್ರಾಚೀನಕಾಲದಲ್ಲಿ ಎಷ್ಟೋಜನ ಆಲೋ ಚಿಸುತ್ತಾ, ಹಾಡುತ್ತಾ, ಕಂಠಸ್ತ ಮಾಡಿದ ವಿಷಯಗಳೇ ವೇದಗಳಲ್ಲಿ ಇವೆ. ಅವು ಸಂಪ್ರದಾಯಬದ್ಧವಾಗಿ ಕೇಳಿದಷ್ಟು, ಜ್ಞಾಪಕವಿದ್ದಷ್ಟು ಪ್ರಚಾರದೊಳಗೆ ಬಂದಿವೆ. ಯಾರೊಬ್ಬರೂ ವೇದಗಳನ್ನು ವ್ಯವಸ್ಥಿತವಾಗಿಕೂರಿಸಲಿಲ್ಲ. ಆದ್ದರಿಂದ ವೇದಗಳ ಮೂಲ ರಚಯಿತ ಯಾರೂ ಇಲ್ಲ. ಬರುಬರುತ್ತಾ ಕೆಲವರು ಬ್ರಾಹ್ಮಣರು ಇವುಗಳಿಗೆ ದಿವ್ಯತ್ವವನ್ನು ಅಂಟಗಟ್ಟಿದ್ದಾರೆ. ಇವುಗಳನ್ನು ಮನುಷ್ಯರು ಬರೆಯಲಿಲ್ಲ ದೇವರೆ ಬರೆದಿದ್ದಾನೆಂದು, ವೇದಗಳನ್ನು ಅಪೌರುಷೇಯಗಳಂದಿದ್ದಾರೆ. ದೇವರು ಹೇಳಿದ ಪ್ರಮಾಣಗಳೆಂದಿದ್ದಾರೆ. ವೇದಗಳು ಯಾವಾಗ ಹೊರಗೆ ಬಂದಿವೆಯೋ ಖಚ್ಚಿತವಾಗಿ ಯಾರೂ ಹೇಳಲಾರರು. ಆದ್ದರಿಂದ ವೇದಗಳನ್ನು ಯಾರೂ ರಚಿಸಲಿಲ್ಲ. ಅವುಗಳಿಗೆ ಗ್ರಂಥಕರ್ತಯಿಲ್ಲ ಎನ್ನುತ್ತಿದ್ದೇವೆ. ಒಬ್ಬರ ರಚನೆಯಾಗಲಿ, ಒಬ್ಬರ ಉದ್ದೇಶವಾಗಲಿ ಇಲ್ಲದವುಗಳನ್ನು ಮನುಷ್ಯರು ಬರೆಯಲಿಲ್ಲ, ದೇವರು ಬರೆದಿದ್ದಾನೆನ್ನುವುದು ಸತ್ಯವಾ? ಅಸತ್ಯವಾ ತಿಳಿದಿದ್ದರೆ ಹೇಳಿರಿ ನೋಡೋಣ.

**ಉತ್ತರ :–** ಎಲ್ಲಾ ನೀನೆ ಹೇಳಿ ಕೊನೆಯಲ್ಲಿ ನೀವು ಹೇಳಿರಿ ಎಂದರೆ ಹೇಗೆ? ನೀನು ಹೇಳಿದವುಗಳಲ್ಲಿ ಬ್ರಾಹ್ಮಣರು ವೇದಗಳಿಗೆ ದಿವ್ಯತ್ವವನ್ನು ಅಂಟಗಟ್ಟಿದ್ದಾರೆ, ಎಂಬವಮಾತು ಹೊರತು ಒಂದುಕೂಡಾ ಸತ್ಯವಿಲ್ಲ. ನಿನಗೆ ತಿಳಿಯದ ವಿಷಯಗಳನ್ನು ಹೇಳುತ್ತೇನೆ ಚೆನ್ನಾಗಿ ನೋಡಿಕೊ, ವೇದಗಳು ಸಂಪೂರ್ಣವಾಗಿ ಹೊರಗೆ ಬಂದಿರುವುದು ದ್ವಾಪರಯುಗ ಅಂತ್ಯದಲ್ಲಿ, ಭಗವದ್ಗೀತೆಯನ್ನು ಕೃಷ್ಣನು ಹೇಳದಮೊದಲೆ, ಅಂದರೆ ಭಾರತಯುದ್ಧಕ್ಕಿಂತ, ಎಂಬತ್ತು (80 ವರ್ಷಗಳ ಮೊದಲೆ, ವೇದಗಳು ಸಂಪೂರ್ಣವಾಗಿ ವ್ಯಾಸನಿಂದ ಬರೆಯಲ್ಪಟ್ಟು, ತಾಳಪತ್ರ ಗ್ರಂಥಗಳಾಗಿ ಹೊರಗೆ ಬಂದಿವೆ. ಅವುಗಳನ್ನು ಬರೆದವನು ವ್ಯಾಸನೇ, ಅದರೂ ಎಲ್ಲಾ ವಿಷಯಗಳನ್ನು ಆತನು ಬರೆಯಲಿಲ್ಲ. ವೇದಗಳಲ್ಲಿನ ಉಪನಿಷತ್‌ಗಳನ್ನು ಹೊರತು ಉಳಿದವುಗಳನ್ನು ವ್ಯಾಸನು ಬರೆದಿದ್ದಾನೆ. ಉಪನಿಷತ್‌ಗಳನ್ನು ಶೇಕರಿಸಿ ತಾನು ಬರೆದ ವೇದಗಳ ಕೊನೆಯಲ್ಲಿ ಸೇರಿಸಿದ್ದಾನೆ. ವ್ಯಾಸನು ವೇದಗಳನ್ನು ಬರೆದಿದ್ದಾನೆ, ಆದ್ದರಿಂದ ಆತನಿಗೆ ವೇದವ್ಯಾಸನೆಂಬ ಹೆಸರು ಬಂದಿದೆ. ವ್ಯಾಸನು ವೇದಗಳನ್ನೇ ಅಲ್ಲದೆ ಅವುಗಳಿಗಿಂತ ಮೊದಲು 18 ಪುರಾಣಗಳನ್ನು ಬರೆದಿದ್ದಾನೆ. ಪುರಾಣಗಳನ್ನು ಬರೆದ ವ್ಯಾಸನು ವೇದಗಳನ್ನು ಕೂಡಾ ಬರೆದು "ವೇದವ್ಯಾಸನು" ಎಂಬ ಬಿರುದು ತಂದುಕೊಂಡಿದ್ದಾನೆ. ನಂತರ ಅರ್ಜುನನ ಮೂಲಕ ತಿಳಿದುಕೊಂಡ ಭಗವದ್ಗೀತೆಯನ್ನು ಶ್ಲೋಕಗಳ ರೂಪದಲ್ಲಿ 700 ಶ್ಲೋಕಗಳಾಗಿ ಬರೆದಿದ್ದಾನೆ. ಭಗವದ್ಗೀತೆಯನ್ನು ಬರೆದು ತೃಪ್ತಿಹೊಂದಿದ ವ್ಯಾಸನು ಆರು ಶಾಸ್ತ್ರಗಳನ್ನು ಕೂಡಾ ಸ್ವಲ್ಪ ಬರೆಯಲ್ಪಟ್ಟಿದ್ದಾನೆ. ಭಗವದ್ಗೀತೆಯನ್ನು ಬರೆದ ವ್ಯಾಸನು ಬ್ರಾಹ್ಮಣನೇ ಆದರೂ, ಬ್ರಾಹ್ಮಣ ಸಮಾಜಕ್ಕೆ ಸ್ವಲ್ಪ ವ್ಯತ್ಯಾಸವಾಗಿ, ವಿರುದ್ಧವಾಗಿ ಕಾಣಿಸಿದ್ದಾನೆ. ಆದ್ದರಿಂದ ವ್ಯಾಸನು ಮರಣಿಸಿದ ನಂತರ ಆತನಿಗೆ ವಿರುದ್ಧವಾಗಿ ಬದಲಾದ ಬ್ರಾಹ್ಮಣರು, ವ್ಯಾಸನು ಬರೆದ ಭಗವದ್ಗೀತೆಯಲ್ಲಿ ತಮಗೆ ಅನುಕೂಲವಾದ ಕೆಲವು ಶ್ಲೋಕಗಳನ್ನು ಬೆರೆಸಿ ಅವುಗಳನ್ನು ಯಾರೂ ಗುರುತಿಸದಂತೆ ಮಾಡಿದ್ದಾರೆ. ಗೀತೆಯಲ್ಲಿ ವ್ಯಾಸನಿಗೆ ವಿರುದ್ಧವಾದವರು ಕೆಲವು ಶ್ಲೋಕಗಳನ್ನು ಸೇರಿಸಿರುವುದು ನಾವು ಹೊರತು ಇಲ್ಲಿಯವರೆಗೂ ಯಾರೂ ಗುರುತಿಸಲಿಲ್ಲ.

ವೇದಗಳಿಗೆ ವಿರುದ್ಧವಾಗಿ ವ್ಯಾಸನು ಭಗವದ್ಗೀತೆಯನ್ನು ಬರೆಯುವುದು ಅಂದಿನ ಬ್ರಾಹ್ಮಣ ಸಮಾಜಕ್ಕೆ ಸ್ವಲ್ಪವೂ ಸರಿಹೋಗಲಿಲ್ಲ. ಆದ್ದರಿಂದ ಅವರು ವೇದಗಳನ್ನು ಹೆಚ್ಚಾಗಿ ಪ್ರಚಾರ ಮಾಡಿಬೇಕೆಂದು ಭಗವದ್ಗೀತೆಯನ್ನು ಪ್ರಚಾರ ಮಾಡಬೇಕೆಂದುಕೊಳ್ಳಲಿಲ್ಲ. ಭಗವದ್ಗೀತೆಯನ್ನು ದೇವರು ಭಗವಂತನಾಗಿ ಬಂದು ಹೇಳಿದರೂ, ಅದನ್ನು ದೇವರು ಹೇಳಿರುವುವೆಂದು ಪ್ರಚಾರ ಮಾಡದೆ ಮನುಷ್ಯರು ಬರೆದ ವೇದಗಳನ್ನು ದೇವರು ಹೇಳಿರವವೆಂದು ಅಪೌರುಷಯಗಳೆಂದು ಅಂದಿದ್ದಾರೆ. ಅದರ ಅರ್ಥ ವೇದಗಳನ್ನು ಯಾವ ಪುರುಷನು ಹೇಳಲಿಲ್ಲವೆಂದು, ಅವುಗಳನ್ನು ದೇವರೆ ಹೇಳಿದ್ದಾನೆಂದು ಭಾವ ಬರುವಂತೆ ಹಾಗೆ ಹೇಳಿದ್ದಾರೆ. ವೇದಗಳು ಬ್ರಾಹ್ಮಣರಿಗೆ ಅನುಕೂಲವಾದವುಗಳಾಗಿವೆ. ಆದ್ದರಿಂದ ಪ್ರತಿ ಶುಭಕಾರ್ಯದಲ್ಲಿಯೂ ವೇದಮಂತ್ರಗಳನ್ನೇ ಓದುತ್ತಾರೆ. ದಯಾನಂದಸರಸ್ವತಿ ಬ್ರಾಹ್ಮಣನು ಆಗಿರುವುದರಿಂದ 19ನೆ ಶತಾಬ್ಧದಲ್ಲಿ (1824–1883) ರಲ್ಲಿ 59 ವರ್ಷಗಳು ಬದುಕಿದ ದಯಾನಂದನು ಭಗವದ್ಗೀತೆಗೆ ಪ್ರಾಧಾನ್ಯತ ಕೊಡದಂತೆ ವೇದಗಳಿಗೆ ಹೆಚ್ಚಾಗಿ ಪ್ರಾಧ್ಯಾನತೆ ಕೊಟ್ಟು, ಅವುಗಳನ್ನು ಪ್ರಚಾರ ಮಾಡಬೇಕೆಂದು ಆರ್ಯಸಮಾಜವನ್ನು ಸ್ಥಾಪಿಸಿದ್ದಾನೆ. ಆತನು ಸ್ಥಾಪಿಸಿದ ಆರ್ಯಸಮಾಜ ಈಗಲೂ ವೇದಗಳನ್ನು ಪ್ರಚಾರ ಮಾಡುತ್ತಲೇ ಇದೆ. ವೇದಗಳಿಗೆ ದಿವ್ಯತ್ವವನ್ನು ಅಂಟಗಟ್ಟಿದ ಬ್ರಾಹ್ಮಣ ಸಮಾಜ, ಭಗವದ್ಗೀತೆಯನ್ನು ಸ್ವತಃವಾಗಿ ದೇವರೇ ಭಗವಂತನಾಗಿ ಬಂದು ಹೇಳಿದರೂ, ಅದನ್ನು ಅಸೂಯೆಯಿಂದ ನೋಡುವುದು ಈದಿನಕ್ಕೂ ಇದೆ. ಎಲ್ಲಿಯಾದರೂ ಯಾರ ಮನೆಯಲ್ಲಿಯಾದರೂ ಕೃಷ್ಣಾರ್ಜುನರಿರುವ ಭಗವದ್ಗೀತೆ ಸನ್ನಿವೇಶವನ್ನು ಗುರುತುಮಾಡುವ ಚಿತ್ರಪಟವಿದ್ದರೆ, ಅದು ಮನೆಯಲ್ಲಿ ಇರಬಾರದು, ಇದ್ದರೆ ಒಳ್ಳೆಯದಲ್ಲ. ಅವರಿಗೆ ಯುದ್ಧ ಬಂದಂತೆ ಕುಟುಂಬದಲ್ಲಿ ಕೂಡಾ ಒಡೆದಾಟಗಳು ಕಲಹಗಳು ಬರುತ್ತವೆಂದು ಗೀತೆಯನ್ನು ಕುರಿತು ಕೆಟ್ಟದಾಗಿ ಹೇಳಿ ಆ ಫೋಟೋವನ್ನು ದೇವಾಲಯದಲ್ಲಿಡಿ ಹಾಗಲ್ಲದಿದ್ದರೆ ನದಿಯಲ್ಲಾದರೂ ಹಾಕಿರೆಂದು ಹೇಳುತ್ತಿರುತ್ತಾರೆ. ಭಗವದ್ಗೀತೆ ಗ್ರಂಥ ಯಾರ ಮನೆಯಲ್ಲಾದರೂ ಕಾಣಿಸಿದರೆ ಅದನ್ನು ಓದಬಾರದೆಂದು, ಅದನ್ನು ಪೂಜೆಕೋಣೆಯಲ್ಲಿ ಇಟ್ಟು

ಪೂಜಿಸಬೇಕೆಂದು ಹೇಳುತ್ತಿರುತ್ತಾರೆ. ಇದೆಲ್ಲವೂ ಆರ್ಯಸಮಾಜದ ಮೂಲಕ ದಯಾನಂದ ಸರಸ್ವತಿಯೇ ಬ್ರಾಹ್ಮಣ ಸಮಾಜಕ್ಕೆ ಕಲಿಸಿಹೋಗಿದ್ದಾನೆ. ಗೀತಾ ಚಿತ್ರಪಟವನ್ನು ದೇವಾಲಯದಲ್ಲಿ ಇಡಬೇಕೆನ್ನುವುದು ಇಲ್ಲವೆ ನದಿಯಲ್ಲಿ ಹಾಕೆನ್ನುವುದರ ಮೂಲಕ ಗೀತೆಮೇಲೆ ಯಾರಿಗೂ ಧ್ಯಾಸವಿಲ್ಲದಂತೆ ಮಾಡುವುದೆ ಯೆಂದು, ಇದು ಅವರ ಕುತಂತ್ರವೆಂದು ಉಳಿದ ಪ್ರಜೆಗಳಿಗೆ ಯಾರಿಗೂ ತಿಳಿಯದು. ಹಾಗೆಯೇ ಭಗವದ್ಗೀತಾ ಗ್ರಂಥವನ್ನು ಓದಬಾರದೆಂದು, ಅದನ್ನು ಪೂಜಿಸಬೇಕೆಂದು ಹೇಳುವುದೂ, ಒಂದುವೇಳೆ ಓದಿದರೆ ಗೀತೆಯಲ್ಲಿನ ಅಧ್ಯಾಯಗಳನ್ನು ಓದದಂತೆ ಕೊನೆಯಲ್ಲಿನ ಗೀತಾಮಹತ್ವವನ್ನು ಓದಿರೆಂದು ಹೇಳುವುದು ಕೂಡಾ ಗೀತೆಯೊಂದರ ಜ್ಞಾನ ಯಾರಿಗೂ ತಿಳಿಯದಂತೆ ಮಾಡುವುದೆ ಅವರ ಉದ್ದೇಶವೆಂದು ಯಾರಿಗೂ ತಿಳಿಯದು. ಭಗವದ್ಗೀತೆಯಲ್ಲಿ ವೇದಗಳಿಗೆ ವಿರುದ್ಧವಾದ ಶ್ಲೋಕಗಳಿವೆಯೆಂದು ತಿಳಿದ ಬ್ರಾಹ್ಮಣರು ಈ ವಿಧವಾಗಿ ಭಗವದ್ಗೀತೆಯನ್ನು ಯಾರೂ ಓದದಂತೆ, ಯಾರೂ ನೋಡದಂತೆ ಮಾಡಬೇಕೆಂದು ಅವರ ಉದ್ದೇಶ. ಸ್ವತಃವಾಗಿ ವೇದಗಳನ್ನು ಬರೆದ ವ್ಯಾಸನು ಸ್ವಲ್ಪಕಾಲದ ನಂತರ ಭಗವದ್ಗೀತೆಯನ್ನು ತಿಳಿದು, ಅದನ್ನು ಬರೆದು, ಭಗವದ್ಗೀತೆ ಒಂದರ ಶ್ರೇಷ್ಠತ್ವವನ್ನು, ಅದರಲ್ಲಿ ದೇವರು ಹೇಳಿದ ಜ್ಞಾನವನ್ನು ನೋಡಿದ ನಂತರ ವೇದಗಳನ್ನು ಬರೆದಿರುವುದಕ್ಕೆ ಎಷ್ಟೋ ಚಿಂತಿಸಿದ್ದಾನೆ. ವೇದಗಳನ್ನು ಬರೆದು ವೇದವ್ಯಾಸನೆಂದು ಹೆಸರು ತಂದುಕೊಂಡಿದಕ್ಕೆ ಪಶ್ಚಾತ್ತಾಪಪಟ್ಟು, ಕೊನೆಗೆ ಗೀತೆಯನ್ನು ಬರೆದು ತೃಪ್ತಿಹೊಂದಿದ್ದಾನೆ. ವ್ಯಾಸನು ಬ್ರಾಹ್ಮಣನಾದರೂ ತಮಗೆ ವಿರುದ್ಧವಚನಗಳಿದ್ದರು ಗೀತೆಯನ್ನು ಬರೆದಿರುವುದಕ್ಕೆ ಬ್ರಾಹ್ಮಣರು ವ್ಯಾಸನ ಮೇಲೆ ಕೋಪ ಹೊಂದಿದ್ದು, ವ್ಯಾಸನು ಮರಣಿಸಿದ ನಂತರ ಗೀತೆಗೆ ವಿರುದ್ಧವಾಗಿ ಅವರಿಗೆ ಅನುಕೂಲವಾಗಿರುವ ಶ್ಲೋಕಗಳನ್ನು ಗೀತೆಯಲ್ಲಿ ಸೇರಿಸುವುದು ನಡೆದಿದೆ. ಈ ಮಧ್ಯಕಾಲದಲ್ಲಿ ವೇದವ್ಯಾಸ್ ಎಂಬ ಹೆಸರಿನಿಂದ ಬಂದಿರುವ ಒಬ್ಬ ಬ್ರಾಹ್ಮಣನು ತಮ್ಮ ಹಿರಿಯರು ಮಾಡಿರುವುದು ಸಾಲದು ಎನ್ನುವಂತೆ, ತಾನು ಇನ್ನೂ 44 ಶ್ಲೋಕಗಳನ್ನು ಸೇರಿಸಿ ಗೀತೆಯನ್ನು ಬಿಡುಗಡೆ ಮಾಡುವುದು ನಡೆದಿದೆ. ಈದಿನ ಸಮಾಜದಲ್ಲಿ ಭಗವದ್ಗೀತೆ ಪ್ರಚಾರ ಆಗದಿರುವುದಕ್ಕೆ,

ಹಿಂದೂಮತ ಕ್ಷೀಣಿಸಿಹೋಗುವುದಕ್ಕೆ ಹೀಗೆ ಬ್ರಾಹ್ಮಣರೇ ಕಾರಣ ಅಂದರೆ ಆಶ್ಚರ್ಯ ಪಡಬೇಕಾದ ಅವಶ್ಯಕತೆಯಿಲ್ಲ.

**ಪ್ರಶ್ನೆ :– ಒಬ್ಬ ವ್ಯಕ್ತಿ ದೈವಜ್ಞಾನ ತಿಳಿದು, ಅದನ್ನು ಆಚರಿಸಿ ಯೋಗಿಯಾಗಿ ಬದಲಾಗಿ, ಯೋಗಶಕ್ತಿಯನ್ನು ಸಂಪಾದಿಸಿಕೊಂಡಿದ್ದಾನೆ. ಆತನು ದೇವರ ಜ್ಞಾನವನ್ನು ಪ್ರಚಾರ ಮಾಡುವುದೆ ಕೆಲಸವಾಗಿಟ್ಟುಕೊಂಡಿದ್ದಾನೆ. ದೇವರ ಧರ್ಮಗಳ ಪ್ರಕಾರ ನಡೆದುಕೊಳ್ಳುವ ಆ ಯೋಗಿಯನ್ನು ನೋಡಿ ದೆವ್ವಗಳು, ದೇವತೆಗಳು ಭಯಪಟ್ಟು ಆತನು ಹೇಳಿದಂತೆ ನಡೆದುಕೊಳ್ಳುವುದು, ತೊಲಗಿಹೋಗುವುದು ನಡೆಯುತ್ತಿತ್ತು. ಅಷ್ಟೇಯಲ್ಲದೆ ಆತನಹತ್ತಿರಕ್ಕೆ ಬಂದಿರುವ ರೋಗಿಯೊಂದರ ರೋಗಗಳು ಕೂಡಾ ಇಲ್ಲದಂತೆ ಹೋಗುತ್ತಿದ್ದವು. ಯಾವಾದರೂ ಮೊಂಡಾದ ರೋಗಗಳನ್ನು ಆತನು ಹೋಗೆಂದು ಹೇಳಿದರೆ ಹೋಗುತ್ತಿದ್ದವು. ಅಂತಹ ದೊಡ್ಡಶಕ್ತಿ ಇರುವ ವ್ಯಕ್ತಿಗೆ ಗುಂಡಿಗೆನೊವು (ಎದೆನೊವು) ಬಂದಿದೆ. ಅದರಿಂದ ಅಲ್ಲಿಯವರೆಗೂ ಆತನನ್ನು ದೊಡ್ಡದಾಗಿ ಅಂದುಕೊಂಡ ವರು, ನಂತರ ಆತನು ಅಷ್ಟುದೊಡ್ಡವನು ಅಲ್ಲಬಿಡು ಎಂದು ಅಂದುಕೊಂಡಿದ್ದಾರೆ. ಇತರರ ರೋಗಗಳನ್ನು ನಿಸ್ವಾರ್ಥವಾಗಿ ಇಲ್ಲದಂತೆ ಮಾಡಿದ ಆತನು, ಏಕೆ ಒಂದೇಬಾರಿಗೆ ಶಕ್ತಿಹೀನನಾಗಿದ್ದಾನೆಂದು, ಆತನಿಗೆ ಗುಂಡಿಗೆನೊವು ಏಕೆ ಬಂದಿದೆಯೆಂದು ಕೇಳುತ್ತಿದ್ದಾರೆ. ನೀವು ಈ ವಿಷಯವನ್ನು ಏನೆಂದು ವಿವರಿಸುತ್ತಿರೋ ತಿಳಿದುಕೊಳ್ಳಬೇಕೆಂದಿದೆ.**

**ಉತ್ತರ :–** ಯೋಗಿ ಆದವನಿಗೆ ಯೋಗಶಕ್ತಿ ಲಭಿಸುವುದು ನಿಜವೇ. ಅಂತಹ ಶಕ್ತಿ ಇರುವ ಯೋಗಿಯನ್ನು ಭೂತಗಳಾದ ರೋಗಗಳು ಗೌರವಿಸಿ ಯೋಗಿ ಇರುವಕಡೆ ಗೌರವವಾಗಿ ಇಲ್ಲದಂತೆ ಹೋಗುವುದು ನಡೆಯುತ್ತಿರುತ್ತದೆ. ಯಾವಾಗಾದರೂ ಯಾವ ರೋಗವಾದರೂ ಯೋಗಿ ಹೇಳಿದಂತೆ ಕೇಳಿ, ಆತನ ಮಾತನ್ನು ಗೌರವಿಸಿ ರೋಗಿಯಿಂದ ದೂರ ಹೋಗುವುದು ಕೂಡಾ ನಡೆಯುತ್ತಿರುತ್ತದೆ. ಇವೆಲ್ಲಾ ಸತ್ಯವಾದ ವಿಷಯಗಳೆ. ಇನ್ನು ಅಂತಹ ಉತ್ತಮಯೋಗಿಗೆ ಗುಂಡಿಗೆನೊವು ಏಕೆ ಬಂದಿದೆಯೆಂಬುದೆ ಸಹಜವಾಗಿ ಯಾರಿಗೂ ಅರ್ಥವಾಗದ ವಿಷಯವಾಗಿರುತ್ತದೆ. ಅದರ ವಿಷಯದಲ್ಲಿ ನಾವು

ಹೇಳುವ ಸಮಾಧಾನ ಏನೆಂದರೆ! ಮನುಷ್ಯ ಕರ್ಮವನ್ನು ಅನುಸರಿಸಿ ಆತನನ್ನು ಬಾಧಿಸುವ ರೋಗಗಳು ಭೂಮಿಮೇಲೆ ಇರುವುದು ಎಲ್ಲರಿಗೂ ತಿಳಿದ ವಿಷಯವೆ. ಆ ರೋಗಗಳು ಶರೀರಗಳಲ್ಲಿ ಒಂದೊಂದು ಒಂದೊಂದು ವಿಧವಾಗಿ ವ್ಯಾಪಿಸಿ ಮನುಷ್ಯನನ್ನು ಬಾಧಿಸುವವಾಗಿ ಇವೆ. ಒಂದು ರೋಗಕ್ಕೆ ಮತ್ತೊಂದು ರೋಗಕ್ಕು ಎಷ್ಟೋ ವ್ಯತ್ಯಾಸವಿರುತ್ತದೆ. ಕ್ಷಯರೋಗ ಒಂದುವಿಧವಾಗಿ ಹಿಂಸಿಸಿದರೆ, ಕ್ಯಾನ್ಸರ್ ರೋಗ ಮತ್ತೊಂದು ವಿಧವಾಗಿ ಬಾಧಿಸುತ್ತದೆ. ಈ ಎರಡು ರೋಗಗಳಿರುವಂತೆ ಎಯಿಡ್ಸ್ ರೋಗವಿರುವುದಿಲ್ಲ. ಅದರ ಲಕ್ಷಣಗಳೆಲ್ಲ ಬೇರೆಯಾಗಿರುತ್ತವೆ. ಈ ವಿಧವಾಗಿ ಭೂಮಿಮೇಲೆ ಅನೇಕ ರೋಗಗಳು, ಅನೇಕ ವಿಧಗಳಾಗಿ ಮನುಷ್ಯನನ್ನು ಬಾಧಿಸುತ್ತೀವೆ.

ರೋಗಗಳು ಎಷ್ಟು ಇದ್ದರೂ ಅವು ಎಲ್ಲವೂ ಜೀವವಿರುವ ಭೂತಗಳೆ. ಭೂತಗಳು ಎಂದರೆ ಜೀವರಾಶಿಗಳೆಂದು ಅರ್ಥವಾಗಲಿ ದೆವ್ವಗಳೊ, ಪಿಶಾಚಿಗಳೊ ಎಂದು ಅಂದುಕೊಳ್ಳಬೇಡಿ. ರೋಗ ಒಂದು ಭೂತವಾಗಿದೆ. ಭೂತವಾದ ಪ್ರತಿರೋಗ ಮನುಷ್ಯನಿಗಿಂತ ಎಷ್ಟೋ ತಿಳುವಳಿಕೆಯುಳ್ಳವವಾಗಿ ಇವೆ. ಮನುಷ್ಯರು ಅಜ್ಞಾನಿಗಳಾಗಿ, ಜ್ಞಾನಿಗಳಾಗಿ ಎರಡು ವಿಧಗಳಾಗಿದ್ದರೂ ಭೂತಗಳಾದ ರೋಗಗಳು ಮಾತ್ರ ಎಲ್ಲವೂ ದೈವಜ್ಞಾನ ಇರುವವಾಗಿವೆಯೆಂದು. ಆದ್ದರಿಂದಲೇ ರೋಗಗಳನ್ನು ಜ್ಞಾನಿಗಳಾಗಿ ಲೆಕ್ಕಿಸಬಹುದು. ದೈವಜ್ಞಾನವಿರುವ ರೋಗಗಳು ಅಜ್ಞಾನಿಗಳನ್ನು ಪೀಡಿಸಿದಂತೆ ನಿಜವಾದ ಜ್ಞಾನವಿರುವವರನ್ನು ಪೀಡಿಸುವುದಿಲ್ಲ. ಮನುಷ್ಯನಿಗೆ ಜ್ಞಾನವಿಲ್ಲದ ಮೊದಲು ಅಜ್ಞಾನಿಯಾಗಿರುವಾಗ ರೋಗಬಂದು ಕರ್ಮ ರೀತ್ಯಾ ಬಾಧಿಸುತ್ತಿದ್ದರೂ, ಒಂದುವೇಳೆ ಆ ಮನುಷ್ಯ ಜ್ಞಾನವನ್ನು ತಿಳಿದುಕೊಂಡರೆ, ದೇವರ ಮೇಲೆ ಶ್ರದ್ದೆಯನ್ನೂ ಜ್ಞಾನದಮೇಲೆ ಆಸಕ್ತಿಯನ್ನು ಹೆಚ್ಚಿಸಿಕೊಂಡರೆ, ಅಂತಹವನನ್ನು ತಾನು ಬಾಧಿಸುವುದನ್ನು ಬಿಟ್ಟು, ಅವನಿಂದ ತೊಲಗಿಹೋಗುತ್ತದೆ. ಈ ವಿಷಯವೆಲ್ಲವೂ ಆಶ್ಚರ್ಯವಾಗಿ ಇದ್ದರೂ ಇದೆಲ್ಲಾ ಅಕ್ಷರಸತ್ಯ. ಒಬ್ಬ ರೋಗಿ ಎಷ್ಟೋ ಔಷಧಿಗಳನ್ನು ಬಳಸಿದರು ಗುಣವಾಗದಿದ್ದರೂ ಈ ಕಾಲದಲ್ಲಿ ಸಹಾ ಔಷಧಿಗಳ ಪ್ರಮೇಯ ಸ್ವಲ್ಪವೂ ಇಲ್ಲದೆ ಯಾರ ರೋಗವನ್ನು

ಅವರು ದೈವಜ್ಞಾನದಿಂದ ತೊಲಗಿಸಿಕೊಳ್ಳಬಹುದು. ಇದೆಲ್ಲವೂ ದಗಾ, ಮೋಸ ಎಂಬುದಕ್ಕೆ ಅವಕಾಶವೇ ಇಲ್ಲ. ಏಕೆಂದರೆ ಒಬ್ಬನು ಇನ್ನೊಬ್ಬನಿಗೆ ರೋಗವನ್ನು ಹೋಗಲಾಡಿಸುವುದರಲ್ಲಿ ಮೋಸವಿರಬಹುದು. ಹಾಗಲ್ಲದೆ ಯಾರ ಪ್ರಮೇಯವು ಇಲ್ಲದಂತೆ ಯಾರಿಗವರು ತಮ್ಮ ರೋಗಗಳನ್ನು ಇಲ್ಲದಂತೆ ಮಾಡಿಕೊಳ್ಳುವುದರಲ್ಲಿ ಮೋಸವೇನು ಇದೆ?

ಜ್ಞಾನವಿಷಯದಲ್ಲಿ ಎಷ್ಟೋ ಸಲಹೆಗಳು ಕೊಡುತ್ತಾ, ಜ್ಞಾನವೊಂದರ ಶ್ರೇಷ್ಠತ್ವವನ್ನು ತಿಳಿಸುತ್ತಾ ನಿಸ್ವಾರ್ಥವಾಗಿ ತನ್ನಮೇಲೆ ರೋಗಗಳಿಗಿರುವ ಗೌರವದಿಂದ, ಇತರರ ಶರೀರದಲ್ಲಿನ ರೋಗಕ್ಕೆ ಹೇಳಿ ಮೈತೊಲಗಿಸಿದ ಸಂಘಟನೆಗಳು ಪೂರ್ವದಲ್ಲಿ ಕೂಡಾ ಕೆಲವರು ಮಾಡಿ ತೋರಿಸಿದ್ದಾರೆ. ಹಾಗೆ ತೋರಿಸುವುದರೊಂದರ ಉದ್ದೇಶ ಜ್ಞಾನಕ್ಕೆ ಇಷ್ಟು ಗೌರವವಿದೆಯೆಂದು ಇತರರು ತಿಳಿಯುವುದಕ್ಕೇಯೆಂದು ಅರ್ಥ ಮಾಡಿಕೊಳ್ಳಬೇಕು. ಒಬ್ಬ ವ್ಯಕ್ತಿ ಒಬ್ಬ ಯೋಗಿಯಾಗಿರುತ್ತಾ, ಜ್ಞಾನಮಾರ್ಗದಲ್ಲಿ ಇತರರಿಗೆ ಉಂಟಾದ ಸಂಶಯಗಳಿಗೆ ಉತ್ತರಕೊಡುತ್ತಾ, ಇತರರ ರೋಗಗಳಿಂದಲೂ ಕೂಡಾ ಗೌರವಿಸಲ್ಪಡುವವನು ಸ್ವತಃವಾಗಿ ರೋಗಗ್ರಸ್ಥನಾಗುವುದು ನಡೆಯುವುದಿಲ್ಲ. ಇತರರಹತ್ತಿರ ಇರುವ ರೋಗಗಳೆ ಒಬ್ಬ ಯೋಗಿಗೆ ಗೌರವಿಸುತ್ತಾ, ಆತನ ಸಲಹೆಮೇರೆಗೆ ನಡೆದುಕೊಳ್ಳುವಾಗ, ಅಂತಹ ರೋಗಗಳು ಎಷ್ಟೋ ತಿಳುವಳಿಕೆ ಯುಳ್ಳವಾಗಿದ್ದು, ಎಷ್ಟೋ ಜ್ಞಾನ ಇರುವವಾಗಿದ್ದು, ಯೋಗಿಯೊಂದರ ಸ್ಥಾನ ತಿಳಿದು, ಆತನ ಶರೀರದೊಳಗೆ ಹೋಗಿ ಆತನನ್ನು ಪೀಡಿಸುವುದು ನಡೆಯುವುದಿಲ್ಲ. ತಾವು ಗೌರವಿಸುವ ವ್ಯಕ್ತಿಯನ್ನು ತಾವೇ ತೊಂದರೆ ಇಡುವುದಿಲ್ಲ. ಅದರೆ ಅಂಥಹ ಶಕ್ತಿ ಇರುವ ಯೋಗಿಗೆ ಎದೆನೊವು ಬಂದು ಆತನು ಬಾಧೆಪಡುವುದು ನಡೆಯುತ್ತಿದೆ ಅಲ್ಲವೆ! ಅದುಹೇಗೆ ನಡೆದಿದೆಂದು ಎಲ್ಲರಿಗೂ ಪ್ರಶ್ನೆ ಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಶರೀರವನ್ನು ಬಾಧಿಸುವವು ರೋಗಗಳಿವೆ ಮತ್ತು ಶರೀರ ಲೋಪಗಳು ಇವೆ. ರೋಗಗಳ ವಿಷಯ ತಿಳಿದುಹೋಗಿದೆ. ರೋಗಗಳು ದೈವಜ್ಞಾನವನ್ನು ಗೌರವಿಸುವವು, ಯೋಗಿಗಳ

ವಿಷಯದಲ್ಲಿ ಬಹಳ ತಿಳುವಳಿಕೆಯಿಂದಿರುತ್ತವೆಂದು ತಿಳಿದುಕೊಂಡಿದ್ದೇವೆ. ಮನುಷ್ಯನನ್ನು ಪೀಡಿಸುವವು ಶರೀರ ರೋಗಗಳೆ ಅಲ್ಲ, ಶರೀರ ಲೋಪಗಳು ಕೂಡಾ ಇವೆಯೆಂದು ಅರ್ಥವಾಗಿದೆ. ಬಹಳಜನರಿಗೆ ಶರೀರದಲ್ಲಿ ರೋಗಗಳ್ಯಾವೊ, ಲೋಪಗಳ್ಯಾವೊ ಸರಿಯಾಗಿ ತಿಳಿಯದು. ರೋಗಗಳು ಕ್ರಿಮಿಗಳಿಂದ ಉಂಟಾಗುವವೆಂದು ಅರ್ಥವಾಗುತ್ತಿದೆ. ಅಂಥವುಗಳಲ್ಲಿ ಕಲರಾ, ಮಶೂಚಿ, ಹೆಚ್.ಐ.ವಿ (ಎಯಿಡ್ಸ್), ಕ್ಷಯ, ಮಲೇರಿಯಾ, ಚಿಕನ್‌ಗುನಿಯಾ ಮೊದಲಾದ ಚಿಕ್ಕದೊಡ್ಡ ಎಷ್ಟೋ ರೋಗಗಳು ಇವೆ. ಹಾಗೆಯೇ ಕಣಗಳಿಂದ ಉಂಟಾಗುವ ಕ್ಯಾನ್ಸರ್ ಕೂಡಾ ರೋಗಗಳ ಜಾತಿಯೊಳಗೆ ಸೇರುತ್ತದೆ. ಈ ವಿಧವಾಗಿ ನಮಗೆ ತಿಳಿದಿರುವವು ಕೆಲವು ರೋಗಗಳಿರುವಾಗ, ತಿಳಿಯದ ರೋಗಗಳು ಎಷ್ಟೋ ಇವೆ. ಕೆಲವು ರೋಗಗಳು ಹೊಸದಾಗಿ ಹುಟ್ಟಿಬಂದಿರುವವೂ ಕೂಡಾ ಇರುತ್ತವೆ. ರೋಗಗಳಿಗಿಂತ ಭಿನ್ನವಾಗಿ ಇರುವವು ಶರೀರಲೋಪಗಳು.

ಶರೀರ ಲೋಪಗಳು ಕೆಲವರಿಗೆ ಹೆಚ್ಚಾಗಿ, ಕೆಲವರಿಗೆ ಕಡಿಮೆ ಇರುತ್ತವೆ. ಕೆಲವು ಲೋಪಗಳು ಎಲ್ಲರಿಗೂ ಸಮಾನವಾಗಿ ಇರುತ್ತವೆ. ಅಂತಹವುಗಳಲ್ಲಿ ಮುಖ್ಯವಾಗಿ ವೃದ್ಧಾಪ್ಯ, ಕೂದಲು ಬೆಳ್ಳಗಾಗುವುದು, ದಂತಗಳು ಉದುರುವುದು, ಕಣ್ಣು ಕಾಣಿದಂತೆಹೋಗುವುದು, ಕಿವಿಗಳು ಕೇಳಿಸದಂತೆ ಹೋಗುವುದು, ಚರ್ಮ ಸುಕ್ಕು ಬರುವುದು, ಮೂಳೆಗಳು ಸವೆದುಹೋಗಿ ಕೀಲು ನೊವುಬರುವುದು, ಗ್ರಂಥಿಗಳ ಕೆಲಸ ಕಡಿಮೆಯಾಗಿ ಅದರಿಂದ ಮಧುಮೇಹ (ಷುಗರ್) ಬರುವುದು, ಕಿಡ್ನಿಗಳು ಮೆತ್ತಗಾಗಿ ಕೆಲಸ ಮಾಡದೆಹೋಗುವುದೂ, ಗುಂಡಿಗೆಯಲ್ಲಿ ರಕ್ತಕವಾಟೆಗಳು ಸರಿಯಾಗಿ ಇಲ್ಲದಂತೆ ಹೋಗುವುದು, ರಕ್ತನಾಳಗಳು ಮುಚ್ಚಿಕೊಂಡು ರಕ್ತ ಗುಂಡಿಗೆಗೆ ಸರಿಯಾಗಿ ಸರಫರಾ ಆಗದಿರುವುದು ಮೊದಲಾದ ಎಷ್ಟೋ ಇವೆ. ರೋಗಗಳಿಂದ ಶರೀರದಲ್ಲಿ ಬಾಧೆಉಂಟಾದಂತೆ, ಶರೀರಲೋಪದಿಂದ ಕೂಡಾ ಶರೀರದಲ್ಲಿ ಜೀವಿಯು ಬಾಧೆ ಪಡಬೇಕಾಗಿಬರುತ್ತದೆ. ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ ಲೋಪಗಳು ರೋಗಗಳು ಅಲ್ಲ. ಹಾಗೆಯೇ ರೋಗಗಳು ಲೋಪಗಳು ಅಲ್ಲ. ಆದರೂ ಬಹಳಜನ

ತಿಳಿಯದ ತನದಿಂದ ಶರೀರ ಲೋಪವನ್ನು ಕೂಡಾ ರೋಗವಾಗಿ ಭಾವಿಸಿ ಕೊಳ್ಳುವುದು ನಡೆಯುತ್ತಿದೆ. ಉದಾಹರಣೆಗೆ ಆಸ್ತಮಾ (ಉಬ್ಬಸ ಅಥವಾ ಆಯಾಸ) ಇರುವವರು ಅದನ್ನು ಕೂಡಾ ರೋಗವಾಗಿ ತಿಳಿದು ಉಬ್ಬಸರೋಗ ಎಂದು ಅನ್ನುತ್ತಿದ್ದಾರೆ. ಇನ್ಸುಲಿನ್ ಚಿಲುಮೆ ಕ್ಲೋಮರಸಗ್ರಂಥಿಯಲ್ಲಿ ಕಡಿಮೆಯಾಗುವುದರಿಂದ ಉಂಟಾಗುವ ಮಧುಮೇಹವನ್ನು ಸುಗರ್‌ವ್ಯಾಧಿ ಅನ್ನುತ್ತಿದ್ದಾರೆ. ಹಾಗೆಯೇ ಗುಂಡಿಗೆಯಲ್ಲಿನ ಕವಾಟೆ (valve) ಬಲಹೀನ ವಾದರೂ, ರಕ್ತನಾಳಗಳು ಸರಿಯಾಗಿ ಕೆಲಸಮಾಡದಿದ್ದರೂ ಬರುವ ಬಾಧೆಯನ್ನು ಎದೆನೊವು ಅನ್ನುತ್ತಿದ್ದೇವೆ. ನಿಜಕ್ಕೆ ಎದೆ ನೊವು ರೋಗವಲ್ಲ, ಆಸ್ತಮಾ ರೋಗವಲ್ಲ, ಸುಗರ್ ವ್ಯಾಧಿ ರೋಗವಲ್ಲ. ಈ ಮೂರು ಶರೀರಲೋಪಗಳೆ ಅದರೂ ಅವುಗಳನ್ನು ಕೂಡಾ ರೋಗಗಳಿಗೆ ಜಮಕಟ್ಟುವುದು ನಡೆಯುತ್ತಿದೆ. ಮನುಷ್ಯನಿಗೆ ತಿಳಿಯದೆ ಲೋಪವನ್ನು ರೋಗವೆಂದರೂ, ಲೋಪ ರೋಗವಲ್ಲ. ಲೋಪಗಳು ಲೋಪಗಳಾಗಿಯೇ ಇರುತ್ತವೆ. ರೋಗಗಳು ರೋಗಗಳಾಗಿಯೇ ಇರುತ್ತವೆ.

ರೋಗಗಳು ಜೀವದೊಂದಿಗೆ ಕೂಡಿಕೊಂಡಿವೆ ಮತ್ತು ತಿಳುವಳಿಕೆ ಯುಳ್ಳವು, ದೈವಜ್ಞಾನ ಇರುವವು ಎಂದು ಹೇಳಿಕೊಂಡಿದ್ದೇವೆ. ಅಷ್ಟೇಯಲ್ಲದೆ ಯೋಗಿಗಳನ್ನು ಗೌರವಿಸುತ್ತವೆಂದು ಕೂಡಾ ಹೇಳಿಕೊಂಡಿದ್ದೇವೆ. ದೈವಜ್ಞಾನದ ಮೇಲೆ ಶ್ರದ್ಧೆಹೊಂದಿ ಜ್ಞಾನವನ್ನು ಸಂಪಾದಿಸಿಕೊಳ್ಳುವವೆಂದೂ ಕೂಡಾ ಹೇಳಿಕೊಂಡಿದ್ದೇವೆ. ಶರೀರ ಲೋಪಗಳು ಜೀವವಿಲ್ಲದಿರುವವು. ಅವುಗಳಿಗೆ ರೋಗಿ ಎಂದಾಗಲಿ, ಯೋಗಿ ಎಂದಾಗಲಿ, ಜ್ಞಾನಿ ಎಂದಾಗಲಿ ಯಾವುದೆ ವ್ಯತ್ಯಾಸ ಇರುವುದಿಲ್ಲ. ಶರೀರ ಲೋಪಗಳು ಸಹಜವಾಗಿ ಬರುವವು. ಆದ್ದರಿಂದ ರೋಗಗಳನ್ನು ಶಾಸಿಸಿ ಹೇಳುವ ಯೋಗಿಗೆ ಶರೀರ ಲೋಪಯಾವುದಾದರೂ ಬರಬಹುದು. ಒಬ್ಬ ದೊಡ್ಡ ಯೋಗಿಗೆ ಎದೆನೊವು ಬರುವುದರಲ್ಲಿ ಆಶ್ಚರ್ಯ ಆಗಬೇಕಾಗಿರುವುದು ಏನು ಇಲ್ಲ. ಯೋಗಿಗಳಿಗೆ ಶರೀರಲೋಪಗಳಲ್ಲಿ ಏನಾದರೂ ಬರಬಹುದು. ಯೋಗಿಗಳಿಗೆ ರೋಗಗಳ ಮೇಲೆ ನಿಯಂತ್ರಣ

ಇರುತ್ತದೆ ಆದರೆ, ಶರೀರ ಲೋಪಗಳ ಮೇಲೆ ನಿಯಂತ್ರಣ ಇರುವುದಿಲ್ಲ. ಅಂತಹದರಲ್ಲಿ ಒಬ್ಬ ಉತ್ತಮ ಯೋಗಿಗೆ ಎದೆನೋವು ಬಂದರೆ ಆತನಲ್ಲಿ ಶಕ್ತಿ ಲೋಪಿಸಿದೆಯೆಂದು ಅಂದುಕೊಳ್ಳುವುದು ತಪ್ಪಾಗುತ್ತದೆ. ಯೋಗಿಯಲ್ಲಿನ ಯೋಗಶಕ್ತಿ ರೋಗಗಳನ್ನು ನಿಯಂತ್ರಿಸುತ್ತದೆ ಆದರೆ, ಲೋಪಗಳನ್ನು ನಿಯಂತ್ರಿಸಲಾರದು. ಯೋಗಿ ಆದವರಿಗೆ ಶರೀರ ಲೋಪಗಳ ಬಗ್ಗೆ ಮತ್ತೊಂದು ಅವಕಾಶವಿದೆ. ಅದೇನೆಂದರೆ! ಶರೀರ ಲೋಪಗಳನ್ನು ಶಾಸಿಸಲಾರದ ಯೋಗಿ ಲೋಪಗಳಿಂದ ಉಂಟಾಗುವ ಬಾಧೆಯನ್ನು ಅನುಭವಿಸದಂತೆ ತಪ್ಪಿಸಿಕೊಳ್ಳುತ್ತಾನೆ. ಸಾಧಾರಣ ವ್ಯಕ್ತಿ ಶರೀರ ಲೋಪದಿಂದ ನೂರುಶಾತದಷ್ಟು ಬಾಧೆಯನ್ನು ಅನುಭವಿಸಬೇಕಾಗಿ ಇರುವಾಗ! ಯೋಗಿ ಆದವನು ಕೇವಲ ಇಪ್ಪತ್ತು (20) ಶಾತವಾಗಲಿ ಅದಕ್ಕಿಂತ ಕಡಿಮೆಯಾಗಾಗಲಿ ಅನುಭವಿಸಿ ಉಳಿದಿರುವುದನ್ನು ಅನುಭವಿಸದಂತೆ ಬಾಧೆನಿವೃತ್ತಿಯನ್ನು ಹೊಂದುತ್ತಾನೆ.

ಯೋಗಿ ಶರೀರದೊಳಗೆ ಕರ್ಮಪ್ರಕಾರ ಒಂದು ರೋಗ ಬರಬೇಕೆಂದರೆ ಅದು ಯೋಗಿಯೊಂದರ ಆತ್ಮ ಅನುಮತಿಯನ್ನು ಹೊಂದಿಬರುತ್ತದೆ. ಯೋಗಿಯಲ್ಲಿನ ಆತ್ಮ ಅನುಮತಿ ಇಲ್ಲದಿದ್ದರೆ ಆ ರೋಗ ಆತನಲ್ಲಿ ಪೂರ್ತಿಯಾಗಿ ಪ್ರವೇಶಿಸುವುದಿಲ್ಲ. ಆತ್ಮ ಅನುಮತಿ ಇಲ್ಲದೇ ರೋಗ ಯೋಗಿ ಶರೀರದೊಳಗೆ ಬರುವುದಿಲ್ಲ. ಒಂದುವೇಳೆ ತಿಳಿಯದೆ ಯೋಗಿ ಶರೀರದೊಳಗೆ ರೋಗ ಪ್ರವೇಶಿಸಿದರೂ, ಅದು ತಾನು ಪ್ರವೇಶಿಸಿರುವುದು ಯೋಗಿಯೊಂದರ ಶರೀರವೆಂದು ತಿಳಿಯುತ್ತದೆ. ಹಾಗೆ ತಿಳಿಯಲ್ಪಟ್ಟ ರೋಗ ಯೋಗಿ ಶರೀರದಿಂದ ಕೆಲವು ಗಂಟೆಗಳ ವ್ಯವಧಿಯಲ್ಲಿಯೇ ತನಗೆ ತಾನಾಗಿ ಹೊರಗೆಹೋಗುತ್ತದೆ. ಈ ವಿಷಯಗಳೆಲ್ಲವೂ ನಾವು ಊಹಿಸಿಕೊಂಡು ಹೇಳುವವು ಅಲ್ಲ. ಇವು ಎಲ್ಲವೂ ಪ್ರತ್ಯಕ್ಷ ಅನುಭವವಾದವು ಮತ್ತು ಶಾಸ್ತ್ರಬದ್ಧವಾದ ವಿಷಯಗಳಾಗಿ ಇವೆಯೆಂದು ತಿಳಿಯಬೇಕು. ಯೋಗಿ ಆದವನು ಯೋಗಶಕ್ತಿ ಇರುವವನಾಗಿರುವು ದರಿಂದ, ರೋಗಗಳು ಆತನನ್ನು ಆತನಹತ್ತಿರವಿರುವ ಜ್ಞಾನವನ್ನು, ಜ್ಞಾನಶಕ್ತಿಯನ್ನು ಗೌರವಿಸಿ ಆತನಹತ್ತಿರದಿಂದ ತೊಲಗಿಹೋಗುವುದು ನಡೆಯುತ್ತದೆ. ಹಾಗದಲ್ಲದೆ

ಒಬ್ಬ ಅಜ್ಞಾನಿಗೆ ರೋಗವಿದ್ದರೂ, ಆತನು ಜ್ಞಾನವನ್ನು ತಿಳಿಯುವುದರಿಂದ ಮತ್ತು ಯೋಗಿಯೊಂದರ ಆಶೀರ್ವಾದ ಪಡೆಯುವುದರಿಂದ, ರೋಗ ಆತನಿಂದಲೂ ಕೂಡಾ ಬಿಟ್ಟುಹೋಗುತ್ತದೆ. ಇವೆಲ್ಲವೂ ಪ್ರತ್ಯಕ್ಷ ಯಥಾರ್ಥ ಸಂಘಟನೆಗಳು ಯೋಗಿ ಆದವನು ಶರೀರ ಲೋಪಗಳಿಂದ ಬಾಧಿಸಲ್ಪಡ ಬಹುದಾಗಲಿ, ರೋಗಗಳಿಂದ ಬಾಧಿಸಲ್ಪಡುವುದಿಲ್ಲ. ಯೋಗಿಗೆ ಶರೀರ ಲೋಪ ಉಂಟಾದಾಗ ಅದನ್ನು ಆಸರೆಯಾಗಿ ತೆಗೆದುಕೊಂಡು ಯೋಗಿ ಹತ್ತಿರ ಶಕ್ತಿಯಿಲ್ಲ ಎಂದು, ಶಕ್ತಿ ಎಲ್ಲವೂ ಮುಗಿದುಹೋಗಿದೆಯೆಂದು ಅಂದುಕೊಳ್ಳಬಾರದು. ಯೋಗಿ ಶಕ್ತಿಯನ್ನು ಸಂಪಾದಿಸಿಕೊಳ್ಳಬಹುದಾಗಲಿ, ಖರ್ಚುಮಾಡುವುದು ಆತನ ಕೈಯಲ್ಲಿರುವುದಿಲ್ಲ. ಆದ್ದರಿಂದ ಯೋಗಿಯತ್ತಿರ ಶಕ್ತಿ ಮುಗಿದುಹೋಗಿದೆ ಯೆಂದು ಅಂದುಕೊಳ್ಳಬಾರದು. ಶರೀರ ಲೋಪಗಳು ಯೋಗಿಗಳಿಗಾಗಲಿ, ಸಾಮಾನ್ಯ ಮನುಷ್ಯರಿಗಾಗಲಿ, ಇಬ್ಬರಿಗೂ ಸಮಾನವಾಗಿ ಇರುತ್ತದೆ. ಶರೀರ ಲೋಪಗಳನ್ನನುಸರಿಸಿ ಯೋಗಿಗಳನ್ನು ಕಡಿಮೆಯಾಗಿ ಲೆಕ್ಕಿಸಬಾರದು. ಈ ವಿಷಯವನ್ನು ಇಲ್ಲಿಗೆ ನಿಲ್ಲಿಸಿ ಮತ್ತೊಂದು ಪ್ರಶ್ನೆಯನ್ನು ನೋಡೋಣ.

**ಪ್ರಶ್ನೆ :–**, ಸೈಂಟಿಫಿಕ್ ವಿಧಾನಕ್ಕು ಯೋಗಕ್ಕು ಸಂಬಂಧವಿಲ್ಲ. ಯೋಗವನ್ನು ಮೂಢನಂಬಿಕೆ ಅನ್ನಬಹುದು. ಯೋಗ ಶಾಸ್ತ್ರಕ್ಕೆ ಸಂಬಂಧಿಸಿರುವುದೆಂದು ಯಾರೂ ಹೇಳಲಾರರು. ಶಾಸ್ತ್ರವಲ್ಲದಿರುವುದು ಮೂಢನಂಬಿಕೆಯಲ್ಲದೆ ಏನಾಗುತ್ತದೆ? (ಯೋಗವನ್ನು ಕುರಿತು ನಾಸ್ತಿಕರಾದವರು ನಾಸ್ತಿಕಯುಗ ಎಂಬ ಪತ್ರಿಕೆಯಲ್ಲಿ ಮೇ 2001 ಸಂಚಿಕೆಯಲ್ಲಿ ಹೀಗೆ ಬರೆದಿದ್ದಾರೆ. "ಯೋಗವನ್ನು ಶಾಸ್ತ್ರೀಯವಾದುದೆಂದು ಹೇಳುವವರೆಗೂ ಕೆಲವರು ಸಾಹಸಿಸುತ್ತಿದ್ದಾರೆ, ಶಾಸ್ತ್ರೀಯಪದ್ಧತಿಗೆ ಯೋಗ ಎಂದಿಗೂ ಪರೀಕ್ಷೆಗೆ ಇಡಲಿಲ್ಲ. ಸೈಂಟಿಫಿಕ್ ವಿಧಾನಕ್ಕು ಯೋಗಕ್ಕು ಸಂಬಂಧವಿಲ್ಲ. ಯೋಗ ಕೇವಲ ಮೂಢನಂಬಿಕೆ ಯಾಗಿಯೇ ಅಂದು ಇಂದು ಪ್ರಚಾರದಲ್ಲಿ ಇದೆ. ಆ ವಿಷಯದಲ್ಲಿ ಸ್ಪಷ್ಟತೆ ಅಗತ್ಯ.)

**ನಮ್ಮ ಉತ್ತರ :–** ಮೂಢನಂಬಿಕೆ ಎಂಬ ಪದವನ್ನು ಉಪಯೋಗಿಸಿದವರೆ

ಮೂಢನಂಬಿಕೆಯಿಂದ ಮಾತನಾಡುತ್ತಿದ್ದಾರೆಂದು ಅರ್ಥವಾಗುತ್ತಿದೆ. ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆಯೇ ಒಂದು ವಿಷಯವನ್ನು ವಿಮರ್ಶಿಸುವುದಕ್ಕೆ ಕೂಡಾ ಶಾಸ್ತ್ರ ಅಷ್ಟೇ ಅಗತ್ಯವೆಂದು ನಾವು ಬಹಳಸಲ ಹೇಳುತ್ತಾ ಬಂದಿದ್ದೇವೆ. ಶಾಸ್ತ್ರವೊಂದರ ಆಧಾರವಿಲ್ಲದೆ ಯೋಗವನ್ನು ಮೂಢನಂಬಿಕೆ ಎನ್ನುವುದು, ಮೂಢನಂಬಿಕೆಯಾಗಿ ಹೇಳಿದಂತೆ ಆಗುತ್ತದೆ. ಯೋಗ ಎಂದರೆ ಅರ್ಥ ತಿಳಿಯದು, ಯೋಗ ಒಂದರ ವಿಧಾನ ತಿಳಿಯದು. ಅದರ ಆಚರಣೆ ತಿಳಿಯದು. ಅದರ ಅನುಭವವನ್ನು ಎಂದಿಗೂ ಅನುಭವಿಸಿ ನೋಡಲಿಲ್ಲ. ಅಂತಹವರು ಕುರುಡರಂತೆ ಯೋಗವನ್ನು ಕುರಿತು ಏಕೆ ಮಾತನಾಡಬೇಕು? ನಿನ್ನೆ ಮೊನ್ನೆ ಕಣ್ಣುತೆರೆದವರು, ಸೈನ್ಸು ಯಾವಾಗ ಹುಟ್ಟಿದೆಯೋ ತಿಳಿಯದವರು, ಸೈನ್ಸಿನಲ್ಲಿ ಓನಮಾಗಳು ತಿಳಿದಷ್ಟುಮಾತ್ರಕ್ಕೆ ಸೈನ್ಸೆಲ್ಲಾ ತಿಳಿದಿದೆಯೆಂದುಕೊಂಡು ಮಾತನಾಡುವುದು ತಪ್ಪು. ಸಮುದ್ರವನ್ನು ದಾಟುವ ಕೊಕ್ಕರೆಯನ್ನು ನೋಡಿ, ಅಲ್ಲಿ ಇಲ್ಲಿ ಎಗರುವ ಕಾಗೆ ಅವಹೇಳನ ಮಾಡಿದಂತೆ ಯೋಗವೊಂದರ ಸಂಪೂರ್ಣತೆಯನ್ನು ತಿಳಿಯದವರು ಯೋಗವನ್ನು ಕುರಿತು ಹೇಳನವಾಗಿ ಮಾತನಾಡುವುದು ವಿವೇಕವಲ್ಲ, ಅವಿವೇಕವಾಗುತ್ತದೆ.

ಪ್ರಪಂಚದಲ್ಲಿ ಮೊದಲು ಹುಟ್ಟಿದ ವಿಜ್ಞಾನ ಯೋಗ, ಸೃಷ್ಠಿಆದಿಯಲ್ಲಿ ದೇವರಿಂದಲೇ ಹೇಳಲ್ಪಟ್ಟ ಮೊಟ್ಟಮೊದಲ ಶಾಸ್ತ್ರ ಯೋಗಕ್ಕೆ ಸಂಬಂಧಿಸಿದ ಬ್ರಹ್ಮವಿದ್ಯಾಶಾಸ್ತ್ರ. ಶಾಸ್ತ್ರವನ್ನು ಸೈನ್ಸು ಎಂದೂ, ವಿಜ್ಞಾನವೆಂದೂ ಹೇಳಬಹುದು. ಮೊದಲು ಹುಟ್ಟಿದ ಸೈನ್ಸುನಂತರ, ಉಳಿದ ಸೈನ್ಸುಗಳು (ಶಾಸ್ತ್ರಗಳು) ಹೊರಗೆ ಬಂದಿವೆ. ಹಾಗೆ ಬಂದಿರುವ ಐದು ಶಾಸ್ತ್ರಗಳಿಗಿಂತ ಮುಂಚೆ ಹುಟ್ಟಿರುವುದು ಬ್ರಹ್ಮವಿದ್ಯಾಶಾಸ್ತ್ರ ಎಂಬುವ ಯೋಗಶಾಸ್ತ್ರ, ಅಂಥಹ ಯೋಗಶಾಸ್ತ್ರವನ್ನು ಸೈನ್ಸು ಅಲ್ಲವೆಂದು ಮೂಢನಂಬಿಕೆಯೆಂದು ಹೇಗೆ ಹೇಳುತ್ತಿದ್ದಾರೆ. ಕೇಳುವವರು ಇಲ್ಲವೆಂದು, ನಾವು ಚೆನ್ನಾಗಿ ಓದಿಕೊಂಡಿದ್ದೇವೆಯೆಂದು ಇಷ್ಟಬಂದಂತೆ ಮಾತನಾಡುವುದಕ್ಕಿಂತ, ನಿಮಗೆ ತಿಳಿದ ಸೈನ್ಸು ಮೂಲಕ ಯೋಗ ಶಾಸ್ತ್ರವಲ್ಲವೆಂದು ನಿರೂಪಿಸುತ್ತೀರಾ? ಒಬ್ಬ ಮನುಷ್ಯ ಮರಣಿಸಿದ ನಂತರ ಅವನನ್ನು ಭೂಮಿಯಲ್ಲಿ

ಹೂತಿಟ್ಟ ನಾಲ್ಕುದಿನಗಳ ನಂತರ, ಶವವನ್ನು ಹೊರಗೆ ತೆಗೆದು ಶವಪರೀಕ್ಷೆಗೆ ಆಸ್ಪತ್ರೆಗೆ ತೆಗೆದುಕೊಂಡುಹೋಗಿ, ಪರೀಕ್ಷೆ ಮೊದಲುಮಾಡಿ ಒಂದು ಏಟು ಹೊಡೆಯುತ್ತಲೇ, ಶವವಾಗಿರುವವನು ಎದ್ದು ಸಜೀವವಾಗಿ ಕುಳಿತುಕೊಂಡರೆ ಅವನು ಹೇಗೆ ಬದುಕಿದ್ದಾನೊ ಹೇಳಲಾರದ ನೀವು ಸೈನ್ಸೆಂಬ ಮಾತನ್ನು ಮಾತನಾಡಲೇಬಾರದು. ಒಂದುಕಡೆ ಮರಣಿಸಿದ ಶವದಮೇಲಿನ ಒಡವೆಯನ್ನು ತೆಗೆದುಕೊಳ್ಳುವುದಕ್ಕೆ ಹೂತಿಟ್ಟ ಶವವನ್ನು ಹೊರಗೆ ತೆಗೆದ ಕಳ್ಳರು ಶವದ ಮೇಲಿನ ಉಂಗುರಗಳನ್ನು, ಚೈನನ್ನು ತೆಗೆದುಕೊಳ್ಳುತ್ತಿರುವಾಗ ಶವ ಬದುಕಿದ ಸಂಘಟನೆಗೆ, ಅದು ಹೇಗೆ ನಡೆದಿದೆ? ಮರಣಿಸಿ ಶವವಾಗಿ ಹೂತಿಟ್ಟ ನಂತರ ಶವ ಹೇಗೆ ಸಜೀವವಾಗಿ ಎದ್ದಿದೆ? ಎಂಬ ಪ್ರಶ್ನೆಗಳಿಗೆ ಯಾವ ಉತ್ತರ ಹೇಳದಿರುವುದು ನೀವು ತಿಳಿದುಕೊಂಡ ಭೌತಿಕ ಸೈನ್ಸು! ನೀವು ಕಲಿತುಕೊಂಡ ಸೈನ್ಸಿನಲ್ಲಿ ಇಲ್ಲದ ವಿಜ್ಞಾನ ಯೋಗಶಾಸ್ತ್ರದಲ್ಲಿ ಇದೆ. ಯೋಗಶಾಸ್ತ್ರದಲ್ಲಿ ಮರಣಿಸಿದವನು ಪುನಃ ಬದುಕಿರುವುದಕ್ಕೆ ವಿವರವನ್ನು ಮುಂಚೆಯೇ ಹೇಳಲ್ಪಟ್ಟಿರುವಾಗ, ಉತ್ತರ ಹೇಳದಿರುವವರದು ಸೈನ್ಸು ಆದಾಗ ಉತ್ತರ ಹೇಳಲ್ಪಡುವುದು ಸೈನ್ಸು ಅಲ್ಲವಾ? ನಿಜಕ್ಕೆ ಒಂದು ಸಂಘಟನೆಗೆ ವಿವರಣೆ ಕೊಡದಿರುವುದು ಸೈನ್ಸು ಅಲ್ಲವೇಅಲ್ಲ. ವಿವರಣೆ ಕೊಡುವುದೆ ಅಸಲಾದ ಸೈನ್ಸು. ಆ ಲೆಕ್ಕ ಪ್ರಕಾರ ಮರಣಿಸಿದವನು ಪುನಃ ಹೇಗೆ ಏಳುತ್ತಾನೊ ಮೊದಲೇ ಆ ವಿವರಣೆ ಯೋಗಶಾಸ್ತ್ರಕ್ಕೆ ಸಂಬಂಧಿಸಿರುವ **"ಮರಣ ರಹಸ್ಯ"** ಎಂಬ ಗ್ರಂಥದಲ್ಲಿ ಹೇಳಲಾಗಿದೆ. **"ಮರಣ ರಹಸ್ಯ"** ಎಂಬ ಗ್ರಂಥದಲ್ಲಿ ಹೇಳಿದಂತೆ ಅನೇಕ ಸಂಘಟನೆಗಳು ನಡೆದಿವೆ. ಅವುಗಳಿಗೆಲ್ಲ ಸೂತ್ರವಾದ ವಿವರಣೆ ಯೋಗಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥದಲ್ಲಿ ವಿವರಿಸಿದ ಸೂಪರ್ ಸೈನ್ಸು ತಿಳಿದವರಿರುವಾಗ, ಸಾಮಾನ್ಯ ಸೈನ್ಸು ತಿಳಿದವರು ತಿಳಿದು ತಿಳಿಯದೆ ಮಾತನಾಡಿದರೆ ಅದು ತಿಳುವಳಿಕೆಯಿಲ್ಲದ ಕೆಲಸ ಆಗುತ್ತದೆ.

ನಾವು ಸ್ವತಃವಾಗಿ ಹೈದರಾಬಾದ್‌ನಲ್ಲಿ ಆಂಧ್ರಪ್ರದೇಶ್ ನಾಸ್ತಿಕ ಸಂಘದಲ್ಲಿ ಹೆಸರುವಾಸಿಯಾದ ಕನ್ನಯ್ಯ ಎಂಬ ವ್ಯಕ್ತಿಯನ್ನು ಬೇಟಿಯಾಗಿ ಮಾತುಗಳ

ಸಂದರ್ಭದಲ್ಲಿ ಶಾಸ್ತ್ರಗಳು ಎಷ್ಟು ಎಂದು ಪ್ರಶ್ನಿಸಿದ್ದೇನೆ. ಆತನು ಮೊದಲು ಎರಡು ಎಂದು ಹೇಳಿ ನಂತರ ಮೂರು ಅಂದಿದ್ದಾನೆ. ದ್ವಾಪರ ಯುಗದಲ್ಲಿ ಕೊನೆಯಲ್ಲಿಯೇ ಆರುಶಾಸ್ತ್ರಗಳು ಬರೆಯಲ್ಪಟ್ಟಿರುವಾಗ, ಇಂದಿಗೂ ಅವುಗಳ ಸಂಖ್ಯೆ ಕೂಡಾ ತಿಳಿಯದವರಹತ್ತಿರ ಎಷ್ಟರಮಟ್ಟಿಗೆ ಶಾಸ್ತ್ರೀಯತೆ ಇರುತ್ತದೊ ಊಹಿಸಬಹುದು. ಕೆಲವುಕಡೆ ಸೈನ್ಸೆಂದು, ಕೆಲವುಕಡೆ ಶಾಸ್ತ್ರವೆಂದು ಮಾತನಾಡುವ ವರಿಗೆ ಶಾಸ್ತ್ರಗಳು ಎಷ್ಟೋ ತಿಳಿಯದು. ಸೈನ್ಸು ಎಷ್ಟೋ ತಿಳಿಯದು. ಅಂತಹ ಇವರು ಸೈನ್ಸು ಹೆಸರನ್ನು, ಶಾಸ್ತ್ರದ ಹೆಸರನ್ನು ಹೇಳಿಕೊಳ್ಳುತ್ತಾ ಅಡ್ಡ ಮಾತನಾಡುವುದು ಹೊರತು ಅವರಹತ್ತಿರ ವಿಜ್ಞಾನ ಏನು ಇರುವುದಿಲ್ಲ. ಇಂಥಹವರು ಯಾರಾದರೂ ಅಭೌತಿಕವನ್ನಾಗಲಿ, ಅತೀಂದ್ರಿಯಶಕ್ತಿಗಳನ್ನಾಗಲಿ ನಿರೂಪಿಸಿದರೆ ಐದುಕೋಟಿ ಕೊಡುತ್ತೇವೆಂದು ದೇವರನ್ನು ತೋರಿಸಿದರೆ ಹತ್ತುಕೋಟಿ ಕೊಡುತ್ತೇವೆಂದು ಪ್ರಕಟಣೆಗಳನ್ನು ಕೊಟ್ಟು ಅವರ ಪೋಟಿಗೆ ಯಾರೂ ಹೋಗದಿದ್ದರೆ ನಾವೇ ಗೆದ್ದಿದ್ದೇವೆ, ನಮಗೆ ಸರ್ವಸ್ವವು ಗೊತ್ತು ಅನ್ನುತ್ತಿರುತ್ತಾರೆ. ಮೆತ್ತಗಿರುವ ಕಲ್ಲನ್ನು ತೋರಿಸಿದರೆ ಎಷ್ಟಾದರೂ ಕೊಡುತ್ತೇನೆಂಬು ವಂತೆ ಅವರ ಪ್ರಕಟಣೆ ಇದೆಯೆಂದು ಅವರಿಗೆ ತಿಳಿಯದು. ದೇವರಾಗಲಿ, ಅಭೌತಿಕವಾಗಲಿ ಇಂದ್ರಿಯಶಕ್ತಿಗಳಾಗಲಿ ಕಾಣಿಸುವವಲ್ಲ. ಕಾಣಿಸದಿರುವವುಗಳನ್ನು ತೋರಿಸೆಂದರೆ ಅವರಿಗೆ ಯಾರು ತೋರಿಸುತ್ತಾರೆ. ಅವರು ಹೇಗೆ ನೋಡುತ್ತಾರೆ. ಆ ಪ್ರಕಟಣೆಯನ್ನು ನೋಡುತ್ತಲೇ ಅದು ತಿಳುವಳಿಕೆಯಿಲ್ಲದ ಪ್ರಕಟಣೆ ಎಂದು ಅರ್ಥವಾಗುತ್ತದೆ. ಅಂತಹ ಪ್ರಕಟಣೆಗಳನ್ನು ಕೊಟ್ಟು ನಮಗೆ ಪೋಟಿಗೆ ಯಾರೂ ಬಾರಲಾರರೆಂದು, ನಮ್ಮ ವಾದನೆಗೆ ಯಾರೂ ನಿಲ್ಲಲಾರರೆಂದು ಮಾತುಗಾರಿಕೆ ಯಿಂದ ಮಾತನಾಡುವವರಿಗೆ ನಾವು ಕೂಡಾ ಪ್ರಕಟಣೆ ಕೊಡುತ್ತಿದ್ದೇವೆ. ಗರ್ಭದಲ್ಲಿಯೇ ಶಿಶುವು ಮರಣಿಸಿದ್ದಾನೆಂದು ಡಾಕ್ಟರ್ಸ್ ಹೇಳಿದ ನಂತರ ಗಂಟೆಗೆ, ಎರಡು ಗಂಟೆಗಳಿಗೆ ಪ್ರಾಣದಿಂದ ಕದಲಿದ ಶಿಶುಗಳು ಇದ್ದಾರೆ. ಅದಕ್ಕೆ ಸೈಂಟಿಫಿಕ್ ವಿವರಣೆ ಕೊಡಬಲ್ಲಿರಾ? ಹಾಗೆಯೇ ಮರಣಿಸಿದ್ದಾನೆಂದು ಆಸ್ಪತ್ರೆಯಲ್ಲಿ ಡಾಕ್ಟರ್ಸ್ ನಿರ್ಧಾರಣೆ ಮಾಡಿದ ನಂತರ, ಆ ಶವವನ್ನು ತೆಗೆದುಕೊಂಡು ಹೋಗಿ ಹೂತಿಟ್ಟ ನಂತರ ಮೂರು ದಿನಗಳಿಗೆ ಶವವನ್ನು ಹೊರಗೆ ತೆಗೆದರೆ, ಆ

ಶವವು ಪುನಃ ಪ್ರಾಣದಿಂದ ಎದ್ದ ಸಂಘಟನೆಗಳು ಇವೆ. ಅದಕ್ಕೆ ಸೈನ್ಸ್ ಪ್ರಕಾರ ವಿವರಣೆ ಕೊಡಬಲ್ಲಿರಾ? ನೀವು ಸರಿಯಾದ ವಿವರಣೆ ಕೊಟ್ಟರೆ ನಾವು ಕೂಡಾ ಕೋಟಿ ರೂಪಾಯಿಗಳು ಬಹುಮತಿಯಾಗಿ ಕೊಡುತ್ತೇವೆ. ಸಾವಿರ ವರ್ಷಗಳಿಗೂ ಕೂಡಾ ವಿವರಣೆ ಕೊಡಲಾರರು. ಅದಕ್ಕೆ ವಿವರಣೆ ಕೊಡಬೇಕೆಂದರೆ ಮೊದಲನೆಯದಾದ ಬ್ರಹ್ಮವಿದ್ಯಾಶಾಸ್ತ್ರ ತಿಳಿದಿರಬೇಕು. ಬ್ರಹ್ಮವಿದ್ಯಾಶಾಸ್ತ್ರ ಪೂರ್ತಿಯಾಗಿ ಜ್ಞಾನಿಗಳಿಗೆ ತಿಳಿಯದಿರುವಾಗ ವಿಜ್ಞಾನಿಗಳೆಂದು ಹೆಸರು ಇಟ್ಟುಕೊಂಡವರಿಗೆ ಹೇಗೆ ತಿಳಿಯಬಲ್ಲದು?

ಯೋಗ ಎಂದರೆ ಸೇರುವಿಕೆ ಎಂದು ಅರ್ಥ. ಯಾವುದರ ಸೇರುವಿಕೆ? ಯಾವುದರೊಂದಿಗೆ (ಕೂಡಿಕೆ) ಕಲೆಯಿಕೆ? ಎಂಬ ಪ್ರಶ್ನೆಗಳಿಗೆ ಜೀವಾತ್ಮ ಸೇರುವಿಕೆ ಎಂದೂ, ಜೀವಾತ್ಮ ಆತ್ಮದೊಂದಿಗೆ ಸೇರುವಿಕೆ ಎಂದು ತಿಳಿಯುತ್ತಿದೆ. ಮನುಷ್ಯನಲ್ಲಿ ನಾನು ಎಂಬ ಭಾವನೆ ಇರುವವನೆ ಜೀವಾತ್ಮವಾಗಿದ್ದು, ಶರೀರದಲ್ಲಿ ಎಲ್ಲಾಕಡೆ ವ್ಯಾಪಿಸಿ ಶರೀರದೊಳಗೆ ಅವಯವಗಳಲ್ಲಿಯೂ, ಶರೀರವೊಂದರ ಹೊರಗಿನ ಅವಯವಗಳಲ್ಲಿಯೂ ಆತ್ಮ ಕೆಲಸ ಮಾಡುತ್ತಿದೆ. ಶರೀರದಲ್ಲಿ ಒಂದುಕಡೆ ಒಂದು ಬಿಂದುವಾಗಿ ಜೀವಾತ್ಮ ಇರುವಾಗ, ಆತ್ಮ ಶರೀರವೆಲ್ಲಾ ವ್ಯಾಪಿಸಿ ಎಲ್ಲಾ ಕೆಲಸಗಳು ಮಾಡುತ್ತಿದೆ. ಯಾವ ಕೆಲಸವನ್ನು ಮಾಡದ ಜೀವಾತ್ಮ ಆತ್ಮದೊಂದಿಗೆ ಬೆರೆತುಹೋಗುವುದನ್ನು ಯೋಗ ಅನ್ನುತ್ತಿದ್ದೇವೆ. ಯೋಗ ಎಂಬುದು ಎಷ್ಟೊ ಧರ್ಮಗಳಿಂದ ಕೂಡಿಕೊಂಡಿರುವುದಾಗಿ, ಯೋಗಶಕ್ತಿ ಎಂಬ ಫಲಿತವನ್ನು ಕೊಡುವುದಾಗಿರುವಾಗ, ಯೋಗವನ್ನು ಅಶಾಸ್ತ್ರೀಯವೆನ್ನುವುದು ಪೂರ್ತಿ ಅಜ್ಞಾನವಾಗುತ್ತದೆ. ಆ ಮಾತೆನ್ನುವುದೆ ಅಶಾಸ್ತ್ರೀಯ ಎಂದು ಹೇಳಬಹುದು. ಪ್ರಪಂಚದಲ್ಲಿ ವಿಜ್ಞಾನವನ್ನು ತಿಳಿಯಬೇಕೆಂದರೆ ಕೆಲವು ವರ್ಷಗಳು ಹಿಡಿಯುತ್ತದೆ. ಶರೀರದಲ್ಲಿ ನಡೆಯುವ ಯೋಗವನ್ನು ತಿಳಿಯಬೇಕೆಂದರೆ ಜೀವನಕಾಲ ಹಿಡಿಯುತ್ತದೆ. ಅಂಥಹದರಲ್ಲಿ ಯಾವುದು ದೊಡ್ಡದೋ ಸುಲಭವಾಗಿ ಹೇಳಬಹುದು. ಎಷ್ಟೋ ಸೂತ್ರಗಳಿಂದ ಕೂಡಿಕೊಂಡಿರುವುದು, ತಿಳಿಯುವುದಕ್ಕೆ ಎಷ್ಟೋಕಾಲ ಹಿಡಿಯುವುದಾದ

ಯೋಗವನ್ನು ಅಶಾಸ್ತ್ರ ಎನ್ನುವುದು ಪೂರ್ತಿ ತಪ್ಪು. ಆರೋಗ್ಯ ಆಸನಗಳು ಯೋಗಗಳು ಅಲ್ಲ. ನಿಜವಾದ ಯೋಗ ಶಾಸ್ತ್ರಕ್ಕೆ ಸಂಬಂಧಿಸಿದೆ.

**ಪ್ರಶ್ನೆ :–** ಪೂನಕಗಳು (ದೆವ್ವ ಆವಹಿಸುವುದು) ಏಕೆ ಬರುತ್ತವೆ? ದೇವತೆಗಳು, ದೆವ್ವಗಳು ಮೂಢನಂಬಿಕೆ ಅಲ್ಲವೆ?

**ಉತ್ತರ :–** ಆ ಪ್ರಶ್ನೆಯನ್ನು ಕೇಳುವುದು ಎಲ್ಲರಿಗೂ ಹಕ್ಕಾಗಿ ಇದೆ. ದೆವ್ವಗಳನ್ನು ದೇವತೆಗಳನ್ನು ಕುರಿತು ಏನು ತಿಳಿಯದವರು ಕೂಡಾ ಈ ಪ್ರಶ್ನೆಯನ್ನು ಕೇಳುತ್ತಿರುತ್ತಾರೆ. ಇದಕ್ಕೆ ಉತ್ತರ ಹೇಳುವವನು ಎಷ್ಟು ಕಷ್ಟಪಟ್ಟು ಹೇಳಿದರೂ, ಕೇಳುವವನು ನಾನು ನಂಬುವುದಿಲ್ಲ ಎಂಬ ಮಾತಿನಿಂದ ಹೇಳಿದವನ ಮಾತನ್ನು ಸುಲಭವಾಗಿ ಹೊಡೆದುಹಾಕುತ್ತಾರೆ. ಅನಾದಿಯಿಂದ ದೆವ್ವಗಳನ್ನೂ, ದೇವತೆಗಳನ್ನೂ ನಂಬದಿರುವವರು ಇದ್ದಾರೆ. ಹಾಗೆಯೇ ಅವುಗಳನ್ನು ಕುರಿತು ಹೇಳುವವರೂ ಇದ್ದಾರೆ. ದೆವ್ವಗಳನ್ನು ಕುರಿತು ಮೊದಲು ತಿಳಿದುಕೊಂಡರೆ, ನಂತರ ದೇವತೆಗಳನ್ನು ಕುರಿತು ಅರ್ಥವಾಗುತ್ತದೆ. ಜೀವವಿರುವ ಮನುಷ್ಯನನ್ನು ಎರಡು ಭಾಗಗಳಾಗಿ ವಿಭಜಿಸಬಹುದು. ಮನುಷ್ಯ ಸ್ಥೂಲಶರೀರ, ಸೂಕ್ಷ್ಮಶರೀರ ಎಂಬ ಎರಡು ವಿಧಗಳ ಶರೀರಗಳಲ್ಲಿ ನಿವಾಸಿಸುತ್ತಿದ್ದೇನೆ. ಸ್ಥೂಲ ಶರೀರ 10 ಭಾಗಗಳು ಇರುವಾಗ, ಸೂಕ್ಷ್ಮಶರೀರ ಜೀವಿಯೊಂದಿಗೆ 15 ಭಾಗಗಳಾಗಿ ಇದೆ. ಹತ್ತು ಸ್ಥೂಲ ಭಾಗಗಳು, ಹದಿನೈದು ಸೂಕ್ಷ್ಮ ಭಾಗಗಳು ಬೆರೆತಿರುವಾಗ ಮನುಷ್ಯ ಸಜೀವವಾಗಿ ಇರುತ್ತಾನೆ. ಹತ್ತು ಸ್ಥೂಲ ಭಾಗಗಳ ಶರೀರವುಹೋಗಿ ಹದಿನೈದು ಭಾಗಗಳು ಉಳಿದುಹೋದಾಗ ಅವನನ್ನು ಅಕಾಲ ಮರಣ ಹೊಂದಿದಂತೆ ಹೇಳುತ್ತಿರುತ್ತಾರೆ. ಅಕಾಲಮರಣ ಹೊಂದಿದವನು ಕಾಣಿಸುವ ಸ್ಥೂಲಶರೀರ ವಿಲ್ಲದೆ ಸೂಕ್ಷ್ಮಶರೀರದೊಂದಿಗೆ ಇರುತ್ತಾನೆ. ಅಂತಹ ಸೂಕ್ಷ್ಮ ಶರೀರದೊಂದಿಗೆ ಜೀವಿಸಿರುವವನನ್ನು ಮನುಷ್ಯ ಅನ್ನದಂತೆ, ಅವನನ್ನು ದೆವ್ವ ಅನ್ನುತ್ತಿದ್ದೇವೆ. ಸ್ಥೂಲ ಶರೀರ ಇಲ್ಲದಿರುವವನು ಕಾಣಿಸುವುದಿಲ್ಲ ಆದ್ದರಿಂದ ಅವನನ್ನು ಮರಣಿಸಿದಂತೆ ಲೆಕ್ಕಿಸಿ, ದೆವ್ವವಾಗಿ ಬದಲಾಗಿಹೋಗಿದ್ದಾನೆಂದು ಹೇಳುತ್ತಿರುತ್ತಾರೆ. ಪೂರ್ತಿಯಾಗಿ ಮರಣಿಸದೆ ಅಕಾಲಮರಣ ಎಂಬ ಅರ್ಥ

ಶರೀರಕ್ಕೆ ಮರಣಹೊಂದಿ, ಉಳಿದ ಅರ್ಧ ಶರೀರದೊಂದಿಗೆ ಕಾಣಿಸದೆ ಇರುವುದರಿಂದ, ಅವನನ್ನು ದೆವ್ವದ ಕೆಳಗೆ ಜಮಕಟ್ಟಿ ಅವನನ್ನು ದೆವ್ವವೆಂದೇ ಹೇಳುತ್ತಾರೆ. ಅಂತಹವನನ್ನು ದೆವ್ವ ಅಂದರೂ ಅವನು ಸಾಮಾನ್ಯ ಕಾಣಿಸದ ಮನುಷ್ಯನೆ.

ಗುಡಿಯಲ್ಲಿನ ದೇವತೆಗಳು ಪ್ರತಿಮೆಯಲ್ಲಿರುವವರೆಗೂ ಸ್ಥೂಲಶರೀರ ಹೊಂದಿರುತ್ತಾರೆ. ಪ್ರತಿಮೆಯಿಂದ ದೇವತೆ ಹೊರಗೆ ಬಂದಾಗ ಆ ದೇವತೆ ಕೂಡಾ ದೆವ್ವವೇ ಆಗುತ್ತದೆ. ಸೂಕ್ಷ್ಮಶರೀರವನ್ನು (ಕಾಣಿಸದ ಶರೀರವನ್ನು) ಧರಿಸಿದ ದೇವತೆ ಕೂಡಾ ದೆವ್ವವೇ ಆಗುತ್ತದೆ. ಪ್ರತಿಮೆಯಲ್ಲಿರುವವರೆಗೂ ದೇವತೆ ಆದರೆ, ಪ್ರತಿಮೆಯಿಂದ ಹೊರಗೆ ಬಂದನಂತರ ದೆವ್ವವಾಗುತ್ತದೆ. ಹಾಗೆಯೇ ಮನುಷ್ಯನ ಶರೀರದಲ್ಲಿ ಜೀವಿಯು ಇರುವವರೆಗೂ ಮನುಷ್ಯನೆ ಆಗುತ್ತಾನೆ. ಶರೀರದಿಂದ ಹೊರಗೆಬಂದ ಮನುಷ್ಯ ದೆವ್ವವಾಗಿ ಕರೆಯಲ್ಪಡುತ್ತಾನೆ. ಲೆಕ್ಕಪ್ರಕಾರ ಮನುಷ್ಯನಾಗಲಿ, ದೇವತೆಯಾಗಲಿ ಸ್ಥೂಲಶರೀರವನ್ನು ಬಿಟ್ಟ ನಂತರ ದೆವ್ವವಾಗಿಯೇ ಕರೆಯಲ್ಪಡುತ್ತಾರೆ. ಆಗ ದೇವತೆಯ ದೆವ್ವವಾಗಲಿ, ಮನುಷ್ಯನ ದೆವ್ವವಾಗಲಿ ಎರಡೂ ಸಮಾನವೇ ಆಗುತ್ತದೆ. ದೆವ್ವಗಳಾಗಿರುವವರು ಬದುಕಿರುವ ಇತರರ ಶರೀರದೊಳಗೆ ಪ್ರವೇಶಿಸಿ ಮಾತನಾಡಿದಾಗ, ದೆವ್ವ ಬಂದಿದೆಯೆಂದು ಹೇಳುತ್ತಾರೆ. ಅರ್ಧ ಮರಣಿಸಿದರೆ ಮನುಷ್ಯನಾಗಲಿ, ದೆವ್ವವೇ ಆಗುತ್ತದೆ. ದೆವ್ವವಾಗಿರುವ ಮನುಷ್ಯನಾಗಲಿ, ಪ್ರತಿಮೆಯಿಂದ ಹೊರಗೆ ಬಂದ ದೇವತಾ ದೆವ್ವವಾಗಲಿ ಇತರರೊಳಗೆ ಸೇರುವುದನ್ನು ಪೂನಕ ಎನ್ನುತ್ತೇವೆ. ಈ ವಿಷಯ ತಿಳಿಯದಿರುವಾಗ ಯಾರಿಗಾದರೂ ಇದು ಮೂಢನಂಬಿಕೆಯಾಗಿ ಕಾಣಿಸುತ್ತದೆ. ಪೂರ್ತಿ ತಿಳಿಯಲ್ಪಟ್ಟರೆ ಯದಾರ್ಥಸತ್ಯವೆಂದು ತಿಳಿಯುತ್ತದೆ. ಮನುಷ್ಯನಾಗಲಿ, ದೇವತೆಯಾಗಲಿ ಭೌತಿಕವಾಗಿ ಸ್ವಲ್ಪ ಅಭೌತಿಕವಾಗಿ ಸ್ವಲ್ಪ ಇದೆಯೆಂದು ತಿಳಿಯಲ್ಪಟ್ಟಾಗ ಪೂನಕಗಳು, ದೆವ್ವಗಳು ಅಸತ್ಯ ಅಲ್ಲವೆಂದು ತಿಳಿಯುತ್ತದೆ. ಅಲ್ಲಿಯವರೆಗೂ ಯಾರಿಗಾದರೂ ಈ ವಿಷಯ ಮೂಢನಂಬಿಕೆಯಾಗಿಯೇ ಕಾಣಿಸುತ್ತಿರುತ್ತದೆ.

**ಪ್ರಶ್ನೆ :–** ಪುನರ್ಜನ್ಮಗಳು ಎಂಬಮಾತು ವಾಸ್ತವವಾ? ಕರ್ಮಪ್ರಕಾರ ಪುನರ್ಜನ್ಮಗಳು ಇವೆಯೆಂದು ಕೆಲವರು ಅನ್ನುತ್ತಿದ್ದಾರೆ. ಹಾಗಾದರೆ ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದು ಎಲ್ಲಿ ಯಾರೂ ನಮೋದಿಸುತ್ತಾರೆ? ಅದನ್ನನುಸರಿಸಿ ಫಲಿತವು ನಿರ್ಣಯಿಸುವ ತೀರು ಹೇಗೆ ಇರುತ್ತದೆ? ನಿರ್ಣಯಗಳು ಯಾರು ತೆಗೆದುಕೊಂಡರೂ ಅವುಗಳನ್ನು ಜಾರಿ ಮಾಡುವುದುಹೇಗೆ? ಅಂದರೆ ಗತಕಾಲದಲ್ಲಿ ಮಾಡಿರುವ ಕೆಲಸಗಳಿಗೆ ಬರುವ ಜನ್ಮದಲ್ಲಿ ಇಂತಹ ಮನುಷ್ಯನಾಗಿ ಹುಟ್ಟಬೇಕೆಂದು ನಿರ್ಣಯಿಸಿದರೆ, ಅದುಹೇಗೆ ಅಮಲಾಗುತ್ತದೆ? ಭೂಕಂಪದಲ್ಲಿ ಸಾವಿರಾರುಜನ ಮರಣಿಸುವುದು ಕರ್ಮದಿಂದಲಾ? ಟೆರ್ರರಿಸ್ಟರು ಕೆಲವರನ್ನು ಸಾಯಿಸುವುದು ಕರ್ಮ ಸಿದ್ಧಾಂತವಾ? ಕರ್ಮವನ್ನು ಹಿಂದಾಕಿಕೊಂಡು ಬರುವ ನಿಮ್ಮಂತವರು ಇವುಗಳಿಗೆ ಸಮಾಧಾನ ಹೇಳುತ್ತೀರಾ?

ಪುನರ್ಜನ್ಮಗಳು ಕರ್ಮಪ್ರಕಾರ ಬರುತ್ತವೆಂದು ಕೆಲವರು ನಂಬಿದರೂ, ಉತ್ತರೊತ್ತರಾ ಜನ್ಮಗಳಿಗೆ ತಕ್ಕಾದ ದೇಹಗಳನ್ನು ಹೇಗೆ ಹುಡಿಕಿ ತರುತ್ತಾರೊ ಹೇಳಲಾರದೆಹೋಗುತ್ತಿದ್ದಾರೆ. ಗುಂಪು ಹತ್ಯಗಳು, ಭೂಕಂಪಗಳು ನ್ಯಾಯವಾಗಿ ಕರ್ಮಪ್ರಕಾರ ಸಂಭವಿಸಿವೆಯೆಂದು ಹೇಳುತ್ತೀರಾ? ಹಾಗಾದರೆ ಕೋಟ್ಯಾಂತರ ಯೂದುರರನ್ನು ನಾಜೀರರು ಹತಮಾಡುವುದು ಕರ್ಮಪ್ರಕಾರ ನ್ಯಾಯವೆನ್ನುತ್ತೀರಾ?

**ನಮ್ಮ ಉತ್ತರ :–** ಕರ್ಮಗಳನ್ನು ಯಾರು ನಮೊದಿಸುತ್ತಿದ್ದಾರೆ? ಯಾರು ಜಾರಿ ಮಾಡುತ್ತಿದ್ದಾರೆ? ಯಾರು ಫಲಿತವನ್ನು ನಿರ್ಣಯಿಸುತ್ತಿದ್ದಾರೆ? ಎಂಬ ಪ್ರಶ್ನೆಗಳಿಗೆ ಉತ್ತರ ಹೇಳುತ್ತೀರಾ? ಎಂದು ಕೇಳಿರುವುದಕ್ಕೆ ನಮಗೆ ಒಂದುಬಾರಿ ನಗುವು ಬಂದಿದೆ. ಈ ಪ್ರಶ್ನೆಗಳಿಗೆ ಎಷ್ಟೋಬಾರಿ ಉತ್ತರಗಳು ಹೇಳಿದ ನಮಗೆ ಏನು ತಿಳಿಯದ ಪುಟ್ಟಕಂದನು ನಮ್ಮ ಮುಂದಕ್ಕೆಬಂದು ಅಮಾಯಕವಾಗಿ ಕೇಳಿದಂತಿದೆ. ಅವರು ಕೇಳಿದ ಪ್ರಶ್ನೆಗಳಿಗೆ, ಕೇಳದ ಪ್ರಶ್ನೆಗಳಿಗು ನಮ್ಮ ಹತ್ತಿರ ಉತ್ತರಗಳು ಸಂಸಿದ್ಧವಾಗಿ ಇವೆ. ಕರ್ಮಹಿಂದೆ ನಡೆಯುವ ತತಂಗವೆಲ್ಲಾ

ನಮಗೆ ಸುಲಭವಾಗಿ ತಿಳಿದಿದೆ. ಆ ವಿಷಯವು ಅವರಿಗೆ ತಿಳಿಯದೆ ಇದಕ್ಕೆ ಉತ್ತರ ಹೇಳಲಾರರೆಂಬ ಭಾವನೆಯಿಂದ ಪ್ರಶ್ನೆಗಳನ್ನು ಕೇಳುವುದು ನಮಗೆ ವಿಚಿತ್ರವಾಗಿ, ಅಮಾಯಕವಾಗಿ ಕಾಣಿಸಿದೆ. ಈಗ ಅವರು ಕೇಳಿದ ಎಲ್ಲಾ ಪ್ರಶ್ನೆಗಳಿಗು ಸಾಲಾಗಿ ಉತ್ತರವನ್ನು ಹೇಳುತ್ತೇನೆ ನೋಡಿರಿ. ಮೊದಲ ಪ್ರಶ್ನೆ ಕರ್ಮವನ್ನು ಯಾರು ನಮೊದಿಸುತ್ತಾರೆ? ಅದಕ್ಕೆ ಉತ್ತರ ಏನೆಂದರೆ! ಯಾರ ಶರೀರದಲ್ಲಿನ ಕರ್ಮವನ್ನು ಅವನ ಶರೀರದಲ್ಲಿರುವ ಆತ್ಮವೇ ನಮೋದಿ ಸುತ್ತದೆಯೆಂದು ಹೇಳಬಹುದು. ಯಾರು ಜಾರಿ ಮಾಡುತ್ತಾರೆ? ಎಂಬ ಪ್ರಶ್ನೆಗೆ ಉತ್ತರವಾಗಿ ಶರೀರದಲ್ಲಿ ಅಣುವಣುವಿನಲ್ಲಿ ವ್ಯಾಪಿಸಿ, ಶರೀರಕ್ಕೆ ಅಧಿಪತಿ ಯಾಗಿರುವ ಆತ್ಮವೇ ಕರ್ಮವನ್ನು ಜೀವಿಯು ಅನುಭವಿಸುವಂತೆ ಶರೀರದಲ್ಲಿ ಜಾರಿಮಾಡುತ್ತಾನೆ ಎಂದು ಹೇಳಬಹುದು. ಸಜೀವವಾದ ಶರೀರದಲ್ಲಿನ ಆತ್ಮವೊಂದರ ಪಾತ್ರ ಏನು? ಎಂದು ತಿಳಿಯದಿದ್ದರೆ ಒಂದು ಪ್ರಶ್ನೆಗೂ ಸಹಾ ಉತ್ತರ ಸಿಗುವುದಿಲ್ಲ. ಶರೀರದಲ್ಲಿ ಆತ್ಮ ಎಲ್ಲಾ ಕೆಲಸಗಳೂ ಮಾಡುತ್ತಾ ಶರೀರಕ್ಕೆ ಅಧಿಪತಿಯಾಗಿ ಇದೆಯೆಂದು ತಿಳಿಯದೆ ಹೋದರೆ ಪ್ರಯೋಜನೆ ಇರುವುದಿಲ್ಲ, ಉತ್ತರಗಳು ಸಿಗುವುದಿಲ್ಲ.

ಪುನರ್ಜನ್ಮಗಳಿವೆಯಾ ಎಂಬ ಪ್ರಶ್ನೆಗೆ ಉತ್ತರವಾಗಿ ಪುನರ್ಜನ್ಮಗಳು ಮನುಷ್ಯರಿಗೆ ಅಲ್ಲ ಪ್ರಾಣಿಗಳಿಗು, ಪಕ್ಷಿಗಳಿಗು, ಸಕಲ ಜೀವರಾಶಿಗಳಿಗು ಇವೆಯೆಂದು ಹೇಳುತ್ತಿದ್ದೇವೆ. ಶರೀರದಲ್ಲಿ ನಮೋದಿಸಲಾದ ಕರ್ಮಪ್ರಕಾರ ಪುನರ್ಜನ್ಮಗಳಿರುತ್ತವೆ. ಆದರೆ ಕರ್ಮವನ್ನು ನಮೋದು ಮಾಡುವವನು ಶರೀರದಲ್ಲಿನ ಆತ್ಮವೇ. ಆತ್ಮ ಶರೀರದಲ್ಲಿನ ತಲೆಯಲ್ಲಿರುವ, ನಾಲ್ಕುಚಕ್ರಗಳ ಸಮುದಾಯದಲ್ಲಿ, ಕೆಳಗಿನಿಂದ ಎರಡನೆ ಚಕ್ರವಾದ ಕರ್ಮಚಕ್ರದಲ್ಲಿ, ಜೀವಿಯ ಕರ್ಮವನ್ನು ನಮೋದು ಮಾಡಿ ಇಡುತ್ತಿದೆ. ನಡೆಯುತ್ತಿರುವ ಜನ್ಮದಲ್ಲಿನ ಕರ್ಮವನ್ನು ನಮೋದು ಮಾಡುವುದು ಆತ್ಮೆಯೆಂದು ತಿಳಿದಿದೆ ಅಲ್ಲವೆ! ನಡೆಯುತ್ತಿರುವ ಜನ್ಮದಲ್ಲಿನ ಪಾಪಪುಣ್ಯಗಳನ್ನು ಆತ್ಮ ನಮೊದು ಮಾಡಿ, ನಮೋದು ಮಾಡಿದ ಕರ್ಮಕ್ಕೆ ಆಗಾಮಿಕರ್ಮ ಎಂಬ ಹೆಸರಿಟ್ಟು, ಕರ್ಮಚಕ್ರದಲ್ಲಿ ನೆಲೆಮಾಡುತ್ತದೆ. ಹಾಗೆ ನೆಲೆಮಾಡಿದ ಕರ್ಮ ಮರಣದಲ್ಲಿ ಸಂಚಿತಕರ್ಮ

ಎಂಬ ಹೆಸರಿರುವ ಕರ್ಮಕೂಡಲಿಯಲ್ಲಿ ಸೇರಿಹೋಗುತ್ತದೆ. ಅನೇಕ ಜನ್ಮಗಳಿಂದ ಕರ್ಮನಿಧಿಯಾಗಿರುವುದನ್ನು ಸಂಚಿತಕರ್ಮ ಅನ್ನುತ್ತಿದ್ದೇವೆ. ಆಗಾಮಿಕರ್ಮ ಸಂಚಿತಕರ್ಮದಲ್ಲಿ ಸೇರಿಹೋದ ನಂತರ ಮರಣಿಸಿದ ತಕ್ಷಣ ಉಂಟಾಗುವ ಜನ್ಮಕ್ಕೋಸ್ಕರ ಸಂಚಿತಕರ್ಮ ಎಂಬ ಮಿಶ್ರಮದಿಂದ ಪ್ರಾರಬ್ಧಕರ್ಮ ಎನ್ನುವುದು ಹೊರಗೆ ತೆಗೆಯಲಾಗುತ್ತದೆ. ಮನುಷ್ಯ ಮರಣವನ್ನು ಹೊಂದಿದ ನಂತರ ಸೆಕೆಂಡಿನಲ್ಲಿಯೇ (ಮರುಕ್ಷಣದಲ್ಲಿಯೇ) ಆಗಾಮಿ ಸಂಚಿತದಲ್ಲಿ ಸೇರಿಹೋಗುವುದು, ಸಂಚಿತದಿಂದ ಪ್ರಾರಬ್ಧ ಹೊರಗೆ ಬರುವುದು ನಡೆಯುತ್ತಿದೆ. ಬಹಳವೇಗವಂತವಾಗಿ ನಡೆಯುವ ಈ ಕಾರ್ಯ ಯಾರ ಊಹೆಗು ಕೂಡಾ ಸಿಗದಂತೆ ನಡೆಯುತ್ತಿದೆ. ಜೀವಿಗೆ ಮರಣ ಜನನ ಎರಡೂ ಕ್ಷಣಕಾಲದಲ್ಲಿ ನಡೆದುಹೋಗುತ್ತೀವೆ. ಮರಣಿಸಿದವನು ಲಂಕೆಯಲ್ಲಿ ಮರಣಿಸಿದರೂ, ಅವನು ಅಮೆರಿಕದಲ್ಲಿ ಹುಟ್ಟಬೇಕಾಗಿದ್ದರೂ, ಮರುಕ್ಷಣದಲ್ಲಿಯೇ ಅಮೆರಿಕಾದಲ್ಲಿ ಜನ್ಮ ಉಂಟಾಗುತ್ತದೆ. ಎಷ್ಟುದೂರದಲ್ಲಿರುವ ಜನ್ಮವಾದರೂ, ಕ್ಷಣದಲ್ಲಿ ಯಾವ ಆಲಸ್ಯ ಇಲ್ಲದೆ ನಡೆದುಹೋಗುತ್ತದೆ. ಆ ವಿಧವಾದ ಜೋಡಣೆ ಕರ್ಮ ವಿಧಾನದಲ್ಲಿ ಇದೆ. ಇದು ಒಂದು ಮನುಷ್ಯರಿಗೆ ಅಲ್ಲದೆ. ಸಮಸ್ತ ಜೀವರಾಶಿಗಳಿಗು ಒಂದೇ ವಿಧವಾಗಿ ನಡೆಯುತ್ತಿರುತ್ತದೆ.

ಪ್ರಸ್ತುತ ಜನ್ಮದಲ್ಲಿ ಅಂದರೆ ನಡೆಯುತ್ತಿರುವ ಜನ್ಮದಲ್ಲಿ ಬರುವ ಹೊಸ ಕರ್ಮವನ್ನು ಆಗಾಮಿಕರ್ಮ ಅನ್ನುತ್ತಿದ್ದೇವೆ. ಹಾಗೆಯೇ ನಡೆಯುತ್ತಿರುವ ಜನ್ಮದಲ್ಲಿ ಅನುಭವಿಸುವ ಕರ್ಮವನ್ನು ಪ್ರಾರಬ್ಧಕರ್ಮ ಎನ್ನುತ್ತಿದ್ದೇವೆ. ಹುಟ್ಟಿದಾಗಿನಿಂದ ಮರಣಿಸುವವರೆಗೂ ಯಾವ ಕರ್ಮವಾದರೆ ಅನುಭವಿಸುವುದಕ್ಕೆ ನಿರ್ಣಯಿಸಲ್ಪಟ್ಟಿದೆಯೊ, ಅದಕ್ಕೆ ಪ್ರಾರಬ್ಧಕರ್ಮ ಎಂದು ಹೆಸರು ಇಟ್ಟಿದ್ದೇವೆ. ಹುಟ್ಟಿದಾಗಿನಿಂದ ಮರಣಿಸುವವರೆಗೂ ಸಂಪಾದಿಸಲ್ಪಡುವ ಕರ್ಮ ಏನಾದರೆ ಇದೆಯೊ, ಅದನ್ನು ಆಗಾಮಿಕರ್ಮ ಅನ್ನುತ್ತಿದ್ದೇವೆ. ಇನ್ನು ಮಧ್ಯದಲ್ಲಿ ಸಂಚಿತಕರ್ಮ ಎನ್ನುವುದು ಏತಕ್ಕಿದೆ? ಅದರ ಅವಶ್ಯಕತೆ ಏನು? ಎಂದು ಕೇಳಬಹುದು. ಅದನ್ನು ವಿವರವಾಗಿ ಹೇಳಿಕೊಂಡರೆ ಹೀಗೆ ಇದೆ. ಉದಾಹರಣೆ

ಯಿಂದ ವಿವರಿಸಿಕೊಳ್ಳೋಣ. ಒಂದು ದಿನ ಉದಯವೇ ಆರುಗಂಟೆಗಳಿಗೆ ಹೊರಗೆಹೋಗಿ ಹಾಲಿನ ಪ್ಯಾಕೆಟ್‌ಗಳನ್ನು ತಂದಿಟ್ಟಿದ್ದೇವೆ. ನಂತರ ಎಂಟು ಗಂಟೆಗಳಿಗೆ ತರಕಾರಿ ಮಾರ್ಕೆಟ್ಟಿಗೆ ಹೋಗಿ ನಾಲ್ಕು ವಿಧಗಳ ತರಕಾರಿಯನ್ನು ತಂದಿದ್ದೇವೆ ಅಂದುಕೊಳ್ಳಿ. ನಂತರ ಒಂಭತ್ತು ಗಂಟೆಗಳಿಗೆ ಕಿರಾಣಿಷಾಪ್‌ಗೆ ಹೋಗಿ ಕಾಳುಗಳನ್ನು ದಿನಸುಗಳನ್ನು, ಅಕ್ಕಿ, ಎಣ್ಣೆ ತಂದಿದ್ದೇವೆ ಅಂದುಕೊಳ್ಳಿ. ಆ ವಿಧವಾಗಿ ವಿವಿಧ ಸಮಯಗಳಲ್ಲಿ ವಿವಿಧ ಸ್ಥಳಗಳಲ್ಲಿ ಎಂದಿರುವ ಆಹಾರ ಪದಾರ್ಥಗಳೆಲ್ಲವನ್ನು ಸೇರಿಸಿ ಮಧ್ಯಾಹ್ನ 12 ಗಂಟೆಯಲ್ಲಿ ಅಕ್ಕಿಯನ್ನು ಅನ್ನಮಾಡುವುದು, ತರಕಾರಿಯನ್ನು ಉಳಿದ ಉಪ್ಪು, ಕಾರ, ಮಸಾಲೆಗಳು, ಎಲ್ಲವನ್ನು ಸೇರಿಸಿ ಸಾಂಬಾರು ಮಾಡುವುದು ನಡೆದಿದೆ. ಅಡಿಗೆಯವನು ಯಜಮಾನ ತಂದವುಗಳನ್ನೆ ಅಡಿಗೆಗೆ ಉಪಯೋಗಿಸಿ ಮೂರುಹೊತ್ತು ಊಟಕ್ಕೆ ಇಡುವುದು ನಡೆದಿದೆ. ಹಾಗೆ ಅಡಿಗೆ ಮಾಡುವುದರಿಂದ ಬೆಳಿಗ್ಗೆ ತಂದಿರುವ ಹಾಲು, ಎಂಟು ಗಂಟೆಯಲ್ಲಿ ತಂದಿರುವ ತರಕಾರಿ, ಹತ್ತು ಗಂಟೆಯಲ್ಲಿ ತಂದಿರುವ ರೇಷನ್ ಎಲ್ಲಾ ಅಡಿಗೆಯಲ್ಲಿ ಬೆರೆತುಹೋಗಿ ಉಟದಲ್ಲಿ ವಿನಿಯೋಗಿಸಲ್ಪಟ್ಟಿವೆ. ಒಂದುಬಾರಿ ಮಾಡಿದ ಅಡಿಗೆ ದಿನಕ್ಕೆಲ್ಲಾ ಸರಿಹೋಗಿದೆ. ಬೇರೆಬೇರೆ ಸಮಯಗಳಲ್ಲಿ, ಬೇರೆಬೇರೆ ಸ್ಥಳಗಳಲ್ಲಿ ತಂದಿರುವ ಸಾಮಗ್ರಿ ನಂತರ ತಿನ್ನುವುದಕ್ಕೆ ಹೇಗೆ ಸಾಂಬಾರಾಗಿ ಊಟವಾಗಿ ಮಾರ್ಪಟ್ಟು ವಿನಿಯೋಗಿಸಲ್ಪಟ್ಟಿದೆಯೊ, ಹಾಗೆಯೇ ಪ್ರಸ್ತುತ ಜನ್ಮದಲ್ಲಿ ಸಂಪಾದಿಸಲ್ಪಟ್ಟ ಆಗಾಮಿಕರ್ಮ, ಮರಣ ಸಮಯದಲ್ಲಿ ಸಂಚಿತಕರ್ಮವಾಗಿ ಬದಲಾಗಿಹೋಗಿ, ಪ್ರಾರಬ್ಧಕರ್ಮವಾಗಿ ಹೊರಗೆ ಬರುತ್ತಿದೆ. ಹೋದ ಜನ್ಮದಲ್ಲಿ ಆಗಾಗ ಅನೇಕ ಸಮಯಗಳಲ್ಲಿ ಸಂಪಾದಿಸಿಕೊಂಡ ಆಗಾಮಿಕರ್ಮ ಮರಣದಲ್ಲಿ ಬೆರೆತುಹೋಗಿ ಸಂಚಿತಕರ್ಮ ವಾಗಿ ಬದಲಾಗಿಹೋಗಿ, ಸಂಚಿತದಿಂದ ಒಂದು ಜನ್ಮದಲ್ಲಿ ಅನುಭವಿಸಬೇಕಾದ ಪ್ರಾರಬ್ಧಕರ್ಮ ಹೊರಗೆ ಬರುತ್ತಿದೆ. ಸಂಚಿತದಿಂದ ಒಂದೇ ಜನ್ಮದಲ್ಲಿ ಮುಗಿದುಹೋಗುವ ಕರ್ಮಬರಬಹುದು ಇಲ್ಲವೆ ಸ್ವಲ್ಪ ಸಂಚಿತದಲ್ಲಿಯೇ ಉಳಿದುಹೋಗಬಹುದು. ಹಾಗೆ ಉಳಿದಿರುವುದನ್ನು ಅಡಿಗೆ ಎನ್ನುತ್ತೇವಾಗಲಿ,

ಊಟ ಅನ್ನುವುದಿಲ್ಲ. ಮುಂದಿನದಿನ ತಂದುಕೊಂಡ ಸಾಮಗ್ರಿಯಿಂದ ಎರಡನೆ ದಿನ ಅಡಿಗೆ ಮಾಡಿಕೊಂಡು ತಿನ್ನುತ್ತಿದ್ದೇವೆ.

ಹಾಗೆಯೇ ನಡೆದ ಜನ್ಮದಲ್ಲಿ ಬೇರೆಬೇರೆ ಸಮಯಗಳಲ್ಲಿ, ಬೇರೆಬೇರೆ ಸ್ಥಳಗಳಲ್ಲಿ, ಕೊಂಡುಕೊಂಡ ರೇಷನ್ ಅನ್ನು ಬೆಳಿಗ್ಗೆಯೇ ಅಡಿಗೆಯಲ್ಲಿ ವಿನಿಯೋಗಿಸಿ, ಎರಡನೆ ದಿನ ಆಹಾರವಾಗಿ ತೆಗೆದುಕೊಂಡಂತೆ, ಹಿಂದಿನ ಜನ್ಮದಲ್ಲಿ ನಡೆದ, ಅನೇಕ ಸಮಯಗಳಲ್ಲಿ ಅನೇಕ ಸ್ಥಳಗಳಲ್ಲಿ, ಸಂಪಾದಿಸಿಕೊಂಡ ಆಗಾಮಿಕರ್ಮ ಮರಣದಲ್ಲಿ ಸಂಚಿತದಲ್ಲಿ ಸೇರಿಹೋಗಿ, ಸಂಚಿತದಿಂದ ಪ್ರಸ್ತುತ ಜನ್ಮದಲ್ಲಿ ಅನುಭವಿಸಬೇಕಾದ ಪ್ರಾರಬ್ಧಕರ್ಮ ನಿರ್ಣಯಿಸಲ್ಪಟ್ಟು ಹೊರಗೆ ಬರುತ್ತಿದೆ. ಹೋದ ಜನ್ಮ ಆಗಾಮಿಕರ್ಮ ಜನ್ಮ ಪ್ರಾರಂಭದಲ್ಲಿಯೇ (ಮರಣದಲ್ಲಿಯೇ) ಸಂಚಿತಕರ್ಮವಾಗಿ ಬದಲಾಗಿಹೋಗಿ ಆಗಾಮಿ ಎಂಬ ಹೆಸರಿಲ್ಲದೆ ಹೋಗುತ್ತಿದೆ. ಸಂಚಿತ ಕರ್ಮದಿಂದ ಪ್ರಾರಬ್ದಕರ್ಮ ತಯಾರಾಗಿ (ನಿರ್ಣಯಿಸಲ್ಪಟ್ಟು) ಹೊರಗೆ ಬರುತ್ತಿದೆ. ಹಾಗೆ ತಯಾರಾಗಿ ಬಂದಿರುವ ಪ್ರಾರಬ್ಧಕರ್ಮವನ್ನು, ಮನುಷ್ಯನ ನಂತರ ಜನ್ಮವೆಲ್ಲವೂ ಅನುಭವಿಸುತ್ತಿದ್ದಾನೆ. ಇದರ ಪ್ರಕಾರ ನೋಡಿದರೆ ಆಗಾಮಿಕರ್ಮ ಇಲ್ಲದ್ದು, ಸಂಚಿತಕರ್ಮ ಇಲ್ಲ. ಸಂಚಿತಕರ್ಮ ಇಲ್ಲದ್ದು ಪ್ರಾರಬ್ದ ಕರ್ಮಯಿಲ್ಲ. ಪ್ರಾರಬ್ಧವನ್ನು ಅನುಭವಿಸುತ್ತಿದ್ದಂತೆ ಪುನಃ ಆಗಾಮಿಕರ್ಮ ತಯಾರಾಗುತ್ತಿದೆ. ಆದಕಾರಣ ಪ್ರಾರಬ್ದ ಇಲ್ಲದ್ದು ಆಗಾಮಿಕರ್ಮ ಎನ್ನುವುದು ಇಲ್ಲವೆಂದು ಹೇಳಬಹುದು. ಹೀಗೆ ಕರ್ಮಗಳು ಒಂದಕ್ಕೊಂದು ಸಂಬಂಧಪಟ್ಟವೆಯೆಂದು ತಿಳಿಯುತ್ತಿದೆ.

ಕರ್ಮವಿಧಾನ ಚೆನ್ನಾಗಿ ಅರ್ಥವಾಗುವುದಕ್ಕೆ ಮತ್ತು ಜ್ಞಾಪಕವಿರುವುದಕ್ಕೆ ಈ ವಿಧವಾಗಿ ಬರೆದಿಟ್ಟುಕೊಳ್ಳಬಹುದು. ಕರ್ಮ ಮೂರು ಹೆಸರುಗಳಲ್ಲಿ ಇದೆ. ಆದ್ದರಿಂದ ಮೂರು ಭಾಗಗಳಾಗಿ ಬರೆದುಕೊಳ್ಳಬಹುದು. ಇಲ್ಲಿಯವರೆಗೂ ಹೇಳಿಕೊಂಡ ಉಪಮಾನವನ್ನು ಕರ್ಮಗಳಿಗೆ ಜೋಡಿಸಿ ಬರೆದುಕೊಳ್ಳುತ್ತಿದ್ದೇವೆ.

| | | | |
|---|---|---|---|
| 1) | ತಂದಿರುವ ರೇಷನ್ | - | ಆಗಾಮಿ ಕರ್ಮ |
| 2) | ಮಾಡಿರುವ ಅಡಿಗೆ | - | ಸಂಚಿತ ಕರ್ಮ |
| 3) | ತಿನ್ನುವ ತಿಂಡಿ | - | ಪ್ರಾರಬ್ಧ ಕರ್ಮ |

| | | | |
|---|---|---|---|
| 1) | ಆಗಾಮಿ ಕರ್ಮ | - | ಜೀವಾತ್ಮ ಇಷ್ಟವಾಗಿ ತಂದುಕೊಂಡ ರೇಷನ್ ಎಂಬ ಕರ್ಮಗಳು. |
| 2) | ಸಂಚಿತ ಕರ್ಮ | - | ಆತ್ಮ ಮನೆಕೆಲಸದವನಂತೆ ರೇಷನನ್ನು ಬೆರೆಸಿ ಮಾಡಿದ ಅಡಿಗೆ ಎಂಬ ಕರ್ಮಗಳು. |
| 3) | ಪ್ರಾರಬ್ಧ ಕರ್ಮ | - | ಜೀವಿಯು ಕಷ್ಟವಾಗಿ, ಸುಖವಾಗಿ ತಿನ್ನುತ್ತಿರುವ ಆಹಾರವೆಂಬ ಕರ್ಮ. |

| | | |
|---|---|---|
| ಜೀವಾತ್ಮ<br>ಮುಂಚೆ<br>ದಿನ<br>ಬಜಾರಿನಲ್ಲಿ<br>ತಂದುಕೊಂಡ<br>ರೇಷನ್ | { ಹಣ್ಣುಗಳು<br>ಹಾಲು<br>ತರಕಾರಿ<br>ಸೊಪ್ಪು<br>ಅಕ್ಕಿ<br>ಕಾಳುಗಳು<br>ಎಣ್ಣೆ<br>ಮಸಾಲೆಗಳು } | ಮೊದಲ<br>ಜನ್ಮದಲ್ಲಿ<br>ಸಂಪಾದಿಸಿಕೊಂಡ<br>ಆಗಾಮಿ<br>ಕರ್ಮಗಳು |

| | | |
|---|---|---|
| ಆತ್ಮ ಎಂಬ<br>ಕೆಲಸದವನು<br>ರೊಟ್ಟಿಗಳು<br>ಕಲೆತು<br>ಮಾಡಿದ<br>ಅಡಿಗೆಗಳು | { ಅನ್ನ<br>ಬಿರಿಯಾನಿ<br>ರೊಟ್ಟಿಗಳು<br>ಸಾಂಬಾರು<br>ರಸಂ<br>ಪಲ್ಯ } | ಮರಣಿಸಿ<br>ಜನ್ಮಿಸು<br>ಸಮಯದಲ್ಲಿ<br>ಅಡಿಗೆಗಳಾಗಿ<br>ಬದಲಾದ<br>ಸಂಚಿತಕರ್ಮಗಳು |

| | | | |
|---|---|---|---|
| ಜೀವಾತ್ಮ ಎರಡನೆಯ ದಿನದಂದು ಆಹಾರವಾಗಿ ತೆಗೆದು ಕೊಳ್ಳುತ್ತಿರುವ ಪದಾರ್ಥಗಳು | ಬೆಳಗ್ಗೆ<br>ಮಧ್ಯದಲ್ಲಿ<br>ಮಧ್ಯಾಹ್ನ<br>ಮಧ್ಯದಲ್ಲಿ<br>ರಾತ್ರಿ | ಟಿಫೆನ್<br>ಕಾಫೀ<br>ಭೋಜನ<br>ಟೀ, ಸ್ವಲ್ಪಾಹಾರ<br>ಡಿನ್ನರ್ | ಪ್ರಸ್ತುತ ಜನ್ಮದಲ್ಲಿ ಅನುಭವಿಸುವ ಅನೇಕ ರೀತಿ ಪ್ರಾರಬ್ಧ ಕರ್ಮಗಳು |

ಕರ್ಮಸಿದ್ಧಾಂತ ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಒಂದು ಸೂತ್ರವಾಗಿದೆ. ಕರ್ಮ ಸಿದ್ಧಾಂತದ ಪ್ರಕಾರ ಸಂಪಾದಿಸಿಕೊಂಡವನು, ಅನುಭವಿಸುವವನು ಒಬ್ಬನೆ, ಅವನೇ ಜೀವಾತ್ಮ. ಜೀವಾತ್ಮ ಕರ್ಮಗಳನ್ನು ಅನುಭವಿಸುವುದಕ್ಕೆ ಬೇಕಾದ ಕಾರ್ಯಗಳೆಲ್ಲವನ್ನು ಮಾಡುವುದು ಆತ್ಮವೇ. ಶರೀರದಲ್ಲಿ ಆತ್ಮ ಎಲ್ಲಾ ಕಾರ್ಯಗಳನ್ನು ಮಾಡಿದಾಗ ಬಂದಿರುವ ಫಲಿತವನ್ನು ಜೀವಾತ್ಮ ಅನುಭವಿಸುತ್ತಿದೆ. ಈ ವಿಧಾನವೆಲ್ಲವನ್ನು ಕರ್ಮಸಿದ್ಧಾಂತ ಅನ್ನುತ್ತಿದ್ದೇವೆ. ಮೇಲಿನ ಪ್ರಶ್ನೆಯಲ್ಲಿ ಕರ್ಮವನ್ನು ಬರೆದಿಡುವವನು, ಪುನಃ ಅನುಭವಿಸುವಂತೆ ಮಾಡುವವನು ಯಾರು? ಅನ್ನುವುದಕ್ಕೆ ಉತ್ತರವಾಗಿ ಆತ್ಮ ಎಂದು ತಿಳಿದುಹೋಗಿದೆ. ಯಾವ ಕರ್ಮ ಹೇಗೆ ಅನುಭವಕ್ಕೆ ಬರುತ್ತಿದೆಂಬುವುದಕ್ಕೆ ಒಂದು ಉದಾಹರಣೆಯನ್ನು ಸಹಾ ಹೇಳಿಕೊಂಡಿದ್ದೇವೆ. ಮಾಡಿದ ಕೆಲಸದಲ್ಲಿ ಎಷ್ಟು ಕರ್ಮ ಬಂದಿರುವುದು ಯಾರಿಗೂ ತಿಳಿಯದು. ಹಾಗೆಯೇ ಬಂದಿರುವ ಕರ್ಮ ಯಾವ ಅನುಭವಕ್ಕೆ ಕಾರಣವಾಗಿದೆಯೆಂದು ಕೂಡಾ ಯಾರಿಗೂ ತಿಳಿಯದು. ಇಂತಹ ಕರ್ಮ ಅಥವಾ ಇಂತಹ ಪಾಪ, ಇಂತಹ ಅನುಭವಕ್ಕೆ ಕಾರಣವಾಗಿದೆಯೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಸಂಪಾದಿಸಿಕೊಂಡ ಕರ್ಮ ಹಾಗೆಯೇ ಹೇಗಿದೆ ಎಂದರೆ ಅನುಭವಕ್ಕೆ ಬರಲಿಲ್ಲ. ಅದು ಸಂಚಿತವಾಗಿ ಬದಲಾಗಿ ಅನುಭವಕ್ಕೆ ಬರಬೇಕಾಗಿದೆ. ಸಂಚಿತವಾಗಿ ಬದಲಾದಾಗ ಕರ್ಮಗಳೆಲ್ಲ ಸೇರಿಹೋಗಿ, ಬದಲಾವಣೆಹೊಂದಿ ಪ್ರಾರಬ್ದವೆಂಬ ಹೆಸರಿನಿಂದ ಅನುಭವಕ್ಕೆ

ಬರುತ್ತಿದೆ. ಆದ್ದರಿಂದ ಇಂತಹ ಆಗಾಮಿ, ಇಂತಹ ಪ್ರಾರಬ್ಧವಾಗಿ ಬಂದಿದೆಯೆಂದು ಹೇಳಲಾರೆವು.

ಸಂಪಾದಿಸುವುದು ಆಗಾಮಿಕರ್ಮ, ಅನುಭವಿಸುವುದು ಪ್ರಾರಬ್ಧಕರ್ಮ ಅದಾಗ, ಸಂಪಾದಿಸಿಕೊಂಡ ಕರ್ಮವನ್ನೆ ನೇರವಾಗಿ ಪ್ರಾರಬ್ಧವಾಗಿ ಅನುಭವಿಸಬಹುದಲ್ಲವೆ! ಯಾರು ಮಾಡಿಕೊಂಡಿರುವುದು ಅವರು ಅನುಭವಿಸಬೇಕೆಂದಾಗ, ಯಾರು ಎಷ್ಟು ಮಾಡಿಕೊಂಡರೆ ಅಷ್ಟು ಅನುಭವಿಸಬೇಕೆಂದಾಗ, ಮೊದಲು ಮಾಡಿಕೊಂಡ ಆಗಾಮಿಕರ್ಮವನ್ನು ಈಗ ಪ್ರಾರಬ್ಧವಾಗಿ ಏಕೆ ಅನುಭವಿಸಬಾರದು? ಮಧ್ಯದಲ್ಲಿ ಸಂಚಿತಕರ್ಮ ಎಂಬುದು ಏಕೆ ಬಂದಿದೆ? ಎಂಬ ಪ್ರಶ್ನೆ ಕೆಲವರಿಗೆ ಬರಬಹುದು. ಅದಕ್ಕೆ ನಮ್ಮ ಉತ್ತರ ಹೀಗಿದೆ. ಈ ಪ್ರಶ್ನೆ ನಿಮಗೆ ಅಲ್ಲ, ನಮಗೂ ಕೂಡಾ ಬಂದಿದೆ. ಉತ್ತರಕ್ಕೋಸ್ಕರ ನಾವು ಸ್ವಲ್ಪಕಾರ ಕಾದು ನೋಡಬೇಕಾಗಿಬಂದಿದೆ. ನಂತರ ಅದಕ್ಕೆ ಉತ್ತರ ತಿಳಿದಿದೆ. ಸಂಪಾದಿಸಿಕೊಂಡ ಆಗಾಮಿಕರ್ಮ ನೇರವಾಗಿ ಅನುಭವಿಸುವ ಪ್ರಾರಬ್ಧವಾಗಿ ಬದಲಾಗಿಹೋದರೆ, ಮನುಷ್ಯನ ಜೀವನವೆಲ್ಲಾ ಗೊಂದಲವಾಗಿಹೋಗುತ್ತದೆ. ಬಾಲ್ಯ, ಯೌವನ, ಕೌಮಾರ್ಯ, ವೃದ್ಧಾಪ್ಯ ಎಂಬುವವು ಇರುವುದಿಲ್ಲ. ಜನನ ಮರಣಗಳಿದ್ದು ಜನ್ಮಗಳು ಬದಲಾದರೂ ವರಸೆಕ್ರಮವಿಲ್ಲದ ಜೀವನವಾಗುತ್ತದೆ. ಯೌವನದಲ್ಲಿ ನಡೆಯಬೇಕಾಗಿರುವುವು ಬಾಲ್ಯದಲ್ಲಾಗಲಿ, ವೃದ್ಧಾಪ್ಯದಲ್ಲಾಗಲಿ ನಡೆಯುತ್ತವೆ. ವೃದ್ಧಾಪ್ಯದಲ್ಲಿ ನಡೆಯಬೇಕಾಗಿರುವ ಕಾರ್ಯಗಳು ಯೌವನದಲ್ಲಿ ನಡೆಯಬಹುದು. ಶಿಶುದಶೆಯಲ್ಲಿಯೇ ಯೌವನ ಕಾರ್ಯಗಳು ನಡೆಯುತ್ತವೆ. ಅದನ್ನು ಕುರಿತು ಹೇಳಿದರೆ ಮನುಷ್ಯನ ಜೀವನವೇ ಬದಲಾಗಿಹೋಗುತ್ತದೆ, ಮನುಷ್ಯರಿಗೂ ಮನುಷ್ಯರಿಗೂ ಮಧ್ಯ ಸಮನ್ವಯ ಏರ್ಪಡುವುದಿಲ್ಲ. ಸುಖ ಅನುಭವಿಸುವದರೊಳಗೆ ದುಃಖಬಂದು ಸುಖವನ್ನು ಮಧ್ಯದಲ್ಲಿ ನಿಲ್ಲಿಸಿ ಕಾರ್ಯವನ್ನು ಪೂರ್ತಿ ಆಗದಂತೆ ಮಾಡುತ್ತದೆ. ಇಲ್ಲಿಯವರೆಗೂ ಮಾನವ ಸಮಾಜ ಅನುಭವಿಸದ ತೊಂದರೆಗಳೆಲ್ಲ ಬರುತ್ತವೆ. ಹುಟ್ಟಿದಾಗ ಶರೀರ ಶಿಶುವಿನದಾದರೂ ಆಗಾಮಿಕರ್ಮ ಪ್ರಕಾರ ಪ್ರಾರಬ್ಧ ಬಂದರೆ ಶಿಶುವು ಕೂಡಾ

ಯೌವನದಲ್ಲಿರುವ ಹೆಂಡತಿ ಬೇಕೆಂದು ಕೇಳುತ್ತದೆ. ಕೇಳುವುದೆ ಅಲ್ಲ, ಅವನ ಕರ್ಮ ಹಾಗೆ ವರಸೆಗೆ ಬಂದಿದೆ, ಆದ್ದರಿಂದ ಶಿಶುವು ಯೌವನದಲ್ಲಿರುವ ಯುವತಿಯನ್ನು ಅನುಭವಿಸುತ್ತದೆ. ಕರ್ಮಗಳ ವರಸೆಕ್ರಮ ಆಗಿರುವುದರಿಂದ, ಎಂದೂ ಕಾಣದ ಕೇಳದಿರುವವೆಲ್ಲ ಜೀವನದಲ್ಲಿ ನಡೆಯುತ್ತವೆ. ಇವುಗಳನ್ನೆಲ್ಲ ದೇವರು ದೃಷ್ಟಿಯಲ್ಲಿಟ್ಟುಕೊಂಡು, ಮನುಷ್ಯನ ಹುಟ್ಟುಸಾವುಗಳಿಗೆ ತಕ್ಕಂತೆ, ಬಾಲ್ಯ, ಯೌವನ, ಕೌಮಾರ್ಯ, ವೃದ್ಧಾಪ್ಯ ದಶೆಗಳಿಗೆ ತಕ್ಕಂತೆ, ಕರ್ಮಗಳನ್ನು ಮಿಶ್ರಮ ಮಾಡಿ ಪ್ರಾರಬ್ಧವಾಗುವಂತೆ ಮಾಡುತ್ತಿದ್ದಾನೆ. ಹಾಗೆ ಮಾಡುವುದರಿಂದ ಶರೀರ ದಶೆಗಳಿಗೆ ತಕ್ಕಂತೆ ಕರ್ಮಗಳು ಹೊಂದಿಸಲ್ಪಟ್ಟಿವೆ.

ಮಾರುಕಟ್ಟೆನಲ್ಲಿ ತಂದುಕೊಂಡವುಗಳನ್ನು ಅಡಿಗೆ ಮಾಡಿಕೊಳ್ಳದಂತೆ ಹಸಿದು ಹಸಿಯಾಗಿ, ಒಣಗಿರುವವು ಗಟ್ಟಿಯಾಗಿ ಬಳಸಿದರೆ ಹೇಗೆ ಶರೀರದಲ್ಲಿ ಸರಿಹೋಗುವುದಿಲ್ಲವೊ, ಹಾಗೆಯೇ ಜೀವನದಲ್ಲಿ ಕೂಡಾ ಬಂದಿರುವ ಕರ್ಮಗಳನ್ನು ಬಂದಂತೆ, ಇರುವ ಕರ್ಮಗಳನ್ನು ಇದ್ದಂತೆ ಬಳಸಿದರೆ ಜೀವನದಲ್ಲಿ ಸರಿಹೋಗುವುದಿಲ್ಲ. ಮಾರುಕಟ್ಟೆಯಲ್ಲಿ ಮಾಂಸವನ್ನು ತಂದುಕೊಂಡ ನಂತರ ಮಸಾಲೆಗಳನ್ನು ತಂದುಕೊಂಡಿದ್ದೇನೆಂದು, ತಂದುಕೊಂಡವುಗಳನ್ನು ತಂದುಕೊಂಡಂತೆ ಬಳಸುತ್ತೇನೆಂದು, ಮೊದಲು ಮಾಂಸವನ್ನು ತಿಂದು, ನಂತರ ಮಸಾಲೆಗಳನ್ನು ತಿಂದರೆ ಶರೀರ ಜೀರ್ಣಿಸಿಕೊಳ್ಳುವುದಿಲ್ಲ. ಹಸಿಮಾಂಸವನ್ನು ತಂದುಕೊಂಡಿದ್ದೇನೆಂದು, ಹಸಿ ಮಾಂಸವನ್ನು ತಿಂದರೆ ಅದು ಜೀರ್ಣವಾಗದೆ ಹೊಟ್ಟೆನೋವು ಬರುತ್ತದೆ. ತಂದುಕೊಂಡ ಮಾಂಸಕ್ಕೆ ಮಸಾಲೆಗಳನ್ನು ಬೆರೆಸಿ ಅಡಿಗೆಮಾಡುವುದು ಎಷ್ಟು ಅವಶ್ಯವೊ, ಹಾಗೆಯೇ ತಂದುಕೊಂಡ ಪಾಪಪುಣ್ಯಗಳಿಗು ಸಂಚಿತವೆಂಬ ಮಿಶ್ರಮ ಅಷ್ಟೇ ಅಗತ್ಯವಾಗುತ್ತದೆ. ಅನೇಕ ಹಣ್ಣುಗಳನ್ನು ಸೇರಿಸಿ ರಸ ತೆಗೆಯುವುದಕ್ಕೆ ಮಿಕ್ಸಿ ಎಷ್ಟು ಅಗ್ಯವೊ, ಅನೇಕ ಸಾಮಗ್ರಿಗಳನ್ನು ಬೆರೆಸಿ ಪಕ್ವ ಮಾಡುವ ಅಡಿಗೆ ಎಷ್ಟು ಅಗತ್ಯವೊ, ಹಾಗೆಯೇ ಅನೇಕ ಕರ್ಮಗಳನ್ನು ಸೇರಿಸಿ ಸಮನ್ವಯ ಮಾಡಿ, ಜೀವನಕ್ಕೆ ಸರಿಹೋಗುವ ವಿಧವಾಗಿ ಮಾಡುವ ಸಂಚಿತ ಪ್ರಕ್ರಿಯೆ ಅಷ್ಟೇ ಅಗತ್ಯವಾಗುತ್ತದೆ. ಸಂಚಿತ

ಎಂಬುದು ಮನುಷ್ಯನಿಗೆ ಅಂಟಿಕೊಳ್ಳುವ ಪ್ರತ್ಯೇಕವಾದ ಕರ್ಮವಲ್ಲ. ನಾವು ಮಾಡಿಕೊಂಡ ಕರ್ಮಗಳನ್ನು ಬೆರೆಸಿ ಅನುಭವಿಸುವುದಕ್ಕೆ ತಕ್ಕ ಪಾಕವಾಗಿ ಅಥವಾ ಪರಿಪಕ್ವವಾಗಿ ಮಾಡುವ ಪ್ರತ್ಯೇಕವಾದ ಕೆಲಸವನ್ನು ಸಂಚಿತಕರ್ಮ ಎಂದು ಅನ್ನುತ್ತಿದ್ದೇವೆ. ಆಗಾಮಿಕರ್ಮ ಸಂಚಿತದಲ್ಲಿ ಬಿದ್ದು ಪ್ರಾರಬ್ದವಾಗಿ ಬದಲಾದ ನಂತರ, ಹೋದ ಜನ್ಮದಲ್ಲಿ ಮಾಡಿಕೊಂಡ ಪಾಪ ಪ್ರಸ್ತುತ ಜನ್ಮದಲ್ಲಿ ಯಾವ ರೂಪದಲ್ಲಿ ಕಷ್ಟವಾಗಿ ಇಲ್ಲವೆ ಬಾಧೆಯಿಂದ ಬರುತ್ತದೊ ಹೇಳಲಾರೆವು. ಹಾಗೆಯೆ ಕಳೆದ ಜನ್ಮದಲ್ಲಿ ಮಾಡಿಕೊಂಡ ಪುಣ್ಯ, ಪ್ರಸ್ತುತ ಜನ್ಮದಲ್ಲಿ ಯಾವ ವಿಧವಾದ ಸುಖವಾಗಿ ಇಲ್ಲವೆ ಸಂತೋಷವಾಗಿ ಅನುಭವಕ್ಕೆ ಬರುತ್ತದೊ ಹೇಳಲಾರೆವು.

ಹೋದ ಜನ್ಮ ಆಗಾಮಿಕರ್ಮ ಈ ಜನ್ಮದಲ್ಲಿ ಯಾವ ಪ್ರಾರಬ್ಧವಾಗಿ ದೆಯೋ ಹೇಳುವುದಕ್ಕೆ ಸಾಧ್ಯವಾಗದಿದ್ದರೂ, ಕೆಲವು ಕರ್ಮಗಳನ್ನು ಮಾತ್ರ ಗುರ್ತಿಸಬಹುದು. ಹಾಗೆ ಗುರ್ತಿಸುವುದು ಕೂಡಾ ಅಪರೂಪವಾಗಿ ನಡೆಯುತ್ತದೆ. ಹೋದ ಜನ್ಮದಲ್ಲಿ ಮಾಡಿಕೊಂಡ ಕೆಲವು ಪಾಪಗಳನ್ನು ಮಾತ್ರ ಪ್ರಸ್ತುತ ಜನ್ಮದಲ್ಲಿ, ಇಂತಹ ಕಷ್ಟಗಳಾಗಿ ಬರುತ್ತಿವೆಯೆಂದು ಗುರುತಿಸುವುದಕ್ಕೆ ಅವಕಾಶವಿದೆ. ಹಾಗೆ ಗುರುತು ಹಿಡಿಯುವುದರಿಂದ, ಇಂತಹ ಪಾಪದಿಂದ ಇಂತಹ ಶಿಕ್ಷೆ ಜಾರಿ ನಡೆಯುತ್ತಿದೆಯೆಂದು ತಿಳಿಯುವುದರಿಂದ, ನಾವು ಮಾಡಿಕೊಂಡಿರುವುದು ತಪ್ಪದೆ ನಾವೇ ಅನುಭವಿಸಬೇಕೆಂಬ ಕರ್ಮಸಿದ್ಧಾಂತ ಮನುಷ್ಯನಿಗೆ ಸ್ವಲ್ಪಮಟ್ಟಿಗೆ ಅರ್ಥವಾಗುತ್ತದೆ. ಆದ್ದರಿಂದ ಕೆಲವನ್ನು ಮಾತ್ರ ಗುರುತಿಸುವ ಅವಕಾಶ ದೇವರು ಕಲ್ಪಿಸಿದ್ದಾನೆ. ನಾವು ಮಾರುಕಟ್ಟೆಯಲ್ಲಿ ತಂದುಕೊಂಡ ಅನೇಕ ವಿಧಗಳ ಕಿರಾಣಿ ಸಾಮಗ್ರಿಗಳನ್ನು ಬೆರೆಸಿ ಅಡಿಗೆ ಮಾಡಿದಾಗ, ಸಾಂಬಾರಿನಲ್ಲಿ ಹಾಕಿರುವ ಪಪ್ಪುದಿನಸುಗಳು, ತರಕಾರಿಗಳು, ಉಪ್ಪು, ಕಾರ, ಹುಣಿಸೆಹಣ್ಣು ಮೊದಲಾದವುಗ ಳನ್ನು ಚೆನ್ನಾಗಿ ಬೇಯಿಸಿದಾಗ ಅವುಗಳ ರೂಪ, ಹೆಸರು, ರುಚಿ ಬದಲಾಗಿಹೋಗಿ ಗುರುತಿಸುವುದಕ್ಕೆ ಸಾಧ್ಯವಿಲ್ಲದೆ ಹೋಗುತ್ತದೆ. ಅದರಲ್ಲಿ ಇದು ಕಾರ, ಇದು ಉಪ್ಪು ಎಂದು ಪ್ರತ್ಯೇಕವಾಗಿ ತೋರಿಸಲಾರೆವು. ಆದರೆ ಅದರಲ್ಲಿ ಹಾಕಿರುವ

ಒಂದು ಎರಡು ತರಕಾರಿಗಳು ಎಲ್ಲಿಯಾದರೂ ಗುರುತಿಸುವಂತೆ ಪೂರ್ತಿ ಬೇಯದಂತಿರುತ್ತವೆ. ಹಾಗೆಯೇ ಪ್ರತ್ಯೇಕಿಸಿ ಕೆಲವು ಪಾಪಗಳು ಸಂಚಿತದಿಂದ ಬಂದರೂ, ಸ್ವಲ್ಪ ಗುರುತಿಸುವಂತೆ ಇರುತ್ತವೆ. ಅಂಥವುಗಳಲ್ಲಿ ಜ್ಞಾನಿಗಳನ್ನು ಅವಮಾನಪಡಿಸಿ ಮಾತನಾಡಿದ ಪಾಪ ತಪ್ಪದೆ ಕ್ಯಾನ್ಸರ್‌ಆಗಿ ಬಂದು ಬಾಧಿಸುತ್ತಿರುತ್ತದೆ.

ಅಪರಾದ ಮಾಡದವನನ್ನು ಉದ್ದೇಶಪೂರ್ವಕವಾಗಿ ಚಿತ್ರಿಸಿದವನಾಗಲಿ, ಯೋಗಶಕ್ತಿ ಇರುವ ಜ್ಞಾನಿಗಳನ್ನು ಅವಮಾನವಾಗಿ ಮಾತನಾಡಿದವನಾಗಲಿ ಮಾಡಿಕೊಂಡ ಪಾಪ ಕ್ಯಾನ್ಸರ್ ರೋಗವಾಗಿ ಜಾರಿಗೆ ಬಂದು ಅನುಭವಕ್ಕೆ ಬರುತ್ತಿದೆ. ಈದಿನ ಎಲ್ಲಿಯಾದರೂ ಕ್ಯಾನ್ಸರ್ ರೋಗಿ ಕಾಣಿಸಿದರೆ ಗತಜನ್ಮದಲ್ಲಿ ಆತನು, ಅಪರಾದ ಮಾಡದವನನ್ನು ಅಪರಾಧಿಯನ್ನಾಗಿಉ ಚಿತ್ರಿಸಿದವನಾದರೂ ಇರಬೇಕು. ಇಲ್ಲದಿದ್ದರೆ ಯೋಗಿಯನ್ನಾಗಲಿ, ಜ್ಞಾನಿಯನ್ನಾಗಲಿ ಅಜ್ಞಾನಿಯಾಗಿ ಚಿತ್ರಿಸಿ ಮಾತನಾಡಿರಬೇಕು. ಅಂಥವನಿಗೆ ಆ ರೋಗ ಬರುತ್ತಿರುವಂತೆ ಕೆಲವು ಅನುಭವಗಳ ಮೂಲಕ ಅರ್ಥವಾಗಿದೆ. ಯಾವ ಕರ್ಮಕ್ಕೆ ಯಾವ ಫಲಿತ ಎನ್ನುವುದು ಕರ್ಮ ರಹಸ್ಯ, ಯಾರಿಗೂ ತಿಳಿಯದ ವಿಷಯ. ಆದರೂ ದೇವರು ಇದು ಸತ್ಯವೆಂದು ನಿರೂಪಣೆಗೆ ಬರುವುದಕ್ಕೆ ಎಲ್ಲಿಯಾದರೂ ಕೆಲವು ಫಲಿತಗಳಿಗೆ ಕಾರಣ ಏನಾಗಿರುವುದು ತಿಳಿಯುವಂತೆ ಮಾಡಿದ್ದಾನೆ. ಆ ವಿಧಾನದಲ್ಲಿ ಒಂದು ರೋಗ ಮಾತ್ರ ಹೇಗೆ ಬರುತ್ತಿದೆಯೊ ಅದಕ್ಕೆ ಕಾರಣವಾದ ಕರ್ಮ ಯಾವುದೊ ತಿಳಿದುಕೊಂಡಿದ್ದೇವೆ. ಉಳಿದ ಕೆಲವನ್ನು ಕೂಡಾ ತಿಳಿಯಬಹುದು ಆದರೆ, ನಮಗೆ ತಿಳಿದಿರುವುದು, ನಮ್ಮ ನಿರ್ಧಾರಣೆಗೆ ಬಂದಿರುವುದು ಒಂದು ಕ್ಯಾನ್ಸರ್ ರೋಗಿ ಮಾತ್ರವೆ.

ಆಗಾಮಿಕರ್ಮ, ಪ್ರಾರಬ್ಧಕರ್ಮ ಮಧ್ಯದಲ್ಲಿ ಸಂಚಿತವಿದೆಯೆಂದು ಆಗಾಮಿ ಪ್ರಾರಬ್ಧವಾಗಿ ಬದಲಾಗಬೇಕೆಂದರೆ, ಸಂಚಿತವಾಗಿ ತಯಾರಾದ ನಂತರ ಪ್ರಾರಬ್ಧವಾಗಿ ಬರುತ್ತದೆಂದು ತಿಳಿಯುವುದೇ, ಕರ್ಮ ವಿಧಾನದಲ್ಲಿ ಅತಿ ದೊಡ್ಡ ರಹಸ್ಯ ದೇವರು ನಮಗೆ ತನ್ನ ಜ್ಞಾನವನ್ನು ಭಗವದ್ಗೀತೆ, ಬೈಬಲ್,

ಖುರಾನ್ ರೂಪಗಳಲ್ಲಿ ಒದಗಿಸಿದ್ದಾನೆ. ಈ ಮೂರು ಮೂಲಗ್ರಂಥಗಳಲ್ಲಿ ಇಲ್ಲದ ಅನೇಕ ವಿಷಯಗಳು ಪ್ರಸ್ತುತ ಕಾಲದಲ್ಲಿ ನಮಗು ತಿಳಿಯಲ್ಪಟ್ಟಿವೆ. ದೇವರು ಮೊದಲೆ ತನ್ನ ಮೂರು ಗ್ರಂಥಗಳಲ್ಲಿನ ಒಂದು ಗ್ರಂಥದಲ್ಲಿ "ನಾನು ನಿಮ್ಮೊಂದಿಗೆ ಹೇಳಬೇಕಾಗಿರುವುದು ಇನ್ನೂ ಅನೇಕ ಸಂಗತಿಗಳು ಇವೆ." ಅಂದಿದ್ದಾನೆ. ಆದ್ದರಿಂದ ಆಗ ಹೇಳದ ವಿಷಯಗಳನ್ನೂ, ಮೂರು ಗ್ರಂಥಗಳಲ್ಲಿ ಇಲ್ಲದ ವಿಷಯಗಳನ್ನೂ, ಈಗ ತಿಳಿಸುತ್ತಿದ್ದಾನೆಂದು ನಾನು ಅಂದುಕೊಳ್ಳುತ್ತಿದ್ದೇನೆ. ಒಂದು ಕರ್ಮ ವಿಷಯದಲ್ಲಿಯೇ ಅಲ್ಲದೆ, ಜನ್ಮ ವಿಷಯದಲ್ಲಿಯೂ, ಮರಣ ವಿಷಯದಲ್ಲಿಯೂ ಇಲ್ಲಿಯವರೆಗೂ ಎಲ್ಲಿಯೂ ಯಾವ ಗ್ರಂಥದಲ್ಲಾಗಲಿ, ಹೇಳದ ವಿಷಯಗಳು ತಿಳಿಯಲ್ಪಟ್ಟಿವೆಯೆಂದು ಅಂದುಕೊಳ್ಳುತ್ತಿದ್ದೇನೆ. ಮುಖ್ಯವಾಗಿ ಜೀವಿಯಾಗಿ ಮತ್ತು ದೇವರಾಗಿ ನಟಿಸುವ ಆತ್ಮವನ್ನು ತಿಳಿದುಕೊಂಡಿದ್ದೇವೆ. ಆತ್ಮ ಎಲ್ಲಿಯೂ ತಿಳಿಯಲ್ಪಡದೆ, ಎಲ್ಲಾ ತಾನಾಗಿ ಮಾಡುತ್ತಿದ್ದರೂ, ಅದು ಏನೊ ಯಾರಿಗೂ ತಿಳಿಯದು. ಅಂತಹ ಆತ್ಮವೇ ತಿಳಿಯಲ್ಪಟ್ಟಾಗ, ದೇವರು ತನ್ನ ಗ್ರಂಥಗಳಲ್ಲಿ ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಅನೇಕ ಸಂಗತಿಗಳು ಇವೆ ಅಂದಿದ್ದಾನೆ ಅಲ್ಲವೆ! ಆ ಸಂಗತಿಗಳಲ್ಲಿ ಕೆಲವು ಮಾತ್ರವಾದರೂ ತಿಳಿದಿವೆ. ಇನ್ನೂ ತಿಳಿಯಬೇಕಾಗಿರುವವು ಇವೆಯೆಂದು ಅಂದುಕೊಳ್ಳುತ್ತಿದ್ದೇನೆ.

ಆಗಾಮಿಕರ್ಮ ಪ್ರಾರಬ್ಧವಾಗಿ ಬದಲಾಗುವುದಕ್ಕೆ ಮಧ್ಯದಲ್ಲಿ ನಡೆಯುವ ತತಂಗವೇ ಸಂಚಿತಕರ್ಮ ಎಂದು ತಿಳಿದುಹೋಗಿದೆ. ಪ್ರಾರಬ್ಧ ತಯಾರಾಗಿದೆ ಎಂದರೆ ಪುನಃ ಜನ್ಮ ಇದ್ದಂತೆ, ಪುನಃ ಜನ್ಮ ಇದೆಯೆಂದರೆ ಹೊಸ ಆಗಾಮಿ ಇದ್ದಂತೆ, ಆಗಾಮಿ ಇದೆಯೆಂದರೆ ಅದು ಮರಣದಲ್ಲಿ ಸಂಚಿತವಾಗಿ ಜನ್ಮದಲ್ಲಿ ಪ್ರಾರಬ್ಧವಾಗಿ ಹೋಗುತ್ತಿದೆ. ಆಗಾಮಿ ಪ್ರಾರಬ್ಧವಾಗಿ ಬದಲಾಗುವುದಕ್ಕೆ ಸಂಚಿತದಲ್ಲಿ ಒಂದು ರೆಪ್ಪೆತೆಗೆದುಮುಚ್ಚುವಷ್ಟು ಕಾಲ ಹಿಡಿಯುತ್ತದೆಯೆಂದು ತಿಳಿದುಹೋಗಿದೆ. ಈ ಕರ್ಮ ವಿಧಾನವನ್ನು ಗಮನಿಸಿದ ನಂತರ ಮರಣಿಸಿ ದವನಿಗೆ ಪುನರ್ಜನ್ಮ ಇಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಮರಣಿಸಿದವನು ತಪ್ಪದೆ ನಂತರ ಸೆಕೆಂಡಿನಲ್ಲಿಯೇ ಜನ್ಮವನ್ನು ತೆಗೆದುಕೊಳ್ಳುತ್ತದೆ. ಮರಣಿಸಿದ

ಕ್ಷಣದಲ್ಲಿಯೇ ಎರಡನೆ ಜನ್ಮ ಪಡೆಯುತ್ತಿರುವ ಮನುಷ್ಯ (ಜೀವಿಯು) ಸ್ವರ್ಗಕ್ಕೆ, ನರಕಕ್ಕೆ, ಯಾವಾಗ ಹೋಗುತ್ತಾನೆಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! "ಮರಣಿಸಿದವನು ಸ್ವರ್ಗಕ್ಕು ಹೋಗುತ್ತಾನೆ, ನರಕಕ್ಕು ಹೋಗುತ್ತಾನೆ, ಅಲ್ಲಿ ಸ್ವರ್ಗದಲ್ಲಿ ಹೆಂಗಸರೊಂದಿಗೆ ನಾಟ್ಯ ಮಾಡುತ್ತಾನೆ. ನಂತರ ನರಕದಲ್ಲಿ ಒದೆಗಳು ತಿನ್ನುತ್ತಾನೆ ಎನ್ನುವುದು, ಕಾಗೆ ಗುಬ್ಬಚ್ಚಿ ಕಥೆಗಳಂತಹವು. ದೇವರು ತನ್ನ ಗ್ರಂಥಗಳಲ್ಲಿ ಎಲ್ಲಿಯೂ ಹಾಗೆ ಹೇಳಲಿಲ್ಲ. ಮೂರು ಗ್ರಂಥ ಗಳಲ್ಲಿಯೂ ಸ್ವರ್ಗ, ನರಕಗಳನ್ನು ಹೇಳುವುದು ನಡೆದಿದೆ ಆದರೆ ಮನುಷ್ಯರಿಗೆ ದೇವರು ಹೇಳಿರುವುದು ಅರ್ಥವಾಗದೆ, ಸ್ವರ್ಗ ನರಕಗಳನ್ನು ತಮ್ಮ ಇಷ್ಟಬಂದಂತೆ ಊಹಿಸಿಕೊಂಡಿದ್ದಾರೆ. ಆದ್ದರಿಂದಲೇ ಮನುಷ್ಯರು ಹೇಳುವ ಸ್ವರ್ಗ ನರಕಗಳನ್ನು ಕಾಗೆಗುಬ್ಬಚ್ಚಿ ಕಥೆಗಳಾಗಿ ಹೋಲಿಸಿದ್ದೇನೆ. ನಿಜಕ್ಕೆ ಕರ್ಮವಿಧಾನ ತಿಳಿದರೆ ಜನ್ಮವಿಧಾನ ತಿಳಿಯುತ್ತದೆ. ಜನ್ಮ ವಿಧಾನ ತಿಳಿದರೆ ಜನ್ಮದಲ್ಲಿರುವ ಸ್ವರ್ಗ, ನರಕಗಳು ತಿಳಿಯುತ್ತವೆ. ಜನ್ಮ, ಕರ್ಮ ವಿಧಾನಗಳು ಅರ್ಥವಾಗದಿದ್ದರೆ ಮೇಲೆ ಸ್ವರ್ಗ, ಕೆಳಗೆ ನರಕವಿದ್ದಂತೆ ತಿಳಿಯುತ್ತದೆ. ಅಂತಹವನಿಗೆ ಜನ್ಮ ಕರ್ಮ ಎರಡೂ ತಿಳಿಯದಿರುವಾಗ ಸ್ವರ್ಗ ನರಕಗಳು ಕೂಡಾ ತಿಳಿಯದೆಂದೇ ಹೇಳಬಹುದು. ಇಲ್ಲಿಗೆ ಈ ವಿಷಯವನ್ನು ನಿಲ್ಲಿಸಿ ನಂತರ ಪ್ರಶ್ನೆಯಲ್ಲಿ ಏನಿದೆಯೊ ನೋಡೋಣ.

**ಪ್ರಶ್ನೆ :–** ಹೇತುವಾದಕ್ಕು ಮತಕ್ಕು ಸರಿಹೋಗುತ್ತದಾ?

**ಉತ್ತರ :–** ಈ ದಿನ ಹೇತುವಾದ ನಾಸ್ತಿಕವಾದ ಎಂಬ ಮುಸುಗಿನೊಳಗೆ ಹೊರಟುಹೋಗಿದೆ. ಆದರೂ ಅಲ್ಲಲ್ಲಿ ನಿಜವಾದ ಹೇತುವಾದ ಇದ್ದೇಯಿದೆ. ಹೇತುವಾದ ಎಂಬುದು ಮನುಷ್ಯನಲ್ಲಿ ಚಿಕ್ಕಂದಿನಲ್ಲಿಯೇ ಮೊದಲಾಗುತ್ತದೆ. ಚಿಕ್ಕ ವಯಸ್ಸಿನಲ್ಲಿಯೇ ಚಿಕ್ಕ ಚಿಕ್ಕ ಪ್ರಶ್ನೆಗಳಿಂದ ಮೊದಲಾಗಿದೆ ಹೇತುವಾದವೆಂದು ಆಗ ತಿಳಿಯದಿದ್ದರೂ, ದೊಡ್ಡವನಾದ ನಂತರ ಸ್ವಲ್ಪಕಾಲಕ್ಕಾದರೂ ತಿಳಿಯಬಲ್ಲದು. ನನ್ನ ಅನುಭವದಲ್ಲಿರುವ ಒಂದು ವಿಷಯವನ್ನು ಹೇಳುತ್ತೇನೆ ಕೇಳಿರಿ. ಬಹುಶಃ ನನ್ನ ವಯಸ್ಸು ಹತ್ತು ಅಥವಾ ಹನ್ನೊಂದು ವರ್ಷಗಳಿರಬಹುದು. ಆಗ ನಮ್ಮ ಅಮ್ಮನ ತಂದೆಯರಾದ ತಾತನೊಂದಿಗೆ ಸಾಯಂಕಾಲ ಗುಡಿಗೆ ಹೋಗಿ ಅಲ್ಲಿ

ಸ್ವಲ್ಪಸಮಯ ಕುಳಿತುಕೊಳ್ಳುತ್ತಿದ್ದೆವು. ನಾವು ಹೋದ ಗುಡಿ(ದೇವಸ್ಥಾನ) ಬಹಳ ದೊಡ್ಡದು, ಬಹಳ ಪುರಾತನವಾದುದು. 'ಪಾಮಿಡಿ' ಎಂಬ ಊರಿನಲ್ಲಿ ಪೆನ್ನಾನದಿ ತೀರದಲ್ಲಿ ಆ ದೇವಾಲಯವಿದೆ. ಪ್ರತಿ ದಿನ ಆ ದೇವಾಲಯಕ್ಕೆ ಹೋಗುತ್ತಿದ್ದೇವು. ಅದು ಯಾವ ದೇವಾಲಯವೊ ನನಗೆ ಜ್ಞಾಪಕವಿಲ್ಲ. ಆದರೆ ದೊಡ್ಡ ದೇವಾಲಯ ಎಂದುಮಾತ್ರ ಗುರುತಿದೆ. ನಮ್ಮ ತಾತನೊಂದಿಗೆ ಗುಡಿಗೆಹೋಗಿ ಅಲ್ಲಿ ಕುಳಿತುಕೊಂಡಾಗ ನನಗೆ ಪ್ರಶ್ನೆಗಳು ಬರುತ್ತಿದ್ದವು. ಬಂದಿರುವ ಪ್ರಶ್ನೆಗಳನ್ನು ತಾತನನ್ನು ಕೇಳಿ ತಿಳಿದುಕೊಳ್ಳುತ್ತಿದ್ದೇನು. ತಾತನವರಿಗೆ ಆ ಕಾಲದಲ್ಲಿಯೇ ಟೀಚರ್‌ಆಗಿ ಕೆಲಸ ಮಾಡಿದ ಅನುಭವವಿದೆ. ಹಳೆಯಕಾಲದ ಓದುಗಳು ಹೇಳಿದವನಾದ್ದರಿಂದ ಆತನಿಗೆ ಭಾರತ, ಭಾಗವತ, ರಾಮಾಯಣ ಗ್ರಂಥಗಳನ್ನು ಓದಿದ ಅನುಭವವು ಇದೆ. ಅಷ್ಟೇಯಲ್ಲ ಭಗವದ್ಗೀತೆಯನ್ನು, ಪುರಾಣಗಳನ್ನು ಓದಿದ ಅಭ್ಯಾಸ ಕೂಡಾ ಇದೆ. ಅಂತಹ ವ್ಯಕ್ತಿಯೊಂದಿಗಿರುವ ನಾನು ಪ್ರಶ್ನಿಸಿದಾಗ ಆತನ ಉತ್ತರಗಳು ಹೇಳುತ್ತಿದ್ದನು. ಒಂದುದಿನ ನಮ್ಮ ಇಬ್ಬರ ಮಾತುಗಳು ಹೀಗೆ ಸಾಗಿವೆ.

**ನನ್ನ ಪ್ರಶ್ನೆ:–** ತಾತ! ಗುಡಿಯನ್ನು ಏಕೆ ಕಟ್ಟಿದ್ದಾರೆ?

**ತಾತನ ಉತ್ತರ:–** ದೇವರಿದ್ದಾನೆಂದು ತಿಳಿಯುವುದಕ್ಕೆ. ಗುಡಿಗೆ ಬಂದ ಪ್ರತಿಯೊಬ್ಬನೂ ದೇವರಿಗೆ ನಮಸ್ಕಾರ ಮಾಡಿಕೊಂಡು ಹೋಗುವುದಕ್ಕೆ. ಅಷ್ಟೇ ಅಲ್ಲದೆ ಕೆಲವರು ಪೂಜೆಗಳು ಮಾಡಿಯಾಗಲಿ, ಮಾಡಿಸಿ ಆಗಲಿ ಹೋಗುತ್ತಿರುತ್ತಾರೆ. ಈ ವಿಧವಾಗಿ ಬಂದ ಪ್ರತಿಯೊಬ್ಬನೂ ಗುಡಿಯಲ್ಲಿರುವ ದೇವರನ್ನು ಪೂಜಿಸಿಯೊ, ನಮಸ್ಕರಿಸೋ, ದೇವರಿಗೆ ತಮ್ಮ ವಿಧೇಯತೆಯನ್ನು ತಿಳಿಸಿ ಹೋಗುತ್ತಾರೆ. ಹಾಗೆ ಮಾಡುವುದರಿಂದ ತಮಗೇ ಅಲ್ಲದೆ ತಮ್ಮೊಂದಿಗೆ ಬರುವ ಮಕ್ಕಳಿಗಾಗಲಿ, ಉಳಿದ ಭಕ್ತಿ ಭಾವಗಳು ಇಲ್ಲದವರಿಗಾಗಲಿ ದೇವರಿದ್ದಾನೆಂಬ ಭಾವನೆ ಬರುತ್ತದೆ.

**ನಾನು :–** ಇಲ್ಲಿ ಈ ಗುಡಿ ದೊಡ್ಡದಾಗಿದೆ. ಈ ಗುಡಿಯಲ್ಲಿನ ದೇವರು ಗಂಡು ದೇವರು. ನಮ್ಮ ಊರಿನಲ್ಲಿರುವ ಗುಡಿ ಚಿಕ್ಕದಾಗಿದೆ, ಆ ಗುಡಿಯಲ್ಲಿರುವ

ದೇವರು ಹೆಣ್ಣುದೇವರು. ದೊಡ್ಡ ಗುಡಿಗಳಲ್ಲಿ ಗಂಡುದೇವರು, ಚಿಕ್ಕ ಗುಡಿಯಲ್ಲಿ ಹೆಣ್ಣು ದೇವರು ಇರುತ್ತಾರಾ?

**ತಾತ :–** ಹಾಗೆಲ್ಲ ಏನು ಇರುವುದಿಲ್ಲ. ಪೂರ್ವದಲ್ಲಿ ಕಟ್ಟಿರುವವು ದೊಡ್ಡದಾಗಿರುತ್ತವೆ. ಈ ಮಧ್ಯಕಾಲದಲ್ಲಿ ಕಟ್ಟಿರುವವು ಚಿಕ್ಕದಾಗಿರುತ್ತವೆ. ದೊಡದ್ದು ಚಿಕ್ಕದು ಗುಡಿಗಳಲ್ಲಿ ಏನು ವ್ಯತ್ಯಾಸ ಇರುವುದಿಲ್ಲ. ಹೆಣ್ಣು, ಗಂಡು ಎಂಬುದು ಅಲ್ಲಿ ಇಟ್ಟಿರುವ ಪ್ರತಿಮೆಯನ್ನನುಸರಿಸಿ ಇರುತ್ತದೆ.

**ನಾನು :–** ಒಂದುಕಡೆ ಹೆಣ್ಣು ದೇವರನ್ನು, ಒಂದುಕಡೆ ಗಂಡು ದೇವರನ್ನು ಏಕೆ ಇಟ್ಟಿದ್ದಾರೆ? ಅಸಲು ದೇವರು ಗಂಡಸಾ, ಹೆಂಗಸಾ?

**ತಾತ :–** ದೇವರು ಗಂಡಸೇ, ಅದಕ್ಕೇ ಆತನನ್ನು ದೇವರು ಎನ್ನುತ್ತಿದ್ದೇವೆ. ದೇವರಿಗೆ ಮಡದಿಯಾಗಿರುವ ಆಕೆಯನ್ನು ದೇವತೆ ಅನ್ನುತ್ತಿದ್ದೇವೆ. ದೇವತೆ ಎಂದರೆ ಹೆಣ್ಣು ಎಂದು ದೇವರು ಎಂದರೆ ಗಂಡು ಎಂದು ಅರ್ಥ ಮಾಡಿಕೊಳ್ಳಬೇಕು.

**ನಾನು :–** ತಿರುಪತಿ ವೆಂಕಟೇಶ್ವರನು, ಗೋರಂಟ್ಲ ಮಾಧವರಾಯನು, ಕಸಾಪುರಂ ಆಂಜನೇಯನು ಎಂದು ಬೇರೆಬೇರೆ ಊರುಗಳಲ್ಲಿ ಬೇರೆಬೇರೆ ಹೆಸರುಗಳಿರುವ ದೇವರುಗಳು ಇದ್ದಾರೆ ಅಲ್ಲವೆ! ಇವರು ಮೂವರು ಸಮಾನವಾದ ದೇವರುಗಳೇನಾ ಇಲ್ಲವೆ ಇವರಲ್ಲಿ ಕೂಡ ಹೆಚ್ಚು ಕಡಿಮೆಗಳಿರುತ್ತವೆಯಾ? ಇವರಲ್ಲಿ ಅಸಲಾದ ದೇವರು ಯಾರು?

**ತಾತ :–** (ಆತನು ಸ್ವಲ್ಪ ತಡವರಿಸುತ್ತಾ) ಇವರೆಲ್ಲರೂ ದೇವರಿದ್ದಾನೆಂಬ ಗುರುತಿಗೆ ಇದ್ದಾರಾಗಲಿ, ಇವರ್‍ಯಾರೂ ಅಸಲಾದ ದೇವರು ಅಲ್ಲ. ದೇವರು ಇದ್ದಾನೆಂದು ಎಲ್ಲರಿಗೂ ತಿಳಿಯುವುದಕ್ಕೆ ಗುಡಿಗಳನ್ನು, ದೇವತೆಗಳನ್ನು ಇಟ್ಟಿದ್ದಾರೆ. ಅಷ್ಟೇಯಾಗಲಿ ಗುಡಿಗಳಲ್ಲಿರುವವರೆಲ್ಲರೂ ದೇವರು ಅಲ್ಲ.

**ನಾನು :–** ಇವರೆಲ್ಲರೂ ದೇವರು ಅಲ್ಲದಿದ್ದರೆ ಅಸಲಾದ ದೇವರು ಯಾರು? ಎಲ್ಲಿದ್ದಾನೆ?

**ತಾತ :–** ಅಸಲಾದ ದೇವರನ್ನು ದೇವರೆಂದೇ ಅನ್ನುತ್ತಾರೆ. ಆತನಿಗೆ ಬೇರೆ ಹೆಸರು ಏನುಯಿಲ್ಲ. ಆತನು ಸರ್ವಾಂತರ್ಯಾಮಿ. ಎಲ್ಲೆಡೆ ಇರುತ್ತಾನೆ. ಇಲ್ಲಿ ಕೂಡಾ ಇದ್ದಾನೆ.

**ನಾನು :–** ದೇವರು ಎಲ್ಲಾಕಡೆ ಇದ್ದರೆ, ಇಲ್ಲಿಯೂ ಕೂಡಾ ಇದ್ದರೆ, ಈಗ ನಮಗೆ ಏಕೆ ಕಾಣಿಸಲಿಲ್ಲ?

**ತಾತ :–** ದೇವರು ಯಾರಿಗೂ ಕಾಣಿಸುವುದಿಲ್ಲ, ಏಕೆಂದರೆ ಆತನಿಗೂ ನಮಗೂ ಮಧ್ಯದಲ್ಲಿ ಮಾಯೆ ಎಂಬ ತೆರೆ ಇದೆ. ಅದನ್ನು ತೆಗೆದು ನೋಡಿದರೆ ಆಗ ದೇವರು ಕಾಣಿಸುತ್ತಾನೆ.

**ನಾನು :–** ದೇವರು ಕಾಣಿಸದಂತೆ ಮಾಯೆ ಅಡ್ಡವಾಗಿದ್ದರೆ ಅದಾದರೂ ಕಾಣಿಸಬೇಕಲ್ಲವೆ! ಅದು ಕಾಣಿಸಿದರೆ ಅಲ್ಲವೆ, ಅದನ್ನು ತೊಲಗಿಸಿ ನೋಡುವುದು. ಮಾಯೆ ಎಂಬ ಬಟ್ಟೆ ಎಲ್ಲಿಯೂ ಕಾಣಿಸಲಿಲ್ಲವೇ?

(ಆಗ ಆತನ ಉತ್ತರ ಹೇಳುವುದರಲ್ಲಿ ಸ್ವಲ್ಪ ತಡವರಿಸಿದ್ದಾನೆ. ಆಗ ಆತನು ನನ್ನನ್ನು ನೋಡಿ ನಗುತ್ತಾ ಹೀಗೆ ಅಂದನು.)

**ತಾತ :–** ಈಗ ನಿನ್ನದು ಚಿಕ್ಕವಯಸ್ಸು ಅಲ್ಲವೆ! ಆದ್ದರಿಂದ ಮಾಯೆ ಎಂದರೆ ಏನೊ ಹೇಗೆ ಅಡ್ಡವಿದೆಯೋ ಕಾಣಿಸುವುದಿಲ್ಲ. ವಯಸ್ಸು ಬೆಳೆದ ನಂತರ ಚೆನ್ನಾಗಿ ಕಾಣಿಸುತ್ತದೆ. ಆಗ ಮಾಯೆ ಎಂಬ ತೆರೆ ದೇವರಿಗೆ ಅಡ್ಡವಾಗಿ ಇದೆಯೆಂದು ತಿಳಿಯುತ್ತದೆ. ಅದಕ್ಕೋಸ್ಕರ ಸ್ವಲ್ಪ ವಯಸ್ಸು ಬರುವವರೆಗೂ ಕಾದುಕೊಂಡಿರಬೇಕು.

ಆತನು ಹೇಳಿರುವುದು ಅಸತ್ಯವೆಂದು, ಈಗ ಕಾಣಿಸದ ಮಾಯೆ ವಯಸ್ಸು ಬಂದ ನಂತರ ಹೇಗೆ ಕಾಣಿಸುತ್ತದೆಂದು, ಆತನು ಸರಿಯಾದ ಉತ್ತರವನ್ನು ಹೇಳಲಾರದೆ ಹಾಗೆ ದಾಟುಹಾಕುತ್ತಿದ್ದಾನೆಂದು ನನಗೆ ಅರ್ಥವಾಗಿದೆ. ಅಲ್ಲಿಗೆ ಆ ವಿಷಯವನ್ನು ಬಿಟ್ಟಿದ್ದೇವೆ. ನನಗೆ ಸ್ವಲ್ಪ ವಯಸ್ಸು ಬಂದ ನಂತರ

ತಾತನವರು ಹೇಳಿರುವುದು ಸತ್ಯವೇ ಅನಿಸಿದೆ. ಕಾಣಿಸುವುದೆಂದರೆ ಕಣ್ಣಿಗೇ ಕಾಣಿಸಬೇಕೆಂದು ಏಕೆ ಅಂದುಕೊಳ್ಳಬೇಕು, ಬುದ್ಧಿಗೆ ತಿಳಿದರೂ ಕಾಣಿಸಿದಂತೆ ಅಲ್ಲವೆ! ಆ ಉದ್ದೇಶದಿಂದ ಹೇಳಿರುತ್ತಾನೆಂದುಕೊಂಡಿದ್ದೇನೆ. ಆತನು ಒಂದು ವಿಧವಾಗಿ ಆಧ್ಯಾತ್ಮಿಕ ಮಾರ್ಗದಲ್ಲಿ ಹೋಗುತ್ತಾ ಸ್ವಲ್ಪ ಮಾರ್ಗತಪಿಹೋಗಿ ಜಪ, ಧ್ಯಾನ ಮಾಡುವವನೆಂದು ಅರ್ಥವಾಗಿದೆ. ಆತನು ಜ್ಞಾನಿಯೇ ಎಂದು ಆತನ ಸಾವಿನಲ್ಲಿ ನನಗೆ ಸ್ವಲ್ಪಮಟ್ಟಿಗೆ ತಿಳಿದಿದೆ. ನಾವು ಹಾಗೆ ಮಾತನಾಡಿದ ನಂತರ ಸುಮಾರು ಮೂರು ಅಥವಾ ನಾಲ್ಕು ವರ್ಷಗಳಿಗೆ ಆತನು ಮರಣಿಸಿದ್ದಾನೆ. ಆ ಸಮಯದಲ್ಲಿ ನಾನು ಅಲ್ಲಿಯೇ ಇದ್ದೇನೆ. ಆತನು ನಾಳೆ ಸಾಯುತ್ತೇನೆಂದು ಈ ದಿನವೇ ಹೇಳಿದ್ದಾನೆ. ನಾಳೆ ಈ ಸಮಯಕ್ಕೆ ಮರಣಿಸುತ್ತೇನೆ, ನನಗೆ ಆ ವಿಷಯವನ್ನು ಸರಸ್ವತಿ ಅಮ್ಮ ಹೇಳುತ್ತಾ ಇದ್ದಾಳೆ ನಿಮಗೆ ಕೇಳಿಸುತ್ತಿಲ್ಲವಾ, ಅಮ್ಮ ನಿಮಗೆ ಕಾಣಿಸುತ್ತಿಲ್ಲವಾ ಎಂದು ಆತನು ಕೇಳಿದ ಮಾತುಗಳು ಈಗಲೂ ನನಗೆ ಚೆನ್ನಾಗಿ ಜ್ಞಾಪಕ ಇವೆ. ಆತನು ಆಗ ಹೇಳಿದಂತೆಯೆ ಎರಡನೆ ದಿನ ಮರಣಿಸುವುದನ್ನು ನೋಡಿದ ನಂತರ ಆತನು ಹೇಳಿದ ಮಾತುಗಳು ಸತ್ಯವೆಂದು, ಆತನಿಗೆ ಸರಸ್ವತಿದೇವಿ ಕಾಣಿಸಿ ಮೊದಲೆ ಆತನ ಮರಣ ವಿಷಯವನ್ನು ಹೇಳಿದ್ದಾಳೆಂದು ಅರ್ಥವಾಗಿದೆ. ಆತನು ಚೆನ್ನಾಗಿ ಮಾತನಾಡುತ್ತಿದ್ದರೂ, ನಿಮಗೆ ಕಾಣಿಸಲಿಲ್ಲವಾ, ಕೇಳಿಸಲಿಲ್ಲವಾ ಎಂದು ಕೇಳುತ್ತಿದ್ದರೂ, ಆ ಮಾತುಗಳನ್ನು ಹಗುರವಾಗಿ ತೆಗೆದುಕೊಂಡು ಆತನಿಗೆ ಆರೋಗ್ಯ ಚೆನ್ನಾಗಿಲ್ಲದೆ ಹಾಗೆ ಮಾತನಾಡುತ್ತಿದ್ದಾನೆಂದು ಅಂದುಕೊಂಡಿದ್ದೇವೆ. ಈಗ ಆಲೋಚಿಸಿದರೆ ಆತನು ಬೋಧಕನಾಗಿದ್ದು (ಟೀಚರಾಗಿದ್ದು) ಪ್ರತಿವರ್ಷ ಸರಸ್ವತಿ ಪೂಜೆ ಮಾಡುತ್ತಿದ್ದನು. ಆತನ ಇಷ್ಟದೇವತೆ ಸರಸ್ವತಿ ಪೂರ್ವದಲ್ಲಿ ಹಳ್ಳಿಗಳಲ್ಲಿ ಪಾಠಶಾಲೆ ಇಲ್ಲದಿದ್ದರೂ ತಾತಯ್ಯನವರು ಎಷ್ಟೋಜನರಿಗೆ ವಿದ್ಯೆಯನ್ನು ಕಲಿಸಿದ್ದಾನೆ, ಆ ಕಾಲದಲ್ಲಿ ಭಾರತ, ಭಾಗವತಗಳನ್ನು ಓದಿ ಕೇಳಿಸುತ್ತಿದ್ದನು. ಆದ್ದರಿಂದ ಆತನಿಗೆ ಇಷ್ಟದೇವತೆಯಾದ ಸರಸ್ವತಿದೇವಿ ಅಂತ್ಯಕಾಲದಲ್ಲಿ ಕಾಣಿಸಿ ನಾಳೆ ಮರಣಿಸುತ್ತೀಯ ಎಂದು ಹೇಳುವುದು ನಡೆದಿದೆಂದು ಅಂದುಕೊಳ್ಳುತ್ತಿದ್ದೇನೆ. ಆತನ ಮರಣದಲ್ಲಿ ನಡೆದ ವಿಷಯವನ್ನು ಯಾರೂ ದೊಡ್ಡದಾಗಿ ಹಿಡಿಸಿಕೊಳ್ಳಲಿಲ್ಲ. ನನಗೆಮಾತ್ರ

ಆ ವಿಷಯ ಬಹಳ ಚೆನ್ನಾಗಿ ಗುರುತಿದೆ. ಹಾಗೆ ನಾನು ಗುರುತಿಸಿಕೊಳ್ಳುವುದಕ್ಕೆ ಕಾರಣ ನನ್ನಲ್ಲಿ ಹೇತುವಾದ ದೃಷ್ಠಿ ಇದೆ. ಪ್ರತಿವೊಂದಕ್ಕು ಸಮಾಧಾನವನ್ನು, ಕಾರಣವನ್ನು ಹುಡುಕುವವನು, ಕಾರಣವನ್ನು ಕುರಿತು ಪ್ರಶ್ನಿಸುವುದನ್ನು ಹೇತುವಾದ ಎನ್ನುತ್ತೇವೆ.

ಹೇತುವನ್ನು (ಕಾರಣವನ್ನು) ಪ್ರಶ್ನಿಸುವುದು ಉತ್ತರವನ್ನು ಸ್ವೀಕರಿಸುವುದು ಹೇತುವಾದ ಎನ್ನುತ್ತೇವೆ. ಹೇತುವಾದ ಪ್ರತಿಯೊಬ್ಬರಲ್ಲಿ ಚಿಕ್ಕಂದಿನಿಂದ ಮೊದಲಾದರೂ, ದೊಡ್ಡವಯಸ್ಸು ಬಂದಂತೆಲ್ಲ ಅದು ಅವರಲ್ಲಿ ಕಡಿಮೆಯಾ ಗುತ್ತದೆ. ಕೆಲವರಲ್ಲಿ ಮಾತ್ರ ಹಾಗೆಯೇ ಇರುತ್ತದೆ. ಕೆಲವರಲ್ಲಿ ಮಾತ್ರ ವಯಸ್ಸು ಬೆಳೆದಂತ್ತೆಲ್ಲ ಹೇತುವಾದ ದೃಷ್ಠಿ ಬೆಳೆಯುತ್ತಾ ಬರುತ್ತದೆ. ಅಂತಹವರು ಅನ್ವೇಷಣೆ ಮಾಡುತ್ತಾ ಕೊನೆಗೆ ಏನನ್ನಾದರೂ ತಿಳಿಯಬಲ್ಲರು. ಹೇತುವಾದ ದೃಷ್ಠಿ ಇಲ್ಲದವರು ಎಲ್ಲಿಹಾಕಿದ ಗೊಂಗಡಿ ಅಲ್ಲೇ ಅನ್ನುವಂತೆ, ಹೊಸ ವಿಷಯವನ್ನು ಏನು ತಿಳಿಯದೆ ಸರ್ವಸಾಧಾರಣವಾಗಿ ಇರುತ್ತಾರೆ. ಹೇತುವಾದ ಇಲ್ಲದ ಜೀವನ ಅರ್ಥವಿಲ್ಲದ ಜೀವನವಾಗುತ್ತದೆ. ಹೇತುವಾದ ಇರುವವನೆ ಜ್ಞಾನಿ ಆಗುತ್ತಾನೆ. ಆದ್ದರಿಂದ ಮನುಷ್ಯನಿಗೆ ಹೇತುವಾದ ಮುಖ್ಯವೆಂದು ಅನ್ನುತ್ತಿದ್ದೇವೆ. ಈದಿನ ನಾಸ್ತಿಕವಾದಿಗಳಾದವರು ದೇವರೆ ಇಲ್ಲವೆನ್ನುವವರು ಅಡ್ಡ ಪ್ರಶ್ನೆಗಳು ಹಾಕುತ್ತಾ ಅವುಗಳನ್ನೆ ಹೇತುವಾದ ಅಂದುಕೊಳ್ಳುತ್ತಿದ್ದಾರೆ. ಈ ದಿನ ಹೇತುವಾದಿಗಳು ಕಾಣಿಸುತ್ತಿಲ್ಲವಾಗಲಿ, ಹೇತುವಾದಿ ಗಳೆಂದು ಹೇಳಿಕೊಳ್ಳುವ ನಾಸ್ತಿಕವಾದಿಗಳು ಕಾಣಿಸುತ್ತಿದ್ದಾರೆ. ನಾಸ್ತಿಕವಾದದಲ್ಲಿ ಅನ್ವೇಷಣೆ ಇರುವುದಿಲ್ಲ. ನಾಸ್ತಿಕವಾದದಲ್ಲಿ ತನಗೆತಾನಾಗಿ ನಿರ್ಣಯವನ್ನು ತೆಗೆದುಕೊಳ್ಳುವುದು ನಡೆಯುತ್ತಿರುತ್ತದೆ. ತನಗೆ ಅರ್ಥವಾಗಿರುವು ದೆಲ್ಲ ಸತ್ಯ, ಅರ್ಥವಾಗದಿರುವುದೆಲ್ಲ ಅಸತ್ಯ ಎಂದು ನಾಸ್ತಿಕವಾದಿಗಳು ಅನ್ನುತ್ತಿದ್ದಾರೆ. ಅವರಿಗೆ ದೇವರು ಅರ್ಥ ವಾಗಲಿಲ್ಲ. ಆದ್ದರಿಂದ ದೇವರು ಇಲ್ಲ ಎಂಬುದು ಅವರ ವಿಧಾನ. ಹಾಗೆ ಯಾವುದು ಅರ್ಥವಾಗದಿದ್ದರೆ ಅದೆಲ್ಲವೂ ಇಲ್ಲವೆನ್ನುವುದು ಅವರ ನಾಸ್ತಿಕವಿಧಾನವಾಗಿ ಇದೆ.

ಹೇತುವಾದಕ್ಕು ಮತಕ್ಕು ಸ್ನೇಹಸಂಬಂಧ ಕುದುರುತ್ತದಾ? ಎಂಬುದು ನಮಗೆ ಪ್ರಶ್ನೆ. ಇಲ್ಲಿಯವರೆಗೂ ಹೇತುವಾದವನ್ನು ಕುರಿತು ತಿಳಿದುಕೊಂಡಿದ್ದೇವೆ. ಮತಕ್ಕು ಹೇತುವಾದಕ್ಕು ಹೋಲಿಕೆ ಸ್ವಲ್ಪವೂ ಕುದುರುವುದಿಲ್ಲವೆಂದೇ ಹೇಳಬಹುದು. ಮತ ಎಂಬುದು ವ್ಯಾಪಿಸಿಕೊಳ್ಳುವ ಉದ್ದೇಶದಿಂದ ತಯಾರು ಮಾಡಲ್ಪಟ್ಟಿದೆ. ಪೂರ್ವದಲ್ಲಿ ರಾಜರು ರಾಜ್ಯಕಾಂಕ್ಷೆಯಿಂದ ಎಂಥಹ ಅನ್ಯಾಯಕ್ಕಾದರೂ ಸಿದ್ಧವಾಗಿ ಸಿಂಹಾಸವನ್ನು ಅಧಿಷ್ಠಿಸಿದಂತೆ ಮತ ಪ್ರಜೆಗಳಲ್ಲಿ ವಿಸ್ತರಿಸುವುದಕ್ಕೆ ಎಂಥಹ ಪದ್ಧತಿಯಾದರೂ ಅವಲಂಭಿಸುತ್ತದೆ. ಕೊನೆಗೆ ಹಿಂಸೆಯಿಂದಾದರೂ ಮತವನ್ನು ವ್ಯಾಪ್ತಿ ಆಗುವಂತೆ ಮಾಡಿಕೊಳ್ಳುತ್ತದೆ. ಅಂತಹ ಪದ್ಧತಿಯಲ್ಲಿ ಮತಕ್ಕೆ ಒಂದು ಸಿದ್ಧಾಂತವೆನ್ನುವುದು ಇರುವುದಿಲ್ಲ. ಈದಿನ ಭೂಮಿಮೇಲಿರುವ ಮತಗಳೆಲ್ಲವೂ ಹಾಗೆಯೇ ಪೋಟಿಬೀಳುತ್ತಾ, ಕೊನೆಗೆ ಹಿಂಸಾಮಾರ್ಗವನ್ನು ಅನುಸರಿಸುತ್ತೀವೆ. ಹೇತುವಾದ ಸತ್ಯವನ್ನು ಅನ್ವೇಷಿಸುತ್ತಿದೆ. ಮತ ವ್ಯಾಪ್ತಿಗೋಸ್ಕರ ಸತ್ಯವನ್ನು ಬಿಟ್ಟು ದ್ವೇಷದಿಂದ, ಹಿಂಸೆಯಿಂದ ಪ್ರವರ್ತಿಸುತ್ತಿದೆ. ಆದ್ದರಿಂದ ಮತಕ್ಕು ಹೇತುವಾದಕ್ಕು ಸ್ನೇಹಸಂಬಂಧ ಕುದುರುವುದಿಲ್ಲ. ಮತದ್ದು, ಹೇತುವಾದದ್ದು ಎರಡು ಬೇರೆಬೇರೆ ಮಾರ್ಗಗಳು.

**ಪ್ರಶ್ನೆ :–** ಆಕಾಶದಿಂದ ಮೀನುಗಳು, ಕಲ್ಲುಗಳು, ಮಂಜುಗಡ್ಡೆಗಳು, ಮೊಸಳೆಗಳು, ಆಮೆಗಳು, ಹೊಸವಿಧವಾದ ಪ್ರಾಣಿಗಳು ಬೀಳುತ್ತೀವೆ, ಹಾಗೆ ಏಕೆ ನಡೆಯುತ್ತಿದೆ? ಅವೆಲ್ಲಾ ಎಲ್ಲಿಂದ ಬಂದಿವೆ?

**ಉತ್ತರ :–** ಅವೆಲ್ಲವೂ ಮೇಲಿಂದ ಕೆಳಗೆಬಿದ್ದೀವೆ ಎಂದು ನೀವೆ ಹೇಳುತ್ತಿದ್ದೀರಾ ಅಲ್ಲವೆ! ಆ ಮೇಲಕ್ಕೆ ಹೇಗೆ ಬಂದಿವೆ ಎಂಬುದು ಕೇಳಬೇಕಾದ ಪ್ರಶ್ನೆ. ಅದಕ್ಕೆ ಉತ್ತರ ಈ ವಿಧವಾಗಿ ಇದೆ. ಗಗನ ಶೂನ್ಯ ಎಂದು ಎಲ್ಲರಿಗೂ ತಿಳಿದಿದೆ. ಆಕಾಶ ಶೂನ್ಯವಾಗಿದೆ. ಅದರಲ್ಲಿ ಏನು ಇರುವುದಿಲ್ಲ. ಮೇಲೆ ನಾವು ಹೇಳಿಕೊಂಡ ವಸ್ತುಗಳಾಗಲಿ, ಪ್ರಾಣಿಗಳಾಗಲಿ ಇರುವುದಕ್ಕೆ ಆಧಾರವಿಲ್ಲ, ಅವಕಾಶವಿಲ್ಲ. ಆದರೆ ಆಕಾಶದಲ್ಲಿ ಯಾವ ಆಧಾರವಿಲ್ಲದೆ ಇರುವವು ಮೇಘಗಳು ಮಾತ್ರವೇ. ಮೇಘಗಳನ್ನು ಚಿಕ್ಕಂದಿನಿಂದ ನೋಡುತ್ತಿದ್ದೇವೆ. ಆದರೂ ಅವುಗಳನ್ನು ಕುರಿತು

ಯಾರೂ ತಲೆಕೆಡಿಸಿಕೊಳ್ಳುತ್ತಿಲ್ಲ. ಮೇಘಗಳು ಆಕಾಶದಲ್ಲಿ ಹೇಗೆ ತೇಲುತ್ತೀವೆಯೋ ಕೂಡಾ ಸರಿಯಾದ ವಿವರವಿಲ್ಲ. ಮೇಘಗಳನ್ನು ಕುರಿತು ಮಳೆ ಬರುವುದಕ್ಕೆ ಕೆಲಸಕ್ಕೆಬರುತ್ತವೆಂದು ಹೇಳುವುದು ಹೊರೆತು, ಅವು ಇನ್ನೂ ಏನಾದರೂ ಮಾಡುತ್ತೀವೆಯಾ? ಎಂದು ಅವುಗಳ ಮೇಲೆ ಯಾರೂ ಎಂಥಹ ಸಂಶೋಧನೆ ಗಳು ಮಾಡಲಿಲ್ಲ. ಆದ್ದರಿಂದ ಮೇಘಗಳನ್ನು ಕುರಿತು ಪೂರ್ತಿ ಸಮಾಚಾರ ಯಾರಿಗೂ ತಿಳಿಯದು. ಅಂತಹ ಸಂದರ್ಭದಲ್ಲಿ ಮೂರು ವರ್ಷಗಳ ಕೆಳಗೆ "ಮೇಘ ಒಂದು ಭೂತ" ಎಂದು ನಾವು ಮೊಟ್ಟಮೊದಲು ಮೇಘವನ್ನು ಕುರಿತು ಹೇಳಿದ್ದೇವೆ. ನಂತರ **"ದೆವ್ವಗಳ–ಭೂತಗಳ ಯಥಾರ್ಥ ಸಂಘಟನೆಗಳು"** ಅನ್ನುವ ಗ್ರಂಥದಲ್ಲಿ ಮೇಘಗಳನ್ನು ಕುರಿತು ಪೂರ್ತಿಯಾಗಿ ಬರೆಯುವುದು ನಡೆದಿದೆ. ಆಗ ಆ ಗ್ರಂಥದಲ್ಲಿ ಮೇಘಗಳಿಂದ ಕಪ್ಪೆಗಳು, ಮೀನುಗಳು, ಹಾವುಗಳು, ಆಮೆಗಳು, ಮಂಜುಗಡ್ಡೆಗಳು, ಕಲ್ಲುಗಳು ಏನಾದರೂ ಬೀಳುತ್ತವೆಂದು ಹೇಳಿದ್ದೇವೆ. ಅಷ್ಟೇ ಅಲ್ಲದೆ ಅವು ಆಕಾಶದಲ್ಲಿನ ಮೇಘಗಳೊಳಗೆ ಹೇಗೆ ಸೇರುತ್ತವೊ ಕೂಡಾ ಹೇಳಿದ್ದೇವೆ.

ಇದೆಲ್ಲವೂ ಯಾರಿಗೂ ತಿಳಿಯದ ವಿಷಯವಾದರೂ, ನಮಗೆ ಯಾವಾಗಲೋ ತಿಳಿದ ವಿಷಯ. ಮೇಘಗಳು ತಮ್ಮ ಇಷ್ಟಬಂದಕಡೆ ಮಳೆಸುರಿಸುತ್ತವೆ. ಅವುಗಳಿಗೆ ಇಷ್ಟ ಎಂಬುದು ಇದೆ, ಆದ್ದರಿಂದ ಮೇಘವನ್ನು ಪ್ರಾಣ ಇರುವುದಾಗಿ, ಒಂದು ಜೀವಿಯಾಗಿ ಹೇಳಬಹುದು. ಮೇಘವು ಒಂದು ಜೀವಿಯಾದರೆ, ಆ ಜೀವಿಗೆ ಕೆಲವು ಕೆಲಸಗಳು ಕೂಡಾ ಇರುತ್ತವೆ. ಅಂದರೆ ಮೇಘಕ್ಕೆ ಪ್ರಕೃತಿಯಲ್ಲಿ ಕೆಲವು ಕೆಲಸಗಳು ನಿರ್ಣಯಿಸಲ್ಪಟ್ಟಿವೆ. ಮೇಘವು ಏನು ಕೆಲಸಗಳು ಮಾಡುವುದು ಯಾರಿಗೂ ತಿಳಿಯದೆಂದುಕೊಂಡಿದ್ದೇವೆ ಅಲ್ಲವೆ! ಆದರೆ ಮೇಘವು ನಾವು ಊಹಿಸದ ಕೆಲಸಗಳನ್ನು ಕೂಡಾ ಮಾಡುತ್ತಿದೆ. ಭೂಮಿಮೇಲಿರುವ ಮನುಷ್ಯರ ಪಾಲನೆ ಮೇಲೆ ಎಷ್ಟೋ ಅಧಿಕಾರಹೊಂದಿದೆ ಮೇಘ. ಆದ್ದರಿಂದ ಮನುಷ್ಯರ ಜೀವನಗಳ ಮೇಲೆ ಹೊಸ ರೋಗಗಳನ್ನು ಪ್ರವೇಶಿಸುವಂತೆ ಮಾಡುವುದು ಕೂಡಾ ಮೇಘವೇಯೆಂದು ತಿಳಿಯಬೇಕು.

ಮೇಘಗಳಿಂದ ರೋಗಗಳು ಬರುತ್ತವೆಂಬುದು ಎಲ್ಲರಿಗೂ ಹೊಸದಾಗಿದ್ದರೂ ಅದು ಮಾತ್ರ ನಿಜ. ಮೇಘವು ಒಂದು ಜೀವಿಯಾದ್ದರಿಂದ, ಆ ಜೀವಿಯು ದೇವರ ಪಾಲನೆಯಲ್ಲಿ ಇರುವವನಾದ್ದರಿಂದ, ಯಾರನ್ನು ಎಷ್ಟು ಶಿಕ್ಷಿಸಬೇಕು, ಎಷ್ಟು ರಕ್ಷಿಸಬೇಕು ಎಂದು ತಿಳಿದು ಕೆಲಸಮಾಡುತ್ತದೆ. ಪ್ರಕೃತಿಯಲ್ಲಿ ಖಗೋಳದಲ್ಲಿ ಎಷ್ಟೋ ಭೂತಗಳು, ಗ್ರಹಗಳು ಇವೆ. ಅವೆಲ್ಲವೂ ಶಕ್ತಿವಂತವಾದವುಗಳೆ ಖಗೋಳದಲ್ಲಿ ಮೇಘಗಳು ಕೂಡಾ ಒಂದು ಭಾಗವಾಗಿ ಇರುವುದಲ್ಲದೆ ಹೆಚ್ಚಾಗಿ ಕೆಲಸವನ್ನು ಮಾಡುವವಾಗಿವೆ.

ರೋಗಗಳನ್ನು ತಂದು ಮನುಷ್ಯರ ಮಧ್ಯೆ ಬಿಡುವವು ಮೇಘಗಳೆ, ನಂತರ ಅವುಗಳನ್ನು ಮನುಷ್ಯರ ಮಧ್ಯದಲ್ಲಿಂದ ಪುನಃ ತೆಗೆದುಕೊಂಡು ಹೋಗುವವು ಕೂಡಾ ಮೇಘಗಳೆ. ಮೇಘಗಳು ಧೂಳಿಯಾಗಿ, ಹೊಗೆಯಾಗಿ ಕಾಣಿಸಿದರೂ ಅವುಗಳಲ್ಲಿ ಯಾರಿಗೂ ಕಾಣಿಸದಂತೆ ಎಷ್ಟೋ ಘನಪದಾರ್ಥಗಳು ಇವೆ. ಕೆಲವು ತಿಂಗಳ ಕಾಲವಾದರೂ ಕೆಲವು ಸಾವಿರ ಜೀವರಾಶಿಗಳನ್ನು ತನ್ನಲ್ಲಿ ಬಚ್ಚಿಟ್ಟುಕೊಳ್ಳುತ್ತವೆ. ಮೇಘಗಳಲ್ಲಿರುವ ಜೀವರಾಶಿಗಳಿಗೆ ಹಸಿವು ಬಾಯಾರಿಕೆ ಇರುವುದಿಲ್ಲ. ಕರ್ಮ ಆಚರಣೆ ನಿಂತಿರುತ್ತದೆ. ಒಂದು ಮೊಸುಳೆ ಗರ್ಭದಿಂದಿರುವಾಗ ಮೊಟ್ಟೆ ಇಡಬೇಕಾದ ಕಾಲದಲ್ಲಿ ಮೇಘವು ಅದನ್ನು ತೆಗೆದುಕೊಂಡು ಹೋದರೆ, ಅದು ಮೇಘದಲ್ಲಿ ಇರುವವರೆಗೂ ಮೊಟ್ಟೆಯನ್ನು ಇಡುವುದಿಲ್ಲ. ಮೇಘದಲ್ಲಿ ಎಷ್ಟುಕಾಲ ಇರುವುದು ಅದಕ್ಕೆ ಸ್ವಲ್ಪವೂ ತಿಳಿಯದು. ಪೂರ್ತಿ ನಿದ್ರಾವಸ್ಥೆಯಲ್ಲಿ ಇರುತ್ತವೆ. ಈ ವಿಧವಾಗಿ ಯಾವ ಪ್ರಾಣಿಯಾದರೂ ಅದರಲ್ಲಿ ಇರಬಲ್ಲದು. ಮೇಘವನ್ನು ಕುರಿತು ಸಂಪೂರ್ಣವಾಗಿ ತಿಳಿದವರು ಯಾರೂ ಇಲ್ಲ. ಎಷ್ಟು ತಿಳಿದರೂ ಇನ್ನೂ ತಿಳಿಯಬೇಕಾಗಿರುವುದು ಎಷ್ಟೋ ಇರುತ್ತದೆ. ಭೂಮಿಮೇಲೆ ಮನುಷ್ಯರ ಮನುಗಡೆಗೆ ಮೇಘಗಳು ಎಷ್ಟೊ ಸಂಬಂಧಪಟ್ಟಿವೆ. ಹಾಗೆಯೇ ಭೂತಗಳ, ಮಹಾಭೂತಗಳ, ಗ್ರಹಗಳ, ಮಹಾಗ್ರಹಗಳ ಜೋಕ್ಯ ಮಾನವನ ಮನುಗಡೆಯಿಂದ ಸಂಬಂಧವಿದೆಯೆಂದು ಯಾರಿಗೂ ತಿಳಿಯದು. ಈ ಮಧ್ಯಕಾಲದಲ್ಲಿ ಬಹುಶಃ ಹತ್ತುದಿನಗಳ ಕೆಳಗೆ

ಒಂದು ಟಿ.ವಿ ಚಾನಲ್‌ನಲ್ಲಿ ಮೇಘವನ್ನು ಕುರಿತು ಹೇಳುತ್ತಾ ಕೆಲವರು ಪರಿಶೋಧಕರು ಸ್ವಲ್ಪ ಪರಿಮಾಣವಿರುವ ಮೇಘವನ್ನು ಎಷ್ಟು ಬಾರವಿದೆಯೆಂದು ಒಂದು ಯಂತ್ರದಿಂದ ತೂಕ ನೋಡಿದ್ದಾರಂತೆ. ಆಗ ಆ ಮೇಘ ಅವರು ಊಹಿಸದ ರೀತಿಯಲ್ಲಿ ಕೆಲವು ಲಕ್ಷಗಳ ಟನ್ನುಗಳ ಬಾರ ತೂಕವಿದೆಯಂತೆ. ಆ ಮೇಘ ಅಷ್ಟು ಬಾರ ಯಾಕಿದೆ ಅವರಿಗೆ ಅರ್ಥವಾಗಲಿಲ್ಲವಂತೆ. ಮೇಘ ಕೇವಲ ಹೊಗೆಯಂತೆ ಇರುತ್ತದೆ. ಅದೂ ತೆಳುವಾದ ಹೊಗೆಯಂತೆ ಇರುತ್ತದೆ. ಅಂತಹದ್ದು ಅಷ್ಟುಭಾರ ಹೇಗೆ ಇದೆಯೋ ಸ್ವಲ್ಪವೂ ತಿಳಿಯಲಿಲ್ಲ.

ಮೇಘ ಕಣ್ಣಿಗೆ ಕಾಣಿಸುವ ಧೂಳಿನಂತಹದಾದರೂ, ಅದರಲ್ಲಿ ಏನಿದೆಯೋ ಯಾರಿಗೂ ತಿಳಿಯದು, ಒಂದು ಚಿಕ್ಕ ಮೇಘ ತನ್ನಲ್ಲಿ ಎಷ್ಟು ನೀರನ್ನಾದರೂ ಬಚ್ಚಿಟ್ಟುಕೊಳ್ಳುತ್ತದೆ. ಹಾಗೆ ಎಷ್ಟು ವಸ್ತುಗಳನ್ನಾದರೂ, ಎಷ್ಟು ಜೀವರಾಶಿಗಳನ್ನಾದರೂ ಇಟ್ಟುಕೊಳ್ಳುತ್ತದೆ. ಪರಿಶೋಧಕರು ತೂಕಹಾಕಿದ ಮೇಘದಲ್ಲಿ ಏನಿದೆಯೋ, ಇರುವುದನ್ನನುಸರಿಸಿ ಅದರ ಭಾರ ತಿಳಿದಿರುತ್ತದೆಯೆಂದು ನಾನು ಅಂದುಕೊಳ್ಳುತ್ತಿದ್ದೇನೆ, ಮತ್ತೊಂದು ವಿಚಿತ್ರ ಏನೆಂದರೆ ಭೂಮಿಗು ಆಕರ್ಷಣಶಕ್ತಿ ಇದೆಯೆಂದು “ನ್ಯೂಟನ್” ಎಂಬ ಶಾಸ್ತ್ರಜ್ಞನು ಕಂಡುಹಿಡಿದಿದ್ದಾನೆ. ಅದು ಇಂದಿಗೂ ಸಿದ್ಧಾಂತವಾಗಿ ಹೇಳಲಾಗುತ್ತಿದೆ. ಭೂಮಿಗಿರುವ ಆಕರ್ಷಣಶಕ್ತಿ ಒಂದು ವಸ್ತುವೊಂದರ ಬಾರವನ್ನು ತಿಳಿಸುತ್ತಿದೆ. ಭೂಮಿಗೆ ಆಕರ್ಷಣ ಶಕ್ತಿ ಒಂದು ವಸ್ತುವನ್ನು ಕೆಳಗೆ ಎಳೆಯುವುದಕ್ಕೆ ಎಷ್ಟು ಉಪಯೋಗಪಡುತ್ತಿದೆಯೋ ಅದನ್ನು ವಸ್ತುವೊಂದರ ಬಾರ ಅನ್ನುತ್ತಿದ್ದೇವೆ. ಒಂದು ಕಲ್ಲಾಗಲಿ, ಒಂದು ಲೋಹವಾಗಲಿ ಬೇರೆಬೇರೆ ಭಾರಗಳಾಗಿ ಕಾಣಿಸುತ್ತಿವೆ. ಒಂದು ಕಲ್ಲನ್ನು ಸೆಳೆಯುವುದಕ್ಕೆ ಭೂಮಿಗೆ ಎಷ್ಟುಶಕ್ತಿ ಅಗತ್ಯವೊ ಅದನ್ನು ಆ ಕಲ್ಲಿನೊಂದರ ಭಾರ ಅಂದಾಗ ಅದೇ ಕಲ್ಲಿನ ಪರಿಮಾಣವಿರುವ ಕಬ್ಬಿಣತುಣುಕನ್ನು ತೂಕಹಾಕಿ ನೋಡಿದರೆ ಕಲ್ಲಿಗಿಂತ ಎಷ್ಟುಹಂತಗಳು ಹೆಚ್ಚಾಗಿ ಕಾಣಿಸುತ್ತದೆ. ಕಲ್ಲನ್ನು ಸ್ವಲ್ಪಶಕ್ತಿಯನ್ನು ಉಪಯೋಗಿಸಿ ಭೂಮಿಸೆಳೆಯುತ್ತದೆಯೆಂದು, ಆ ಉಪಯೋಗ ಪಡುವಶಕ್ತಿಯನ್ನೇ ಅದರಭಾರ ಅನ್ನುತ್ತಿದ್ದೇವೆಂದು ತಿಳಿದು

ಹೋಗಿದೆ ಅಲ್ಲವೆ! ಕಲ್ಲು ಇಷ್ಟುಬಾರವಿದೆ ಅನ್ನುತ್ತಿದ್ದೇವೆಂದರೆ, ಅದನ್ನು ತನ್ನಕಡೆ ಸೆಳೆದುಕೊಳ್ಳುವುದಕ್ಕೆ ಭೂಮಿಗೆ ಇಷ್ಟು ಶಕ್ತಿ ಉಪಯೋಗಪಟ್ಟಿದೆಂದು ಅರ್ಥವಾಗುತ್ತಿದೆ. ಇದನ್ನನುಸರಿಸಿ ಕಲ್ಲಿನಬಾರ = ಭೂಮಿ ಆಕರ್ಷಣೆ ಎಂದು ಹೇಳಬಹುದು. ಕಲ್ಲಿನ ಪರಿಮಾಣವಿರುವ ಕಬ್ಬಿಣಲೋಹವನ್ನು (ಕಬ್ಬಿಣದಚೂರನ್ನು) ಸೆಳೆಯುವುದಕ್ಕೆ ಭೂಮಿಗೆ ಹೆಚ್ಚಿನಶಕ್ತಿ ಖರ್ಚಾಗುತ್ತಿದೆ. ಆದ್ದರಿಂದ ಕಬ್ಬಿಣದಚೂರು ಹೆಚ್ಚಿನ ಬಾರವನ್ನು ತೂಗಿದೆ. ಹಾಗೆ ಏಕೆ ಕಬ್ಬಿಣದ ತುಂಡನ್ನು ಸೆಳೆದುಕೊಳ್ಳುವುದಕ್ಕೆ ಹೆಚ್ಚಿನಶಕ್ತಿ ಉಪಯೋಗಪಟ್ಟಿದೆ? ಎಂದು ಪ್ರಶ್ನಿಸಿಕೊಂಡು ನೋಡಿದರೆ ನನ್ನವರೆಗೂ ಸ್ವಲ್ಪ ಸಮಾಚಾರ ತಿಳಿಯುತ್ತಿದೆ.

ಪ್ರತಿ ವಸ್ತುವಿನಲ್ಲಿಯೂ ಭೂಮಿಗೆ ವಿಕರ್ಷಣೆಯಾಗಿ ಒಂದು ಶಕ್ತಿ ಕೆಲಸ ಮಾಡುತ್ತಿದೆ. ಕಲ್ಲಿನಲ್ಲಿ ಸ್ವಲ್ಪ ವಿಕರ್ಷಣಶಕ್ತಿ ಇದ್ದರೆ, ಕಬ್ಬಿಣದಲ್ಲಿ ಮತ್ತಷ್ಟು ವಿಕರರ್ಷಣಶಕ್ತಿ ಇರುತ್ತದೆ. ಈ ವಿಧವಾಗಿ ಬೇರೆಬೇರೆ ವಸ್ತುಗಳಲ್ಲಿ, ಬೇರಬೇರೆ ಪದಾರ್ಥಗಳಲ್ಲಿ ಬೇರೆಬೇರೆ ವಿಕರ್ಷಣಶಕ್ತಿಗಳಿರುತ್ತವೆ. ಆದ್ದರಿಂದ ಭೂಮಿಗೆ ಅವುಗಳನ್ನು ತನ್ನಕಡೆ ಸೆಳೆದುಕೊಳ್ಳುವುದಕ್ಕೆ, ಬೇರೆಬೇರೆ ಪರಿಮಾಣದಲ್ಲಿ ಶಕ್ತಿಗಳು ಉಪಯೋಗಪಡುತ್ತಿರುವುದರಿಂದ, ಆ ವಸ್ತುಗಳು ಬೇರಬೇರೆ ಭಾರಗಳು ತೂಗುತ್ತಿವೆ. ಒಂದು ಕಲ್ಲನ್ನು ಸೆಳೆಯುವುದಕ್ಕೆ ಕಲ್ಲಿಗೆ ವಿರುದ್ಧವಾಗಿ ಕೆಲಸಮಾಡುವ ಭೂಮಿಶಕ್ತಿಗಿಂತ ಅದೇ ಪರಿಮಾಣವಿರುವ ಕಬ್ಬಿಣದ ತುಂಡನ್ನು ಸೆಳೆಯುವುದಕ್ಕೆ ಅದರ ವಿಕರ್ಷಣೆಗೆ ವಿರುದ್ಧವಾಗಿ ಭೂಮಿಗೆ ಹೆಚ್ಚಿನಶಕ್ತಿ ವಿನಿಯೋಗಿಸಲಾಗುತ್ತಿದೆ. ಆದ್ದರಿಂದ ಒಂದೆ ಪರಿಮಾಣವಿರುವ ಕಲ್ಲಿಗಿಂತ ಕಬ್ಬಿಣ ಹೆಚ್ಚು ಬಾರ ತೂಗುತ್ತಿದೆ. ಹಾಗೆಯೇ ಮೇಘವೊಂದರ ವಿಕರ್ಷಣಶಕ್ತಿ, ಭೂಮಿವೊಂದರ ಆಕರ್ಷಣಶಕ್ತಿಗಿಂತ ಹೆಚ್ಚು ಇರುವುದರಿಂದ, ಮೇಘವನ್ನು ಭೂಮಿ ಕೆಳಕ್ಕೆ ಸೆಳೆಯದಂತಿದೆಯೆಂದು ಹೇಳುತ್ತಿದ್ದೇವೆ. ಇದು ಕೇವಲ ನನ್ನ ಉದ್ದೇಶ ಮಾತ್ರವೇ. ನನ್ನ ಮಾತಿನ ಮೇಲೆ ನಂಬಿಕೆಯಿಲ್ಲದವರು ನನ್ನ ಉದ್ದೇಶವನ್ನು ಬಿಡಬಹುದು. ಕೆಲವು ಮೇಘಗಳು ಭೂಮಿಗೆ ಬಹಳ ದೂರವಾಗಿ, ಕೆಲವು ಮೇಘಗಳು ಭೂಮಿಗೆ ಪೂರ್ತಿ ಹತ್ತಿರವಾಗಿ ಬರುವುದರಲ್ಲಿ ಅವುಗಳಲ್ಲಿರುವ ವಿಕರ್ಷಣ ಶಕ್ತಿಗಳಿಂದ

ಹಾಗೆ ನಡೆಯುತ್ತಿದೆಯೆಂದು ತಿಳಿಯುತ್ತಿದೆ. ಎರಡು ಮೇಘಗಳಲ್ಲಿ ಒಂದು ಕೆಳಗೆ, ಒಂದು ಅದಕ್ಕಿಂತ ಮೇಲೆ ಇರುವುದಕ್ಕೆ ಕಾರಣ ಮೇಘಗಳು ತಮ್ಮಲ್ಲಿ ತುಂಬಿಕೊಂಡ ವಸ್ತುಗಳನ್ನನುಸರಿಸಿ ಇರುತ್ತದೆಯೆಂದು ತಿಳಿಯುತ್ತಿದೆ. ನನ್ನ ಪರಿಶೀಲನೆಯಲ್ಲಿ ರೋಗಗಳನ್ನು ತುಂಬಿಕೊಂಡ ಮೇಘಗಳಲ್ಲಿ ವಿಕರಣ ಶಕ್ತಿ ಕಡಿಮೆ ಇರುತ್ತದೆ. ಆದ್ದರಿಂದ ಅಂತಹ ಮೇಘಗಳು ಭೂಮಿಗೆ ಹತ್ತಿರವಾಗಿ ಬರುತ್ತಿದೆಯೆಂದು ತಿಳಿಯುತ್ತಿದೆ. ಅಂತಹ ಮೇಘಗಳೆ ಸುಳಿಗಾಳಿ ಮೇಘಗಳಾಗಿ (ಟೋರ್ನಡೋಲಾಗಿ) ಭೂಮಿಮೇಲಕ್ಕೆ ಬರುತ್ತಿವೆ. ಮನುಷ್ಯರನ್ನು ಹಿಂಸಿಸುವುದಕ್ಕೆ ಅಂತಹ ಮೇಘಗಳು ಕೆಳಗೆ ಬರುತ್ತಿವೆ. ಆದ್ದರಿಂದ ಸುಳಿ ಮೇಘಗಳು ಹೆಚ್ಚಾಗಿ ಜನವಾಸಿಗಳ ಮೇಲೆ ಬರುತ್ತಿರುವುದನ್ನು ಗಮನಿಸಬಹುದು. ಈ ವಿಧವಾಗಿ ಮನುಷ್ಯರನ್ನು ಸಂತೋಷ ಇಡುವುದರಲ್ಲಿಯೂ, ಹಿಂಸಿಸುವುದರಲ್ಲಿಯೂ ಮೇಘಗಳು ಎಷ್ಟೋ ಪಾತ್ರಗಳು ಪೋಷಿಸುತ್ತೀವೆ. ಆದ್ದರಿಂದ ಮಾನವರ ಕರ್ಮವನ್ನನುಸರಿಸಿ ಮೇಘಗಳು ಮಳೆಸುರಿಸುವುದಲ್ಲದೆ ಎಷ್ಟೋ ವಿಧಗಳ ವಸ್ತುಗಳನ್ನು, ಪದಾರ್ಥಗಳನ್ನೂ, ಜೀವರಾಶಿಗಳನ್ನೂ ತಂದು ಬಿಡುತ್ತಿವೆ. ಕೆಲವು ಕ್ರೂರ ಪ್ರಾಣಿಗಳನ್ನು ಕೂಡಾ ಮೇಘಗಳು ತಂದು ಅವುಗಳ ಸಂಚಾರವಿಲ್ಲದಕಡೆ ಅವುಗಳನ್ನು ಬಿಡುತ್ತಿವೆ. ಆದ್ದರಿಂದ ಪ್ರಾಣಿಗಳಿಲ್ಲದ ಪ್ರದೇಶದಲ್ಲಿ ಕೂಡಾ ಇದಕ್ಕಿಂದಂತೆ ಅವು ಕಾಣಿಸುವುದು ನಡೆಯುತ್ತಿದೆ. ಈ ವಿಧವಾಗಿ ಮೇಘಗಳು ನಮಗೆ ತಿಳಿಯದ ಎಷ್ಟೋ ಕಾರ್ಯಗಳನ್ನು ಮಾಡುತ್ತಿವೆ.

ಮೇಘ ಒಂದು ಭೂತ ಎಂದು ಮೊದಲೇ ಹೇಳಿಕೊಂಡಿದ್ದೇವೆ. ಭೂತ ಅಂದರೆ ಶಕ್ತಿವಂತವಾದ ಜೀವಿ ಎಂದು ಅರ್ಥ. ದೇವರ ಜ್ಞಾನವನ್ನು ಚೆನ್ನಾಗಿ ತಿಳಿದ ಜೀವಿಯಾಗಿ ಮೇಘವಿದೆ. ದೇವರ ಬೆಲೆಯನ್ನು ತಿಳಿದು, ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿದಿರುವವು ಮೇಘಗಳು, ಭೂಮಿಮೇಲೆ ಮಾನವರ ಜೀವನಗಳ ಬದುಕುಗಳಿಂದ ಸಂಬಂಧ ಹೊಂದಿರುವ ಮೇಘಗಳು, ಮೇಲಿಂದ ಮಾನವರ ಜೀವನಗಳನ್ನು ಪ್ರವರ್ತನೆಗಳನ್ನು ನೋಡುತ್ತಿವೆ. ಮೇಘಗಳು ಶಕ್ತಿವಂತವಾದ ಭೂತಗಳು, ಆದ್ದರಿಂದ ಅವುಗಳ ಆಜ್ಞೆಗಳಿಂದ ನಡೆಯುವಶಕ್ತಿಗಳು, ಗ್ರಹಗಳು ಎಷ್ಟೋ ಇವೆ. ಭೂಮಿಮೇಲೆ ಕಾಣಿಸದೆ

ತಿರುಗುತ್ತಿರುವ ಕೆಲವು ಗ್ರಹಶಕ್ತಿಗಳು ಮೇಘಗಳ ಆದೇಶಗಳ ಪ್ರಕಾರ ನಡೆದುಕೊಳ್ಳುತ್ತವೆ. ಮನುಷ್ಯನೊಂದರ ಕರ್ಮವನ್ನನುಸರಿಸಿ ದೇವರ ಪಾಲನೆಯಲ್ಲಿ ಕೆಲಸಮಾಡುತ್ತಿರುವ ಆಕಾಶದಲ್ಲಿನ ದ್ವಾದಶ ಗ್ರಹಗಳೆ ಅಲ್ಲದೆ, ಕೆಳಗೆ ಚಿಕ್ಕ ಚಿಕ್ಕ ಗ್ರಹಗಳು ಕೋಟಿಗಳ ಸಂಖ್ಯೆಯಲ್ಲಿ ಇವೆ. ಮನುಷ್ಯ ಅನ್ಯಾಯವಾಗಿ, ಅವಿನೀತಿ ಯಾಗಿ ಎಂಥಹ ಕೆಟ್ಟ ಪ್ರವರ್ತನೆಯನ್ನು ಹೊಂದಿದ್ದರೂ ಭೂತಗಳಾಗಲಿ, ಗ್ರಹಗಳಾಗಲಿ ಹಿಡಿಸಿಕೊಳ್ಳುವುದಿಲ್ಲ. ಅವನ ಕರ್ಮಕ್ಕೆ ಅವನನ್ನು ಬಿಟ್ಟು, ಅವನು ಆಗಾಮಿಕರ್ಮವನ್ನು ಸಂಪಾದಿಸಿಕೊಳ್ಳುತ್ತಾ ಇದ್ದರೆ ಗಮನಿಸುತ್ತಿರುತ್ತದೆ. ಆದರೆ ದೇವರಿಗೂ, ದೇವರ ಜ್ಞಾನಕ್ಕು ವಿರುದ್ಧವಾಗಿ ಪ್ರವರ್ತಿಸುವವರ ಮೇಲೆ ಹೆಚ್ಚು ಕೋಪಗೊಂಡರೂ, ಸ್ವಲ್ಪಮಟ್ಟಿಗೆ ಸಹನೆಯಿಂದ ಇರುತ್ತಾರೆ. ಮೇಘಗಳಿಗೆ ಹೆಚ್ಚಾಗಿ ವಿರುದ್ಧವಾದ ಕಾರ್ಯಗಳು ಮನುಷ್ಯರ ವಿವಾಹಗಳು, ತೀರ್ಥ ಯಾತ್ರೆಗಳು, ವಿವಾಹಗಳಾಗಲಿ, ದೇವತೆಗಳ ದರ್ಶನಾರ್ಥ ಮಾಡುವ ತೀರ್ಥಯಾತ್ರೆಗಳಾಗಲಿ ಪೂರ್ತಿಯಾಗಿ ದೇವರ ಜ್ಞಾನಕ್ಕೆ ಸಂಬಂಧಿಸಿದ ವಿಷಯಗಳು. ದೇವಾಲಯಗಳು ದೇವರ ಜ್ಞಾಪಕಾರ್ಥ, ದೇವರ ಜ್ಞಾನ ತಿಳಿಸುವುದಕ್ಕೋಸ್ಕರ ಇರುವಾಗ, ಜ್ಞಾನದ ಮೇಲೆ ಯಾವುದೆ ದೃಷ್ಠಿಯಿಲ್ಲದೆ, ದೇವರ ಧ್ಯಾಸ ಸ್ವಲ್ಪವೂ ಇಲ್ಲದೆ ಮಾಡುವ ತೀರ್ಥಯಾತ್ರೆಗಳ ಮೇಲೆ ಮೇಘಗಳಿಗೆ ಕೋಪಬರುತ್ತದೆ. ಹಾಗೆಯೇ ಮದುವೆ ಪೂರ್ತಿಯಾಗಿ ದೇವರ ಜ್ಞಾನಕ್ಕೆ ಸಂಬಂಧಿಸಿದ ಕೆಲಸಗಳಿಂದ ಕೂಡಿಕೊಂಡಿದೆ. ಆದರೂ ಆ ಕೆಲಸಗಳನ್ನು ಮಾಡುತ್ತಾ ದೇವರ ಜ್ಞಾನವನ್ನು ಸ್ವಲ್ಪವೂ ಜ್ಞಾಪಕ ಮಾಡಿಕೊಳ್ಳದೆ ಪ್ರವರ್ತಿಸುತ್ತಿರುವವರ ಮೇಲೆ ಮೇಘಗಳ ಕೋಪ ತೀವ್ರವಾಗಿರುತ್ತದೆ. ಸ್ವಲ್ಪಮಟ್ಟಿಗೆ ಸಹಿಸಿಕೊಂಡ ಮೇಘಗಳು ಈ ಎರಡು ಕಾರ್ಯಗಳಲ್ಲಿ (ಮದುವೆಗಳು, ತೀರ್ಥಯಾತ್ರೆಗಳು) ಭೂಮಿಮೇಲಿರುವ ಗ್ರಹಶಕ್ತಿಗಳಿಗೆ ತಮ್ಮ ಕೋಪವನ್ನು ತಿಳಿಸುತ್ತವೆ. ಮೇಘಗಳ ಕೋಪವನ್ನು ಗ್ರಹಿಸಿದ ಗ್ರಹಗಳು, ಆ ಕಾರ್ಯಗಳಲ್ಲಿ ಲಗ್ನವಾಗಿರುವವರಿಗೆ ಯಾವುದೊ ಒಂದು ವಿಧವಾಗಿ ಅಪಘಾತವನ್ನು ಉಂಟುಮಾಡುತ್ತಾರೆ. ಆ ಅಪಘಾತದಲ್ಲಿ ಮನುಷ್ಯರ ಪ್ರಾಣಗಳು ಸಹಿತವು ಹೋಗಬಹುದು. ಭೂಮಿಮೇಲೆ ಗ್ರಹಗಳು ಮೇಘಗಳ ಆದೇಶದ ಪ್ರಕಾರ

ವಿವಾಹಗಳು, ತೀರ್ಥಯಾತ್ರೆಗಳು ಮಾಡುವವರಿಗೆ ರಸ್ತೆ ಅಪಘಾತವನ್ನು ಉಂಟುಮಾಡುತ್ತಿವೆ. ಹೆಚ್ಚುಗಿಂತ ಅತಿಹೆಚ್ಚಾಗಿ ರಸ್ತೆ ಅಪಘಾತಗಳು ಪ್ರತ್ಯೇಕಿಸಿ ಈ ಎರಡು ಕಾರ್ಯಗಳ ಪ್ರಯಾಣಗಳಲ್ಲಿಯೇ ನಡೆಯುತ್ತಿವೆ. ಭೂಮಿಮೇಲೆ ಘೋರವಾಗಿ ನಡೆಯುವ ರಸ್ತೆ ಅಪಘಾತಗಳು ಹೆಚ್ಚಾಗಿ ಮದುವೆಗಳು, ದೇವತಾಯಾತ್ರೆಗಳ ವಿಷಯಗಳಲ್ಲಿಯೇ ನಡೆಯುತ್ತಿರುತ್ತವೆಂದು ತಿಳಿಯಬೇಕು. ಮೇಘಗಳು ಪ್ರಪಂಚದಲ್ಲಿ ಮೇಲಿಂದ ಮಳೆಯನ್ನು ಸುರಿಸುವುದಲ್ಲದೆ, ಕೆಳಗೆ ಭೂಮಿಮೇಲೆ ಎಷ್ಟೋ ಕೆಲಸಗಳು ನಡೆಯುವುದಕ್ಕು,ಮತ್ತು ಸಾಮೂಹಿಕವಾಗಿ ಪ್ರಾಣನಷ್ಟವನ್ನುಂಟುಮಾಡುವ ಅಪಾಯಗಳು ನಡೆಯುವುದಕ್ಕೆ ಕಾರಣವಾಗಿವೆ. ಈ ವರ್ಷ ತ್ರೈತ ಶಕ 35, ಕಿಸ್ತು ಶಕ 2013) ಉತ್ತರಕಾಶಿ ಎಂಬುವ ಅಮರನಾಥ್, ಬದ್ರಿನಾಥ್, ಗಂಗೋತ್ರಿ, ಯಮುನೋತ್ರಿ ಯಾತ್ರೆಗಳಲ್ಲಿ ನಡೆದ ಭಯಂಕರ ಅಪಘಾತಗಳಾದ ಮಳೆ ಸುರಿಯುವುದು, ನದಿಗಳು ಪ್ರವಾಹಿಸುವುದೂ, ಬೆಟ್ಟಗಳು ಮುರಿದು ಬಿದ್ದುಹೋಗುವುದು ಮೊದಲಾದ ಎಲ್ಲಾ ಕಾರ್ಯಗಳು ಮೇಘಗಳ ಕಣ್ಣಸನ್ನೆಯಲ್ಲಿ ನಡೆದ ಅಪಘಾತಗಳೆಂದು ತಿಳಿಯಬೇಕು. ದೇವತೆಗಳ ಮೇಲೆ ಭಕ್ತಿ ಎಂಬ ಉದ್ದೇಶದಿಂದ ಯಾತ್ರೆಯಲ್ಲಿ ಪಾಲ್ಗೊಂಡ ಸಾವಿರಾರುಜನ ಯಾತ್ರಿಕರೆಲ್ಲರೂ ಪ್ರಮಾದದಲ್ಲಿ ಸಿಕ್ಕಿಕೊಂಡು ಎಷ್ಟೋಜನ ಮರಣಿಸಿದಾಗ, ಎಷ್ಟೋಜನ ನೀರು, ಆಹಾರ ಇಲ್ಲದೆ, ಇರುವುದಕ್ಕೆ ಸ್ವಲ್ಪಮಟ್ಟಿನ ಜಾಗವೂ ಕೂಡಾ ಇಲ್ಲದೆ ಬಹಳ ತೊಂದರೆಗೀಡದರೂ. ಇಂತಹ ಅಪಾಯಗಳನ್ನು ದೈವಜ್ಞಾನವನ್ನು ಮರೆತವರ ಮೇಲೆ ಮೇಘಗಳು  ಉಂಟುಮಾಡುತ್ತಲೇ ಇವೆ. ಹಾಗೆ ಮಾಡುವುದರಿಂದ ತಮ್ಮ ತಪ್ಪನ್ನು ತಿಳಿದುಕೊಂಡು, ದೈವಜ್ಞಾನಕ್ಕೆ ಬೆಲೆಯನ್ನು ಕೊಟ್ಟು, ದೈವಜ್ಞಾನವನ್ನು ತಿಳಿಯುವುದಕ್ಕೆ ಮನುಷ್ಯರು ಪ್ರಯತ್ನಿಸುತ್ತಾರೆಂದು ಮೇಘಗಳ ಉದ್ದೇಶ. ಈ ವಿಧವಾಗಿ ಮೇಘಗಳು ದೈವಜ್ಞಾನ ಅಭಿವೃದ್ಧಿ ಆಗುವುದಕ್ಕೆ ಎಷ್ಟೋ ಪಾತ್ರಗಳನ್ನು ಪೋಷಿಸುತ್ತಿವೆಯೆಂದು ತಿಳಿಸುತ್ತಿದ್ದೇವೆ.

ಪ್ರಜೆಗಳಿಗೆ ತಿಳಿಯದ ವಿಷಯಗಳನ್ನು ಪ್ರಶ್ನೆಯಾಗಿ ಪ್ರಶ್ನಿಸಿ ಉತ್ತರವಾಗಿ ಹೇಳುವುದು ಒಳ್ಳೆಯದೆಂದುಕೊಂಡಿದ್ದೇವೆ. ಪ್ರಶ್ನೆಯನ್ನು ಯಾರಾದರೂ

ಕೇಳಬಹುದು ಆಗಲಿ, ಉತ್ತರವನ್ನು ಕೆಲವರೆ ಹೇಳುತ್ತಾರೆ. ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಒಬ್ಬರೆ ಹೇಳುತ್ತಾರೆ. ಪ್ರಪಂಚ ಸಂಬಂಧ ಪ್ರಶ್ನೆಗಳಿಗೆ ಕೆಲವರು ಉತ್ತರ ಹೇಳಲ್ಪಟ್ಟರೂ, ದೈವಸಂಬಂಧ ಪ್ರಶ್ನೆಗಳಿಗೆ ಒಬ್ಬರೆ ಉತ್ತರ ಹೇಳುತ್ತಾರೆ. ಸೂತ್ರದ ಪ್ರಕಾರ ದೇವರ ವಿಷಯಗಳು ದೇವರಿಗೆ ತಿಳಿಯುತ್ತವೆ. ದೇವರ ವಿಷಯಗಳು ದೇವರಿಗೆ ಹೊರೆತು ಉಳಿದ ಯಾವ ಮಾನವನಿಗೂ ತಿಳಿಯವು. ಆಗ ಆ ವಿಷಯಗಳನ್ನು ದೇವರು ಒಬ್ಬನೆ ಹೇಳಬೇಕಾಗಿರುತ್ತದೆ. ದೇವರು ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ಆದ್ದರಿಂದ ದೇವರು ದೇವರಾಗಲ್ಲದೆ, ಮನುಷ್ಯನಾಗಿಯೂ ಅಲ್ಲದೆ ಭಗವಂತನು ಎಂಬ ಪ್ರತ್ಯೇಕ ವ್ಯಕ್ತಿ ಮೂಲಕ ಹೇಳುತ್ತಾನೆ. ಹೇಳುವ ವಿಷಯ ಪ್ರಪಂಚ ಸಂಬಂಧವಾ ಇಲ್ಲವೆ ದೈವಸಂಬಂಧವಾ ನೋಡಬೇಕಾಗಿರುತ್ತದೆ. ಪ್ರಪಂಚ ಸಂಬಂಧವಾದ ವಿಷಯವಾದರೆ ಅದು ಯಾರಿಗೂ ತಿಳಿಯದಿದ್ದರೂ, ಅದನ್ನು ದೇವರು ಮನುಷ್ಯನಿಂದಲೇ ಹೇಳಿಸುತ್ತಾನೆ. ದೈವಸಂಬಂಧ ವಿಷಯವಾದರೆ ಈಕಡೆ ಮನುಷ್ಯ, ಆಕಡೆ ದೇವರು ಅಲ್ಲದೆ, ಮಧ್ಯದಲ್ಲಿರುವ ಭಗವಂತನಿಂದ ದೇವರು ಹೇಳಿಸುತ್ತಾನೆ. ಈಗ ಪ್ರಶ್ನೆಯಾಗಿ ಕೇಳುವ ವಿಷಯ ದೈವಸಂಬಂಧವಾಗಿ ಕಾಣಿಸುತ್ತಿದ್ದರೂ, ಅದನ್ನು ಪ್ರಪಂಚ ಸಂಬಂಧವಾದುದಾಗಿಯೇ ಹೇಳಬಹುದು. ಪ್ರಶ್ನೆಯನ್ನು ಕೆಳಗೆ ನೋಡೋಣ.

**ಪ್ರಶ್ನೆ :–** ಹಳ್ಳಿಗಳಲ್ಲಿ ಮಳೆಯನ್ನು ಕುರಿತು ಮಳೆ ಬರುತ್ತದಾ, ಇಲ್ಲವಾ? ಯಾವ ಕಾರ್ತಿಯಲ್ಲಿ ಬರುತ್ತದೆ? ಎಷ್ಟು ವರ್ಷ ಬರುತ್ತದೆ? ಎಂಬ ಪ್ರಶ್ನೆಗಳನ್ನು ವ್ಯವಸಾಯವನ್ನು ಮಾಡುವ ರೈತರು ಕೇಳುತ್ತಾರೆ. ಕೇಳುವ ಪ್ರಶ್ನೆಗಳನ್ನು ಯಾರಾದರೂ ಜ್ಯೋತಿಷ್ಯನನ್ನು ಕೇಳುವುದೂ, ಅವರು ಏನೊ ಒಂದು ಹೇಳುವುದೂ ನಡೆಯುತ್ತಿರುತ್ತದೆ ಅಲ್ಲವೆ! ಅದರೆ ಇಲ್ಲಿ ಕೇಳಿದ ಪ್ರಶ್ನೆಗಳು ಜ್ಯೋತಿಷ್ಯರನ್ನು ಕೇಳಲಿಲ್ಲ. ಒಂದು ಮಣ್ಣಿನ ಬಿಂದಿಗೆಯನ್ನೊ ಇಲ್ಲವೆ ಒಂದು ರಾಗಿ ಚೆಂಬನ್ನೊ ಪ್ರಶ್ನಿಸುತ್ತಿದ್ದರು. ಆ ಪ್ರಶ್ನೆಗಳಿಗೆ ಉತ್ತರಗಳನ್ನು ಮಣ್ಣಿನ ಬಿಂದಿಗೆ, ರಾಗಿ ಚೆಂಬುಗಳು ಹೇಳುತ್ತಿದ್ದವು. ಅದುಹೇಗೆ ಸಾಧ್ಯವೆಂದು ಪ್ರಶ್ನೆ

ಬರದೆ ಇರುವುದಿಲ್ಲ. ಈ ಪ್ರಶ್ನೆ ನಾಸ್ತಿಕವಾದಿಗಳಿಗೆ, ಆಸ್ತಿಕವಾದಿಗಳಿಗು ಎಲ್ಲರಿಗೂ ಬರುತ್ತದೆ. ಈಗ ಅದನ್ನು ಕುರಿತು ತಿಳಿದುಕೊಳ್ಳೋಣ.

**ಉತ್ತರ :–** ಚೆಂಬಿನ ಜ್ಯೋತಿಷ್ಯವನ್ನು ಕೇಳುವುದೆಯಾಗಲಿ ನಾನು ಯಾವಾಗಲೂ ನೋಡಲಿಲ್ಲ. ಆದರೆ ಬಿಂದಿಗೆ ಜ್ಯೋತಿಷ್ಯವನ್ನು ಪ್ರತ್ಯಕ್ಷವಾಗಿ ನೋಡಿದ್ದೇನೆ. ನಾನು ಚಿಕ್ಕ ವಯಸ್ಸಿನಲ್ಲಿರುವಾಗ, ಬಿಂದಿಗೆಯನ್ನು ಕೇಳಿ ಮಳೆಯ ಬರುವಿಕೆಯನ್ನು ಕೆಲವರು ರೈತರು ತಿಳಿದುಕೊಳ್ಳುವುದು ನೋಡಿದ್ದೇನೆ. ಸುಮಾರು ಒಂದೂವರೆ ಗಂಟೆ ಸಮಯ ಸಾಗಿದ ಆ ವಿಧಾನವೆಲ್ಲವನ್ನು ಜಾಗ್ರತೆಯಾಗಿ ನೋಡುವುದರಿಂದ, ಇಂದಿಗೂ ಆ ದೃಶ್ಯಗಳೆಲ್ಲ ನನಗೆ ಚೆನ್ನಾಗಿ ಜ್ಞಾಪಕ ಇವೆ. ಆ ದಿನ ಪ್ರತ್ಯಕ್ಷವಾಗಿ ಬಿಂದಿಗೆ ಜ್ಯೋತಿಷ್ಯ ನಡೆದಿರುವುದೆಲ್ಲಾ ನೋಡಿದರೂ, ಅದು ಹೇಗೆ ನಡೆದಿದೆ? ಹಾಗೆ ನಡೆಯುವುದಕ್ಕೆ ಸಾಧ್ಯವೇನಾ?ಎಂಬ ಪ್ರಶ್ನೆಗಳು ಎಷ್ಟೋಬಾರಿ ನನಗೆ ಉಂಟಾಗಿವೆ. ಆ ಸಮಯದಲ್ಲಿ ಯಾರನ್ನು ಕೇಳಿದರೂ ಅದನ್ನು ಕುರಿತು ಸರಿಯಾದ ಸಮಾಧಾನ ಹೇಳಲಿಲ್ಲ. ನಂತರ ಇಷ್ಟು ಕಾಲಕ್ಕೆ ನಾನು ಅದನ್ನು ಕುರಿತು ವಿವರಿಸುವ ಸ್ಥಿತಿಗೆ ಬಂದಿದ್ದೇನೆ. ನಾನು ಯಾವಾಗಲೋ ಚಿಕ್ಕ ವಯಸ್ಸಿನಲ್ಲಿ ನೋಡಿರುವುದನ್ನು ನೀವು ನಂಬಬಹುದು. ನಂಬದಿರಬಹುದು. ಆದರೆ ಎಲ್ಲರೂ ನಂಬಿತೀರುವಂತೆ ನಿನ್ನೆಯ ದಿನ ಅಂದರೆ! ಸೋಮವಾರ ಜೂನ್ 24, 2013 ಈನಾಡು ನ್ಯೂಸ್ ಪೇಪರ್‌ನಲ್ಲಿ ಬಂದಿರುವ ಸಮಾಚಾರ "ಲಂಡನ್, ಮಾಂಛೆಸ್ಟರ್ ಮ್ಯೂಜಿಯಮ್‌ನಲ್ಲಿ ಈಜಿಪ್ಟಗೆ ಸೇರಿದ 4000 ವರ್ಷಗಳ ಕೆಳಗಿನದು ವಿಗ್ರಹ ಇರುವಕಡೆಯೇ ತನಷ್ಟಕ್ಕೆ ತಾನು ತಿರುಗುತ್ತದೆ. ಇದನ್ನು ಗುರುತಿಸಿದ ಅಲ್ಲಿನ ಅಧಿಕಾರಿಗಳು ಅದು ಹೇಗೆ ಸಾಧ್ಯವೊ ಅರ್ಥವಾಗದೆ ತಲೆಗಳನ್ನಿಡಿದುಕೊಂಡಿದ್ದಾರೆ. ಈಜಿಪ್ಟಿನಲ್ಲಿ ಲಭ್ಯವಾದ 10 ಅಂಗುಲಗಳ ಉದ್ದವಾದ ಈ ವಿಗ್ರಹ 80 ವರ್ಷಗಳಿಂದ ಮಾಂಛೆಸ್ಟರ್ ಮ್ಯೂಜಿಯಂನಲ್ಲಿ ಇದೆ. ಈ ನೇತೃತ್ವದಲ್ಲಿ ಕೆಲವು ವಾರಗಳ ಕೆಳಗೆ ಮ್ಯೂಜಿಯಂ ಅಧಿಕಾರಿಗಳು ಆ ವಿಗ್ರಹ ದಿಕ್ಕುಬದಲಾಯಿಸಿದಂತೆ ಗುರುತಿಸಿದ್ದಾರೆ. ಅನುಮಾನ ಬಂದವರು ಆ ವಿಗ್ರಹವನ್ನು ಕೆಲವು ದಿನಗಳವರೆಗೂ ಕೆಮೆರಾಗಳಲ್ಲಿ ಪರೀಕ್ಷಿಸಿದ್ದಾರೆ. ಆಗ

ಆ ವಿಗ್ರಹ ನಿಧಾನವಾಗಿ ತಿರುಗುತ್ತಿರುವಂತೆ ವೀಡಿಯೋದಲ್ಲಿ ಸೆರೆಯಾಗಿದೆ. ನೆಬ್–ಸೇನು ಎಂಬ ಹೆಸರುಹೊಂದಿದ ಈ ವಿಗ್ರಹ ಹಗಲುವೇಳೆ ಮಾತ್ರವೇ ತಿರುಗುತ್ತಿರುವಂತೆ ತಿಳಿದಿದೆ. ಈ ಮೇರೆಗೆ ಈ ವಿಗ್ರಹ ವಿವರಗಳನ್ನು "ಮಾಂಛೇಸ್ಟರ್ ಈವೆನಿಂಗ್ ನ್ಯೂಸ್" ಹೊರಡಿಸಿದೆ. ಮ್ಯೂಜಿಯಂನಲ್ಲಿ ಸಂದರ್ಶಕರ ಕಾಲುಗಳ ಶಬ್ಧಕ್ಕೆ ತಲೆಎತ್ತುವ ಪ್ರಕಂಪನೆಗಳಿಂದ ಈ ವಿಗ್ರಹ ತಿರುಗುತ್ತಿರಬಹುದೆಂದು ನಿಪುಣರು ಹೇಳಿದ್ದಾರೆ." ಈ ವಿಷಯವೆಲ್ಲಾ "ನಂಬಿರಿ ನಂಬದಿರಿ ಈ ವಿಗ್ರಹ ತಿರುಗುತ್ತದೆ." ಅನ್ನುವ ಹೆಡ್ಡಿಂಗ್ ಕೆಳಗೆ ಬರೆಯಲಾಗಿದೆ.

ನಾನು ಯಾವಾಗಲೋ ಚಿಕ್ಕಂದಿನಾಗ ಒಂಭತ್ತು ಇಲ್ಲವೆ ಹತ್ತು ವರ್ಷಗಳ ವಯಸ್ಸಿನಲ್ಲಿ ನೋಡಿದ ಬಿಂದಿಗೆ ಜ್ಯೋತಿಷ್ಯವನ್ನು ಕೆಲವರು ನಂಬದಿದ್ದರೂ, "ನಂಬಿರಿ ನಂಬದಿರಿ" ಎಂಬ ಹೆಡ್ಡಿಂಗ್ ಕೆಳಗೆ ಬರೆದ ವಿಷಯ ಎಲ್ಲರೂ ಸತ್ಯವೆಂದು ಒಪ್ಪಿಕೊಳ್ಳದೆ ತಪ್ಪದು. ಅಲ್ಲಿ ಪರಿಶೋಧಿಸಿದ ನಿಪುಣರು ಸಂದರ್ಶಕರ ಕಾಲಿನ ಶಬ್ಧಕ್ಕೆ ಬರುವ ಪ್ರಕಂಪನಿಗಳಿಂದ ವಿಗ್ರಹ ತಿರುಗುತ್ತಿರಬಹುದೆಂದು, ಅವರ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅದು ಅವರ ಅಭಿಪ್ರಾಯವೇಯಾಗಲಿ ಸತ್ಯ

ಅಲ್ಲವೆಂದು ಹೇಳಬಹುದು. ಮೊದಲು ಬಿಂದಿಗೆ ಏಕೆ ತಿರುಗುತ್ತಿದೆಯೋ ತಿಳಿದರೆ, ಮ್ಯೂಜಿಯಂನಲ್ಲಿ ಪ್ರತಿಮ ತಿರುಗುವುದಕ್ಕೆ ಕಾರಣವೇನೊ, ಸುಲಭವಾಗಿ ಹೇಳಬಹುದು. ಈಗ ನಾವು ನನ್ನ ಚಿಕ್ಕವಯಸ್ಸಿನಲ್ಲಿ ನಾನು ನೋಡಿದ ಪ್ರತ್ಯಕ್ಷ ಬಿಂದಿಗೆ ಜ್ಯೋತಿಷ್ಯವನ್ನು ಕುರಿತು ತಿಳಿದುಕೊಳ್ಳೋಣ. ಎಂಟು ಅಡಿಗಳ ಚತುರಸ್ರಾಕಾರವಾಗಿ ಶುಭ್ರ ಮಾಡಿದ ಸ್ಥಳದಲ್ಲಿ ಕೆಲವು ಸೇರುಗಳ ಧಾನ್ಯವನ್ನು ಕುಪ್ಪೆಯಾಗಿ ಸುರಿದು, ಹರಿಶಿನ ಕುಂಕುಮಗಳಿಂದ ಬೊಟ್ಟುಗಳಿಟ್ಟಿದ ಹೊಸ ಬಿಂದಿಗೆಯನ್ನು ಧಾನ್ಯದ ಕುಪ್ಪೆಯ ಮೇಲೆ ಇಡುತ್ತಾರೆ. ನೀರು ತುಂಬ ತುಂಬಿದ ಬಿಂದಿಗೆಯನ್ನು ಧಾನ್ಯದ ಮೇಲೆ ಮಧ್ಯದಲ್ಲಿ ಇಟ್ಟಾಗ, ಧಾನ್ಯ ಬಿಂದಿಗೆಗೆ ಸ್ಥಿರವಾಗಿಊರಿ ಬಿಂದಿಗೆ ಯಾವಕಡೆ ವಾಲದಂತೆ ನಿಲ್ಲುತ್ತದೆ. ಆ ವಿಧವಾಗಿ ಅಳವಡಿಸಿದ ಬಿಂದಿಗೆಗೆ ಹೂಗಳನ್ನಿಟ್ಟು ತೆಂಗಿನಕಾಯಿ ಹೊಡೆದು ಪೂಜೆ

*ಸೋಮವಾರ ಜೂನ್ 24, 2013*



ಮ್ಯೂಜಿಯಂನಲ್ಲಿ ನೆಬ್–ಸೇನು ವಿಗ್ರಹ (ಅಂತರ ಚಿತ್ರದಲ್ಲಿ)

## ನಂಬಿರಿ ನಂಬದಿರಿ.. ಈ ವಿಗ್ರಹ ತಿರುಗುತ್ತದೆ!

**ಲಂಡನ್:** ಮಾಂಚೆಸ್ಟರ್ ಮ್ಯೂಜಿಯಂನಲ್ಲಿ ಈಜಿಪ್ಟಿಗೆ ಸೇರಿದ 4000 ವರ್ಷಗಳ ಕೆಳಗೆ ವಿಗ್ರಹ ಇರುವಕಡೆಯೇ ತನ್ನಷ್ಟಕ್ಕೆ ತಾನು ತಿರುಗುತ್ತದೆ. ಇದನ್ನು ಗುರ್ತಿಸಿದ ಅಲ್ಲಿನ ಅಧಿಕಾರಿಗಳು ಅದು ಹೇಗೆ ಸಾಧ್ಯವೊ ಅರ್ಥವಾಗದೆ ತಲೆಗಳಿಡುದುಕೊಳ್ಳುತ್ತಿದ್ದಾರೆ. ಈಜಿಪ್ಟನಲ್ಲಿ ಲಭ್ಯವಾದ 10 ಅಂಗುಲಗಳ ಉದ್ದವಾದ ಈ ವಿಗ್ರಹ 80 ವರ್ಷಗಳಿಂದ ಮಾಂಚೆಸ್ಟರ್ ಮ್ಯೂಜಿಯಂನಲ್ಲಿ ಇದೆ. ಈ ನೇತೃತ್ವದಲ್ಲಿ ಕೆಲವು ವಾರಗಳ ಕೆಳಗೆ ಮ್ಯೂಜಿಯಂ ಅಧಿಕಾರಿಗಳು ಆ ವಿಗ್ರಹ ದಿಕ್ಕು ಬದಲಾಯಿಸಿದಂತೆ ಗುರುತಿಸಿದ್ದಾರೆ. ಅನುಮಾನ ಬಂದವರು ಈ ವಿಗ್ರಹವನ್ನು ಕೆಲವು ದಿನಗಳವರೆಗೂ ಕೆಮರಾಗಳಿಂದ ವೀಕ್ಷಿಸಿದ್ದಾರೆ. ಆಗ ಈ ವಿಗ್ರಹ ಬಹಳ ನಿಧಾನವಾಗಿ ತಿರುಗುತ್ತಿರುವಂತೆ ವೀಡಿಯೋದಲ್ಲಿ ಸೆರೆಯಾಗಿದೆ. ನೆಬ್–ಸೇನು ಅನ್ನುವ ಹೆಸರು ಹೊಂದಿದ ಈ ವಿಗ್ರಹ ಹಗಲುವೇಳೆ ಮಾತ್ರವೇ ತಿರುಗುತ್ತಿರುವಂತೆ ತಿಳಿದಿದೆ. ಈ ಮೇರೆಗೆ ಈ ವಿಗ್ರಹದ ವಿವರಗಳನ್ನು "ಮಾಂಚೆಸ್ಟರ್ ಈವೆನಿಂಗ್ ನ್ಯೂಸ್" ಹೊರಡಿಸಿದೆ. ಮ್ಯೂಜಿಯಂನಲ್ಲಿ ಸಂದರ್ಶಕರ ಕಾಲಿನ ಶಬ್ಧಕ್ಕೆ ತಲೆಎತ್ತುವ ಪ್ರಕಂಪನಗಳಿಂದ ಈ ವಿಗ್ರಹ ತಿರುಗುತ್ತಿರುಬಹುದೆಂದು ನಿಪುಣರು ಹೇಳುತ್ತಿದ್ದಾರೆ.

ಮಾಡುತ್ತಿದ್ದರು. ಪೂಜೆ ಮುಗಿದ ನಂತರ ಸ್ನಾನಮಾಡಿಬಂದು ಐದುಜನ ಮದುವೆಯಾಗದ ಯುವಕರು, ಬಿಂದಿಗೆಗೆ ನಮಸ್ಕರಿಸಿ ಅವರ ಬಲಗೈನ ತೋರುಬೇರಳನ್ನು ಬಿಂದಿಗೆಯ ಕಂಠದ ಅಂಚಿನಮೇಲೆ ಅನಿಸಿ ಇಟ್ಟುಕೊಂಡಿರುತ್ತಾರೆ. ಹಾಗೆ ಐದುಜನ ಯುವಕರು ಅರ್ಧ ಬಗ್ಗಿ ಬಲಗೈಬೆರಳನ್ನು ಬಿಂದಿಗೆ ಮೇಲೆ ಆನಿಸಿ ಇಡದಮುಂಚೆಯೇ, ಮೃಗಶಿರಕಾರ್ತೆ ಮೊದಲುಗೊಂಡು ನಂತರ ಬರುವ ಕಾರ್ತಿಗಳ ಹೆಸರನ್ನು ಒಂದನ್ನು ಹೇಳಿ, ಆ ಕಾರ್ತಿಯಲ್ಲಿ ಮಳೆ ಬರುತ್ತದಾ, ಬರುವುದಿಲ್ಲವಾ? ಎಂದು ಕೇಳುತ್ತಿದ್ದರು. ಹಾಗೆ ಕೇಳಿದ ಪ್ರಶ್ನೆಗೆ ಉತ್ತರವಾಗಿ, ಅವರು ಕೇಳಿದ ಕಾರ್ತಿ (ನಕ್ಷತ್ರ) ಯಲ್ಲಿ ಮಳೆ ಬರುವ ಅವಕಾಶವಿದ್ದರೆ, ಬ ಸ್ವಲ್ಪಸಮಯದ ನಂತರ ಅಂದರೆ ಅರ್ಧನಿಮಿಷದಿಂದ ನಿಮಿಷದೊಳಗೆ ಇಲ್ಲವೆ ಎರಡು ನಿಮಿಷದೊಳಗೆ ಬಿಂದಿಗೆ ಕದಲಿ ತಿರುಗುವುದಕ್ಕೆ ಪ್ರಾರಂಭಿಸುತ್ತದೆ. ಅವರು ಕೇಳಿದ ಕಾರ್ತಿಯಲ್ಲಿ ಮಳೆ ಬರದ ಪಕ್ಷದಲ್ಲಿ ಆ ಬಿಂದಿಗೆ ತಿರುಗುವುದಿಲ್ಲ. ಒಂದು ಕಾರ್ತಿಯನ್ನು ಕುರಿತು ಕೇಳಿದ ನಂತರ ಮತ್ತೊಂದು ಕಾರ್ತಿಯನ್ನು ಕುರಿತು ಕೇಳುತ್ತಿದ್ದರು. ಅವರು ಕೇಳಿದ ಕಾರ್ತಿಯಲ್ಲಿ ಮಳೆ ಕಡಿಮೆ ಬರುವ ಸೂಚನೆ ಇದ್ದರೆ, ಬಿಂದಿಗೆ ತನಷ್ಟಕ್ಕೆತಾನು ಸ್ವಲ್ಪ ತಿರುಗಿ ನಿಂತುಹೋಗುತ್ತದೆ. ಬಿಂದಿಗೆ ತಿರುಗುವುದಕ್ಕೆ ಮೊದಲುಮಾಡಿದಾಗ, ಬಿಂದಿಗೆಮೇಲೆ ಕೈಬೆರಳನ್ನಿಟ್ಟು ಬಗ್ಗಿರುವ ಯುವಕರು ಬಿಂದಿಗೆಯೊಂದಿಗೆ ತಾವು ಕೂಡಾ ತಿರುಗಬೇಕಾಗಿರುತ್ತದೆ. ಬಿಂದಿಗೆ ಅಂಚಿನಮೇಲೆ ಕೈಬೆರಳನ್ನು ಪಕ್ಕಕ್ಕೆ ತೆಗೆದುಹಾಕದಂತೆ ಹಾಗೆಯೇ ಇಟ್ಟುಕೊಳ್ಳುವುದರಿಂದ ಐದುಜನ ಯುವಕರು ಬಿಂದಿಗೆಯೊಂದಿಗೆ ತಿರುಗುತ್ತಿರುತ್ತಾರೆ.

ಐದುಜನ ಯುವಕರು ಕೇಳಿದ ಕಾರ್ತಿಯಲ್ಲಿ ಮಳೆ ಹೆಚ್ಚಾಗಿ ಬರುವಂತಾದರೆ, ಬಿಂದಿಗೆ ವೇಗವಾಗಿ ತಿರುಗುವುದಕ್ಕೆ ಮೊದಲುಮಾಡುತ್ತದೆ. ಹಾಗೆ ವೇಗವಾಗಿ ತಿರುಗುವಾಗ ಅದರೊಂದಿಗೆ ಐದುಜನ ಯುವಕರು ಬಗ್ಗಿಕೊಂಡು ತಿರಗಲಾದಷ್ಟು ವೇಗವಾಗಿ ತಿರುಗುತ್ತದೆ. ಒಂದೊಂದುಸಲ ಸಾಮಾನ್ಯವಾಗಿ ನಡೆಯುವುದಲ್ಲದೆ ಅದಕ್ಕಿಂತ ವೇಗವಾಗಿ ಸಣ್ಣದಾಗಿ ಓಡಿದಂತೆ

ತಿರುಗಬೇಕಾಗಿ ಬರುತ್ತದೆ. ಹಾಗೆ ತಿರುಗುವಾಗ ಬಿಂದಿಗೆ ಸ್ವಲ್ಪ ಪಕಕ್ಕೆ ಬಗ್ಗಿ, ಸ್ವಲ್ಪ ಬಿಂದಿಗೆಯಲ್ಲಿನ ನೀರು ಕೆಳಗೆ ಬೀಳುವುದು ಕೂಡಾ ನಡೆಯುತ್ತದೆ. ಹಾಗೆ ಬಿಂದಿಗೆಯಲ್ಲಿನ ನೀರು ಕೆಳಕ್ಕೆ ಬಿದ್ದರೆ ಮಳೆ ಹೆಚ್ಚಾಗಿ ಬರುತ್ತದೆಂದು ರೈತರು ಅಂಚನೆ ಹಾಕಿಕೊಳ್ಳುತ್ತಾರೆ. ಈ ವಿಧವಾಗಿರುವ ಪ್ರತಿ ಕಾರ್ತಿಯಲ್ಲಿನ ವಿವರವನ್ನು ಕೇಳಿ ಮಳೆ ಬರುತ್ತದಾ ಬರುವುದಿಲ್ಲವಾ ಎಂದು, ಬಂದರೆ ಯಾವಾಗ ಬರುತ್ತದೆಂದು, ಮಳೆ ಬಂದರೆ ಎಷ್ಟು ಬರುತ್ತದೆಂದು ಎಲ್ಲಾ ವಿಷಯಗಳು ಅವರು ಕೇಳಿದ ಬಿಂದಿಗೆ ಜೋಸ್ಯದಲ್ಲಿ ತಿಳಿದುಹೋಗುತ್ತದೆ. ಬಿಂದಿಗೆ ಜೋಸ್ಯದಿಂದ ತಿಳಿದುಹೋದ ಸಮಾಚಾರ ಭವಿಷ್ಯತ್ತಿನಲ್ಲಿ ನಡೆಯುತ್ತದಾ? ಎಂಬ ಪ್ರಶ್ನೆಗೆ ಬಂದರೆ ಚೆನ್ನಾಗಿ ಅನುಭವವಿರುವ ರೈತರು ಬಿಂದಿಗೆ ಜೋಸ್ಯವನ್ನು ನೂರಕ್ಕೆ 90 ರಷ್ಟು ಸತ್ಯವಾಗುತ್ತದೆಂದು ಹೇಳುತ್ತಿದ್ದರು. ಆ ಹತ್ತರಷ್ಟು ಕೂಡಾ ಅವರ ಅಂಚನೆಯಲ್ಲಿ ತಪ್ಪಾದರೆ, ಬಿಂದಿಗೆ ಜೋಸ್ಯದಲ್ಲಿ ತಪ್ಪಿಲ್ಲ ಎಂದು ಹೇಳುತ್ತಿದ್ದರು. ಬಿಂದಿಗೆ ತಿರುಗಿ ಸ್ವಲ್ಪಮಟ್ಟಿಗೆ ಮಳೆ ಸೂಚನೆ ಮಾಡಿದಾಗ, ಅದನ್ನು ತಾವು ಹೆಚ್ಚಾಗಿ ಹೇಳಿಕೊಳ್ಳುವುದರಿಂದ ನಮ್ಮ ಅಂಚನೆ ತಪ್ಪಾಗುತ್ತಿದೆ ಹೊರತು, ಬಿಂದಿಗೆ ಜೋಸ್ಯ ನೂರಕ್ಕೆನೂರರಷ್ಟು ಸತ್ಯ ಎನ್ನುತ್ತಿದ್ದಾರೆ.

ಬಿಂದಿಗೆ ಜೋಸ್ಯದಲ್ಲಿ ಸ್ಥೂಲವಾಗಿ ನಡೆಯುವ ವಿಧಾನವೆಲ್ಲವೂ ಕಣ್ಣಿಗೆ ಕಾಣಿಸುತ್ತಿದೆ. ಹಾಗೆ ನಡೆಯುವ ವಿಧಾನದಲ್ಲಿ ಬಿಂದಿಗೆ ತನಷ್ಟಕ್ಕೆತಾನು ಹೇಗೆ ತಿರುಗುತ್ತಿದೆಂಬುದು ಮುಖ್ಯವಾದ ಪ್ರಶ್ನೆ. ನಡೆಯುವಂತಹ ಭವಿಷ್ಯತ್ತಿನಲ್ಲಿನ ಮಳೆಯ ಸಮಾಚಾರವನ್ನು, ಬಿಂದಿಗೆ ತಿರುಗುವುದರಲ್ಲಿ ಹೇಗೆ ತಿಳಿಸುತ್ತಿದೆ? ಬಿಂದಿಗೆಗೆ ಮುಂದೆ ನಡೆಯುವಂತಹ ಮಳೆ ಸಮಾಚಾರ ಹೇಗೆ ತಿಳಿದಿದೆ? ಎಂಬುದು ಕೂಡಾ ಪ್ರಶ್ನೆ. ಈ ಎರಡು ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿಯುವುದಕ್ಕೆ ಕಾಣಿಸುವ ಸ್ಥೂಲವನ್ನು ಬಿಟ್ಟು, ಕಾಣಿಸದ ಸೂಕ್ಷ್ಮ ವಿಧಾನದಲ್ಲಿ ಏನು ನಡೆಯುತ್ತಿದೆಯೋ ನೋಡಬೇಕು. ಸೂಕ್ಷ್ಮ ವಿಧಾನವನ್ನು ನೋಡುವುದಕ್ಕೆ ಜ್ಞಾನದೃಷ್ಟಿ (ಸೂಕ್ಷ್ಮದೃಷ್ಟಿ) ಅಗತ್ಯ. ಶರೀರದಲ್ಲಿ ಆತ್ಮ ಒದಗಿಸಿದ ಸೂಕ್ಷ್ಮ ದೃಷ್ಠಿಯಿಂದ, ನನಗೆ ತಿಳಿದಿರುವುದೇನೆಂದರೆ! ಖಗೋಳದಲ್ಲಿ ಎಷ್ಟೋ ಕೋಟಿಗಳ

ಸಂಖ್ಯೆಯಲ್ಲಿ ಭೂತಗಳು, ಸ್ವಲ್ಪಭೂತಗಳು, ಗ್ರಹಗಳು, ಉಪಗ್ರಹಗಳು ಇವೆ. ಅವುಗಳಲ್ಲಿ ಸ್ವಲ್ಪ ಭೂತಗಳಿಗೆ ಮಳೆ ಯಾವಾಗ ಬರುವುದು, ಎಷ್ಟು ಬರುವುದು, ಯಾವ ಪ್ರಾಂತದಲ್ಲಿ ಬರುವುದು ಎಲ್ಲ ವಿಷಯಗಳು ತಿಳಿಯುತ್ತದೆ. ಏಕೆಂದರೆ ಸ್ವಲ್ಪಭೂತಗಳಾಗಿ ಮೇಘಗಳು ಕೂಡಾ ಇವೆ. ಸ್ವಲ್ಪ ಭೂತಗಳಾದ ಮೇಘಗಳು ಎಲ್ಲಿ, ಯಾವಾಗ, ಎಷ್ಟುಮಳೆಯನ್ನು ಸುರಿಸಬೇಕೊ ತಮಗೆ ಮೊದಲೆ ತಿಳಿದಿದೆ. ಅಂತಹ ಮೇಘಗಳಿಂದ ಉಪಗ್ರಹಗಳು ಕೆಲವು ಮಳೆ ಸಮಾಚಾರವನ್ನು ಗ್ರಹಿಸಿ ಮೇಘಗಳ ಆದೇಶಾನುಸಾರ ಭೂಮಿಮೇಲೆ ಎಲ್ಲಿ ಬಿಂದಿಗೆ ಜೋಷ್ಯ ನಡೆಯುತ್ತಿದೆಯೋ, ಅಲ್ಲಿಗೆ ಬಂದು ರೈತರು ವಿನಯ ವಿಧೇಯತೆಯಿಂದ ಕೇಳುವ ಪ್ರಶ್ನೆಗಳಿಗೆ ಉತ್ತರಗಳು ಹೇಳುತ್ತಾರೆ. ಬಿಂದಿಗೆ ಜೋಷ್ಯವನ್ನು ಕೇಳುವವರಿಗೆ ತಮ್ಮ ಉತ್ತರವನ್ನು ತಿಳಿಸುವುದಕ್ಕೆ, ಉಪಗ್ರಹ ಬಿಂದಿಗೆಯಲ್ಲಿ ಪ್ರವೇಶಿಸಿ ಬಿಂದಿಗೆಯನ್ನು ತಿರುಗಿಸುತ್ತಿರುತ್ತದೆ. ಮಳೆವೊಂದರ ಸಮಾಚಾರವೆಲ್ಲವೂ ಉಪಗ್ರಹಕ್ಕೆ ತಿಳಿಯುತ್ತದಾದ್ದರಿಂದ ಅವರು ಕೇಳಿದ ಕಾರ್ತಿಯಲ್ಲಿ ಮಳೆ ಬಂದರೆ ಬಿಂದಿಗೆಯನ್ನು ತಿರುಗಿಸುತ್ತದೆ. ಮಳೆ ಬರದಿದ್ದರೆ ಬಿಂದಿಗೆಯನ್ನು ತಿರುಗಿಸುವು ದಿಲ್ಲ. ಮಳೆ ಬರುವುದನ್ನನುಸರಿಸಿ ಎಷ್ಟು ವೇಗವಾಗಿ ತಿರುಗಿಸಬೇಕೊ ಉಪಗ್ರಹಕ್ಕೆ ತಿಳಿದಿರುತ್ತದೆ. ಈ ವಿಧವಾಗಿ ಉಪಗ್ರಹ ಬಿಂದಿಗೆಯಲ್ಲಿ ಸೇರಿ, ಮಳೆವೊಂದರ ಬರುವಿಕೆಯನ್ನು ಕುರಿತು ಮೊದಲೆ ತಿಳಿಸುತ್ತದೆ. ಬಿಂದಿಗೆ ಜೋಸ್ಯವು ತಿಳಿಯದವರಿಗೆ ಯಾವುದೊ ದೊಡ್ಡ ಕಾರ್ಯವಾಗಿ ಅನಿಸಿದರೂ, ಅದು ಕಾಣಿಸುವುದರಲ್ಲಿ ಸರ್ವಸಾಧಾರಣವಾಗಿ ಇದೆ. ಆದರೆ ಖಗೋಳದಲ್ಲಿನ ಉಪಗ್ರಹ ಅಲ್ಲಿಗೆ ಬಂದು ಬಿಂದಿಗೆಯನ್ನು ಕದಲಿಸುತ್ತಾ, ತಮಗೆ ಜೋಸ್ಯವನ್ನು ಹೇಳುತ್ತಿದೆಯೆಂದು ಯಾರಿಗೂ ತಿಳಿಯದು. ಈ ದಿನ ಯಾರಾದರೂ ಉಪಗ್ರಹ ವಿಷಯವನ್ನು ತಿಳಿದವರಾಗಿದ್ದು, ಬಿಂದಿಗೆ ಜೋಸ್ಯದಲ್ಲಿ ಹೀಗೆ ನಡೆಯುತ್ತಿದೆ ಯೆಂದು ತಿಳಿಸಿದರೂ, ಉಪಗ್ರಹಗಳ ವಿಷಯ ತಿಳಿಯದವರು ಎಷ್ಟುಮಾತ್ರ ನಂಬುವುದಿಲ್ಲ. ಖಗೋಳದಲ್ಲಿ ಸ್ಥೂಲವಾಗಿ ಕೆಲವು ಗ್ರಹಗಳು, ಉಪಗ್ರಹಗಳು, ಸೂಕ್ಷ್ಮವಾಗಿ ಕೆಲವು ಗ್ರಹಗಳು, ಉಪಗ್ರಹಗಳು ಇವೆಯೆಂದು ತಿಳಿಯದವರು ಬಿಂದಿಗೆ ಜೋಸ್ಯದಲ್ಲಿ ಉಪಗ್ರಹಪಾತ್ರ ಇದೆಯೆಂಬ ಮಾತನ್ನು ನಂಬಲಾರರು.

ಬಿಂದಿಗೆ ಜೋಸ್ಯದಲ್ಲಿ ಬಿಂದಿಗೆ ತಿರುಗುವುದಕ್ಕೆ ಕಾರಣ ತಿಳಿದಿದೆ. ಆದ್ದರಿಂದ ಲಂಡನ್‌ನಲ್ಲಿ ಈಜಿಪ್ಟ್ ಪ್ರತಿಮೆ ತನ್ನಸುತ್ತಲೂ ತಾನು ತಿರುಗುವುದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದು. ಭಗವದ್ಗೀತೆಯಲ್ಲಿ ಮನುಷ್ಯನೊಂದರ ಪುನರ್ಜನ್ಮವನ್ನು ವಿವರಿಸುತ್ತಾ ಮನುಷ್ಯ ತನ್ನ ಜೀವನದಲ್ಲಿ ಹೆಚ್ಚಾಗಿ ಯಾವುದರಮೇಲೆ ಧ್ಯಾಸಹೊಂದಿರುತ್ತಾನೊ, ಅಂತಹ ಜನ್ಮವನ್ನೆ ಹೊಂದುತ್ತಾ ನೆಂದು ತಿಳಿಸುತ್ತಾ "ರಾಜವಿದ್ಯಾ ರಾಜಗುಹ್ಯ ಯೋಗ" ಎಂಬ ಅಧ್ಯಾಯದಲ್ಲಿ 25ನೆ ಶ್ಲೋಕದಲ್ಲಿ "ಯಾನ್ತಿ ದೇವವ್ರತಾನ್ ದೇವಾನ್" ಎಂದು ಇದೆ. "ದೇವತಾ ಪೂಜೆ ಹೊಂದಿಸುವ ದೇವತೆಗಳನ್ನೆ" ಅನ್ನುವಂತೆ ಗತಜನ್ಮದಲ್ಲಿ ವಿಗ್ರಹರಾಧನೆ ಯನ್ನು ಹೆಚ್ಚಾಗಿ ಮಾಡಿದವರಿಗೆ ವಿಗ್ರಹದಲ್ಲಿ ಸೇರುವ ಜನ್ಮ ಉಂಟಾಗಬಹುದು. ಅದೇ ವಿಧವಾಗಿ ದೇವಾಲಯಗಳಲ್ಲಿನ ಪ್ರತಿಮೆಯೊಳಗೆ ಅನೇಕಜನ ಪ್ರವೇಶಿಸಿ ಸ್ವಲ್ಪಕಾಲವಿದ್ದು, ಪುನಃ ಮರಣಿಸುತ್ತಾರೆ. ಪ್ರತಿಮೆಗಳನ್ನು ಪೂಜಿಸಿದ ಜೀವಿಯು ಯಾರಾದರೂ, ಲಂಡನ್‌ನಲ್ಲಿನ ಮ್ಯೂಜಿಯಂನಲ್ಲಿರುವ ಪ್ರತಿಮೆಯಲ್ಲಿ ಸೇರಿರಬಹುದು. ಹಾಗೆ ಸೇರಿದವನು ತನ್ನ ಇರುವಿಕೆಯನ್ನು ತಿಳಿಸುವುದಕ್ಕೋಸ್ಕರ ಹಾಗೆ ತಿರುಗಿರಬಹುದು. ಹಾಗೆ ತಿರುಗಿದ ಬೊಂಬೆ ಯಾವಾಗಲೂ ತಿರುಗುವುದಿಲ್ಲ. ತನ್ನನ್ನು ಗುರುತಿಸುವುದಕ್ಕೆ ಮಾತ್ರವೇ ತಿರುಗುವುದು ನಡೆದಿದೆ. ಆ ತಿರುಗುವುದೆಂಬ ಕೆಲಸ ಕೆಲವು ದಿನಗಳಿಂದ ಇಲ್ಲವೆ ಕೆಲವು ತಿಂಗಳುಗಳಿಂದ ನಡೆದ ಕೆಲಸ ಮಾತ್ರವೇ. ಈ ಮಧ್ಯಕಾಲದಲ್ಲಿ ತಿರುಗುತ್ತಿರುವ ಪ್ರತಿಮೆ, ತನ್ನನ್ನು ಇತರರು ಗುರುತಿಸಿದ ನಂತರ ತಿರುಗುವುದು ನಿಂತುಹೋಗುತ್ತದೆ. ಪ್ರತಿಮೆಯ ಕೆಳಗಿನ ಭಾಗ ಭೂಮಿಯಲ್ಲಿ ಹೂತಿಟ್ಟಿರುವ ಪ್ರತಿಮೆಗಳು ತಿರುಗಲಾರವು. ಗುಡಿಯಲ್ಲಿನ ಪ್ರತಿಮೆಗಳು ಸ್ವಲ್ಪ ಭೂಮಿಯಲ್ಲಿ ಹೂತಿಟ್ಟಿರುವುದರಿಂದ ಅವು ಅವುಗಳ ಸ್ಥಿತಿಯನ್ನು ಬೇರೆ ವಿಧಾನದಿಂದ ತಿಳಿಸುತ್ತವೆ.

ಕೆಲವು ಪ್ರತಿಮೆಯಲ್ಲಿನ ಜೀವಿಗಳು ತಾವು ಹೊರಗೆ ತಿಳಿಯಬೇಕೆಂದು ಕೆಲವು ಪ್ರಯತ್ನಗಳು ಮಾಡುತ್ತಿರುತ್ತಾರೆ. ಕೆಲವು ಪ್ರತಿಮೆಗಳಲ್ಲಿನ ಜೀವಿಗಳು ತಾವು ಯಾರೊಂದಿಗು ಸಂಬಂಧ ಇಟ್ಟುಕೊಳ್ಳದೆ, ಯಾರಿಗೂ ತಿಳಿಯದಂತೆ ಇರುತ್ತಾರೆ. ಅಂತಹ ಪ್ರತಿಮೆಗಳು ಭೂಮಿಮೇಲಿದ್ದರೂ ತಿರುಗುವುದಿಲ್ಲ.

ಮನುಷ್ಯರಲ್ಲಿ ಅನೇಕ ಇಷ್ಟಗಳು, ಅನೇಕ ಮನಸ್ತತ್ವಗಳು ಇರುವುದರಿಂದ, ಮನುಷ್ಯರೆ ಪ್ರತಿಮೆಗಳಲ್ಲಿ ಜೀವಿಗಳಾಗಿ ಹುಟ್ಟುವುದರಿಂದ, ಅಲ್ಲಿಯೂ ಕೂಡಾ ಬೇರೆಬೇರೆ ಮನಸ್ತತ್ವಗಳಾಗಿ ಪ್ರವರ್ತಿಸುತ್ತಿರುತ್ತಾರೆ. ಅಂತಹವುಗಳಲ್ಲಿ ಒಬ್ಬ ಜೀವಿ ಇರುವ ಪ್ರತಿಮೆ ತಿರುಗುವುದರಲ್ಲಿ ಆಶ್ಚರ್ಯವಿಲ್ಲ. ಪ್ರತಿಮೆಯಲ್ಲಿ ಸೇರಿದ ಜೀವಿಯು ಸ್ವಲ್ಪಕಾಲ ಬದುಕಿ ಅಲ್ಲಿ ಮರಣಿಸುವುದು ನಡೆಯುತ್ತಿದೆ. ಆಗ ಪುನಃ ಮನುಷ್ಯ ಜನ್ಮದೊಳಗೆ ಬರಬಹುದು. ಪ್ರತಿಮೆ ಜನ್ಮದಲ್ಲಿ ಯಾವ ಜೀವಿಯೂ ಶಾಶ್ವಿತವಾಗಿ ಇರುವುದಿಲ್ಲ. ಪ್ರತಿಮೆಗಳಲ್ಲಿ ಕೂಡಾ ಸಾಯುವುದು, ಹುಟ್ಟುವುದು ನಡೆಯುತ್ತಿರುತ್ತದೆ. ಮನುಷ್ಯನ ಶರೀರ ರಕ್ತಮಾಂಸಗಳಿಂದ ಕೂಡಿಕೊಂಡಿದೆ. ಆದ್ದರಿಂದ ಜೀವಿಯು ಸತ್ತುಹೋದ ತಕ್ಷಣ ಕೆಟ್ಟುಹೋಗುತ್ತದೆ. ಅಷ್ಟೇ ಅಲ್ಲದೆ ಮನುಷ್ಯನ ಶರೀರಕ್ಕೆ ನಾಲ್ಕು ದಶೆಗಳು ಇವೆ. ಪ್ರತಿಮೆ ಶರೀರಕ್ಕೆ ದಶೆಗಳು ಏನೂ ಇಲ್ಲ. ಪ್ರತಿಮೆ ಕಲ್ಲಿನಿಂದ ಇಲ್ಲವೆ ಲೋಹದಿಂದ ಮಾಡಲಾಗಿದೆ. ಆದ್ದರಿಂದ ಅದರಲ್ಲಿನ ಜೀವಿಯು ಹೊರಗೆ ಹೋದರೂ, ಮರಣಿಸಿದರೂ ಅ ಪ್ರತಿಮೆ ಕೆಟ್ಟುಹೋಗುವುದಿಲ್ಲ. ಆದಕಾರಣ ಅದೇ ಪ್ರತಿಮೆಯಲ್ಲಿ ಮತ್ತೊಬ್ಬ ಜೀವಿಯು ಜನ್ಮ ತೆಗೆದುಕೊಳ್ಳಬಹುದು. ಪ್ರತಿ ಪ್ರತಿಮೆಯಲ್ಲಿಯು ಜೀವಿ ಇರುತ್ತಾನೆ. ತಿರುಪತಿಯಲ್ಲಿನ ಮೂಲವಿರಾಟ್ ವೆಂಕಟೇಶ್ವರಸ್ವಾಮಿ ಪ್ರತಿಮೆಯಲ್ಲಿ ಒಂದು ಜೀವಚೈತನ್ಯ ಇರುವಾಗ, ಅಲ್ಲಿಯೇ ಉತ್ಸವ ವಿಗ್ರಹವೆಂಬ ಮತ್ತೊಂದು ಪ್ರತಿಮೆಯಲ್ಲಿ ಮತ್ತೊಂದು ಜೀವಚೈತನ್ಯವಿರುತ್ತದೆ. ಅಂದರೆ ಅಲ್ಲಿ ಒಂದೇ ವೆಂಕಟೇಶ್ವರನು ಅಂದುಕೊಳ್ಳುವ ಗರ್ಭಗುಡಿಯಲ್ಲಿನ ಪ್ರತಿಮೆಯಲ್ಲಿಯೂ, ಮೆರವಣಿಗೆ ಮಾಡುವ ಉತ್ಸವ ಪ್ರತಿಮೆಯಲ್ಲಿಯೂ ಬೇರೆಬೇರೆ ಜೀವಿಗಳು, ಅವುಗಳೊಂದಿಗೆ ಆತ್ಮವಿದೆ. ಈ ವಿಧವಾಗಿ ಪ್ರತಿಮೆಗಳಲ್ಲಿ ಜೀವಿಗಳು ಸೇರಿರುವಾಗ, ಪ್ರತಿಮೆಗಳು ಇಲ್ಲದಕಡೆ ಬಿಂದಿಗೆ ಜೋಸ್ಯ, ಚೆಂಬು ಜೋಸ್ಯದಂತಹವುಗಳ ಹತ್ತಿರ ಆಗಿಂದಾಗೆ ಅಂತರಿಕ್ಷದಲ್ಲಿನ ಗ್ರಹಗಳಾಗಲಿ, ಉಪಗ್ರಹಗಳಾಗಲಿ ಬಂದು ತಾತ್ಕಾಲಿಕವಾಗಿ ಕೆಲಸಮಾಡಿಹೋಗುತ್ತಿರುತ್ತವೆ. ಪ್ರತಿಮೆಗಳಲ್ಲಿರುವವು ಜೀವಾತ್ಮಗಳಾದರೆ, ಬಿಂದಿಗೆ ಜೋಸ್ಯದಲ್ಲಿ ಕೆಲಸಮಾಡಿರುವುದು ದೇವರ ಪರಿಪಾಲನೆಯಲ್ಲಿನ ಗ್ರಹಗಳೆಂದು ತಿಳಿಯಬೇಕು.

ಸ್ಥೂಲ ಮಾತ್ರ ತಿಳಿದು ಸೂಕ್ಷ್ಮ ತಿಳಿಯದವರನ್ನು, ಹೊರಗಿನ ಕಣ್ಣುಗಳು ಮಾತ್ರವಿದ್ದು ಒಳಗೆ ಜ್ಞಾನದೃಷ್ಟಿ ಇಲ್ಲದವರಾಗಿ ಲೆಕ್ಕಿಸಬಹುದು. ಅಂತಹವರಿಗೆ ಭೌತಿಕ ಮಾತ್ರ ತಿಳಿಯುತ್ತದೆ, ಅಭೌತಿಕ ತಿಳಿಯದು. ಅವರಿಗೆ ಶರೀರವೊಂದರ ಮೇಲಿನ ರೂಪ ತಿಳಿಯುತ್ತದಾಗಲಿ, ಶರೀರದಲ್ಲಿನ ಮನಸ್ಸು ಬುದ್ಧಿವೊಂದರ ರೂಪ ತಿಳಿಯದು. ಮನಸ್ಸು ಬುದ್ಧಿ ಇದ್ದಂತೆ ಕೂಡಾ ಖಚಿತವಾಗಿ ತಿಳಿಯದು. ಅಂತಹ ಭೌತಿಕವಾದಿಗಳಿಗೆ ಅವರ ಶರೀರದ ರೂಪ ತಿಳಿಯುತ್ತದಾಗಲಿ, ಅವರ ಸ್ವಂತರೂಪ ಅವರಿಗೆ ಯಾವಮಾತ್ರ ತಿಳಿಯದು. ಭೌತಿಕವಾದಿಗಳಿಗೆ ಅವರ ಶರೀರದಲ್ಲಿನ ಅಭೌತಿಕವೇ ತಿಳಿಯದು. ಆದ್ದರಿಂದ ಮ್ಯೂಜಿಯಂನಲ್ಲಿನ ಬೊಂಬೆ ತಿರುಗುತ್ತಿದೆಂದರೆ, ಅದಕ್ಕೆ ಅಭೌತಿಕವಾದ ಆತ್ಮ ಜೀವಾತ್ಮ ಕಾರಣವೆಂದು ತಿಳಿಯದೆ, ಅಲ್ಲಿಗೆ ಬರುವ ಸಂದರ್ಶಕರ ಪಾದಶಬ್ದಕ್ಕೆ ಹಾಗೆ ತಿರುಗುತ್ತಿರಬಹುದೆಂದು ಉತ್ತರ ಹೇಳಿದ್ದಾರೆ. ಅವರು ಹೇಳಿದ ಆ ಉತ್ತರ ಪೂರ್ತಿ ತಪ್ಪು. ಸಂದರ್ಶಕರ ಪಾದಶಬ್ದಕ್ಕೊ, ಪಾದಸ್ಪರ್ಶಕ್ಕೊ, ಪಾದತಾಕಡಿಗೂ ಹಾಗೆ ಪ್ರತಿಮೆ ಕದಲುತ್ತಿದೆಂದು ಹೇಳಿದರೆ, ಅದೊಂದು ಪ್ರತಿಮೆಯೇ ಏಕೆ ಕದಲುತ್ತಿದೆಂದು, ಉಳಿದ ಪ್ರತಿಮೆಗಳು ಏಕೆ ಕದಲಲಿಲ್ಲವೆಂದು ನಾವು ಕೇಳುತ್ತಿದ್ದೇವೆ. ಅದಕ್ಕೆ ಅವರು ಹೇಳಲಾರರು.

ಈ ದಿನ ದೇಶದಲ್ಲಿ ಭೌತಿಕವಾದಿಗಳು ತೊಂಭತ್ತು (90) ರಷ್ಟು ಇರುವಾಗ, ಹತ್ತು(10) ರಷ್ಟು ಜನ ಮಾತ್ರ ಅಭೌತಿಕವಾದಿಗಳು ಇದ್ದಾರೆ. ಭೂಮಿಮೇಲೆ ಸ್ಥೂಲಜ್ಞಾನ, ಸೂಕ್ಷ್ಮಜ್ಞಾನ ಎಂದು ಎರಡು ವಿಧಗಳ ಜ್ಞಾನಗಳು ಇವೆ. ಸ್ಥೂಲ ಜ್ಞಾನವನ್ನು ಭೌತಿಕ ಜ್ಞಾನವೆಂದು, ಭೌತಿಕವಾದವೆಂದು ಎನ್ನುತ್ತಿರುವಾಗ, ಸೂಕ್ಷ್ಮ ಜ್ಞಾನವನ್ನು ಅಭೌತಿಕ ಜ್ಞಾನವೆಂದು, ಅಭೌತಿಕವಾದವೆಂದು ಹೇಳುತ್ತಿರುತ್ತಾರೆ. ಇನ್ನೊಂದು ವಿಧವಾಗಿ ಹೇಳಿದರೆ ಭೌತಿಕವನ್ನು ಹಾರ್ಡ್‌ವೇರ್ ಎಂದೂ, ಅಭೌತಿಕವನ್ನು ಸಾಫ್ಟ್‌ವೇರ್ ಎಂದೂ ಹೇಳಬಹುದು. ಸ್ಥೂಲ, ಸೂಕ್ಷ್ಮವನ್ನು ಎರಡು ವಿಧಗಳ ಜ್ಞಾನಗಳನ್ನು ತಿಳಿದವನನ್ನು ಸಂಪೂರ್ಣ ಜ್ಞಾನಿ ಎಂದು ಹೇಳಬಹುದು. ಹಾಗಲ್ಲದೆ ಸ್ಥೂಲ ತಿಳಿದು, ಸೂಕ್ಷ್ಮ ತಿಳಿಯದವ

ನನ್ನು ಅಸಂಪೂರ್ಣಜ್ಞಾನಿ ಎಂದು ಹೇಳಬಹುದು. ಇಂದು ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್ ಎರಡನ್ನು ತಿಳಿದ ಸಂಪೂರ್ಣ ಜ್ಞಾನಿಗಳು ನೂರಕ್ಕೆ ಹತ್ತುಜನರಿರುವಾಗ, ಕೇವಲ ಹಾರ್ಡ್‌ವೇರ್ (ಸ್ಥೂಲವನ್ನು) ಮಾತ್ರ ತಿಳಿದ ಅಸಂಪೂರ್ಣ ಜ್ಞಾನಿಗಳು ಶೇಕಡ ತೊಂಭತ್ತರಷ್ಟು ಇದ್ದಾರೆ. ಅಸಂಪೂರ್ಣ ಜ್ಞಾನಿಗಳಾದವರು ಸಂಪೂರ್ಣ ಜ್ಞಾನಿಗಳಾದವರನ್ನು ಹೇಳನವಾಗಿ ಮಾತ ನಾಡುತ್ತಾ, ತಾವೇ ಪೂರ್ತಿ ಜ್ಞಾನಿಗಳೆಂದು ತಿಳಿದುಕೊಳ್ಳುತ್ತಾ, ಅನೇಕ ಹೆಸರುಗಳಿರುವ ಸಂಘಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಸೂಕ್ಷ್ಮವೊಂದರ ಪ್ರಸ್ಥಾವನೆ ಎಲ್ಲಿ ಬಂದರೂ ಅದನ್ನು ಇಲ್ಲವೇ ಇಲ್ಲವೆಂದು, ಸ್ಥೂಲ ಮಾತ್ರ ಸತ್ಯವೆಂದು, ಸೂಕ್ಷ್ಮ ಅಸತ್ಯವೆಂದು ವಾದಿಸುತ್ತಿರುತ್ತಾರೆ. ಅಂತಹವರು ಲೋಕದಲ್ಲಿ ನಡೆಯುತ್ತಿರುವ ಎಷ್ಟೋ ಸಂಘಟನೆಗಳಿಗೆ ಸಮಾಧಾನಕೊಡಲಾರದೆ, ಅವುಗಳೆಲ್ಲವನ್ನು ಅಸತ್ಯವೆಂದು ಹೇಳುತ್ತಿರುತ್ತಾರೆ. ಲಂಡನ್ ಮ್ಯೂಜಿಯಮ್‌ನಲ್ಲಿ ಪ್ರತಿಮೆ ತಿರುಗುತ್ತದೆಯೆಂದರೆ ಅದನ್ನು ಅಸತ್ಯವೆಂದು, ಉದ್ದೇಶಪೂರ್ವಕವಾಗಿಯೆ ಇತರರು ಯಾವುವೊ ಏರ್ಪಾಟುಗಳು ಮಾಡಿ, ಯಾರಿಗೂ ತಿಳಿಯದಂತೆ ಬೊಂಬೆಯನ್ನು ತಿರುಗುವಂತೆ ಮಾಡಿರುತ್ತಾರೆಂದು, ಸೈನ್ಸು ಪ್ರಕಾರ ಬೊಂಬೆ ತನ್ನಷ್ಟಕ್ಕೆತಾನು ತಿರುಗುವುದಿಲ್ಲವೆಂದೂ, ಅದೆಲ್ಲವೂ ಬೂಟಕವೆಂದು ತಾವು ನಿರೂಪಣೆ ಮಾಡುತ್ತೇವೆಂದು ಹೇಳುತ್ತಾರೆ.

ಭೂಮಿಮೇಲೆ ಹೆಚ್ಚಿನ ಶಾತಹೊಂದಿರುವ ಆಪ್‌ನಾಲೆಡ್ಜಿ ಮನುಷ್ಯರು (ಅರ್ಧಜ್ಞಾನ ಇರುವವರು) ಉಳಿದ ಪೂರ್ತಿ ಜ್ಞಾನ ಇರುವವರನ್ನು ಜ್ಞಾನ ತಿಳಿಯದವರಂತೆ, ಮೂಢನಂಬಿಕೆ ಇರುವವರಂತೆ ಲೆಕ್ಕಿಸಿ ಮಾತನಾಡುವುದು ನಡೆಯುತ್ತಿರುತ್ತದೆ. ಅಂತಹವರಿಗೆ ವಿಜ್ಞಾನವೆಂದರೆ ಏನೊ ತಿಳಿಯದು ಆದರೆ, ನಾವು ವಿಜ್ಞಾನಿಗಳೆಂದು ಹೇಳುತ್ತಿರುತ್ತಾರೆ. ಅಷ್ಟೇಯಲ್ಲದೆ ಅವರಿಗೆ ಶಾಸ್ತ್ರಗಳೆಷ್ಟೋ ಕೂಡಾ ತಿಳಿಯದಾಗಲಿ, ನಾವು ಶಾಸ್ತ್ರಜ್ಞಾನ ಇರುವವರೆಂದು ಹೇಳಿ ಕೊಳ್ಳುತ್ತಿರುತ್ತಾರೆ. ಮನುಷ್ಯನಿಗೆ ಬೇಕಾದ ವಿಜ್ಞಾನ ಸ್ಥೂಲರೂಪದಲ್ಲಿರುವುದಾ, ಇಲ್ಲವೆ ಸೂಕ್ಷ್ಮರೂಪದಲ್ಲಿರುವುದಾ ಎಂದು ತಿಳಿಯದಾಗಲಿ, ನಾವು ಮನುಷ್ಯರಲ್ಲಿ

ವಿಜ್ಞಾನಿಗಳೆಂದು ಹೇಳಿಕೊಳ್ಳುತ್ತಾರೆ. ಅಂತಹವರಿಗೆ ಮನುಷ್ಯನಲ್ಲಿರುವ ಸೂಕ್ಷ್ಮಶಕ್ತಿ ಏನೊ ತಿಳಿಯದು. ಹುಟ್ಟಿದ ಸಮಯದಲ್ಲಿ ಜಾಘತಕದ ಪ್ರಕಾರ (ಜಾತಕದ ಪ್ರಕಾರ) ಬುಧಗ್ರಹ ಅನುಕೂಲವಾಗಿದ್ದು, ಹುಟ್ಟಿದ ಸಮಯಕ್ಕೆ ಅಂದರೆ ಲಗ್ನಕ್ಕೆ ಐದನೆ ಸ್ಥಾನದಲ್ಲಿ ಬುಧಗ್ರಹ ನೋಡುವುದಾಗಲಿ, ಇರುವುದಾಗಲಿ ನಡೆದಿದ್ದರೆ, ಜನ್ಮಿಸಿದವನು ಕನ್ಯಾಲಗ್ನದಲ್ಲಾಗಲಿ, ಮಿಥುನಲಗ್ನದಲ್ಲಾಗಲಿ ಹುಟ್ಟಿದ್ದರೆ ಅಂತಹವನು ಸೂಕ್ಷ್ಮಜ್ಞಾನ ಇರುವವನಾಗುತ್ತಾನೆ ಎಂದು ಮೊದಲೆ ಆ ವ್ಯಕ್ತಿವೊಂದರ ಜಾತಕದಲ್ಲಿ ಬರೆದಿಡಬಹುದು. ಅಂತಹ ವ್ಯಕ್ತಿಗೆ ಜಾತಕದಲ್ಲಿ ಚಂದ್ರನು, ಕೇತುವು ಎಂಬ ಎರಡು ಗ್ರಹಗಳು ಅನುಕೂಲಿಸಿದ್ದರೆ ದೈವಜ್ಞಾನದಲ್ಲಿ ಯಾರಿಗೂ ತಿಳಿಯದ ಸೂಕ್ಷ್ಮವಿಷಯಗಳನ್ನು ಎಷ್ಟನ್ನೊ ತಿಳಿದಿರುತ್ತಾನೆಂದು ಹೇಳಬಹುದು. ಈ ವಿಧವಾಗಿ ಭವಿಷ್ಯತ್ತಿನಲ್ಲಿ ನಡೆಯುವ ಕೆಲವು ವಿಷಯಗಳನ್ನು ಹೇಳುವ ಸೂತ್ರಗಳಿರುವುದು ಜ್ಯೋತಿಷ್ಯ ಶಾಸ್ತ್ರ. ಜ್ಯೋತಿಷ್ಯಶಾಸ್ತ್ರ ಆರು ಶಾಸ್ತ್ರಗಳಲ್ಲಿ ಒಂದು. ಆದರೆ ಕೆಲವರು ಅರ್ಧ ಮೆದಳಿರುವವರು ಜ್ಯೋತಿಷ್ಯವು ಶಾಸ್ತ್ರವೇ ಅಲ್ಲವೆಂದು ಹೇಳುತ್ತಿದ್ದಾರೆ. ಅಂತಹವರು ಮಳೆವೊಂದರ ವಿಷಯವನ್ನು ಮೊದಲೆ ತಿಳಿಸುವ ಬಿಂದಿಗೆ ಜೋಸ್ಯವನ್ನು ಮೂಢನಂಬಿಕೆಯೆಂದು, ಅಸತ್ಯವೆಂದು ಹೇಳುತ್ತಾರೆ. ಅಂತಹವರೇ ಮ್ಯೂಜಿಯಂನಲ್ಲಿ ಪ್ರತಿಮೆ ತಿರುಗುತ್ತಿದೆಯೆಂದರೆ, ಅದರ ವಿಷಯ ಯಾವುದು ತಿಳಿಯದಿದ್ದರೂ ಅದನ್ನು ಅಸತ್ಯವೆನ್ನುತ್ತಾರೆ. ಇತರರು ಹಾಗೆ ಮಾಡಿರುತ್ತಾರೆಂದು ಹೇಳುತ್ತಾರೆ. ಅಂತಹವರು ಎಂದಿಗೂ ಪೂರ್ತಿ ಜ್ಞಾನಿಗಳು ಆಗಲಾರರು. ಅವರಿಗೆ ಎಂದಿಗೂ ಸೂಕ್ಷ್ಮಜ್ಞಾನ ತಿಳಿಯುವುದಿಲ್ಲ. ಈಗ ಜ್ಯೋತಿಷ್ಯವನ್ನು ಕುರಿತು ಕೆಲವರು ಕೇಳುವ ಪ್ರಶ್ನೆಯನ್ನು ತೆಗೆದುಕೊಂಡು ಅವರಿಗೂ ಕೂಡಾ ಸಮಾಧಾನ ಕೊಡುತ್ತೇವೆ.

**ಪ್ರಶ್ನೆ :–** ಜ್ಯೋತಿಷ್ಯ ಅಸತ್ಯ ಅಲ್ಲವೆ! ತಾಮ್ರದ ರೇಕೆಗಳು, ಅಂತ್ರಗಳು, ಮಂತ್ರಗಳು ಮೂಢನಂಬಿಕೆ ಅಲ್ಲವೆ! ವಾಸ್ತುವಿನಿಂದ ಕಷ್ಟಗಳು ಹೋಗುತ್ತವಾ, ಸುಖಗಳು ಬರುತ್ತವಾ? ವಾಸ್ತು ಶಾಸ್ತ್ರವಾ?

**ಉತ್ತರ :–** ಪೂರ್ತಿ ಜ್ಞಾನತಿಳಿದ ಮನುಷ್ಯ ಪ್ರಶ್ನಿಸುವುದಕ್ಕು, ಅರ್ಧ ಜ್ಞಾನ

ತಿಳಿದ ಮನುಷ್ಯ ಪ್ರಶ್ನಿಸುವುದಕ್ಕು ಎಷ್ಟೋ ವ್ಯತ್ಯಾಸ ಇರುತ್ತದೆ. ಪೂರ್ತಿ ಜ್ಞಾನ ತಿಳಿದವನು ಯಾವುವು ಪ್ರಶ್ನೆಗಳೊ ತಿಳಿದು ಪ್ರಶ್ನಿಸಬೇಕಾದ್ದನ್ನೆ ಪ್ರಶ್ನಿಸುತ್ತಾನೆ. ಅದೇ ಅರ್ಧ ಜ್ಞಾನತಿಳಿದವನು ಪ್ರಶ್ನಿಸಬೇಕಾದ ಪ್ರಶ್ನೆಯನ್ನೇ ಅಲ್ಲದೆ ಪ್ರಶ್ನೆಗಳು ಅಲ್ಲದವುಗಳನ್ನು ಕೂಡಾ ಪ್ರಶ್ನಿಸುತ್ತಾನೆ. ಇಲ್ಲಿ ಜ್ಯೋತಿಷ್ಯ ಅಸತ್ಯ ಅಲ್ಲವೆ! ಎಂಬ ಪ್ರಶ್ನೆ ಕೂಡಾ ಹಾಗೆಯೇ ಇದೆ. ಶಾಸ್ತ್ರಗಳು ಎಷ್ಟು, ಪುರಾಣಗಳು ಎಷ್ಟು ಎಂಬ ವಿಷಯ ತಿಳಿಯದಂತೆ ಅವುಗಳಿಗೆ ಸಂಬಂಧಿಸಿದ ಪ್ರಶ್ನೆಗಳು ಕೇಳುವುದು ಸಂಗೀತ ಜ್ಞಾನ ಯಾವುದು ಇಲ್ಲದವನು ರಾಗವೆಂದರೆ ಏನು? ತಾಳ ಎಂದರೆ ಏನು? ರಾಗ ನಿಜವಾದರೆ ತಾಳ ಅಸತ್ಯ ಅಲ್ಲವೆ? ಎಂದು ಪ್ರಶ್ನಿಸಿದಂತಿರುತ್ತದೆ. ಸಂಗೀತದಲ್ಲಿ ರಾಗ ತಾಳ ಮನುಷ್ಯನಿಗೆ ಗಾಳಿ ನೀರಿನಂತಹವು. ಅವುಗಳಲ್ಲಿ ಒಂದು ಸತ್ಯ ಮತ್ತೊಂದು ಅಸತ್ಯ ಎಂದು ಪ್ರಶ್ನಿಸಿದರೆ, ಅದು ಪೂರ್ತಿ ಅಜ್ಞಾನದಿಂದ ಪ್ರಶ್ನಿಸಿದ ಪ್ರಶ್ನೆ ಆಗುತ್ತದೆ. ಹಾಗೆಯೇ ಶಾಸ್ತ್ರಗಳು ಸತ್ಯದಿಂದ ಕೂಡಿಕೊಂಡಿವೆ, ಪುರಾಣಗಳು ಅಸತ್ಯದಿಂದ ಕೂಡಿಕೊಂಡಿವೆ ಎಂಬ ವಿಷಯ ತಿಳಿಯದಂತೆ ಶಾಸ್ತ್ರಗಳು ಸತ್ಯವಾ? ಎಂದು ಪ್ರಶ್ನಿಸಿದಂತೆ ಮೇಲಿನ ಪ್ರಶ್ನೆ ಇದೆ.

ಷಟ್ ಶಾಸ್ತ್ರಗಳು, ಅಷ್ಟಾದಶಪುರಾಣಗಳು ಎಂದು ತಿಳಿಯದೆಯೇ ಅವುಗಳನ್ನು ಕುರಿತು ಪ್ರಶ್ನಿಸಿದರೆ ಆ ಪ್ರಶ್ನೆ ಹಾಸ್ಯಾಸ್ಪದ ಆಗಬಹುದು. ಹಾಗೆಯೇ ಶಾಸ್ತ್ರಗಳು ಎಷ್ಟು? ಅವು ಯಾವು? ಎಂದು ಕನಿಷ್ಟ ಪ್ರಾಥಮಿಕ ಜ್ಞಾನ ತಿಳಿಯದೆಯೇ ಜ್ಯೋತಿಷ್ಯ ಅಸತ್ಯ ಅಲ್ಲವಾ! ಎಂದು ಪ್ರಶ್ನಿಸಿದ್ದಾರೆ. ಷಟ್ ಶಾಸ್ತ್ರಗಳಲ್ಲಿ ಜ್ಯೋತಿಷ್ಯ ಒಂದು ಆದಾಗ ಶಾಸ್ತ್ರವನ್ನು ಅಸತ್ಯವೆಂದು ನಾವು ಹೇಗೆ ಹೇಳುತ್ತೇವೆ? ಕೇಳುವವನಿಗೆ ಹದ್ದು ಹೊತ್ತು ಇಲ್ಲದಿದ್ದರೂ, ಹೇಳುವವನಿಗೆ ಎರಡೂ ಇರಬೇಕಾಗಿದ್ದೆ. ಆದ್ದರಿಂದ ಶಾಸ್ತ್ರ ಸತ್ಯ, ಪುರಾಣ ಅಸತ್ಯದಿಂದ ಕೂಡಿಕೊಂಡಿದೆಯೆಂಬ ವಿಷಯವನ್ನು ಹೇಳುವವನು ಮರೆಯಬಹುದು. ಜ್ಯೋತಿಷ್ಯ ಒಂದು ಶಾಸ್ತ್ರವಾದಾಗ ಅದು ಪೂರ್ತಿ ಸತ್ಯವಾಗುತ್ತದೆ. ಆದರೆ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ ಗಣಿತಶಾಸ್ತ್ರ ಎಷ್ಟೋ

ಅಭಿವೃದ್ಧಿ ಹೊಂದಿದೆ. ಅದರಲ್ಲಿ ಎಷ್ಟೋ ಸೂತ್ರಗಳನ್ನು ಎಷ್ಟೋಜನ ಕಂಡುಕೊಳ್ಳುವುದು ನಡೆದಿದೆ. ಈ ಮಧ್ಯಕಾಲದಲ್ಲಿಯೇ ಗಣಿತದಲ್ಲಿ ಎಷ್ಟೋ ಹೊಸ ಸೂತ್ರಗಳನ್ನು ಕಂಡುಕೊಂಡು ಹೊಸ ವಿಧಾನವಾಗಿ ಲೆಕ್ಕಿಸುವುದು ನಡೆಯುತ್ತಿದೆ. ಅಂತಹವುಗಳಲ್ಲಿ ಆಲ್‌ಜಿಬ್ರಾ, ಅಬಾಕಸ್ ಎನ್ನುವವು ಕೂಡಾ ಇವೆ. ಆದರೆ ಜ್ಯೋತಿಷ್ಯದಲ್ಲಿ ಅಂತಹ ಪರಿಶೋಧನೆ ನಡೆಯಲಿಲ್ಲ. ಆದ್ದರಿಂದ ಜ್ಯೋತಿಷ್ಯಶಾಸ್ತ್ರ ಪೂರ್ತಿಯಾಗಿ ಅಭಿವೃದ್ಧಿ ಹೊಂದಲಿಲ್ಲ. ಅಭಿವೃದ್ಧಿ ಚೆಂದದಿರುವುದರಿಂದ ಜ್ಯೋತಿಷ್ಯದಿಂದ ಪೂರ್ತಿ ಫಲಿತವನ್ನು ನಾವು ಪಡೆಯಲಾರದೆ ಹೋಗುತ್ತಿದ್ದೇವೆ. ಬೇಲದ ಹಣ್ಣು ಹೇಗೆ ತಿನ್ನಬೇಕೊ ತಿಳಿಯದೆ ಅದನ್ನು ಹಣ್ಣೇಅಲ್ಲ, ಇದು ಮರಕ್ಕೆ ಕಾದಿರುವುದೇ ಅಲ್ಲ ಎಂದರೆ ಹೇಗಿರುತ್ತದೋ, ಜ್ಯೋತಿಷ್ಯವನ್ನು ಶಾಸ್ತ್ರವೇ ಅಲ್ಲ ಅನ್ನುವುದು ಹಾಗೆಯೇ ಇರುತ್ತದೆ.

ನಾನು ಚಿಕ್ಕಂದಿನಿಂದ ಹೇತುವಾದ ದೃಕ್ಪಥ ಹೆಚ್ಚಾಗಿ ಹೊಂದಿರುವವನು. ಯಾವುದಾದರೂ ಒಂದು ವಿಷಯವನ್ನು ಪೂರ್ತಿಯಾಗಿ ತಿಳಿದುಕೊಳ್ಳುವವರೆಗೂ ಅದನ್ನು ಕುರಿತು ಬಿಡುವವನಲ್ಲ. ಆ ವಿಧವಾಗಿ ಜ್ಯೋತಿಷ್ಯದಲ್ಲಿನ ಸತ್ಯವನ್ನು ತಿಳಿದುಕೊಳ್ಳುವುದಕ್ಕೆ, ಅದಕ್ಕೆ ಸಂಬಂಧಿಸಿದ ಸೂತ್ರಗಳು ಯಾವು ಇವೆಯೋ ತಿಳಿದುಕೊಳ್ಳುವುದಕ್ಕೆ, ಜ್ಯೋತಿಷ್ಯರೆಂದು ಹೆಸರುವಾಸಿಯಾದವರ ಹತ್ತಿರಕ್ಕೆ ಹೋಗಿ, ಅವರು ಯಾವ ಸೂತ್ರಗಳ ಆಧಾರದಿಂದ ಜ್ಯೋತಿಷ್ಯವನ್ನು ಹೇಳುತ್ತಿದ್ದಾರೋ ಗಮನಿಸುತ್ತಿದ್ದೆನು. ಹೊಟ್ಟೆಪಾಡಿಗಾಗಿ ಕೆಲವರು ಜ್ಯೋತಿಷ್ಯವೆಂಬ ಹೆಸರನ್ನು ಬಳಸಿಕೊಳ್ಳುತ್ತಾ ಸುದ್ದಿ, ಗಿಣಿ ಜ್ಯೋತಿಷ್ಯ ಎಂದು ಕೆಲವರು ಹೇಳಿಕೊಳ್ಳುತ್ತಿರುವಾಗ, ಕೆಲವರು ಜೀವನೋಪಾಯಕ್ಕಾಗಿ ಜ್ಯೋತಿಷ್ಯಾಲಯಗಳೆಂದು ಬೋರ್ಡು ಇಟ್ಟುಕೊಂಡು ಈ ಪ್ರಶ್ನೆಗೆ ಇಷ್ಟು ರೇಟು ಎಂದು ಹಣವನ್ನು ಕೀಳುವವರು ಕೂಡಾ ಇದ್ದಾರೆ. ನಾವು ಎಷ್ಟೋಜನ ಜ್ಯೋತಿಷ್ಯರನ್ನು ನೋಡಿದ ನಂತರ ಎಲ್ಲರೂ ಹೇಳುವುದು ಜ್ಯೋತಿಷ್ಯ ಅಲ್ಲ. ಕೆಲವರು ಹೇಳುವುದು ಮಾತ್ರವೇ ಜ್ಯೋತಿಷ್ಯವೆಂದು ಗ್ರಹಿಸಿದ್ದೇವೆ. ಎಲ್ಲಾ ನೋಡಿದ ನಂತರ ಜ್ಯೋತಿಷ್ಯ ಎಲ್ಲರೂ ಅಂದುಕೊಂಡಂತೆ ಮೂಢನಂಬಿಕೆಯಲ್ಲ, ಅದು ಒಂದು ಶಾಸ್ತ್ರ ಎಂದು

ಗುರುತಿಸಿದ್ದೇವೆ. ಈ ದಿನ ಭೂಮಿಮೇಲಿರುವ ಶಾಸ್ತ್ರಗಳಲ್ಲಿ ಕೆಲವು ಹಿಂದುಳಿದುಹೋಗಿವೆ. ಕೆಲವು ಚೆನ್ನಾಗಿ ಮುಂದಕ್ಕೆ ಹೋಗಿವೆ. ಗಣಿತ, ಖಗೋಳ, ರಸಾಯನ, ಭೌತಿಕಶಾಸ್ತ್ರ ಈ ನಾಲ್ಕು ಈದಿನ ಚೆನ್ನಾಗಿ ಅಭಿವೃದ್ಧಿ ಹೊಂದಿವೆ, ಇನ್ನೂ ಅಭಿವೃದ್ಧಿ ಆಗುತ್ತಲೇ ಇವೆ. ಅವುಗಳನ್ನು ಕುರಿತು ನಿರಂತರ ಪರಿಶೋಧನೆಗಳು ನಡೆಯುತ್ತಲೇ ಇವೆ. ಈ ನಾಲ್ಕು ಶಾಸ್ತ್ರಗಳು ಎಷ್ಟೋ ಉನ್ನತ ಸ್ಥಾನದಲ್ಲಿ ಮನುಷ್ಯನಿಗೆ ಉಪಯೋಗಪಡುತ್ತಿವೆ. ಆದರೆ ಆರು ಶಾಸ್ತ್ರಗಳಲ್ಲಿ ಕೇವಲ ಎರಡು ಮಾತ್ರ ಎಂಥಹ ಪೋಷಣೆ ಇಲ್ಲದೆ, ಎಂಥಹ ಅಭಿವೃದ್ಧಿ ಇಲ್ಲದೆ ಮನುಷ್ಯ ಉಪಯೋಗಿಸಿಕೊಳ್ಳಲಾರದ ಸ್ಥಿತಿಯಲ್ಲಿ ಇವೆ. ಆ ಎರಡು ಶಾಸ್ತ್ರಗಳೆ ಒಂದು ಜ್ಯೋತಿಷ್ಯಶಾಸ್ತ್ರ, ಎರಡನೆಯದು ಬ್ರಹ್ಮವಿದ್ಯಾಶಾಸ್ತ್ರ. ಈ ಎರಡರಲ್ಲಿ ಜ್ಯೋತಿಷ್ಯಶಾಸ್ತ್ರ ಒಂದರ ಹೆಸರನ್ನು ಬಹಳಜನ ಬಳಸಿಕೊಳ್ಳುತ್ತಾ, ನಾವು ಜ್ಯೋತಿಷ್ಯಶಾಸ್ತ್ರದವರೆಂದು ಹೇಳಿಕೊಳ್ಳುತ್ತಿದ್ದಾರೆ. ಹಾಗೆಯೇ ಬ್ರಹ್ಮವಿದ್ಯಾ ಶಾಸ್ತ್ರ ಒಂದರ ಹೆಸರು ಕೂಡಾ ತಿಳಿಯದವರು ಕೆಲವರು ನಾವು ಸ್ವಾಮೀಜಿಗಳು ಎಂದು ಪ್ರಚಾರವಾಗಿದ್ದಾರೆ. ಅದರೆ ಜ್ಯೋತಿಷ್ಯರು ಎನ್ನುವವರಲ್ಲಿ ಯಾರೋ ಒಬ್ಬರು ನಿಜವಾದ ಜ್ಯೋತಿಷ್ಯದವನು ಇರಬಹುದು. ಹಾಗೆಯೇ ಸ್ವಾಮೀಜಿಗಳೆನ್ನುವವರಲ್ಲಿ ಯಾರೋ ಒಬ್ಬರು ನಿಜವಾದ ದೈವಜ್ಞಾನ ತಿಳಿದ ಸ್ವಾಮಿ ಇರಬಹುದು.

ಭೂಮಿಮೇಲೆ ಇರುವ ಸ್ವಾಮೀಜಿಗಳಿಗಿಂತ ಜ್ಯೋತಿಷ್ಯರು ಅತಿಹೆಚ್ಚಾಗಿದ್ದಾರೆ. ಜ್ಯೋತಿಷ್ಯರಾದವರಲ್ಲಿ ಜ್ಯೋತಿಷ್ಯವನ್ನು ಶಾಸ್ತ್ರವಾಗಿ ಲೆಕ್ಕಿಸುವವರು ಕೆಲವರು ಇದ್ದಾರೆ. ಜ್ಯೋತಿಷ್ಯವನ್ನು ಶಾಸ್ತ್ರವಾಗಿ ಗುರುತಿಸಿದವರು ಶಾಸ್ತ್ರಬದ್ಧವಾದ ವಿಧಾನವನ್ನೇ ಅನುಸರಿಸುತ್ತಾ, ಅದರಮೂಲಕ ಒಳ್ಳೆಯ ಫಲಿತವನ್ನು ಪಡೆಯುತ್ತಿದ್ದಾರೆ. ಕೆಲವರು ಜ್ಯೋತಿಷ್ಯರು ಕೆಲವರು ನಾಸ್ತಿಕರು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡಲಾರದೆ ಹೋಗುವುದರಿಂದ, ಜ್ಯೋತಿಷ್ಯ ಮೂಢನಂಬಿಕೆಯೆಂದು ಪ್ರಚಾರವಾಗಿದೆ. ಒಂದು ನ್ಯೂಸ್ ಛಾನಲ್‌ನಲ್ಲಿ ಜ್ಯೋತಿಷ್ಯದ ಮೇಲೆ ಕೆಲವರು ನಾಸ್ತಿಕರು, ಹೇತುವಾದಿಗಳು ಕೇಳಿದ ಪ್ರಶ್ನೆಗಳಿಗೆ

ಪಂಚಾಂಗಕರ್ತರೆಂದು ಹೆಸರುವಾಸಿಯಾದವರೆ ಸರಿಯಾದ ಉತ್ತರ ಕೊಡಲಾರದೆಹೋಗುವುದು, ಜ್ಯೋತಿಷ್ಯ ಶಾಸ್ತ್ರವಲ್ಲ ಮೂಢನಂಬಿಕೆ ಎನ್ನುವಂತಾಗಿದೆ. ಆಗಿನಿಂದ ಆ ನ್ಯೂಸ್ ಛಾನಲ್‌ನವರು ಜ್ಯೋತಿಷ್ಯ ಮೂಢನಂಬಿಕೆಯೆಂದು ಪ್ರಕಟಿಸುವುದು ಪ್ರಾರಂಭಿಸಿದ್ದಾರೆ. ನನಗೆ ತಿಳಿದಮಟ್ಟಿಗೆ ಜ್ಯೋತಿಷ್ಯ ಅಸತ್ಯವಲ್ಲ, ಮೂಢನಂಬಿಕೆ ಅಷ್ಟಕ್ಕೂಅಲ್ಲ. ಜ್ಯೋತಿಷ್ಯ ಒಂದು ಶಾಸ್ತ್ರ, ಅದು ಸತ್ಯ. ಸತ್ಯದಿಂದ ಕೂಡಿಕೊಂಡಿದೆಯೆಂದು, ಪುರಾಣ ಅಸತ್ಯದಿಂದ ಕೂಡಿಕೊಂಡಿದೆಯೆಂಬ ಸೂತ್ರವನ್ನು ತಿಳಿಯದೆ ಹೋದರೆ, ಜ್ಯೋತಿಷ್ಯವನ್ನು ಕೂಡಾ ಒಂದು ಪುರಾಣದ ಕೆಳಗೆ ಲೆಕ್ಕಿಸುವುದು ನಡೆಯುತ್ತದೆ. ಹಾಗಲ್ಲದೆ ಆರು ಶಾಸ್ತ್ರಗಳಲ್ಲಿ ಜ್ಯೋತಿಷ್ಯ ಐದನೆ ಶಾಸ್ತ್ರವೆಂದು ತಿಳಿಯಬೇಕು.

ಸತ್ಯವಾದ ಜ್ಯೋತಿಷ್ಯವೇ ಶಾಸ್ತ್ರವಾಗಿ ಗುರುತಿಸಲ್ಪಡದ ಈ ಕಾಲದಲ್ಲಿ, ಅಸತ್ಯವಾದ ವಾಸ್ತು ಎನ್ನುವುದು ವಾಸ್ತುಶಾಸ್ತ್ರವಾಗಿ ಗುರುತುಹೊಂದಿ, ಚೆನ್ನಾಗಿ ಪ್ರಚಾರವಾಗುವುದು ನಮಗೆ ತುಂಬಾ ಆಶ್ಚರ್ಯವಾಗಿ ಇದೆ. ಈ ಮಧ್ಯಕಾಲದಲ್ಲಿ ಚೆನ್ನಾಗಿ ಪ್ರಚಾರವಾದ ವಾಸ್ತುಶಾಸ್ತ್ರವೆನ್ನುವುದು ಯಾವ ವಿಧವಾಗಿ ನೋಡಿದರೂ ಅದು ಶಾಸ್ತ್ರವಲ್ಲ. ವಾಸ್ತುವಿನಿಂದ ಕಷ್ಟಗಳು ಹೋಗುತ್ತವೆ, ಸುಖಗಳು ಬರುತ್ತವೆ ಎನ್ನುವುದು ಪೂರ್ತಿ ಭ್ರಮೆ ಎಂದು ಹೇಳಬಹುದು. ವಾಸ್ತುವನ್ನು ಶಾಸ್ತ್ರವಾಗಿ ಹೇಳಿಕೊಳ್ಳುತ್ತಾ, ನಿವಾಸಿಸುವ ಮನೆ ಹೀಗಿದ್ದರೆ ಇಂಥಹ ಫಲಿತವಿರುತ್ತದೆಯೆಂದು ಹೇಳುವುದು ಪೂರ್ತಿ ಅಸತ್ಯ. ಆ ಮಾತು ಶಾಸ್ತ್ರಬದ್ಧವಾದುದಲ್ಲ. ಆದರೂ ಮನುಷ್ಯರಿಗಿರುವ ಆಸೆಗಳನ್ನು ಗ್ರಹಿಸಿದ ಕೆಲವರು, ತಾವು ವಾಸ್ತುವನ್ನು ತಿಳಿದ ಜ್ಯೋತಿಷ್ಯರೆಂದು ಹೇಳಿಕೊಳ್ಳುತ್ತಾ, ವಾಸ್ತುವನ್ನು ಹೇಳುವುದೆ ಕೆಲಸವಾಗಿಟ್ಟು ಕೊಂಡು, ಆ ಕೆಲಸದ ಮೂಲಕ ತೀವ್ರವಾಗಿ ಹಣವನ್ನು ಸಂಪಾದಿಸಿಕೊಳ್ಳುವವರು ಇದ್ದಾರೆ ಯಾರು ಹೇಗೆ ಇದ್ದರೂ ವಾಸ್ತು ಎನ್ನುವುದು ಅವಾಸ್ತವ. ಅದು ಶಾಸ್ತ್ರ ಎಷ್ಟುಮಾತ್ರ ಅಲ್ಲ. ಜ್ಯೋತಿಷ್ಯ ಪೂರ್ತಿ ಶಾಸ್ತ್ರವಾಗಿದೆ. ಆದ್ದರಿಂದ ಮನುಷ್ಯನೊಂದರ ಭವಿಷ್ಯತ್ತಿನಲ್ಲಿ ಅವನಿಗಿರುವ ಸ್ಥಿರಚರಾಸ್ತಿಗಳು ಕೂಡಾ ಜ್ಯೋತಿಷ್ಯದಿಂದ ಸ್ವಲ್ಪಮಟ್ಟಿಗೆ ತಿಳಿಯಬಹುದು. ಆಗ ಒಬ್ಬ ಮನುಷ್ಯನಿಗೆ ಸ್ಥಿರಾಸ್ತಿಯಾದ ಮನೆ ಹೇಗೆ ಇರುತ್ತದೊ ಮೊದಲೇ ಹೇಳಬಹುದು.

ಜ್ಯೋತಿಷ್ಯದಲ್ಲಿ ಮನೆ ಹೇಗೆ ಇರುತ್ತದೊ ಹೇಳಬಹುದಾಗಲಿ, ಮನೆಯಿಂದ ಸುಖದುಃಖಗಳು, ಲಾಭನಷ್ಟಗಳು ಉಂಟಾಗುತ್ತವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಮನುಷ್ಯನ ಶರೀರದಲ್ಲಿ ನಿರ್ಣಯಿಸಲ್ಪಟ್ಟ ಪ್ರಾರಬ್ಧಕರ್ಮವನ್ನು ತಿಳಿಯುವುದಕ್ಕೆ ಜ್ಯೋತಿಷ್ಯ ಉಪಯೋಗಪಡುತ್ತದೆ. ಅಷ್ಟು ಬಿಟ್ಟರೆ ಜ್ಯೋತಿಷ್ಯದಿಂದ ಕರ್ಮವನ್ನು ಬದಲಾಯಿಸಿಕೊಳ್ಳುವುದಕ್ಕಾಗಲಿ, ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದಕ್ಕಾಗಲಿ ಸಾಧ್ಯಪಡುವುದಿಲ್ಲ. ಮನುಷ್ಯನ ಜೀವನದಲ್ಲಿನ ಪ್ರಾರಬ್ಧವನ್ನು ಮನುಷ್ಯ ಅನುಭವಿಸಬೇಕಾಗಿದ್ದೆಯಾಗಲಿ, ಜ್ಯೋತಿಷ್ಯದಿಂದ ಮುಂಚೆಯೇ ತಿಳಿದುಕೊಂಡು ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯಪಡುವುದಿಲ್ಲ. ಶಾಸ್ತ್ರವಾದ ಜ್ಯೋತಿಷ್ಯದಲ್ಲಿಯೇ ಕರ್ಮವನ್ನು ತಪ್ಪಿಸಿಕೊಳ್ಳುವುದಕ್ಕಾಗಲಿ, ಬದಲಾಯಿಸಿ ಕೊಳ್ಳುವುದಕ್ಕಾಗಲಿ ಸಾಧ್ಯವಿಲ್ಲದಿರುವಾಗ, ಶಾಸ್ತ್ರವೇ ಅಲ್ಲದಿರುವಂತಹ ವಾಸ್ತುವಿನಿಂದ ಕರ್ಮ ಬದಲಾಗುತ್ತದೆಯೆಂದು, ಕಷ್ಟಗಳಿಂದ ತಪ್ಪಿಸಿಕೊಳ್ಳಬಹು ದೆಂದು ಹೇಳುವುದು ಪೂರ್ತಿ ತಪ್ಪಾಗುತ್ತದೆ ಮತ್ತು ಪ್ರಜೆಗಳನ್ನು ಮೋಸಮಾಡಿ ದಂತಿರುತ್ತದೆ. ವಾಸ್ತುವಿನಿಂದ ಫಲಿತ ಲಭಿಸಲಿಲ್ಲವೆಂದು, ವಾಸ್ತು ಜ್ಯೋತಿಷ್ಯದಲ್ಲಿನ ಭಾಗವೆಂದು ತಿಳಿದು, ವಾಸ್ತುವನ್ನನುಸರಿಸಿ ಫಲಿತ ಇಲ್ಲದಿರುವುದರಿಂದ ಜ್ಯೋತಿಷ್ಯವನ್ನು ಅವಹೇಳನ ಮಾಡಿ ಮಾತನಾಡುವುದು. ಜ್ಯೋತಿಷ್ಯವನ್ನು ಶಾಸ್ತ್ರ ಅಲ್ಲವೆನ್ನುವುದು ಸರಿಯಾದ ಪದ್ಧತಿಯಲ್ಲ. ವಾಸ್ತುಗು ಜ್ಯೋತಿಷ್ಯಕ್ಕು ಎಷ್ಟುಮಾತ್ರ ಸಂಬಂಧವಿಲ್ಲ. ಆದ್ದರಿಂದ ವಾಸ್ತುವನ್ನು ಶಾಸ್ತ್ರಅಲ್ಲವೆಂದು ಹೇಳಬಹುದು ಆದರೆ, ಜ್ಯೋತಿಷ್ಯವನ್ನು ಶಾಸ್ತ್ರ ಅಲ್ಲವೆಂದು ಹೇಳಬಾರದು.

ಇನ್ನು ಈ ಪ್ರಶ್ನೆಯಲ್ಲಿ ಅಂತ್ರಗಳು, ಮಂತ್ರಗಳು ಮೂಢನಂಬಿಕೆ ಅಲ್ಲವಾ? ಎಂದು ಕೇಳಿದ್ದಾರೆ. ಜ್ಯೋತಿಷ್ಯವನ್ನು ವಾಸ್ತುವನ್ನು ಬೆರೆಸಿಕೊಂಡು ಅವು ಶಾಸ್ತ್ರವಾ, ಸತ್ಯವಾ ಎಂದು ಕೇಳಿರುವುದಕ್ಕೆ ವಾಸ್ತುವನ್ನು ಮೂಢನಂಬಿಕೆ ಯೆಂದು, ಜ್ಯೋತಿಷ್ಯವನ್ನು ಶಾಸ್ತ್ರವೆಂದು ನಾವು ಹೇಳುವುದು ನಡೆದಿದೆ. ನಮಗೆ ತಿಳಿಯದಿರುವವೆಲ್ಲ ಮೂಢನಂಬಿಕೆಗಳೆಂದು, ಅಸತ್ಯಗಳೆಂದು ತಿಳಿದಿರುವವೆಲ್ಲವನ್ನು ಸತ್ಯವೆಂದು ಹೇಳುವುದು ಈದಿನ ಬಹಳಜನರಿಗೆ ಅಭ್ಯಾಸವಾಗಿಹೋಗಿದೆ.

ನಮಗೆ ತಿಳಿಯದಿದ್ದರೂ ಕೆಲವು ಸತ್ಯಗಳೆಂದು ಮರೆಯಬಾರದು. ಆ ವಿಧಾನದಲ್ಲಿ ಮಂತ್ರಗಳು, ಅಂತ್ರಗಳು ಮೂಢನಂಬಿಕೆಯಲ್ಲ ಎಂದು ಹೇಳುತ್ತಿದ್ದೇವೆ. ಚಿಕ್ಕಂದಿನಿಂದ ಓದುಬಿಟ್ಟರೆ ಉಳಿದ ವಿಷಯಗಳು ಯಾವು ತಿಳಿಯದವರು ದೆವ್ವಗಳನ್ನು, ಅಂತ್ರಗಳನ್ನು, ಮಂತ್ರಗಳನ್ನು ನಂಬುವುದಿಲ್ಲ. ದೆವ್ವಗಳು, ಅಂತ್ರಗಳು, ಮಂತ್ರಗಳು ಎಂದರೆ ಏನೊ ತಿಳಿಯದವರು ಮೂಢವಾಗಿ ಅವುಗಳ ವಿಷಯಗಳನ್ನು ಖಂಡಿಸುತ್ತಿದ್ದಾರೆ. ಮೂರ್ಖವಾಗಿ ಇಲ್ಲವೆಂದು, ನಾವು ನಂಬುವುದಿಲ್ಲವೆಂದು ಹೇಳುವುದು ಹೊರೆತು ಶಾಸ್ತ್ರೀಯವಾಗಿ ಅವು ಇಲ್ಲ ಎಂದು ಯಾವ ಆಧಾರವನ್ನು ತೋರಿಸಲಾರರು. ವಾಸ್ತವವಾಗಿ ಭೌತಶಾಸ್ತ್ರವನ್ನು ಅನುಸರಿಸಿ ದೆವ್ವಗಳು ಇವೆ. ಆದ್ದರಿಂದ ದೆವ್ವಗಳನ್ನು ಶಾಸ್ತ್ರಬದ್ಧವಾದವುಗಳೆಂದು ಮೂಢನಂಬಿಕೆ ಅಲ್ಲವೆಂದು ಹೇಳಬಹುದು. ದೆವ್ವಗಳ ವಿಷಯಗಳನ್ನು ಸಂಪೂರ್ಣವಾಗಿ ತಿಳಿಯಬೇಕೆಂದರೆ, ನಮ್ಮ ರಚನೆಯಲ್ಲಿನ **"ದೆವ್ವಗಳ–ಭೂತಗಳ ಯಥಾರ್ಥ ಸಂಘಟನೆಗಳು"** ಎನ್ನುವ ಗ್ರಂಥವನ್ನು ನೋಡಬಹುದು.

ಇನ್ನು ಮಂತ್ರಗಳು, ಯಂತ್ರಗಳು ಎಂಬ ವಿಷಯಕ್ಕೆ ಬಂದರೆ, ಅವುಗಳನ್ನು ಕುರಿತು ಬಹಳಜನರಿಗೆ ತಿಳಿಯದೆಂದೇ ಹೇಳಬಹುದು. ಅಂತ್ರಗಳನ್ನು ಬರೆದು ಕಟ್ಟುವವರನ್ನು ಅಂತ್ರಗಳ ವಿಷಯವನ್ನು ಕುರಿತು ಕೇಳಿದರೂ, ಅವುಗಳ ಬಗ್ಗೆ ಸರಿಯಾದ ಸಮಾಚಾರ ಹೇಳಲಾರರು. ಅದರಿಂದ ಅವುಗಳನ್ನು ಕುರಿತು ಪೂರ್ತಿಯಾಗಿ ಅವರಿಗೂ ಕೂಡಾ ತಿಳಿದಿಲ್ಲವೆಂದು ತಿಳಿದುಹೋಗುತ್ತಿದೆ. ಹಾಗೆಯೇ ಮಂತ್ರಗಳ ವಿಷಯಕ್ಕೆ ಬಂದರೆ ಮಂತ್ರಿಸುವವರಿಗು ಕೂಡಾ ಅವುಗಳ ಸಂಪೂರ್ಣ ವಿಷಯ ತಿಳಿಯದು. ಆ ಕೆಲಸವನ್ನು ಮಾಡುವವರು ಅವುಗಳನ್ನು ಕುರಿತು ಹೇಳಲಾರದಷ್ಟು ಮಾತ್ರಕ್ಕೆ ಅವು ಅಸತ್ಯಗಳು ಅಲ್ಲ. ಅಂತ್ರಗಳು ಸತ್ಯವೇ, ಮಂತ್ರಗಳು ಸತ್ಯವೇ. ಅಂತ್ರ ಮಂತ್ರಗಳನ್ನು ಕುರಿತು ನನ್ನ ಬುದ್ಧಿಗೆ ತಿಳಿದ ವಿಷಯವನ್ನು ತಿಳಿಸುತ್ತಿದ್ದೇನೆ ಜಾಗ್ರತೆಯಾಗಿ ಕೇಳಿರಿ." "ರ" ಅನ್ನುವ ಶಬ್ದ ನಾಶ ಎಂಬುದಕ್ಕೆ ಬೀಜಾಕ್ಷರವಾಗಿ ಇದೆಯೆಂದು ನಾವು ಬಹಳಸಲ ಹೇಳಿದ್ದೇವೆ. "ರ" ಎಂಬ ಶಬ್ದ ನಾಶ ಮಾಡುವುದೆಂದು

ಅರ್ಥಕೊಡುತ್ತಿದೆ. ಅಂತ್ರ ಎಂಬ ಪದವನ್ನು ಬಿಡಿಸಿ ನೋಡಿದರೆ ಅಂತ+ರ ಎಂದು ಇದೆ. ಅಂತ ಎಂದರೆ ಒಳಗೆ ಇಲ್ಲವೆ ಕಾಣಿಸದೆ ಎಂದು ಅರ್ಥ. ರ ಎಂದರೆ ನಾಶ ಮಾಡುವುದು ಎಂದು ಅರ್ಥ. ಪೂರ್ತಿಯಾಗಿ ಹೇಳಿದರೆ ಒಳಗೆ ನಾಶ ಮಾಡುವುದೆಂದು ಅರ್ಥ. ಒಳಗೆ ಆದ್ದರಿಂದ ಹೊರಗೆ ಕಾಣಿಸುವುದಿಲ್ಲ. ಆದ್ದರಿಂದ ಶರೀರದೊಳಗಿರುವುದೇನನ್ನೊ ನಾಶ ಮಾಡುವುದು ಅಂತ್ರ. ಹಾಗೆಯೇ ಮಂತ್ರವನ್ನು ಬಿಡಿಸಿ ನೋಡಿದರೆ ಮಂತ+ರ ಎಂದು ಇದೆ. ಮಾತುಗಳಲ್ಲಿರುವ ಶಕ್ತಿಯನ್ನು 'ಮಂತ' ಎಂದು ಹೇಳಬಹುದು. ಮಾತುಗಳಲ್ಲಿರುವ ಶಕ್ತಿಗೆ ನಾಶ ಮಾಡುವಶಕ್ತಿ ಇದೆ. ಆದ್ದರಿಂದ ಅದನ್ನು ಮಂತ್ರ ಅನ್ನುತ್ತಿದ್ದೇವೆ. ಅಂತರಗಳು ಶರೀರದಲ್ಲಿನ ದೆವ್ವವನ್ನು ಇಲ್ಲದಂತೆ ಮಾಡುತ್ತವೆ. ಮಂತರಗಳು ಶರೀರದಲ್ಲಿನ ರೋಗಗಳನ್ನು ಸಹಿತವು ಇಲ್ಲದಂತೆ ಮಾಡುತ್ತವೆಂದು ಕೆಲವರಿಗೆ ತಿಳಿದಿದೆ. ಆದ್ದರಿಂದ ಅವುಗಳಿಗೆ ಅಂತ್ರ ಎಂದೂ, ಹಾಗೆಯೇ ಮಂತ್ರ ಎಂದೂ ಹೆಸರಿಡುವುದು ನಡೆದಿದೆ. ಅಂತ್ರ ಮತ್ತು ಮಂತ್ರ ಎರಡೂ ಸ್ವಲ್ಪ ಶಕ್ತಿ ಹೊಂದಿರುವವಾಗಿವೆ. ಆ ಶಕ್ತಿ ನಮಗೆ ತಿಳಿಯದಂತಿದ್ದರೂ ಸ್ವಲ್ಪ ಕರ್ಮವನ್ನು ಕಾಣಿಸದಂತೆ ಮಾಡುತ್ತಿದೆ.

ಕೆಲವು ಶಬ್ದಗಳನ್ನು ಅಕ್ಷರರೂಪದಿಂದ ಬರೆದರೆ ಅದನ್ನು ಅಂತ್ರ ಅನ್ನುತ್ತೇವೆ. ಹಾಗೆಯೇ ಕೆಲವು ಶಬ್ದಗಳನ್ನು ಮಾತಿನರೂಪವಾಗಿ ಹೇಳಿದರೆ ಮಂತ್ರ ಎನ್ನುತ್ತೇವೆ. ಅಂತ್ರ ಬರಹರೂಪದಲ್ಲಿ ಇರುತ್ತದೆ. ಮಂತ್ರ ಮಾತಿನರೂಪದಲ್ಲಿ ಇರುತ್ತದೆ. ಹೇಳುವುದರಲ್ಲಿ ಬೇರೆಬೇರೆ ಪದಗಳಾಗಿದ್ದರೂ ಎರಡರಲ್ಲಿಯೂ ಶಕ್ತಿ ಇರುತ್ತದೆ. ಉದಾಹರಣೆಗೆ "ಓಂ ಶ್ರೀಂ ಹ್ರೀಂ ರಂ ಸ್ವಾಹ" ಎಂಬ ಶಬ್ದಗಳನ್ನು ಅಕ್ಷರಗಳಾಗಿ ಬರೆದರೆ ಅದು ಅಂತ್ರವಾಗುತ್ತದೆ. ಅವೇ ಶಬ್ದಗಳನ್ನೆ ಮಾತಾಗಿ ಹೇಳಿದರೆ ಮಂತ್ರವಾಗುತ್ತದೆ. ಒಂದೇ ಶಬ್ದವನ್ನೆ ಅಂತ್ರವಾಗಿಯಾದರೂ ಇಲ್ಲವೆ ಮಂತ್ರವಾಗಿಯಾದರೂ ಉಪಯೋಗಿಸಿಕೊಳ್ಳ ಬಹುದು. ಹೇಗೆ ಉಪಯೋಗಿಸಿಕೊಂಡರೂ ಅದರಲ್ಲಿರುವ ಶಕ್ತಿ ಉಪಯೋಗ ಪಡುತ್ತದೆ. ಒಂದು ಶಬ್ದದಲ್ಲಿನ ಶಕ್ತಿ ದೀರ್ಘಕಾಲವಾಗಿ ಕೆಲಸಮಾಡುವುದಕ್ಕೆ,

ಆ ಶಬ್ದವನ್ನು ಅಕ್ಷರರೂಪವಾಗಿರುವ ಅಂತ್ರವಾಗಿ ಬರೆಯಬೇಕಾಗಿರುತ್ತದೆ. ಹಾಗೆಯೇ ಶಬ್ದದಲ್ಲಿನ ಶಕ್ತಿ ತಾತ್ಕಾಲಿಕವಾಗಿ ಕೆಲಸ ಮಾಡುವುದಕ್ಕೆ, ಆ ಶಬ್ದವನ್ನು ಮಾತಿನರೂಪವಾಗಿರುವ ಮಂತ್ರವಾಗಿ ಹೇಳಬೇಕಾಗಿರುತ್ತದೆ. ಒಂದು ಔಷಧಿಯನ್ನು ಬಾಯಿಯ ಮೂಲಕ ಕೊಟ್ಟರೆ ಗುಳಿಕೆ (ಟಾಬ್ಲೆಟ್) ಆಗುತ್ತದೆ. ಅದೇ ಔಷಧಿಯನ್ನು ಚರ್ಮದ ಮೂಲಕ ಮಾಂಸಖಂಡಗಳೊಳಗೆ ಕೊಟ್ಟರೆ ಸೂಜಿಔಷಧಿ (ಇಂಜಕ್ಷನ್) ಆಗುತ್ತದೆ. ಈ ವಿಧವಾಗಿ ಒಂದೇ ಶಬ್ದ ಬರೆದರೆ ಅಂತ್ರ, ಹೇಳಿದರೆ ಮಂತ್ರ ಆಗುತ್ತಿದೆ. ಅಂತ್ರವಾದರೂ ಮಂತ್ರವಾದರೂ ದೈವಜ್ಞಾನ ಇರುವವನೆ ಅದನ್ನು ಸೃಷ್ಟಿಸಬೇಕು. ಹಾಗೆ ಯೋಗಿಯಿಂದ ಸೃಷ್ಟಿಸಿದವುಗಳಿಗೆ ಶಕ್ತಿ ಇರುತ್ತದೆ. ಒಂದು ಮಂತ್ರದಿಂದಾಗಲಿ ಇಲ್ಲವೆ ಅಂತ್ರದಿಂದಾಗಲಿ ಒಬ್ಬನಿಗಿರುವ ಶರೀರದಲ್ಲಿನ ಹೊಟ್ಟೆನೊವು ಹೋದಾಗ ಅದು ಮಂತ್ರದಿಂದ ಅಥವಾ ಅಂತ್ರದಿಂದ ನಡೆದ ಯಥಾರ್ಥಸಂಘಟನೆ ಅಲ್ಲವಾ? ಒಂದು ಅಂತ್ರದಿಂದ ಒಬ್ಬನ ಬಾಧೆ ನಿವಾರಣೆಯಾದರೆ, ಒಂದು ಮಂತ್ರದಿಂದ ಒಬ್ಬನಲ್ಲಿನ ದೆವ್ವ ತೊಲಗಿಹೋದರೆ ಆಗ ಅಂತ್ರವಾಗಲಿ, ಮಂತ್ರವಾಗಲಿ ಯದಾರ್ಥವೆಂದು ನಡೆದ ಸಂಘಟನೆಯನ್ನನು ಸರಿಸಿ ತಿಳಿಯುತ್ತಿದೆ ಅಲ್ಲವೆ! ಹಾಗೆ ತಿಳಿಯುತ್ತಿದ್ದರೂ ಅದನ್ನು ಮೂಢನಂಬಿಕೆ ಎಂದರೆ ಅದಕ್ಕಿಂತ ತಿಳಿವಳಿಕೆಯಿಲ್ಲದ ಮಾತು ಇರುವುದಿಲ್ಲ. ಎಲ್ಲಾ ವಿಧಗಳಲ್ಲಿ ಅಂತ್ರ ಮಂತ್ರ ಎರಡೂ ಸತ್ಯವೆಂದು, ಮೂಢನಂಬಿಕೆ ಅಲ್ಲವೆಂದು ತಿಳಿಯುತ್ತಿದೆ. ಈಗ ಅಂತ್ರ ಮಂತ್ರವನ್ನು ಕುರಿತು ಪೂರ್ತಿ ಅರ್ಥ ತಿಳಿದುಕೊಂಡಿದ್ದೇವೆ. ಮಂತ್ರಗಳನ್ನು ಉಚ್ಛರಿಸುವವನು ಮಾಂತ್ರಿಕನು ಎಂದು ಕರೆಯಲ್ಪಡುತ್ತಿದ್ದಾನೆ. ಮಂತ್ರವನ್ನು ತಯಾರು ಮಾಡುವವನು ಯೋಗಿ ಆಗುತ್ತಾನೆ. ಯೋಗಿಗಳು ಯಾವ ಮಂತ್ರವನ್ನಾದರೂ ತಯಾರು ಮಾಡಿ, ಶರೀರದಲ್ಲಿನ ಒಂದು ರೋಗವನ್ನು ಆ ಮಂತ್ರದ ಮೂಲಕ ಇಲ್ಲದಂತೆ ಮಾಡುವ ಶಕ್ತಿ ಇರುವವ ರಾಗಿರುತ್ತಾರೆ. ಈಗ ಯಂತ್ರಕ್ಕೆ ಸಂಬಂಧಿಸಿದ ಹೊಸ ಪ್ರಶ್ನೆಯನ್ನು ಕುರಿತು ನೋಡೋಣ.

**ಪ್ರಶ್ನೆ :–** ಅಂತ್ರ, ಮಂತ್ರ ಎನ್ನುವವುಗಳಿಗೆ ಅರ್ಥ ಹೇಳಿದ್ದೀರಿ. ಯಾವುದು

ಅಂತ್ರವೊ, ಯಾವುದು ಮಂತ್ರವೊ ತಿಳಿಯುವಂತೆ ಹೇಳಿದ್ದೀರಿ. ಕೆಲವರು ಅಂತ್ರವನ್ನು ಯಂತ್ರ ಎಂದು ಹೇಳುತ್ತಾರೆ. ಅಷ್ಟೇಯಲ್ಲದೆ ಹೊರಗಿನ ಪ್ರಪಂಚದಲ್ಲಿ ಕೆಲಸ ಮಾಡುವ ಪರಿಕರಗಳಾಗಿ ಅನೇಕ ಯಂತ್ರಗಳು ಇವೆ. ಒಂದು ಪರಿಕರವಾಗಿ, ಒಂದು ಕೆಲಸ ಮಾಡುವುದಾಗಿರುವ ಯಂತ್ರಕ್ಕೆ ಅರ್ಥ ಇದೆಯಾ? ಬರೆದರೆ ಅಂತ್ರ, ಹೇಳಿದರೆ ಮಂತ್ರ ಅದಾಗ, ಬರಹವಾಗಾಗಲಿ, ಮಾತಾಗಿಯಾಗಲಿ ಇಲ್ಲದ ಯಂತ್ರವನ್ನು ಏನೆನ್ನಬಹುದು? ಹೇಳಬಲ್ಲಿರಾ?

**ಉತ್ತರ :–** ಬರಹವಾಗಿರುವುದು ಅಂತ್ರ, ಮಾತಾಗಿರುವುದು ಮಂತ್ರವು ಆದಾಗ ಕೈಯಿಂದಾಗುವುದು ಯಂತ್ರ ಆಗುತ್ತಿದೆ. ಚೇತ (ಕೈಯಿಂದ) ಎಂದರೆ ಮಾಡುವುದು ಎಂದು ಅರ್ಥ. ಪ್ರಕಟಿಸುವ ಭಾವದಲ್ಲಿ ಅಂತ್ರ, ಮಂತ್ರ, ಯಂತ್ರ ಅನ್ನುವವುಗಳಲ್ಲಿ ವ್ಯತ್ಯಾಸವಿದ್ದರೂ, ಅವುಗಳ ಮೂರರಲ್ಲಿರುವ ಅಂ, ಮಂ, ಯಂ ಎಂಬ ಅಕ್ಷರಗಳಲ್ಲಿ ಮಾತ್ರ ವ್ಯತ್ಯಾಸವಿದೆ. ಮೂರು ಪದಗಳಲ್ಲಿ ಕೊನೆಯಲ್ಲಿರುವ 'ತ್ರ' ಎಂಬ ಅಕ್ಷರಗಳಲ್ಲಿ ಮಾತ್ರ ಯಾವ ವ್ಯತ್ಯಾಸ ಇಲ್ಲ. ತ್ರ ನಲ್ಲಿ ಮುಖ್ಯವಾಗಿ ಇರುವುದು "ರ" ಎಂಬ ಅಕ್ಷರ. ರ ಎಂದರೂ "ರಂ" ಎಂದರೂ ನಾಶ ಮಾಡುವುದೆಂದು ಅರ್ಥ. ಆ ವಿಧವಾಗಿ ಅಂತ್ರದಿಂದ ಸಣ್ಣ ಬಾಧೆ, ಮಂತ್ರದಿಂದ ದೊಡ್ಡ ಬಾಧೆ ಅಥವಾ ಯಾವುದೊ ಒಂದು ಬಾಧೆಹೋದಂತೆ ತಿಳಿಯುತ್ತಿದೆ. ಆದ್ದರಿಂದ ಅಂತ್ರ, ಮಂತ್ರ ಒಂದರ ವಿಧಾನಗಳು ಬೇರೆಯಾದರೂ, ಮುಖ್ಯವಾದ ಕೆಲಸ ಸ್ವಲ್ಪ ಬಾಧೆಯನ್ನು ನಾಶ ಮಾಡುವುದೇಯೆಂದು ತಿಳಿಯುತ್ತಿದೆ. ಇರುವ ಬಾಧೆ ಅಂತ್ರ, ಮಂತ್ರದಲ್ಲಿ ಇಲ್ಲದೆ ನಾಶಹೊಂದಿದಂತೆ, ಯಂತ್ರಗಳಲ್ಲಿ ಇಂಧನ ಎಂಬುದು ಇಲ್ಲದಂತೆ ಹೋಗುತ್ತಿದೆ. ಪ್ರತಿ ಯಂತ್ರದಲ್ಲಿ ಕೂಡಾ ನಾಶ ನಡೆಯುತ್ತಿದೆ. ಕೆಲವು ಯಂತ್ರಗಳಲ್ಲಿ ಇಂಧನವಾಗಿ ಆಯಿಲ್ (ಎಣ್ಣೆ) ಇರುವಾಗ, ಕೆಲವು ಯಂತ್ರಗಳಲ್ಲಿ ವಿದ್ಯುತ್ತು (ಕರೆಂಟು) ಮುಗಿದುಹೋಗುತ್ತಿದೆ. ಮತ್ತೆಕೆಲವು ಯಂತ್ರಗಳಲ್ಲಿ ಅಡಿಗೆಗೆ (ಕಟ್ಟಿಗೆಗಳು) ಮುಗಿದುಹೋಗುತ್ತಿವೆ. ಮತ್ತೆ ಕೆಲವುಗಳಲ್ಲಿ ಗ್ಯಾಸ್ ಅಥವಾ ಆವಿ ಖರ್ಚಾಗುತ್ತಿದೆ. ಈ ವಿಧವಾಗಿ ಯಂತ್ರಗಳಲ್ಲಿ ಕೂಡಾ ಯಾವುದೊ ಒಂದು ನಾಶ ಮಾಡುವುದು ನಡೆಯುತ್ತಿದೆ. ಆದ್ದರಿಂದ ಆ ಮೂರು ಪದಗಳ ಕೊನೆಯಲ್ಲಿ "ರಂ" ಎಂದು ಹೇಳುವುದು ನಡೆಯುತ್ತಿದೆ.

ಯಂತ್ರದಲ್ಲಿ ಕಾಣಿಸುವುದು (ಸ್ಥೂಲವಾಗಿದೆ) ಇಂಧನವಾಗಿ ಇದೆ. ಅಂತ್ರದಲ್ಲಿ, ಮಂತ್ರದಲ್ಲಿ ಕಾಣಿಸದಿರುವುದು (ಸೂಕ್ಷ್ಮವಾಗಿ ಇದೆ) ಇಂಧನವಾಗಿ ಇದೆ. ಕಾಣಿಸುವುದನ್ನು ತಿಳಿಯುವುದಕ್ಕೆ ಅಲ್ಪದಷ್ಟು ತಿಳುವಳಿಕೆ ಇದ್ದರೆಸಾಕು ಸರಿಹೋಗುತ್ತದೆ. ಕಾಣಿಸದಿರುವುದನ್ನು ತಿಳಿಯುವುದಕ್ಕೆ ಸ್ವಲ್ಪಮಟ್ಟಿನ ತಿಳುವಳಿಕೆ ಸರಿಹೋಗುವುದಿಲ್ಲ. ಎಷ್ಟೋ ತಿಳುವಳಿಕೆ ಅಗತ್ಯ. ಸಮಾಜದಲ್ಲಿ ಸ್ವಲ್ಪ ತಿಳುವಳಿಕೆ ಇರುವವನು ಕೂಡಾ ತನನ್ನು ತಾನು ಮೇಧಾವಿಯಾಗಿ ಲೆಕ್ಕಿಸಿಕೊಳ್ಳುತ್ತಾನೆ. ಅಂತಹವರ ಅಲ್ಪಬುದ್ಧಿಗೆ ಸೂಕ್ಷ್ಮವಾದುದು ತಿಳಿಯದಿರುವುದರಿಂದ ಅಭೌತಿಕ ಇಲ್ಲವೇ ಇಲ್ಲ ಎಂದು ಹೇಳುತ್ತಿರುತ್ತಾರೆ. ಅಧಿಕ ಬುದ್ಧಿ ಇರುವವರಿಗೆ ಕಾಣಿಸದ ಚಿಕ್ಕ ವಿಷಯವಾದರೂ (ಸೂಕ್ಷ್ಮ ವಿಷಯವಾದರೂ) ತಿಳಿಯುತ್ತಿರುತ್ತದೆ. ಆದ್ದರಿಂದ ಅವರು ಅಭೌತಿಕವನ್ನು ಕುರಿತು ಹೇಳುತ್ತಿರುತ್ತಾರೆ. ಅಂತಹವರನ್ನು ಅಭೌತಿಕವಾದದವರೆಂದು ಹೇಳುತ್ತೇವೆ. ಇದರಿಂದ ಮನುಷ್ಯನಲ್ಲಿರುವ ಬುದ್ಧಿ ಹೆಚ್ಚುಕಡಿಮೆಗಳ ನ್ನನುಸರಿಸಿ ಭೌತಿಕವಾದಿ, ಅಭೌತಿಕವಾದಿಯೆಂದು ಹೇಳ ಬಹುದು. ಈದಿನ ನಾವು ವಿಜ್ಞಾನಿಗಳು, ಮೇಧಾವಿಗಳು, ಸೈನ್ಸು ನಮಗೆ ಚೆನ್ನಾಗಿ ತಿಳಿದಿದೆ ಎನ್ನುವವರಿಗೆ (ಸೂಕ್ಷ್ಮವಾದ) ಅಭೌತಿಕ ತಿಳಿಯದು. ಆದ್ದರಿಂದ ಅವರನ್ನು ನಾವು ತಿಳುವಳಿಕೆ ಇಲ್ಲದವರ ಕೆಳಗೆ ಜಮಕಟ್ಟಬಹುದು. ತಮ್ಮಷ್ಟಕ್ಕೆ ತಾವು ಮೇಧಾವಿಗಳೆಂದು ಹೇಳಿಕೊಳ್ಳುತ್ತಿದ್ದರೂ, ಇತರರಿಂದ ಹೊಗಳಲ್ಪಡುತ್ತಿದ್ದರೂ, ವಿಶ್ವವಿದ್ಯಾಲಯಗಳಲ್ಲಿ ಮೇಧಾವಿಗಳಾಗಿ ಹೆಸರುಗಳಿಸಿ ದರೂ, ಕೊನೆಗೆ ಅವರು ಸೂತ್ರದ ಪ್ರಕಾರ ಮೇಧಾವಿಗಳಲ್ಲ.

ಮನುಷ್ಯ ಒಂದು ರೋಗದಿಂದ ಪ್ರತ್ಯಕ್ಷವಾಗಿ ಬಾಧೆಪಡುತ್ತಿರುವುದು ಕಾಣಿಸುತ್ತಿದೆ ಅಥವಾ ತಿಳಿಯುತ್ತಿದೆ. ರೋಗ ಇದ್ದಂತೆ ತಿಳಿಯುತ್ತಿದ್ದರೂ, ರೋಗಕ್ಕೆ ಕಾರಣವಾದ ಕ್ರಿಮಿಗಳು ಕಾಣಿಸುವುದಿಲ್ಲ. ರೋಗಕ್ಕೆ ಕಾರಣವಾದ ಕ್ರಿಮಿಗಳನ್ನು ನೋಡುವುದಕ್ಕೆ ಪ್ರತ್ಯೇಕಿಸಿ "ಮೈಕ್ರೊಸ್ಕೋಪ್" ಎನ್ನುವುದನ್ನು ಉಪಯೋಗಿಸುತ್ತಿದ್ದೇವೆ. ಮೇಲ್ನೋಟಕ್ಕೆ ಕಾಣಿಸುವ ದುಃಖವನ್ನು ಇಲ್ಲವೆ ರೋಗವನ್ನು ನೋಡುವುದು ಕಣ್ಣು, ಕಣ್ಣು ಹೊರಗೆ ಸ್ಥೂಲವಾಗಿರುವ ಕೆಲವನ್ನು

ಮಾತ್ರ ತೋರಿಸುತ್ತದೆ. ಸೂಕ್ಷ್ಮವಾಗಿರುವ ಕೆಲವನ್ನು ತೋರಿಸಲಾರದು. ಆದ್ದರಿಂದ ಕಾಣಿಸದ ರೋಗಕ್ರಿಮಿಗಳನ್ನು ನೋಡುವುದಕ್ಕೆ ಮೈಕ್ರೊಸ್ಕೋಪನ್ನು ವಿನಿಯೋಗಿಸಬೇಕಾಗಿ ಬಂದಿದೆ. ಅದೇ ವಿಧವಾಗಿ ಮನುಷ್ಯನಿಗೆ ಮೇಲಿರುವ ವಿಷಯಗಳನ್ನು ತಿಳಿಯುವುದಕ್ಕೆ ಬುದ್ಧಿ ಉಪಯೋಗಪಟ್ಟರೂ, ಸೂಕ್ಷ್ಮವಾದ ಕಾಣಿಸದ ವಿಷಯಗಳನ್ನು ನೋಡುವುದಕ್ಕೆ ಕಣ್ಣಿಗೆ ಮೈಕ್ರೊಸ್ಕೋಪ್ ಜೊತೆಯಾದಂತೆ, ಮನುಷ್ಯನ ಬುದ್ಧಿಗೆ ಜ್ಞಾನವು ಜೊತೆಯಾಗಬೇಕು. ಆಗ ಜ್ಞಾನದೃಷ್ಟಿ ಏರ್ಪಡುತ್ತದೆ. ಕಾಣಿಸದ ಸೂಕ್ಷ್ಮವಿಷಯಗಳು, ಕರ್ಮಗಳು ಮೊದಲುಗೊಂಡು ಜನ್ಮ ರಹಸ್ಯಗಳವರೆಗು ಜ್ಞಾನದೃಷ್ಟಿಗೆ ತಿಳಿಯುತ್ತದೆ. ಆಗಲೇ ಯಂತ್ರಕ್ಕು, ಅಂತ್ರಕ್ಕು ಮಂತ್ರಕ್ಕು ವ್ಯತ್ಯಾಸ ತಿಳಿಯುತ್ತದೆ.

**ಪ್ರಶ್ನೆ :–** ಭೂಮಿಮೇಲೆ ಯಾವುದೊ ಒಂದು ದೇಶದಲ್ಲಿ, ಒಂದು ಪ್ರಾಂತದಲ್ಲಿ ಅಲ್ಲಿಯವರೆಗೂ ಎಲ್ಲಿಯೂ ಇಲ್ಲದ ಹೊಸ ರೋಗ ಪ್ರಜೆಗಳಲ್ಲಿ ವ್ಯಾಪಿಸಿ ಮರಣಿಸುವಂತೆ ಮಾಡುತ್ತಿದೆ. ಹೊಸ ರೋಗವಾದ್ದರಿಂದ ಅದಕ್ಕೆ ಔಷಧಿಗಳು ಇರುವುದಿಲ್ಲ. ಔಷಧಿಗಳು ಇಲ್ಲದಿರುವುದರಿಂದ ರೋಗವು ಶರೀರವೆಲ್ಲಾ ವ್ಯಾಪಿಸಿ ಮನುಷ್ಯರನ್ನು ಸಾಯಿಸುತ್ತಿದೆ. ಹೊಸದಾಗಿ ಬಂದಿರುವ ರೋಗವನ್ನು ಪರೀಕ್ಷಿಸಿ ಪುನಃ ಅದಕ್ಕೆ ಔಷಧಿಗಳು ತಯಾರು ಮಾಡುವವರೆಗೂ ಆ ಹೊಸ ರೋಗ ಮನುಷ್ಯರನ್ನು ಪೀಡಿಸುತ್ತಲೇ ಇರುತ್ತದೆ. ಎಲ್ಲಿಯೂ ಇಲ್ಲದ ರೋಗ ಹೇಗೆ ತಯಾರಾಗಿ ಬರುತ್ತಿದೆಯೆಂದು ಪ್ರಶ್ನಿಸಿದರೆ, ಅದಕ್ಕೆ ಉತ್ತರ ಈ ವಿಧವಾಗಿ ಇದೆ.

**ಉತ್ತರ :–** ದೇವರಿಗೆ ತಿಳಿಯದಂತೆ ಏನು ನಡೆಯುವುದಿಲ್ಲ. ಎಲ್ಲದಕ್ಕೂ ಸೃಷ್ಟಿಕರ್ತ ದೇವರೆ. ದೇವರು ಸೃಷ್ಟಿಕರ್ತನಾದರೂ ಆತನು ಕೆಲಸ ಮಾಡುವುದಿಲ್ಲ. ಏನನ್ನು ಸೃಷ್ಟಿಸುವುದಿಲ್ಲ. ದೇವರು ತನ್ನ ಪರಿಪಾಲನೆಯಲ್ಲಿನ ಭೂತಗಳಿಂದಾಗಲಿ, ಗ್ರಹಗಳಿಂದಾಗಲಿ ಏನನ್ನಾದರೂ ಸೃಷ್ಟಿಸುತ್ತಿದ್ದಾನೆ. ಹೊಸ ರೋಗ ಕ್ರಿಮಿಯನ್ನು ದೇವರು ತನ್ನ ಪಾಲನೆಯಲ್ಲಿನ ಮೇಘಗಳಿಂದ ತಯಾರು ಮಾಡುತ್ತಿದ್ದಾನೆ. ಕೆಲವು ಮೇಘಗಳು ತಮ್ಮಲ್ಲಿ ಹೊಸ ಕ್ರಿಮಿಯನ್ನು ತಯಾರುಮಾಡಿ, ಒಂದು

ರೋಗವನ್ನು ಹೊರಗೆ ವ್ಯಾಪಿಸುವಂತೆ ಮಾಡುವವಾಗಿವೆ. ಭೂಮಿಮೇಲೆ ಎಲ್ಲಿಯೂ ಇಲ್ಲದ ಹೊಸರೋಗವನ್ನು ಮೇಘಗಳು ಸೃಷ್ಟಿಸುತ್ತಿವೆಯೆಂದು ತಿಳಿಯುತ್ತಿದೆ. ಅಷ್ಟೇಯಲ್ಲದೆ ಮೇಘ ಭೂಮಿಗೆ ಹತ್ತಿರವಾಗಿ ಕೆಲವು ಪ್ರಾಂತಗಳಲ್ಲಿ ಬರುವುದು ನಡೆಯುತ್ತಿದೆ. ಹಾಗೆ ಬಂದಾಗ ಹೊಸರೋಗ ವ್ಯಾಪಿಸುವುದಕ್ಕೆ ಅವಕಾಶ ಇದೆ. ಹಾಗೆಯೇ ಒಂದು ರೋಗ ಭೂಮಿಮೇಲೆ ಎಲ್ಲಿಯೂ ಕಾಣಿಸದಂತೆ ಹೋಗುವುದಕ್ಕೆ ಕಾರಣ ಮೇಘವೇಯೆಂದು ಹೇಳಬಹುದು. ಮೇಘಗಳು ಮನುಷ್ಯರಿಗೆ ತಿಳಿಯದಷ್ಟು ಎಷ್ಟೊ ಕೆಲಸಗಳನ್ನು ಮಾಡುತ್ತಿವೆ. ಅದರಲ್ಲಿ ಭಾಗವಾಗಿ ಕೆಲವು ಇಲ್ಲದ ರೋಗಗಳನ್ನು ತಂದಿಡುತ್ತಿವೆ. ಕೆಲವು ಇರುವ ರೋಗಗಳನ್ನು ಇಲ್ಲದಂತೆ ತೆಗೆದುಕೊಂಡು ಹೋಗುತ್ತಿವೆ. ಮೇಘಗಳಿಂದ ರೋಗ ಬರುತ್ತಿದೆಯೆಂದು, ಇಲ್ಲಿಯವರೆಗೂ ಯಾವ ಶಾಸ್ತ್ರಜ್ಞ ಕಂಡುಹಿಡಿಯದೆ ಹೋಗಿದ್ದಾನೆ.

**ಪ್ರಶ್ನೆ :–** ನೀರಾಗಲಿ, ಆಹಾರವಾಗಲಿ, ಇಲ್ಲದಂತೆ ಮನುಷ್ಯ ಬದುಕುತ್ತಾನಾ? ಆಹಾರವನ್ನು, ನೀರನ್ನು ಎಷ್ಟುಮಾತ್ರ ತೆಗೆದುಕೊಳ್ಳದ ಮನುಷ್ಯನಿಗೆ ಶರೀರದಲ್ಲಿ ಶಕ್ತಿ (ಕ್ಯಾಲರೀಸ್) ಹೇಗೆ ತಯಾರಾಗುತ್ತದೆ? ಅಂತಹ ಮನುಷ್ಯ ಬಲಹೀನನು ಆಗುವುದಿಲ್ಲವಾ? ಅನಾರೋಗ್ಯಪಾಲು ಆಗುವುದಿಲ್ಲವಾ? ಮೂವತ್ತು ಅಥವಾ ನಲವತ್ತು ದಿನಗಳಿಗಿಂತ ಹೆಚ್ಚುಕಾಲ ಆಹಾರವಿಲ್ಲದೆ ಮನುಷ್ಯ ಇರುತ್ತಾನಾ?

**ಉತ್ತರ :–** ಒಬ್ಬ ಮನುಷ್ಯ ಜೀವಿಸುವುದಕ್ಕೆ ಬೇಕಾದ ಪೋಷಕಗಳು ಶರೀರದೊಳಗೆ ಸೇರುವುದಕ್ಕೆ ಶರೀರಕ್ಕೆ ಎರಡು ಮಾರ್ಗಗಳಿವೆ. ಮನುಷ್ಯ ಬದುಕುವುದಕ್ಕೆ ಎರಡು ಮಾರ್ಗಗಳ ಮೂಲಕ ಶರೀರ ಪೋಷಕಗಳು ಶರೀರದೊಳಗೆ ಸೇರುವಂತೆ ದೇವರು ಶರೀರವನ್ನು ತಯಾರು ಮಾಡಿದ್ದಾನೆ. ಮನುಷ್ಯ ಜೀವಿಸುವುದಕ್ಕೆ ಶರೀರದೊಳಗೆ ಸೇರಿದ ಪೋಷಕಗಳು ಶರೀರಕ್ಕೆ ವಿನಿಯೋಗಪಟ್ಟ ನಂತರ ಬದಲಾವಣೆಹೊಂದಿ, ಯಾವ ಉಪಯೋಗವಿಲ್ಲದ ವ್ಯರ್ಥ ಪದಾರ್ಥಗಳಾಗಿ ಶರೀರದಿಂದ ನಾಲ್ಕು ಮಾರ್ಗಗಳ ಮೂಲಕ ಹೊರಗೆ ಬರುತ್ತಿವೆ. ಶರೀರಕ್ಕೆ ಉಪಯೋಗಪಡುವ ಪೋಷಕಗಳನ್ನು ಮೂರು ವಿಧಗಳಾಗಿ ವಿಭಜಿಸಬಹುದು.

ಮೂರನ್ನು ವಿಭಜಿಸಿ ಹೇಳಿದರೆ ಒಂದು ವಾಯುರೂಪದಲ್ಲಿ ಇರುವಾಗ, ಎರಡನೆಯದು ದ್ರವ ರೂಪದಲ್ಲಿ, ಮೂರನೆಯದು ಘನಪದಾರ್ಥರೂಪದಲ್ಲಿ ಇದೆ. ಈ ಮೂರುವಿಧಗಳ ಶರೀರ ಪೋಷಕಗಳು ಶರೀರದೊಳಗೆ ಎರಡು ದಾರಿಗಳಲ್ಲಿ ಸೇರುತ್ತಿವೆ. ವಾಯುರೂಪದಲ್ಲಿರುವುದು ಮೂಗಿನ ರಂಧ್ರ ಎಂಬ ದ್ವಾರದಿಂದ ಶರೀರದಲ್ಲಿನ ಶ್ವಾಸಕೋಶಗಳಿಗೆ ಸೇರುತ್ತಿದೆ. ಉಳಿದ ದ್ರವಘನರೂಪ ದಲ್ಲಿರುವವು ಬಾಯಿ ಎಂಬ ದ್ವಾರದ ಮೂಖಾಂತರ ಶರೀರದಲ್ಲಿನ ಜೀರ್ಣಾಶಯವನ್ನು ಸೇರುತ್ತಿವೆ. ಬಾಯಿ ಅನ್ನುವ ಮಾರ್ಗದ ಮೂಲಕ ದ್ರವವಾಗಿರುವ ನೀರು, ಪದಾರ್ಥವಾಗಿರುವ ಆಹಾರ ಜೀರ್ಣಾಶಯವನ್ನು ಸೇರುತ್ತಿರುವಾಗ, ಮೂಗು ಎಂಬ ಮಾರ್ಗದ ಮೂಲಕ ವಾಯುವಾದ ಪ್ರಾಣವಾಯುವು ಶ್ವಾಸಕೋಶಗಳನ್ನು ಸೇರುತ್ತಿದೆ. ಈ ವಿಧವಾಗಿ ಶರೀರದೊಳಗೆ ಸೇರಿದ ಮೂರು ರೂಪಗಳ ಪೋಷಕಗಳು, ಶರೀರದಲ್ಲಿ ಶರೀರ ಪೋಷಣೆಗೆ ಉಪಯೋಗಪಟ್ಟು, ರೂಪ ಬದಲಾಗಿ ವ್ಯರ್ಥ ಪದಾರ್ಥಗಳಾಗಿ ಬದಲಾಗಿ ಹೋಗುತ್ತಿವೆ. ಹಾಗೆ ವ್ಯರ್ಥವಾಗಿ ಬದಲಾಗಿಹೋದ ವ್ಯರ್ಥ ಪೋಷಕಗಳು ಶರೀರದಿಂದ ನಾಲ್ಕು ಮಾರ್ಗಗಳ ಮೂಲಕ ಹೊರಗೆ ಬರುತ್ತಿವೆ.

ಮೂಗು ಬಾಯಿ ಎಂಬ ಎರಡು ದಾರಿಗಳಲ್ಲಿ ಶರೀರದೊಳಗೆ ಹೋದ ಮೂರು ವಿಧಗಳ ಪೋಷಕಗಳು ಮುಖ್ಯವಾಗಿ ನಾಲ್ಕು ಮಾರ್ಗಗಳಿಂದ ಹೊರಗೆ ಬರುತ್ತಿವೆ. ವ್ಯರ್ಥವಾಗಿ ಬದಲಾಗಿಹೋದ ವಾಯುವು ಪುನಃ ನಿಶ್ವಾಸ ಎಂಬ ಹೆಸರಿನಿಂದ ಮೂಗಿನ ಮೂಲಕವೆ ಹೊರಗೆ ಬರುತ್ತಿದೆ. ವ್ಯರ್ಥಪದಾರ್ಥವಾಗಿ ಬದಲಾಗಿಹೋದ ಆಹಾರ ಮಲ ಎಂಬ ಹೆಸರಿನಿಂದ ಗುದದ್ವಾರದ ಮೂಲಕ ಹೊರಗೆ ಬರುತ್ತಿದೆ. ಹಾಗೆಯೇ ಶರೀರದಲ್ಲಿ ಕೆಲಸಕ್ಕೆ ಬಾರದ ದ್ರವವಾಗಿ ಬದಲಾದ ನೀರು ಮೂತ್ರ ಎಂಬ ಹೆಸರಿನಿಂದ ಮರ್ಮಾವಯ (ಲಿಂಗ ಇಲ್ಲವೆ ಯೋನಿ) ಮೂಲಕ ಹೊರಗೆ ಬರುತ್ತಿದೆ. ಕೆಲವರಿಗೆ ಬೆವರಿನರೂಪದಲ್ಲಿ ಚರ್ಮದ ಮೂಲಕ ಕೂಡಾ ಹೊರಗೆ ಬರುತ್ತಿದೆ. ಈ ವಿಧವಾಗಿ ವಾಯುವು ಹೋದ ದಾರಿಯಲ್ಲಿಯೇ ತಿರುಗಿಬಂದರೆ, ಆಹಾರ ಹೊಸದಾರಿಯಲ್ಲಿ ಬಂದರೆ, ನೀರು

ಎರಡು ಹೊಸ ದಾರಿಗಳಲ್ಲಿ ಹೊರಗೆ ಹೋಗುತ್ತಿದೆ. ಶರೀರದೊಳಗೆ ಹೋಗುವಾಗ ಎರಡು ಮಾರ್ಗಗಳ ಮೂಲಕ ಹೋದ ಮೂರು ವಿಧಗಳ ಪೋಷಕಗಳು, ಶರೀರದ ಹೊರಗೆ ಬರುವಾಗ ನಾಲ್ಕು ಮಾರ್ಗಗಳಲ್ಲಿ ಬರುತ್ತಿವೆ. ಈಗ ಸಜೀವ ಶರೀರವನ್ನು ಒಂದು ಊರಾಗಿ ಹೋಲಿಸಿಕೊಂಡು ಹೇಳಿಕೊಳ್ಳೋಣ.

ಒಂದು ಊರಿನೊಳಗೆ ಕೆಲವು ದಾರಿಗಳಿರುತ್ತವೆ, ಹಾಗೆಯೇ ಹೊರಗೆ ಕೆಲವು ದಾರಿಗಳಿರುತ್ತವೆ. ಗ್ರಾಮ ಪ್ರವೇಶದ್ವಾರಗಳು ಎರಡಾಗಿದ್ದು ಗ್ರಾಮದಿಂದ ಹೊರಗೆ ಬರುವ ದಾರಿಗಳು ನಾಲ್ಕು ಇವೆ. ಸುಮಾರು ಮೈಲಿ ಉದ್ದ ದಕ್ಷಿಣದ ಕಡೆಗೆ ಭೂಮಿ ಎತ್ತರವಾಗಿರುವ ಪ್ರದೇಶದಲ್ಲಿ, ಜ್ಞಾನಕ್ಷೇತ್ರ ಎಂಬ ಊರು ಇದೆ. ಆ ಊರಿಗೆ ಉತ್ತರದಕಡೆ ಎರಡು ದಾರಿಗಳಿವೆ. ದಕ್ಷಿಣದ ಕಡೆ ನಾಲ್ಕು ದಾರಿಗಳಿವೆ. ಜ್ಞಾನಕ್ಷೇತ್ರವೆಂಬ ಆ ಊರು ಎತ್ತರವಾದ ಪ್ರದೇಶದಲ್ಲಿರುವುದರಿಂದ ಉತ್ತರದಕಡೆ ಇರುವ ದಾರಿಗಳು ಮೇಲಿಂದ ಕೆಳಗೆ ಬಂದಂತೆ ಇರುತ್ತವೆ. ದಕ್ಷಿಣದಕಡೆ ನಾಲ್ಕು ದಾರಿಗಳು ಮೇಲಿಂದ ಕೆಳಗೆ ಹೋಗುವಂತೆ ಇರುತ್ತವೆ. ಆ ವಿಧವಾಗಿರುವ ಆ ಊರಿನೊಳಗೆ ಪ್ರತಿ ದಿನ ಉತ್ತರದಕಡೆಯಿಂದ ಆಕಡೆ ಇರುವ ಎರಡು ದಾರಿಗಳಲ್ಲಿ, ಒಂದರಲ್ಲಿ ಒಂದು ಎತ್ತಿನಗಾಡಿಯಲ್ಲಿ ಒಲೆಗೆ ಉಪಯೋಗಿಸುವ ಕಟ್ಟಿಗೆಗಳು ಬರುತ್ತಿದ್ದವು. ಎರಡನೆ ದಾರಿಯಲ್ಲಿ ಒಂದು ರಿಕ್ಷಾಗಾಡಿಯಲ್ಲಿ ಹತ್ತುಲೀಟರ್‌ಗಳ ಸೀಮೆಣ್ಣೆ (ಕಿರೋಸಿನಾಯಿಲ್) ಬರುತ್ತಿತ್ತು. ಎತ್ತರವಾಗಿರುವುದರಿಂದ ಉತ್ತರದಕಡೆಯಿಂದ ಬರುವ ರಿಕ್ಷಾವಾಗಲಿ, ಎತ್ತಿನಗಾಡಿಯಾಗಲಿ ತಗ್ಗಿಗೆ ಸುಲಭವಾಗಿ ಉರುಳುತ್ತಾ ಬರುತ್ತದ್ದವು. ಹಾಗೆ ಬಂದ ಎರಡು ಗಾಡಿಗಳು ಬಂದಿರುವ ದಾರಿಯಲ್ಲಿ ತಿರುಗಿಹೋಗಬೇಕೆಂದರೆ ಎತ್ತರಕ್ಕೆ ಹರಡಿದಂತೆ ಭಾರವಾಗಿರುತ್ತದೆ ಆದ್ದರಿಂದ ಎರಡನೆ ದಕ್ಷಿಣಕಡೆಯಲ್ಲಿರುವ ದಾರಿಗಳಲ್ಲಿ ಹೋದರೆ ಸುಲಭವಾಗಿ ಕೆಳಕ್ಕೆ ಉರುಳಿಹೋದಂತಿರುತ್ತದೆ. ಆದ್ದರಿಂದ ಕಟ್ಟಿಗೆಗಳನ್ನು ತಂದ ಎತ್ತಿನಗಾಡಿ, ಕಿರೋಸಿನಾಯಲ್ ತಂದಿರುವ ರಿಕ್ಷಾ ಎರಡೂ ಬಂದಿರುವ ಉತ್ತರದಕಡೆಯ ದಾರಿಯಲ್ಲಿ ಹೋಗದಂತೆ ದಕ್ಷಿಣಕಡೆಯ ದಾರಿಯಲ್ಲಿ ಹೋಗುತ್ತಿದ್ದವು. ಈ ವಿಧವಾಗಿ ಆ ಊರಿನೊಳಗೆ ಬರುವ

ದಾರಿಗಳು ಎರಡು, ಊರಿನ ಹೊರಗೆ ಹೋಗುವ ದಾರಿಗಳು ನಾಲ್ಕು ಎಂದು ಹೇಳಬೇಕಾಗಿಬಂದಿದೆ. ಜ್ಞಾನ ಕ್ಷೇತ್ರವೆಂಬ ಆ ಊರಿನಲ್ಲಿರುವ ನೂರು ಕುಟುಂಬಗಳಿಗೆ ಪ್ರತಿ ದಿನ ಅಡಿಗೆ ಮಾಡಿಕೊಳ್ಳುವುದಕ್ಕೆ ಗಾಡಿಕಟ್ಟಿಗೆಗಳೂ, ಅವುಗಳನ್ನು ಅಂಟಿಸಿಕೊಳ್ಳುವುದಕ್ಕೆ ಹತ್ತುಲೀಟರ್ ಕಿರೋಸಿನ್ ಆಯಿಲ್ ಖರ್ಚಾಗುತ್ತಿತ್ತು.

ಜ್ಞಾನಕ್ಷೇತ್ರವೆಂಬ ಆ ಊರಿನಲ್ಲಿನ ಗ್ರಾಮದ ಯಜಮಾನ ಲಿಂಗಮಯ್ಯ ತನ್ನ ಊರಿನಲ್ಲಿನ ಪ್ರಜೆಗಳಿಗೆ ಏನೋ ಒಂದು ಸಹಾಯ ಮಾಡಬೇಕೆಂದು ತಿಳಿದು, ಸ್ವಲ್ಪಕಾಲಕ್ಕೆ ಊರಿನೊಳಗಿನವರೆಲ್ಲರಿಗೂ ಕಟ್ಟಿಗೆಗಳ ಖರ್ಚು ಇಲ್ಲದಹಾಗೆ ಮಾಡಿದ್ದಾನೆ. ಕಟ್ಟಿಗೆಗಳನ್ನು ಉಪಯೋಗಿಸದಂತೆ ಅಡಿಗೆ ಮಾಡಿಕೊಳ್ಳುವುದಕ್ಕೆ ತಕ್ಕ ಏರ್ಪಾಟುಗಳು ಮಾಡಿದ್ದಾನೆ. ಊರಿನೊಳಗೆ ಬರುವ ಹತ್ತು ಲೀಟರ್‌ಗಳ ಕಿರೋಸಿನ್ ಆಯಿಲ್‌ನಿಂದಲೇ, ಊರೆಲ್ಲರ ಅಡಿಗೆಗಳು ತಯಾರಾಗುವಂತೆ ಮಾಡಿದ್ದಾನೆ. ಹತ್ತು ಲೀಟರ್‌ಗಳ ಕಿರೋಸಿನ್‌ನಿಂದ ನೂರು ಕುಟುಂಬಗಳಿಗೆ ಅಡಿಗೆ ಹೇಗೆ ತಯಾರಾಗುವುದೆಂದು ಇಲ್ಲಿ ಪ್ರೆಶ್ನೆಬರುತ್ತದೆ. ಅದಕ್ಕೆ ಉತ್ತರ ಈ ವಿಧವಾಗಿ ಇದೆ. ಜ್ಞಾನಕ್ಷೇತ್ರ ಗ್ರಾಮ ಯಜಮಾನ ಅಥವಾ ಗ್ರಾಮ ಹಿರಿಯರಾದ ಲಿಂಗಮಯ್ಯ ತನ್ನ ತಿಳುವಳಿಕೆಯಿಂದ, ಯಾರಿಗೂ ಅರ್ಥವಾಗದ ಹೊಸ ವಿಧಾನವನ್ನು ಕಂಡುಹಿಡಿದಿದ್ದಾನೆ. ಆ ವಿಧಾನದಿಂದ ಹತ್ತುಲೀಟರ್‌ಗಳ ಕಿರೋಸಿನಿಂದಲೇ ಎಲ್ಲರ ಅಡಿಗೆಗಳು ತಯಾರಾಗುತ್ತಿದ್ದವು ಹಾಗೆ ಕಿರೋಸಿನಿಂದ ಎಲ್ಲರಿಗೂ ಕಟ್ಟಿಗೆಗಳ ಅಗತ್ಯ ಇಲ್ಲದಂತೆಹೋಗಿದೆ. ಅದಕ್ಕೋಸ್ಕರ ಪ್ರತಿ ಮನೆಗು ಲಿಂಗಮಯ್ಯ ಒಂದು ಗ್ಯಾಸ್‌ಪೈಪನ್ನು ಅಳವಡಿಸಿದ್ದಾನೆ. ಆ ಪೈಪುಗಳೆಲ್ಲ ಊರಿನ ಮಧ್ಯದಲ್ಲಿನ ಒಂದು ಪೈಪಿನೊಂದಿಗೆ ಬೆರೆಸಿದ್ದಾನೆ. ಆ ಪೈಪು ಭೂಮಿಯಲ್ಲಿನ ನೂರು ಅಡಿಗಳ ಆಳದವರೆಗು ಹೋಗಿ, ಎರಡನೆಕೊನೆ ಪುನಃ ಹೊರಗೆ ಬಂದು ನಾಲ್ಕು ಅಡಿಗಳ ಎತ್ತರದಲ್ಲಿ ಇರುತ್ತಿತ್ತು. ಭೂಮಿಯಿಂದ ಒಂದು ಅಡಿ ಎತ್ತರದಲ್ಲಿ ಸಾವಿರಲೀಟರ್‌ಗಳ ನೆಲೆ ಇಡುವ ದೊಡ್ಡ ಪೀಪಾಯಿ ನಂತಹ (ದೊಡ್ಡಟ್ಯಾಂಕಿನಂತಹದ್ದು) ಇತ್ತು. ಆ ಪೀಪಾಯಿಂದ ಪೈಪಿನಕೊನೆ

ನಾಲ್ಕು ಅಡಿಗಳ ಎತ್ತರ ಇರುತ್ತಿತ್ತು. ಅಂತಹ ನಿರ್ಮಾಣವನ್ನು ತಯಾರುಮಾಡಿದ ಲಿಂಗಮಯ್ಯ, ಅವರ ಊರಿಗೆ ಸಮೀಪದ ಬೆಟ್ಟದಲ್ಲಿ ಲಭ್ಯವಾದ ಒಂದು ವಿಧವಾದ ಕಲ್ಲುಗಳನ್ನು ತಂದಿಟ್ಟುಕೊಂಡು, ಅವುಗಳಿಂದ ನಾಲ್ಕು ಚಿಕ್ಕಕಲ್ಲುಗಳನ್ನು ಆ ಪೀಪದೊಳಗೆ ಹಾಕಿ ಹತ್ತುಲೀಟರ್‌ಗಳ ಕಿರೋಸಿನನ್ನು ಪೈಪುಗಳಲ್ಲಿ ಹಾಕುತ್ತಿದ್ದನು. ಹಾಗೆ ಮಾಡುವುದರಿಂದ ಪೀಪಾದಲ್ಲಿ ಹಾಕಲ್ಪಟ್ಟ ಪ್ರತ್ಯೇಕವಾದ ರಸಾಯನ ಕಲ್ಲುಗಳಮೇಲೆ ಕಿರೋಸಿನ್ ಬೀಳುವುದರಿಂದ, ಆ ಕಲ್ಲುಗಳು ಚಿಕ್ಕದಾಗಿ ಕರಗುತ್ತಾ ಅವುಗಳಿಂದ ಅಡಿಗೆ ಗ್ಯಾಸ್ (ಉರಿಸುವ ವಾಯುವು) ಹೊರಬಿದಿದೆ, ಅಲ್ಲಿಂದ ಪೈಪುಗಳ ಮೂಲಕ ಪ್ರತಿ ಮನೆಗು ಸೇರಿ, ಪ್ರತಿ ಮನೆಯಲ್ಲಿಯು ಉರಿಯುತ್ತಾ ಅವರ ಅಡಿಗೆಗೆ ಉಪಯೋಗಪಡುತ್ತಿತ್ತು.

ಈ ವಿಧವಾಗಿ ಜ್ಞಾನಕ್ಷೇತ್ರ ಗ್ರಾಮದ ಯಜಮಾನ ಕಂಡುಹಿಡಿದ ವಿಧಾನ ಊರಿನವರೆಲ್ಲರಿಗೂ ಉಪಯೋಗಪಟ್ಟು ಯಾರಿಗೂ ಕಟ್ಟಿಗೆಗಳ ಖರ್ಚು ಇಲ್ಲದಂತೆ ಮಾಡಿದೆ. ಲಿಂಗಮಯ್ಯ ಕಂಡುಹಿಡಿದ ಹೊಸ ವಿಧಾನ ಭೂಮಿಮೇಲೆ ಎಲ್ಲಿಯೂ ಇಲ್ಲದಿರುವುದರಿಂದ, ಆ ಪದ್ಧತಿ ಏನೊ ಯಾರಿಗೂ ಅರ್ಥ ವಾಗುವುದಲ್ಲ. ಎಷ್ಟೋಜನ ಇತರ ಗ್ರಾಮಸ್ಥರು ಲಿಂಗಮಯ್ಯನಂತೆ ಮಾಡಿನೋಡಿದರೂ ಅದು ಅವರಿಗೆ ಸಾಧ್ಯವಾಗಲಿಲ್ಲ. ಲಿಂಗಮಯ್ಯನಂತೆ ಪೈಪುಗಳನ್ನು ಅಳವಡಿಸಿದ್ದಾರೆ. ಲಿಂಗಮಯ್ಯನಂತೆ ಆತನು ಉಪಯೋಗಿಸಿದ ಕಲ್ಲುಗಳನ್ನೇ ಉಪಯೋಗಿಸಿದ್ದಾರೆ. ಎಲ್ಲಾ ಆತನು ಮಾಡಿದಂತೆ ಮಾಡಿದರೂ ಅಡಿಗೆಗ್ಯಾಸ್ ತಯಾರಾಗಲಿಲ್ಲ. ಲಿಂಗಮಯ್ಯ ಕೂಡಾ ತಾನು ಬಚ್ಚಿಟ್ಟುಕೊಳ್ಳದಂತೆ ತನ್ನ ಪ್ರಯೋಗವೆಲ್ಲವನ್ನು ಉಳಿದ ಗ್ರಾಮಸ್ಥರಿಗೆ ವಿವರಿಸಿ ಹೇಳಿದ್ದಾನೆ. ಆ ವಿಧಾನವೆಲ್ಲವನ್ನು ಎಲ್ಲರಿಗೂ ತನ್ನ ಗ್ರಾಮದಲ್ಲಿ ತೋರಿಸಿದ್ದಾನೆ. ಜ್ಞಾನಕ್ಷೇತ್ರದಲ್ಲಿ ನೋಡಿದ ವಿಧಾನವನ್ನೆ ಜಾರಿ ಮಾಡಿದರೂ, ಯಾರಿಗೂ ಆ ಪ್ರಯೋಗ ಫಲಿಸಲಿಲ್ಲ. ಇಲ್ಲಿ ಯಾರಿಗಾದರೂ ಪ್ರಶ್ನೆ ಬರಬಹುದು. ಅದೇನೆಂದರೆ! ಒಂದು ಪ್ರಯೋಗದಲ್ಲಿ ನಡೆದಿರುವುದು ಏನಾದರೂ ವಿಜ್ಞಾನಕ್ಕೆ (ಸೈನ್ಸಿಗೆ) ಸಂಬಂಧಿಸಿರುತ್ತದೆ. ಅಂತಹ ಪ್ರಯೋಗ ಯಾರು ಮಾಡಿದರೂ ಅದು ನಡೆದುತೀರಬೇಕು. ಎಲ್ಲರಿಗೂ ಒಂದೇ ಫಲಿತವನ್ನು ಕೊಡಬೇಕು. ಆದರೆ

ಇಲ್ಲಿ ಲಿಂಗಮಯ್ಯಗೆ ಮಾತ್ರ ಮಾಡಿದ ಕೆಲಸ ನೇರವೇರುವುದು, ಉಳಿದವರಿಗೆ ನೇರವೇರಲಿಲ್ಲ ಎನ್ನುವುದನ್ನು ನೋಡಿದರೆ ಅದು ವಿಜ್ಞಾನಕ್ಕೆ ಸಂಬಂಧಿಸಿದ ವಿಷಯವಲ್ಲವೆಂದು, ಲಿಂಗಮಯ್ಯ ತಾನು ಕಲಿತುಕೊಂಡ ಯಾವುದೊ ವಿದ್ಯೆಯಿಂದ ಹಾಗೆ ಮಾಡಿದ್ದಾನೆಂದು ಕೆಲವರನ್ನಬಹುದು. ಹಾಗೆ ಅಂದುಕೊಳ್ಳುವುದು ಕೂಡಾ ತಪ್ಪೆ. ಲಿಂಗಮಯ್ಯ ಎಂಥಹ ಸ್ವಾರ್ಥವಿಲ್ಲದೆ ತನಗೆ ತಿಳಿದಿರುವುದೆಲ್ಲಾ ಹೇಳಿದ್ದಾನೆ. ಅಲ್ಲಿ ನಡೆದಿರುವುದೆಲ್ಲಾ ರಸಾಯನಿಕ ಕ್ರಿಯೆಯೇ. ಒಂದು ಲೀಟರ್‌ಗೆ ನೂರು ಕಿಲೋಗ್ರಾಂಗಳ (100ಕೇಜಿಗಳ) ಗ್ಯಾಸ್ ತಯಾರಾಗುವುದು ಪೂರ್ತಿ ವಿಜ್ಞಾನವೇ. ಅದನ್ನು ಸೈನ್ಸಲ್ಲವೆಂದು ಹೇಳುವುದಕ್ಕೆ ಅವಕಾಶವೇ ಇಲ್ಲ.

ಅಲ್ಲಿ ನಡೆದಿರುವುದು ನೂರಕ್ಕೆ ನೂರುರಷ್ಟು ಸೈನ್ಸೆ, ಆದರೂ (ವಿಜ್ಞಾನವೇ ಆದರೂ) ಎಲ್ಲರಿಗೂ ಆ ಕಾರ್ಯ ಏಕೆ ನೇರವೇರಲಿಲ್ಲ ಎನ್ನುವುದು ಎಲ್ಲರಿಗೂ ಪ್ರಶ್ನೆಯಾಗಿದೆ. ಆಗ ಉಳಿದ ಗ್ರಾಮಗಳವರೆಲ್ಲರೂ ಬಂದು ಲಿಂಗಮಯ್ಯನನ್ನು ಹೀಗೆ ಕೇಳಿದ್ದಾರೆ.

**ಪಕ್ಕದ ಗ್ರಾಮಸ್ಥರು :–** ಲಿಂಗಮಯ್ಯಾ! ನೀವು ಹೇಳಿದಂತೆ ನಾವು ಮಾಡಿದ್ದೇವೆ. ಆದರೂ ನಮಗೆ ನೇರವೇರಲಿಲ್ಲ ನಾವು ಕಟ್ಟಿಗೆಗಳು ಕೊಂಡುಕೊಳ್ಳದೆ ತಪ್ಪಲಿಲ್ಲ. ನೀವು ಏನೊ ಪ್ರತ್ಯೇಕವಾದ ವಿದ್ಯೆಯನ್ನು ಕಲಿತು, ಅದರಮೂಲಕ ಹಾಗೆ ಮಾಡುತ್ತಿದ್ದೀಯಾಯೆಂದು ಅಂದುಕೊಂಡಿದ್ದೇವೆ. ಆ ವಿದ್ಯೆಯನ್ನು ನಮಗೂ ಸಹಾ ಕಲಿಸಿ ನೀನು ಪುಣ್ಯ ತಂದುಕೊಳ್ಳಬಹುದಲ್ಲವೆ!

**ಲಿಂಗಮಯ್ಯ :–** ನೀವು ತಪ್ಪಾಗಿ ತಿಳಿಯುತ್ತಿದ್ದೀರಾ. ಅಂತಹದೇನಾದರೂ ಇದ್ದರೆ ನಿಮಗೆ ಮೊದಲೆ ಹೇಳಿ ಕಲಿಸುತ್ತಿದ್ದೆನು. ನಿಜಕ್ಕೆ ಎಂತಹ ವಿದ್ಯೆಯಾಗಲಿ, ಎಂತಹ ಮಂತ್ರತಂತ್ರಗಳಾಗಲಿ ಇದರಲ್ಲಿ ಇಲ್ಲ. ನಾನು ತೋರಿಸಿದ ಪ್ರತ್ಯೇಕವಾದ ಖನಿಜವಾದ ಕಲ್ಲುಗಳಿಗೆ ಕಿರೋಸಿನ್ ಬೆರೆಸಿದರೆ, ಕಿರೋಸಿನ್‌ಗಿಂತ ನೂರರಷ್ಟು ಹೆಚ್ಚಾಗಿ ಗ್ಯಾಸ್ ತಯಾರಾಗುತ್ತಿದೆ. ಹಾಗೆ ತಯಾರಾದ ಗ್ಯಾಸ್ ಭೂಮಿಯೊಳಗೆ ಪೈಪಿನಮೂಲಕ ನೂರು ಅಡಿಗಳವರೆಗೂ ಹೋಗುವುದರಿಂದ ಚೆನ್ನಾಗಿ

ಬಿಸಿಯಾಗಿ ಉರಿಯುವುದಕ್ಕೆ ಸಾಮರ್ಥ್ಯ ಹೊಂದಿರುವುದರಿಂದ, ಅದು ಎಲ್ಲರ ಮನೆಯಲ್ಲಿಯೂ ಉರಿಯುತ್ತಿದೆ. ಇಷ್ಟುಬಿಟ್ಟರೆ ಇದರಲ್ಲಿ ನಾನು ಬಚ್ಚಿಟ್ಟಿರುವುದು ಏನೂಇಲ್ಲ. ಹಾಗೆ ಬಚ್ಚಿಡಬೇಕೆಂದರೆ ಈ ವಿಧಾನವನ್ನು ಮೊದಲು ನಿಮಗೆ ಹೇಳುವವನೆ ಅಲ್ಲವಲ್ಲ!

**ಗ್ರಾಮಸ್ಥರು :–** ನೀನು ನಿಜಾಯಿತಿಪರನು, ಅಸತ್ಯ ಹೇಳುವವನು ಅಲ್ಲ, ಎಲ್ಲರಿಗೂ ಬುದ್ಧಿ ಹೇಳುವ ನೀನು ಎಷ್ಟೊ ಉತ್ತಮವ್ಯಕ್ತಿಯೆಂದು ನಮಗು ತಿಳಿದಿದೆ, ಆದರೂ ನಮ್ಮ ಅನುಮಾನವನ್ನು ನಿವೃತ್ತಿ ಮಾಡಿಕೊಳ್ಳುವುದಕ್ಕೆ ಕೇಳಿದ್ದೇವೆ.

**ಲಿಂಗಮಯ್ಯ :–** ಈ ಊರಿನಲ್ಲಿ ಎಲ್ಲರಿಗಿಂತ ಉತ್ತಮನು, ಮಹಾಜ್ಞಾನಿಯಾದ ಪರಂಧಾಮಯ್ಯ ಇದ್ದಾನೆ ಅಲ್ಲವೆ? ಆತನು ದೈವಜ್ಞಾನದಲ್ಲಿಯೇ ಅಲ್ಲದೆ ಪ್ರಪಂಚ ಜ್ಞಾನದಲ್ಲಿಯೂ ಕೂಡಾ ಚೆನ್ನಾಗಿ ತಿಳಿದವನು. ಈಗ ನಮಗೆ ತಿಳಿಯದ ಈ ವಿಷಯವನ್ನು ಕುರಿತು ಪರಂಧಾಮಯ್ಯನು ಕೇಳಿದರೆ, ಆತನು ತಪ್ಪದೆ ಇದರ ರಹಸ್ಯವೇನೊ ತಿಳಿಸುತ್ತಾನೆ. ನಾವೆಲ್ಲರೂ ಈಗಲೇ ಹೋಗಿ ಆತನನ್ನು ವಿನಯವಾಗಿ ಪ್ರಶ್ನಿಸಿ ತಿಳಿದುಕೊಳ್ಳೋಣ.

(ಈ ವಿಧವಾಗಿ ಮಾತನಾಡಿಕೊಂಡರೂ ಲಿಂಗಮಯ್ಯ ಮತ್ತು ಪ್ರಕ್ಕದ ಗ್ರಾಮಸ್ಥರು ಎಲ್ಲರೂ ಸೇರಿ ಜ್ಞಾನಕ್ಷೇತ್ರದಲ್ಲಿಯೇ ಇರುವ ಪರಂಧಾಮಯ್ಯ ಹತ್ತಿರಕ್ಕೆ ಹೋಗಿ ತಮ್ಮ ಸಂಶಯವನ್ನು ಆತನಿಗೆ ತಿಳಿಸಿದ್ದಾರೆ. ಅವರು ಹೇಳಿರುವುದೆಲ್ಲ ಕೇಳಿದ ಪರಂಧಾಮಯ್ಯ ತನ್ನಲ್ಲಿ ತಾನು ನಗುತ್ತಾ ಹೀಗೆ ಹೇಳಿದ್ದಾನೆ.)

**ಪರಂಧಾಮಯ್ಯ :–** ಈ ವಿಷಯವನ್ನು ಪಕ್ಕಕ್ಕಿಟ್ಟು ಮತ್ತೊಂದು ವಿಷಯವನ್ನು ಹೇಳುತ್ತೇನೆ ಕೇಳಿರಿ. ನಾನು ಹೇಳುವ ವಿಷಯವನ್ನು ನೀವು ಕೇಳಿ ಅರ್ಥಮಾಡಿಕೊಂಡರೆ, ಈಗ ನಿಮಗೆ ಬಂದಿರುವ ವಿಷಯ ಸುಲಭವಾಗಿ ಅರ್ಥವಾಗುತ್ತದೆ. ಆದ್ದರಿಂದ ನನಗೆ ತಿಳಿದ ಪ್ರತ್ಯಕ್ಷ ವಿಷಯವನ್ನು ಹೇಳುತ್ತೇನೆ ಕೇಳಿರಿ. ನನಗೆ ಇಲ್ಲಿಗೆ 63 ವರ್ಷಗಳ ವಯಸ್ಸು ಬಂದಿದೆ. ನನ್ನ ವಯಸ್ಸು

ಇಪ್ಪತ್ತು ವರ್ಷಗಳು ಇರುವಾಗ ಅಂದರೆ ನಾನು ಯುಕ್ತವಯಸ್ಸಿನಲ್ಲಿರುವಾಗ, ಆಗಿನ ಪರಿಸ್ಥಿತಿಯನ್ನನುಸರಿಸಿ ಪಕ್ಕದ ರಾಷ್ಟ್ರದಲ್ಲಿ ಒಂದು ಹಳ್ಳಿಯಲ್ಲಿ ವಾಸಿಸುತ್ತಿದ್ದೆನು. ನಮ್ಮ ಮನೆಪಕ್ಕದಲ್ಲಿಯೇ ಮತ್ತೊಂದು ಕುಟುಂಬ ಇತ್ತು. ಆ ಕುಟುಂಬದಲ್ಲಿ 50 ವರ್ಷಗಳ ವಯಸ್ಸಿರುವ ವ್ಯಕ್ತಿ ಇರುತ್ತಿದ್ದನು. ಆತನು ಎಲ್ಲಿಯಾದರೂ ಹಾವು ಕಾಣಿಸಿದರೆ ಅದನ್ನು ಹಿಡಿದುಕೊಳ್ಳುತ್ತಿದ್ದನು. ಹಾಗೆಯೆ ಎಲ್ಲಿಯಾದರೂ ಚೇಳು ಕಾಣಿಸಿದರೂ, ಅದನ್ನು ಕೂಡಾ ಹಿಡಿದುಕೊಳ್ಳುತ್ತಿದ್ದನು. ಹಾಗೆ ಆತನಿಗೆ ಅಭ್ಯಾಸವಾಗಿಹೋಗಿದೆ. ದೊಡ್ಡ ಗಾತ್ರವಿರುವ ಚೇಳನ್ನು ಯಾರಿಗಾದರೂ ತೋರಿಸುವುದಕ್ಕೆ ಚಿಕ್ಕ ಡಬ್ಬಿಗಳಲ್ಲಿ ಹಾಕಿಕೊಂಡು, ಹತ್ತಿರ ವಿಟ್ಟುಕೊಂಡು ತಿರುಗುತ್ತಿದ್ದನು. ಆತನಿಗೆ ಹಸ್ತದಲ್ಲಿ ಗರುಡರೇಖೆ ಇದೆಯೆಂದು, ಆದ್ದರಿಂದ ಹಾವುಗಳನ್ನು ಚೇಳನ್ನು ಆತನು ಭಯವಿಲ್ಲದೆ ಹಿಡಿದುಕೊಳ್ಳುತ್ತಾನೆಂದು ಯಾರೊ ಸಾಧುವು ಹೇಳಿದ್ದಾನಂತೆ. ಹೇಳುವುದಲ್ಲದೆ ಹಸ್ತದಲ್ಲಿರುವ ಚಿಕ್ಕ ರೇಖೆಯನ್ನು ಕೂಡಾ ತೋರಿಸಿ ಇದೇ ಗರುಡರೇಖೆ, ಈ ರೇಖೆ ಇರುವುದರಿಂದ ಹಾವುಗಳು ಕಚ್ಚುವುದಿಲ್ಲ, ಚೇಳು ಕಚ್ಚುವುದಿಲ್ಲ ಎಂದು ಹೇಳಿದನಂತೆ. ಅದಕ್ಕು ಮುಂಚೆ ಸ್ವಲ್ಪ ಭಯದಿಂದ ಹಾವನ್ನು ಚೇಳನ್ನು ಹಿಡಿದುಕೊಳ್ಳುವ ಆತನು ಆಗಿನಿಂದ ಸ್ವಲ್ಪವೂ ಭಯವಿಲ್ಲದೆ ಹಿಡಿದುಕೊಳ್ಳುವುದಕ್ಕೆ ಮೊದಲುಮಾಡಿದ್ದಾನೆ. ತನಗೆ ಗರುಡರೇಖೆ ಇದೆಯೆಂದು ಅಗತ್ಯಬಂದರೆ ಇತರರಿಗೆ ತನ್ನ ಕೈಯಲ್ಲಿನ ರೇಖೆಯನ್ನು ತೋರಿಸುತ್ತಿದ್ದನು.

ಹಾಗೆ ತೋರಿಸುವುದರಲ್ಲಿ ತನ್ನ ಹಸ್ತದಲ್ಲಿ ರೇಖೆಯಂತೆ ರೇಖೆಯಿರುವ ಮನುಷ್ಯಬಂದು ತನ್ನದು ನಿನ್ನ ಕೈಯಲ್ಲಿನ ರೇಖೆಯಂತಿದೆ. ಇದು ಗರುಡರೇಖೆಯೇನಾ? ಎಂದು ಕೇಳಿದ್ದಾನೆ. ಆಗ ನಮ್ಮ ಮನೆಪಕ್ಕದ ಮನುಷ್ಯ ಆತನ ಹಸ್ತದಲ್ಲಿನ ರೇಖೆಯನ್ನು ನೋಡಿ ಅದು ಗರುಡರೇಖೆಯೇ ಎಂದು ಹೇಳಿದ್ದಾನೆ. ಇಬ್ಬರ ಹಸ್ತದಲ್ಲಿಯೂ ಒಂದೇ ರೇಖೆ ಇರುವುದರಿಂದ ಎಲ್ಲರೂ ಅದನ್ನು ಗರುಡರೇಖೆ ಎಂದು ಗುರುತಿಸಿದ್ದಾರೆ. ತನ್ನ ಹಸ್ತದಲ್ಲಿ ಗರುಡರೇಖೆ ಇದೆಯೆಂದು ಗ್ರಹಿಸಿದ ವ್ಯಕ್ತಿ ತಾನು ಕೂಡಾ ಚೇಳನ್ನೂ, ಹಾವುಗಳನ್ನೂ

ನಿರ್ಭಯವಾಗಿ ಹಿಡಿದುಕೊಳ್ಳಬಹುದೆಂದು ಅಂದುಕೊಂಡಿದ್ದಾನೆ. ಒಂದು ದಿನ ಆತನ ಮನೆಯ ಮುಂದೆ ಚೇಳು ಕಾಣಿಸಿದಾಗ ಅದನ್ನು ಹಿಡಿದುಕೊಳ್ಳಲು ಹೋದನು. ಅಷ್ಟೇ ಚೇಳು ಅತನನ್ನು ಕಚ್ಚಿದೆ. ಚೇಳಿನ ವಿಷದಿಂದ ಆತನು ಬಾಧೆಪಡುತ್ತಿರುವಾಗ ಇತರರು ಔಷಧಿಹಾಕಿ ಆತನನ್ನು ಚೇಳಿನ ಬಾಧೆಯಿಂದ ಹೊರಬೀಳುವಂತೆ ಮಾಡಿದ್ದಾರೆ. ಹಾಗೆ ನಡೆದಿರುವುದರಿಂದ ಗರುಡರೇಖೆ ಇದೆಯೆಂದಿದ್ದ ಮೊದಲನೆಯವನು ಹಾವನ್ನು ಚೇಳನ್ನು ಹಿಡಿದುಕೊಳ್ಳುತ್ತಿರುವಾಗ, ಅದೇ ಗರುಡರೇಖೆ ಇರುವ ಎರಡನೆಯವನು ಚೇಳಿನಿಂದ ಕಚ್ಚಿಸಿಕೊಂಡಿದ್ದಾನೆ. ಮೊದಲನೆಯವನಿಗೆ ಭಯಪಟ್ಟಂತೆ ಎರಡನೆಯವನಿಗೆ ಚೇಳು ಭಯಪಡಲಿಲ್ಲ. ಗರುಡರೇಖೆ ಇದ್ದರೆ ಯಾರಿಗಾದರೂ ಹಾವುಗಳು ಚೇಳುಗಳು ಭಯಪಡುತ್ತವೆ ಎಂಬಮಾತು ಅಸತ್ಯವಾದುದು. ಅದರಿಂದ ಗರುಡರೇಖೆಗು ಹಾವಿಗು, ಚೇಳಿಗು ಯಾವ ಸಂಬಂಧ ಇಲ್ಲವೆಂದು ತಿಳಿದುಹೋಗಿದೆ. ಗರುಡರೇಖೆ ಇರುವವನಿಗೆ ಚೇಳು ಕಚ್ಚಿದ ಪ್ರತ್ಯಕ್ಷ ಸಂಘಟಣೆಯಿಂದ ಗರುಡರೇಖೆ ಎನ್ನುವುದು ಮೂಢನಂಬಿಕೆ ಎಂದು ತಿಳಿದುಹೋಗಿದೆ. ಗರುಡರೇಖೆ ಮೂಢನಂಬಿಕೆಯಾದರೆ, ಅದಕ್ಕೆ ಯಾವ ಪ್ರಭಾವ ಇಲ್ಲದಿದ್ದರೆ, ನಮ್ಮ ಮನೆ ಪಕ್ಕದವನಿಗೆ ಹಾವುಗಳು, ಚೇಳುಗಳು ಏಕೆ ಭಯಪಡುತ್ತಿವೆಯೆಂದು ನನಗು ಆ ದಿನವೇ ಪ್ರಶ್ನೆಬಂದಿದೆ. ನನಗೆ ಪ್ರಶ್ನೆಬಂದರೆ ಅದಕ್ಕೆ ಉತ್ತರ ಸಿಗುವವರೆಗೂ ನಾನು ಬಿಡುವುದಿಲ್ಲ. ಆಗಿನಿಂದ ಗರುಡರೇಖೆಯಲ್ಲಿರುವ ಶಾಸ್ತ್ರಬದ್ಧತೆ ಏನು? ಎಂದು ಹುಡುಕುತ್ತಿದ್ದೆನು. ಕೊನೆಗೆ ಗರುಡರೇಖೆ ಎನ್ನುವುದು ಶಾಸ್ತ್ರಬದ್ಧವಾದುದಲ್ಲವೆಂದು ತಿಳಿದುಹೋಗಿದೆ. ನಿಜವಾಗಿ ಗರುಢರೇಖೆ ಎನ್ನುವುದೇ ಇಲ್ಲವೆಂದು ಅರ್ಥವಾಗಿದೆ. ಒಬ್ಬ ವ್ಯಕ್ತಿಗೆ ಹಾವುಗಳು ಭಯಪಟ್ಟರೆ, ಅವನಿಗೆ ಗರುಡರೇಖೆ ಇದೆಯೆಂದು ಕೆಲವರು ಕಲ್ಪಿಸಿ ಹೇಳುತ್ತಾ, ಕೈಯಲ್ಲಿ ಯಾವುದೊ ಒಂದು ರೇಖೆಯನ್ನು ತೋರಿಸಿ ಇದೇ ಗರುಡರೇಖೆ ಎಂದು ನಂಬಿಸುತ್ತಿದ್ದಾರೆಂದು, ನಿಜಕ್ಕೆ ಗರುಡರೇಖೆ ಎನ್ನುವುದು ಕಲ್ಪಿತವೆಂದು ತಿಳಿದುಹೋಗಿದೆ.

ಗರುಡರೇಖೆ ಅಸಲಿಗೆ ಇಲ್ಲವೆಂದು, ಗರುಡರೇಖೆಗು ಹಾವುಗಳು ಭಯಪಡುವುದಕ್ಕು ಯಾವ ಸಂಬಂಧವಿಲ್ಲವೆಂದು ಅರ್ಥವಾಗಿಹೋದಾಗ,

ನಮ್ಮ ಮನೆಪಕ್ಕದಲ್ಲಿರುವವನಿಗೆ ಯಾವ ಕಾರಣದಿಂದ ಹಾವುಗಳು ಚೇಳುಗಳು ಭಯಪಡುತ್ತಿವೆಯೆಂದು ಪ್ರಶ್ನಿಸಬಹುದು. ಆ ಪ್ರಶ್ನೆಗೆ ಉತ್ತರವನ್ನು ಅನ್ವೇಷಿಸಿದರೆ ಈ ವಿಧವಾಗಿ ತಿಳಿಯುತ್ತಿದೆ. ಪ್ರತಿ ಮನುಷ್ಯನಿಗು ಬೆರಳಿನ ಮುದ್ರೆಗಳು ಬೇರೆಬೇರೆಯಾಗಿ ಇರುತ್ತವೆ. ಎಲ್ಲರ ಕೈಗಳಲ್ಲಿ ಚಿಕ್ಕ ಗೆರೆಗಳಿದ್ದರೂ, ಆ ಗೆರೆಗಳು ಮನುಷ್ಯ ಮನುಷ್ಯನಿಗೂ ಸ್ವಲ್ಪಮಟ್ಟಿನ ಭೇದವನ್ನು ಹೊಂದಿ ಬೇರೆಬೇರೆಯಾಗಿ ಇರುತ್ತವೆ. ಒಬ್ಬ ಮನುಷ್ಯನಿಗಿರುವ ಬೆರಳಿನ ಗುರ್ತು ಎಲ್ಲಿಯೂ ಎರಡನೆಯವನಿಗೆ ಇರುವುದಿಲ್ಲ. ಪ್ರತಿ ಮನುಷ್ಯನಿಗು ಪ್ರತ್ಯೇಕವಾದ ರೇಖೆಗಳಿರುವುದರಿಂದ ಬೆರಳಿನ ಗುರುತುಗಳನ್ನನುಸರಿಸಿ ಕೆಲವು ಕೋಟಿಜನರಲ್ಲಿ ಕೂಡಾ ಒಬ್ಬ ಮನುಷ್ಯನನ್ನು ಗುರುತಿಸಬಹುದು. ಈ ಸೂತ್ರವನ್ನು ಅನುಸರಿಸಿ ಕೈಮುದ್ರೆ(ಬೆರಳಿನ ಮುದ್ರೆ) ಸಹಾಯದಿಂದ ಪೊಲೀಸರು ಕಳ್ಳರನ್ನು ಗುರುತಿಸುತ್ತಿದ್ದಾರೆ. ಮನುಷ್ಯ ಮನುಷ್ಯನಿಗು ಬೇರೆಬೇರೆ ಗುರುತುಗಳು ಕೈಬೆರಳಿನಮೇಲೆ ಇದ್ದಂತೆ, ಪ್ರತಿ ಮನುಷ್ಯನಿಗು ಒಂದು ವಾಸನೆ ಸಹಜವಾಗಿರುತ್ತದೆ. ಹಾಗೆಯೇ ಮನುಷ್ಯ ಮನುಷ್ಯನಿಗು ವಾಸನೆ ಸ್ವಲ್ಪ ವ್ಯತ್ಯಾಸಹೊಂದಿ ಬೇರೆಬೇರೆಯಾಗಿರುತ್ತದೆ. ಯಾವ ವಿಧವಾಗಿ ಒಂದೇ ಬೆರಳಿನಗುರುತುಗಳು ಮತ್ತೊಬ್ಬ ಮನುಷ್ಯನಿಗೆ ಇರುವುದಿಲ್ಲವೊ, ಹಾಗೆಯೆ ಒಬ್ಬ ಮನುಷ್ಯನಿಗಿರುವ ವಾಸನೆ ಪ್ರಪಂಚದಲ್ಲಿನ ಒಟ್ಟಾರೆ ಜನಸಂಖ್ಯೆಯಲ್ಲಿ ಎರಡನೆ ವ್ಯಕ್ತಿಗೆ ಇರುವುದಿಲ್ಲ. ಈ ವಿಧವಾಗಿ ಭೂಮಿಮೇಲೆ ಪ್ರತಿ ಮನುಷ್ಯ ಒಂದು ಪ್ರತ್ಯೇಕವಾದ ವಾಸನೆ ಹೊಂದಿದ್ದಾನೆ. ವಾಸನೆಯನ್ನು ಗ್ರಹಿಸುವಶಕ್ತಿಯನ್ನು ಹೊಂದಿರುವ ನಾಯಿಗಳು ಒಂದು ವಸ್ತುವಿಗೆ ಅಂಟಿಕೊಂಡಿರುವ ಮನುಷ್ಯ ವಾಸನೆಯನ್ನನುಸರಿಸಿ ಆ ಮನುಷ್ಯ ಎಷ್ಟು ಜನರಲ್ಲಿ ಇದ್ದರೂ ಆತನನ್ನು ಗುರುತಿಸುತ್ತಿವೆ. ಈ ವಿಧವಾಗಿ ಹಸ್ತವೊಂದರ ಗೆರೆಗಳಾಗಲಿ, ಶರೀರವೊಂದರ ವಾಸನೆಯಾಗಲಿ ಮನುಷ್ಯನ ಶರೀರವನ್ನನುಸರಿಸಿ ಬೇರೆಬೇರೆಯಾಗಿ ಇರುತ್ತದೆ. ಮನುಷ್ಯನ ಬಾಹ್ಯಶರೀರವನ್ನನುಸರಿಸಿ ವಾಸನೆ, ಕೈಗೆರೆಗಳು ಇರುವಾಗ, ಅಂತರಂಗದಲ್ಲಿರುವ ಜೀವಿಯನ್ನನುಸರಿಸಿ ಶಕ್ತಿ ಇರುತ್ತದೆ. ಶರೀರದಲ್ಲಿನ ಶಕ್ತಿ ಒಬ್ಬನಿಗಿರುವುದು ಮತ್ತೊಬ್ಬನಿಗಿರದೆ ಬೇರೆಬೇರೆ ಹಂತಗಳಲ್ಲಿ ಇರುತ್ತದೆ. ಶರೀರಕ್ಕಿರುವ ವಾಸನೆ, ಹಸ್ತ ಗೆರೆಗಳು ಬೇರೆಬೇರೆಯಾಗಿರುವಂತೆ, ಶರೀರದಲ್ಲಿನ

ಜೀವಿಗಳಿಗಿರುವ ಶಕ್ತಿಕೂಡಾ ಬೇರೆಬೇರೆ ಅಳತೆಗಳಲ್ಲಿ ಇರುತ್ತವೆ. ಒಂದೇ ಹಂತದಲ್ಲಿರುವ ಶಕ್ತಿ ಇನ್ನೊಬ್ಬ ಮನುಷ್ಯನಿಗೆ ಇರುವುದಿಲ್ಲ. ಶರೀರ ವಾಸನೆಯನ್ನು ಪೊಲೀಸ್ ನಾಯಿಗಳು ಗುರ್ತಿಸಿದರೂ, ಬೆರಳಿನ ಗುರ್ತುಗಳನ್ನು ಪೊಲೀಸರು ಗುರ್ತಿಸಿದರೂ, ಶರೀರಕ್ಕಲ್ಲದೆ ಶರೀರದೊಳಗಿರುವ ಜೀವಿಗಿರುವ ಶಕ್ತಿ ವ್ಯತ್ಯಾಸವನ್ನು ಯಂತ್ರಗಳಾಗಲಿ, ಪ್ರಾಣಿಗಳಾಗಲಿ, ಸಾಧಾರಣ ವ್ಯಕ್ತಿಗಳಾಗಲಿ ಗುರುತಿಸಲಾರರು. ಒಬ್ಬನೇ ಒಬ್ಬ ಭಗವಂತನು ಗುರ್ತಿಸುತ್ತಾನೆ.

ನಮ್ಮ ಅನ್ವೇಷಣೆಯಲ್ಲಿ ಪ್ರತಿ ಮನುಷ್ಯನಿಗು ಪ್ರತ್ಯೇಕವಾದ ವಾಸನೆ, ಪ್ರತ್ಯೇಕವಾದ ಬೆರಳಿನಮುದ್ರೆಗಳು, ಪ್ರತ್ಯೇಕವಾದ ಶಕ್ತಿ ಇರುತ್ತದೆಯೆಂದು ತಿಳಿದುಕೊಂಡಿದ್ದೇವೆ. ಒಬ್ಬ ಮನುಷ್ಯನಿಗೆ ಹಾವುಗಳು, ಚೇಳು ಭಯಪಡುತ್ತಿವೆಂದರೆ ಅವನಲ್ಲಿ ಅದು ಒಂದು ಪ್ರತ್ಯೇಕತೆಯೆಂದು ಹೇಳಬಹುದು. ಮನುಷ್ಯನಲ್ಲಿ ಸರ್ವಸಾಧಾರಣವಾಗಿ ಮೂರು ಪ್ರತ್ಯೇಕತೆಗಳಿವೆ ಅಲ್ಲವೆ! ಆ ಮೂರು ಪ್ರತ್ಯೇಕತೆಗಳಲ್ಲಿ ಯಾವುದೊ ಒಂದು, ಹಾವುಗಳು ಭಯಪಡುವುದಕ್ಕೆ ಕಾರಣವಾಗಿರುತ್ತದೆಂದು ತಿಳಿಯುತ್ತಿದೆ. ಅದನ್ನು ಪರಿಶೀಲಿಸಿ ನೋಡಿದರೆ ಮನುಷ್ಯನಿಗಿರುವ ಒಂದು ವಿಧವಾದ ವಾಸನೆ, ಹಾವುಗಳನ್ನು ಭಯಪಡುವಂತೆ ಮಾಡುತ್ತಿದೆಯೆಂದು ತಿಳಿಯುತ್ತಿದೆ. ಮನುಷ್ಯನಿಗಿರುವ ವಾಸನೆ ಹಾವಿಗಾಗಲಿ, ಚೇಳಿಗಾಗಲಿ ತಗಲುತ್ತಲೇ ಅವುಗಳ ಮೆದಳು ಏನು ಕೆಲಸ ಮಾಡುವುದಿಲ್ಲ. ಅವು ಏನು ಆಲೋಚಿಸದ ಸ್ಥಿತಿಯಲ್ಲಿ ಭಯದಲ್ಲಿ ಸುಮ್ಮನೆ ನಿಂತುಹೋಗುತ್ತವೆ. ಆ ಸಮಯದಲ್ಲಿ ಮನುಷ್ಯನನ್ನು ಕಚ್ಚಬೇಕೆಂದಾಗಲಿ, ಭಯ ಇಡಬೇಕೆಂದಾಗಲಿ ಅಂದುಕೊಳ್ಳುವುದಿಲ್ಲ. ಒಂದು ಮೂಲಿಕೆ ಪ್ರಭಾವ ಕೆಲಸ ಮಾಡಿದಂತೆ ಮನುಷ್ಯನ ವಾಸನೆ ಅವುಗಳ ಮೇಲೆ ಪ್ರಭಾವ ತೋರಿಸುತ್ತಿದೆಯೆಂದು ಅರ್ಥವಾಗುತ್ತಿದೆ. ಬಿಳಿಈಶ್ವರಿಬೇರಿನ ಪ್ರಭಾವ ಹಾವಿನಮೇಲೆ ಕೆಲಸ ಮಾಡಿದಾಗ ಹಾವು ಬಲವನ್ನು ಕಳೆದುಕೊಂಡು ಕದಲಲಾರದ ಸ್ಥಿತಿಯಲ್ಲಿ ನಿಂತುಹೋಗುತ್ತದೆ. ಕನಿಷ್ಟ ಬುಸಗುಟ್ಟುವುದು ಸಹಾ ಮಾಡಲಿಲ್ಲ. ಬಿಳಿಈಶ್ವರಿ ಮೂಲಿಕ ಪ್ರಭಾವಕ್ಕೆ ಹಾವಿನ ವಿಷಗ್ರಂಥಿಗಳು ಕೂಡಾ ಮುದುರಿಕೊಂಡು ಹೋಗುತ್ತವೆ. ಅದೇ ವಿಧವಾಗಿ ಒಬ್ಬ ಮನುಷ್ಯನಲ್ಲಿನ ವಾಸನೆ ಬಿಳಿಈಶ್ವರಿ ಮೂಲಿಕೆಯಿಂದ ಸಮಾನವಾಗಿ

ಕೆಲಸಮಾಡುವುದರಿಂದ, ಹಾವುಗಳು ಭಯದಿಂದ ನಡುಗಿಹೋಗುತ್ತವೆ, ಕದಲದೆ ನಿಂತುಹೋಗುತ್ತವೆ. ಅಂತಹ ಸ್ಥಿತಿಯಲ್ಲಿರುವ ಹಾವನ್ನಾಗಲಿ, ಚೇಳನ್ನಾಗಲಿ ಅವುಗಳಿಗೆ ಸರಿಹೋಗದ ವಾಸನೆ ಇರುವ ಮನುಷ್ಯ ಸುಲಭವಾಗಿ ಅವುಗಳನ್ನು ಹಿಡಿದುಕೊಳ್ಳುತ್ತಿದ್ದಾನೆ. ಹಾವನ್ನು ಮನುಷ್ಯ ಹಿಡಿದುಕೊಳ್ಳುವುದೂ, ಅದು ಅವನನ್ನು ಕಚ್ಚದಿರುವುದೂ, ಎಲ್ಲವೂ ಮನುಷ್ಯನಿಗಿರುವ ವಾಸನೆ ಮೇಲೆ ಆಧಾರಪಟ್ಟಿದೆಯಾಗಲಿ, ಮನುಷ್ಯನಿಗಿರುವ ಹಸ್ತರೇಖೆಮೇಲೆ ಆಧಾರಪಟ್ಟಿಲ್ಲ. ಈ ವಿಷಯವೆಲ್ಲವೂ ಪೂರ್ತಿ ತಿಳಿಯದವರು ಮನುಷ್ಯನ ಹಸ್ತದಲ್ಲಿನ ಗರುಡರೇಖೆಯಿಂದ ಹಾಗೆ ನಡೆಯುತ್ತಿದೆಯೆಂದು ಹೇಳಿದರೂ, ಅದು ಸತ್ಯವಲ್ಲ ಆದ್ದರಿಂದ, ಗರುಡ ರೇಖೆ ಇದೆಯೆಂದು ಚೇಳನ್ನು ಹಿಡಿದುಕೊಂಡವನನ್ನು ಚೇಳು ಕಚ್ಚುವುದು ನಡೆದಿದೆ. ಗರುಡರೇಖೆ ಇದೆಯೆಂದುಕೊಂಡವನು ಕೂಡಾ ಚೇಳಿನ ವಿಷಬಾಧೆಯನ್ನು ಅನುಭವಿಸುವುದು ನಡೆದಿದೆ. ಆದ್ದರಿಂದ ಗರುಡರೇಖೆ ಎಂಬುದು ಅಸತ್ಯವೆಂದು, ಮನುಷ್ಯ ಹಾವನ್ನು ಹಿಡಿದುಕೊಳ್ಳುವುದರಲ್ಲಿ ಅವನಿಗಿರುವ ವಾಸನೆಯಿಂದಲೇ ಸಾಧ್ಯವಾಗುತ್ತಿದೆಯೆಂದು ತಿಳಿದುಹೋಗಿದೆ.

ಭೂಮಿಮೇಲೆ ಒಬ್ಬನಿಗಿರುವ ವಾಸನೆ ಮತ್ತೊಬ್ಬನಿಗೆ ಇರುವುದಿಲ್ಲವೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಅಂತಹದರಲ್ಲಿ ಹಾವಿಗೆ ವಾಸನೆ ಸರಿಹೋಗದ ವ್ಯಕ್ತಿ ಒಬ್ಬನಿದ್ದರೆ ಅವನಂತೆ ಯಾರೂ ಇರುವುದಿಲ್ಲ ಅಲ್ಲವೆ! ಆದರೆ ಹತ್ತು ಲಕ್ಷಗಳಜನ ಐವತ್ತುಲಕ್ಷಗಳ ಜನಸಂಖ್ಯೆಯೊಳಗೆ ಒಬ್ಬ ವ್ಯಕ್ತಿ ಅಲ್ಲಲ್ಲಿ ಹಾವುಗಳನ್ನು ಹಿಡಿದುಕೊಳ್ಳುವುದು ನಡೆಯುತ್ತಿದೆ. ಹಾಗೆ ಹಿಡಿದುಕೊಳ್ಳುವವನು ಯಾವ ಔಷಧಿಯನ್ನಾಗಲಿ, ಯಾವ ಮೂಲಿಕೆಯನ್ನಾಗಲಿ, ಯಾವ ಮಂತ್ರವನ್ನಾಗಲಿ ಬಳಸುತ್ತಿಲ್ಲ. ಆದ್ದರಿಂದ ಹಾವಿಗೆ ಸರಿಹೋಗದ ವಾಸನೆ ಇರುವವರು ಕೋಟಿ ಜನಸಂಖ್ಯೆಯಲ್ಲಿ ಕನಿಷ್ಟ ಒಬ್ಬರು ಇಲ್ಲವೆ ಇಬ್ಬರಾಗಲಿ ಇಲ್ಲವೆ ಮೂವರಾಗಲಿ ಇರಬಹುದೆಂದು ಅರ್ಥವಾಗುತ್ತಿದೆ. ಒಂದೇ ವಾಸನೆ ಇರುವವನು ಒಬ್ಬನು ಹೊರತು ಎರಡನೆಯವನು ಇರುವುದಿಲ್ಲವೆಂದು ಮೊದಲೆ ಹೇಳಿಕೊಂಡಿದ್ದೇವೆ ಅಲ್ಲವೆ! ಅಂತಹದರಲ್ಲಿ ಕೋಟಿಗೆ ಇಬ್ಬರು ಅಥವಾ ಮೂವರು ಹೇಗೆ ಬಂದಿದ್ದಾರೆಂದು ಯಾರಾದರೂ ಪ್ರಶ್ನೆಯನ್ನು ಕೇಳಬಹುದು. ಅದಕ್ಕೆ ನಮ್ಮ

ಉತ್ತರ ಏನೆಂದರೆ! ಹಾವಿನ ವಿಷವನ್ನು ಹರಿಸುವಶಕ್ತಿ ಇರುವ ಮೂಲಿಕೆಗಳು ಭೂಮಿಮೇಲೆ ಸುಮಾರು ಹತ್ತು ವಿಧಗಳು ಇವೆ. ಬಿಳಿಈಶ್ವರಿ ಪ್ರತ್ಯೇಕವಾದ ಪ್ರಭಾವ ಹೊಂದಿರುವಂತೆ ಒಂದೊಂದು ಮೂಲಿಕೆ ಒಂದೊಂದು ಪ್ರಭಾವಹೊಂದಿರುತ್ತದೆ. ಆದರೆ ಎಲ್ಲಾ ಗಿಡಗಳು ಬಿಳಿಈಶ್ವರಿಗೆ ಸಮಾನವಾಗಿ ಇರದೆ, ಬೇರೆಬೇರೆ ಪ್ರಭಾವ ಹೊಂದಿವೆ. ಬೇರೆಬೇರೆ ಪ್ರಭಾವಹೊಂದಿದ ಹತ್ತು ಗಿಡಗಳವರೆಗೂ ಹಾವಿಗೆ ಸರಿಹೋಗದ ವಿಧವಾಗಿ, ಮನುಷ್ಯರಲ್ಲಿ ಕೂಡಾ ಸುಮಾರು ಹತ್ತು, ಹದಿನೈದು ಜನರ ವಾಸನೆಗಳು ಹಾವಿಗು, ಚೇಳಿಗು ಸರಿಹೋಗುತ್ತಿಲ್ಲ. ಆದ್ದರಿಂದ ಬಹಳಕಡೆ ಬಹಳಜನರಿಗೆ ಅವು ಭಯಪಡುತ್ತಿವೆ ಯೆಂದು ತಿಳಿಯುತ್ತಿದೆ. ದೇಶದಲ್ಲಿ ಎಷ್ಟುಜನ ಹಾವನ್ನು ಹಿಡಿದುಕೊಳ್ಳುವ ವರಿದ್ದರೂ ಅವರತ್ತಿರ ಅವರಿಗಿರುವ ವಾಸನೆಹೊರತು ಬೇರೆ ವಿಧಾನವಾಗಲಿ, ಗರುಡರೇಖೆ ಪ್ರಭಾವವಾಗಲಿ ಇಲ್ಲ. ಒಂದು ಊರಿನಲ್ಲಿ ಒಂದು ವಿಧವಾಗಿ ವಾಸನೆಹೊಂದಿದ ವ್ಯಕ್ತಿಗೇ ಹಾವುಗಳು ಭಯಪಡುತ್ತಿವೆ ಹೊರತು, ಗರುಡರೇಖೆ ಇರುವವನಿಗೆ ಭಯಪಡುತ್ತಿಲ್ಲ.

ಹಾವು ಭಯಪಡುವುದಕ್ಕೆ ಗರುಡರೇಖೆ ಕಾರಣವಲ್ಲವೆಂದು, ಮನುಷ್ಯನಿಗಿರುವ ಪ್ರತ್ಯೇಕವಾದ ವಾಸನಯೇ ಕಾರಣವೆಂದು, ಆ ವಾಸನೆ ಇರುವವನಿಗೆ ಹಾವನ್ನು ಹಿಡಿದುಕೊಳ್ಳುವುದು ಸಾಧ್ಯವಾಗಿದೆಯೆಂದು ತಿಳಿದುಹೋದಂತೆ, ಕಟ್ಟಿಗೆಗಳು, ಕಿರೋಸಿನ್, ಗ್ಯಾಸ್ ವಿಷಯವನ್ನು ಪರಿಶೀಲಿಸಿ ದಾಗ ಅಲ್ಲಿಯು ಕೂಡಾ ನಮಗೆ ತಿಳಿಯದ ವಿಧಾನ ಒಂದು ಅರ್ಥವಾಗುತ್ತಿದೆ. ಮನುಷ್ಯನಿಗೆ ಯಾವ ವಿಧವಾಗಿ ವಾಸನೆಗಳು ಪ್ರತ್ಯೇಕವಾಗಿ ಒಬ್ಬೊಬ್ಬರಿಗೆ ಒಂದೊಂದು ಇದ್ದಂತೆ ಕೈ ರೇಖೆಗಳಾಗಲಿ, ಮನುಷ್ಯನಲ್ಲಿನ ಶಕ್ತಿಯಾಗಲಿ ಪ್ರತಿಯೊಬ್ಬರಲ್ಲಿ ಬೇರೆಬೇರೆಯಾಗಿ ಇರುತ್ತದೆಂದು ತಿಳಿದುಕೊಂಡಿದ್ದೇವೆ. ಜ್ಞಾನಕ್ಷೇತ್ರವೆಂಬ ಊರಿನಲ್ಲಿ ಲಿಂಗಮಯ್ಯ ಎಂಬ ವ್ಯಕ್ತಿ ಹಾಕಿದಕಲ್ಲುಗಳು ಮಾತ್ರ ಕಿರೋಸಿನಲ್ಲಿ ಗ್ಯಾಸಾಗಿ ಬದಲಾವಣೆಯಾಗುವುದು ನಾಟಕ, ಬೂಟಕ ಅಲ್ಲದಿದ್ದರೂ, ಪೂರ್ತಿ ವಿಜ್ಞಾನದಿಂದ ಕೂಡಿಕೊಂಡ ವಿಷಯವಾದರೂ,

ಅದೇಕೆಲಸವನ್ನು ಇತರರು ಮಾಡಿದಾಗ ನಡೆಯದಿರುವುದರಿಂದ ಹಿಂದೆ ನಮಗೆ ತಿಳಿಯದ ರಹಸ್ಯ ಏನೊ ಇದೆಯೆಂದು ಅರ್ಥವಾಗುತ್ತಿದೆ. ಅದು ಏನೆಂದು ಪರಿಶೀಲಿಸಿದರೆ! ಈ ವಿಧವಾಗಿ ತಿಳಿಯುತ್ತಿದೆ. ಮಿಲಿಟರಿಯಲ್ಲಿ ಮೂರು ವಿಭಾಗಗಳಿವೆ. ಒಂದು ಆರ್ಮಿ (ಭೂದಳಸೈನ್ಯ) ಎರಡು ನೇವಿ (ಸಮುದ್ರದಳ ಸೈನ್ಯ) ಮೂರು ಎಯಿರ್‌ಫೋರ್ಸ್ (ಆಕಾಶದಳ ಸೈನ್ಯ) ಮೂರು ವಿಭಾಗಗಳನ್ನು ಸೇರಿಸಿ ಮಿಲಿಟರಿ ಎಂದರೂ, ಮೂರು ಬೇರೆಬೇರೆ ವಿಧಾನಗಳು, ಬೇರೆಬೇರೆ ಗುರ್ತುಗಳು, ನೈಪುಣ್ಯತೆಗಳು ಹೊಂದಿರುತ್ತವೆ. ಉದಾಹರಣೆಗೆ ಆರ್ಮಿಯನ್ನು ತೆಗೆದುಕೊಳ್ಳೋಣ. ಭೂದಳ ಸೈನ್ಯ (ಆರ್ಮಿ) ಯಲ್ಲಿ ಕೂಡಾ ಕೆಲವು ಭಾಗಗಳಾಗಿ ಸೈನ್ಯ ಕೆಲಸ ಮಾಡುತ್ತಿದೆ. ಒಬ್ಬ ಮನುಷ್ಯ ಸೈನಿಕನಾಗಿ ಯಾವ ಭಾಗದಲ್ಲಿದ್ದರೂ ಅವನಿಗೆ ಒಂದು ಗುರುತಿನ ನಂಬರ್ ಇರುತ್ತದೆ. ಅಲ್ಲಿನ ಆಫೀಸರ್ ಆ ನಂಬರ್ ಸೈನ್ಯದೊಳಗೆ ಪ್ರವೇಶಿಸಿದಾಗಲೇ ಕೊಡುತ್ತಾನೆ. ಒಂದು ನಂಬರ್ ಒಬ್ಬ ಸೈನಿಕನಿಗೆ ಇದೆ ಎಂದರೆ ಅದು ಅವನಿಗೇ ಪರಿಮಿತಿ. ಆ ನಂಬರು ಇನ್ನೊಬ್ಬನಿಗೆ ಇರುವುದಿಲ್ಲ. ಆ ನಂಬರು ಅವನಿಗೆ ಸೈನ್ಯದಲ್ಲಿ ಅಡ್ರಸ್ ಇದ್ದಂತೆ. ಉದಾಹರಣೆಗೆ ಒಬ್ಬ ಸೈನಿಕನ ನಂಬರ್ 1251860 ಆಗಿದ್ದರೆ ಅದು ಅವನು ಸೈನ್ಯದಲ್ಲಿ ಕೆಲಸಮಾಡಿದಷ್ಟುಕಾಲ ಆ ನಂಬರೊಂದಿಗೆ ಅವನು ಪೂರ್ತಿ ಸಂಬಂಧ ಹೊಂದಿರುತ್ತಾನೆ. ಅದು ಅವನೊಂದಿಗೆ ಮುಡಿಹಾಕಿದಂತಿರುತ್ತದೆ. ಆರ್ಮಿಯಲ್ಲಿ ಒಬ್ಬ ಸೈನಿಕನಿಗೆ ಯಾವ ವಿಧವಾಗಿ ಒಂದು ನಂಬರ್ ನಿರ್ಣಯಿಸಲ್ಪಟ್ಟು ಅವನು ಸೈನಿಕನಾಗಿ ಇರುವವರೆಗೂ ಅದು ಬದಲಾಗದಂತಿರುತ್ತದೊ, ಹಾಗೆಯೇ ಒಬ್ಬನು ಮನುಷ್ಯನಾಗಿ ಹುಟ್ಟಿದಾಗಲೇ ಒಂದು ನಂಬರ್‌ನಂಥಹ ಗುರುತನ್ನು ದೇವರು ಮನುಷ್ಯನಿಗೆ ಕೊಡುತ್ತಾನೆ. ಅದು ಸಂಖ್ಯೆಯಿಂದ ಕೂಡಿಕೊಂಡ ನಂಬರ್ ಅಲ್ಲದಿದ್ದರೂ, ನಂಬರ್ ನಂತಹ ಗುರುತೆಂದು ತಿಳಿಯಬೇಕು. ಸೈನಿಕನಿಗೆ ಕೊಟ್ಟಿರುವ ನಂಬರ್ ಆತನು ಸೈನಿಕನಾಗಿ ಇರುವವರೆಗೂ ಬದಲಾಗದ ರೀತಿಯಲ್ಲಿ, ಮನುಷ್ಯನಿಗೆ ನಿಗಧಿಪಡಿಸಿದ ಗುರುತು ಆತನು ಮನುಷ್ಯನಾಗಿ ಜೀವಿಸಿರುವಷ್ಟುಕಾಲ ಇರುತ್ತದೆ. ಹುಟ್ಟಿನಿಂದ ಬಂದಿರುವ ನಂಬರನಂತಹ ಗುರುತನ್ನೇ ಬೆರಳಿನಮುದ್ರೆ ಅನ್ನುತ್ತಿದ್ದೇವೆ. ಒಬ್ಬೊಬ್ಬ ಸೈನಿಕನಿಗೆ ಒಂದೊಂದು

ನಂಬರನ್ನು ಪ್ರವೇಶದಲ್ಲಿಯೇ ಕೊಟ್ಟಂತೆ, ಒಬ್ಬೊಬ್ಬ ಮನುಷ್ಯನಿಗೆ ಒಂದೊಂದು ನಂಬರ್‌ನಂತಹ ಗುರುತನ್ನು ಜನ್ಮ ಪ್ರವೇಶವಾದ ಹುಟ್ಟಿನಿಂದಲೇ ದೇವರುಕೊಟ್ಟಿರುತ್ತಾನೆ. ಮನುಷ್ಯನಿಗಿರುವ ಪ್ರತ್ಯೇಕವಾದ ಗುರುತನ್ನು ಆ ಮನುಷ್ಯನ ಕೋಡ್ ಎಂದು ಹೇಳಬಹುದು.

ಅಲೀಬಾಬಾ ನಲವತ್ತು ಕಳ್ಳರು ಎಂಬ ಕಥೆಯನ್ನು ಎಲ್ಲರೂ ಕೇಳಿಯೇ ಇರುತ್ತಾರೆ. ಅದರಲ್ಲಿ ತನ್ನವರು ಪರಾಯಿಯವರು ಎಂಬ ವ್ಯತ್ಯಾಸವಿಲ್ಲದೆ ಮಂತ್ರವನ್ನು ಯಾರು ಹೇಳಿದರೂ ಕೆಲಸ ನಡೆಯುತ್ತದೆ. ಕಳ್ಳರ ಗುಹೆದ್ವಾರಕ್ಕೆ ಅಡ್ಡವಾಗಿರುವ ದೊಡ್ಡಕಲ್ಲಿನಬಂಡೆಯ ಪಕ್ಕಕ್ಕೆ ಹೋಗುವುದಕ್ಕೆ ಮಂತ್ರವನ್ನು ಹೇಳಿದರೆ ಮಂತ್ರವನ್ನು ಕೇಳುತ್ತಲೇ ಬಂಡೆ ಪ್ರಕ್ಕಕ್ಕೆ ಹೋಗುವುದು ನಡೆಯುತ್ತಿತ್ತು. ಅಲ್ಲಿ ಕಲ್ಲಿಗೆ ಮಂತ್ರ ಮಾತ್ರ ಪಕ್ಕಕ್ಕೆ ಹೋಗುವುದಕ್ಕೆ ಗುರುತಾಗಿ ತಿಳಿಯುತ್ತಿದೆ. ಮಂತ್ರವೊಂದರ ಗುರುತು ಹೊರತು ಮನುಷ್ಯರು ಯಾರು ಎಂಬ ಗುರುತು ಆ ಕಲ್ಲಿನಗುಂಡಿಗೆ ಇಲ್ಲ. ಅಲ್ಲಿ ದಾರಿಗೆ ಅಡ್ಡವಾಗಿರುವ ಕಲ್ಲಿನಬಂಡೆಗೆ ಮಂತ್ರ ಒಂದು ಕೋಡ್‌ಆಗಿ (ಗುರುತಾಗಿ) ಕೆಲಸಮಾಡುತ್ತಿದೆಯೆಂದು ಹೇಳಬಹುದು. ಮನುಷ್ಯರು ಯಾರು ಹೇಳಿದ್ದಾರೆಂಬ ವಿಷಯ ಅಲ್ಲಿ ಬಿಟ್ಟು ತಿಳಿಯಲ್ಪಡುತ್ತಿದೆ. ಗುಹೆಯಲ್ಲಿ ಧನವನ್ನು ಬಚ್ಚಿಟ್ಟುಕೊಂಡು ಕಳ್ಳರು ಹೇಳಿದರೂ ಅಥವಾ ಬೇರೆಯವರು ಹೇಳಿದರೂ ಗುಂಡು ಪಕ್ಕಕ್ಕೆ ಹೋಗುತ್ತದೆ. ಕಲ್ಲಿನಗುಂಡಿಗೆ ಬೇಕಾದಗುರ್ತು ಮಂತ್ರ ಮಾತ್ರವೇಯೆಂದು ಅರ್ಥವಾಗುತ್ತಿದೆ. ಹಾಗೆಯೇ ಕೆಮಿಕಲ್ ಕಲ್ಲುಗಳು ಕಿರೋಸಿನಲ್ಲಿ ಬಿದ್ದಾಗ ಅವುಗಳನ್ನು ಕಿರೋಸಿನಲ್ಲಿ ಯಾರು ಹಾಕಿದ್ದಾರೆಂದು ಆ ಕಲ್ಲುಗಳು ನೋಡಲಿಲ್ಲ. ತಮಗೆ ತಿಳಿದ ಗುರುತು ಹಾಕಿದ ವ್ಯಕ್ತಿಯಲ್ಲಿ ಇದೇಯಾ ಇಲ್ಲವಾ ಎಂದು ಮಾತ್ರ ಆ ಕೆಮಿಕಲ್ ಕಲ್ಲುಗಳು ಗಮನಿಸುತ್ತಿವೆ. ತಮ್ಮ ಕೆಮಿಕಲ್ (ರಸಾಯನಿಕ ಚರ್ಯ) ಚರ್ಯ ಪ್ರಾರಂಭ ವಾಗುವುದಕ್ಕೆ ಒಂದು ಕೋಡ್ ಮಾತ್ರ (ಒಂದು ಗುರುತುಮಾತ್ರ) ಅಗತ್ಯವೆಂದು ತಿಳಿದ ಆ ಕಲ್ಲುಗಳು, ತಮಗೆ ಸರಿಹೋಗುವ ಕೋಡ್ ಇರುವ ವ್ಯಕ್ತಿಗಳು ತಮ್ಮನ್ನು ತಾಕಿ ಕಿರೋಸಿನಲ್ಲಿ ಹಾಕಿದಾಗಲೇ ಆ ಕಲ್ಲಿನಲ್ಲಿನ ರಸಾಯನಿಕ

ಚರ್ಯ ಪ್ರಾರಂಭವಾಗಿ ಅವುಗಳಿಂದ ರಸಾಯನ ವಾಯುವು (ಗ್ಯಾಸ್) ಹೊರಗೆ ಬರುತ್ತದೆ. ತಮಗೆ ಸರಿಹೋಗುವ ಕೋಡ್ ಇಲ್ಲದ ವ್ಯಕ್ತಿಗಳು ಆ ಕಲ್ಲುಗಳನ್ನು ತಾಕಿ ಕಿರೋಸಿನಲ್ಲಿ ಹಾಕಿದರೂ, ಅವುಗಳಲ್ಲಿ ರಸಾಯನಿಕ ಕ್ರಿಯೆ ನಡೆಯುವುದಿಲ್ಲ, ವಾಯುವು ಬರುವುದಿಲ್ಲ. ಅವುಗಳ ರಸಾಯನಿಕ ಕ್ರಿಯೆಗೆ ಸರಿಹೋಗುವ ಕೋಡ್ (ಗುರ್ತು) ಇರುವ ವ್ಯಕ್ತಿಗಳು ಭೂಮಿ ಮೇಲೆ ಇಬ್ಬರಾಗಲಿ ಮೂವರಾಗಲಿ ಇರುವುದಿಲ್ಲ. ಒಂದು ಕೋಡ್ ಇರುವವನು ಮತ್ತೊಬ್ಬನು ಇರುವುದಿಲ್ಲ. ಲಿಂಗಮಯ್ಯನಿಗಿರುವ ಕೋಡ್ (ಗುರುತು) ಇನ್ನೊಬ್ಬರಿಗೆ ಇಲ್ಲದಿರುವುದರಿಂದ ಲಿಂಗಮಯ್ಯ ತಾಕಿದಾಗ ಮಾತ್ರವೇ ಕಲ್ಲುಗಳಿಂದ ಗ್ಯಾಸ್ ಬರುವುದು ನಡೆಯುತ್ತಿದೆ. ಇತರರು ಯಾರೂ ಅದೇ ಕಲ್ಲುಗಳನ್ನು ತಾಕಿ ಕಿರೋಸಿನೊಳಗೆ ಹಾಕಿದರೂ, ಅವು ರಸಾಯನಿಕ ಕ್ರಿಯೆ ನಡೆಯುತ್ತಿಲ್ಲ, ಗ್ಯಾಸ್ ಬರುತ್ತಿಲ್ಲ. ಮನುಷ್ಯನಿಗಿರುವ ಗುರುತಿಗು ರಸಾಯನಿಕ ಕಲ್ಲಿಗು ಸಂಬಂಧವಿದೆಯೆಂದು ತಿಳಿಯದವರು ಲಿಂಗಮಯ್ಯ ಕಲ್ಲುಗಳನ್ನು ಹಾಕಿದರೆ ಗ್ಯಾಸ್ ಬರುತ್ತಿದೆ, ನಾವು ಹಾಕಿದರೆ ಏಕೆ ಬರಲಿಲ್ಲವೆಂದು ಅನುಮಾನ ಬರುವುದರಿಂದ ನೀವು ಇಲ್ಲಿಗೆ ಬಂದು ನನ್ನನ್ನು ಕೇಳುತ್ತಿದ್ದೀರಾ. (ಈ ವಿಧವಾಗಿ ಪರಂಧಾಮಯ್ಯ ಹೇಳಿದ ಮಾತುಗಳನ್ನು ಕೇಳಿದ ಗ್ರಾಮಸ್ಥರು ತಮಗೆ ತಿಳಿಯದ ಒಂದು ರಹಸ್ಯವನ್ನು ಪರಂಧಾಮಯ್ಯ ಹೇಳುವುದು ಕೇಳಿ ಸಂತೋಷಿಸಿ ಹೀಗೆ ಅಂದಿದ್ದಾರೆ.)

**ಗ್ರಾಮಸ್ಥರು :–** ಪರಂಧಾಮಯ್ಯನವರೇ! ನೀವು ಹೇಳಿದ ವಿಷಯವು ನಮಗೆ ವಿವರವಾಗಿ ಅರ್ಥವಾಗಿದೆ. ಈ ವಿಷಯ ಯಾರಿಗೂ ತಿಳಿಯದ ರಹಸ್ಯ. ಈ ರಹಸ್ಯ ತಿಳಿಯದಿರುವುದರಿಂದ ಲಿಂಗಮಯ್ಯ ಯಾವುದೊ ವಿದ್ಯೆ ಕಲಿತುಕೊಂಡು ಯಾರೂ ಮಾಡಲಾರದ ಕೆಲಸ ಮಾಡುತ್ತಿದ್ದಾನೆಂದು, ಆ ವಿದ್ಯೆಯನ್ನು ನಮಗೆ ಹೇಳಲಿಲ್ಲವೆಂದು ನಾವು ಅಂದುಕೊಂಡಿದ್ದೇವೆ. ವಾಸ್ತವಕ್ಕೆ ಆತನಿಗೆ ತಿಳಿದಿರುವುದು ಆತನು ಹೇಳಿದ್ದಾನೆಂದು, ಆ ಕೆಲಸಕ್ಕೆ ಆತನು ಒಬ್ಬನೆ ಅರ್ಹನೆಂದು ಈಗ ಅರ್ಥವಾಗಿದೆ, ಈಗ ನೀವು ಹೇಳಿದ ವಿವರ ಅತ್ಯಂತ ರಹಸ್ಯವಾದುದು.

ಅಂತಹ ರಹಸ್ಯವನ್ನು ನೀವು ಸುಲಭವಾಗಿ ಅರ್ಥವಾಗುವಂತೆ ಹೇಳುವುದು ನಮಗೆ ಬಹಳ ಸಂತೋಷ.

**ಪರಂಧಾಮಯ್ಯ :–** ಇಂತಹ ರಹಸ್ಯಗಳು ಮನುಷ್ಯರ ಊಹೆಗೂ ಕೂಡ ಸಿಗದಿರುವವು ಎಷ್ಟೋ ಇವೆ. ನೀವು ಈ ವಿಷಯವನ್ನು ಕುರಿತು ಪೂರ್ತಿಯಾಗಿ ತಿಳಿಯದಿರುವಾಗ ಲಿಂಗಮಯ್ಯನನ್ನು ಮೋಸಗಾರನು ಅನ್ನುವ ಪರಿಸ್ಥಿತಿಯಲ್ಲಿ ಇರುತ್ತಿದ್ದರು. ಅಸಲು ವಿಷಯವೆಲ್ಲಾ ತಿಳಿದ ನಂತರ ಲಿಂಗಮಯ್ಯನದು ಎಂಥಹ ತಪ್ಪು ಇಲ್ಲ. ಆತನನ್ನು ತಪ್ಪಾಗಿ ಅಂದುಕೊಳ್ಳುವುದು ತಪ್ಪೆಂದು ಅಂದುಕೊಂಡಿದ್ದಾರೆ. ಹಾಗೆಯೇ ಭೂಮಿಮೇಲೆ ಬಹಳಜನರು ತಾವು ತಿಳುವಳಿಕೆಯುಳ್ಳವರೆಂದುಕೊಂಡು, ವಿಜ್ಞಾನಿಗಳೆಂದುಕೊಂಡು ತಮಗೆ ತಿಳಿಯದ ವಿಷಯಗಳ ಹತ್ತಿರ ತಪ್ಪಾಗಿ ಅರ್ಥೈಸಿಕೊಂಡು, ತಮಗೆ ತಿಳಿದಿರುವವೇ ಸತ್ಯ, ತಿಳಿಯದಿರುವವು ಅಸತ್ಯವೆಂದುಕೊಳ್ಳುವವರು ಇದ್ದಾರೆ. ಅಂತಹವರು ತಪ್ಪು ಭಾವನೆಯಲ್ಲಿದ್ದು, ತಮಗೆ ತಿಳಿಯದಿರುವುದು ಇನ್ನೂ ಎಷ್ಟೋ ಇದೆಯೆಂಬ ವಿಷಯವನ್ನು ಮರೆತುಹೋಗಿದ್ದಾರೆ. ಅವರಿಗೆ ತಿಳಿದಮಟ್ಟಿಗೆ ಹದ್ದನ್ನು(ಎಲ್ಲೆ) ಏರ್ಪಡಿಸಿಕೊಂಡಿದ್ದಾರೆ. ಹಾಗೆ ಅಲ್ಲದೆ ತಮಗೆ ತಿಳಿದಿರುವುದೇ ಹದ್ದು ಅಂದುಕೊಳ್ಳದೆ, ತಿಳಿಯದಿರುವುದು ಎಷ್ಟೋ ಇದೆಯೆಂಬ ಭಾವನೆಯಿಂದ ಅನ್ವೇಷಿಸುವವನೇ ಸತ್ಯಾನ್ವೇಷಿ ಆಗುತ್ತಾನೆ. ಆತನು ಏನನ್ನಾದರೂ ತಿಳಿಯಬಲ್ಲನು. ಒಂದು ವಿಷಯದಲ್ಲಿ ತನಗೆ ತಿಳಿದಿರುವುದೆ ಹದ್ದು ಅಂದುಕೊಳ್ಳುವವನು, ಎಂದಿಗೂ ರಹಸ್ಯಗಳನ್ನು ತಿಳಿಯಲಾರನು. ಸತ್ಯಾನ್ವೇಷಕರು ಆಗಲಾರರು. ಅಂತಹವರ ಅಲ್ಪಬುದ್ಧಿಗೆ ಸೂಕ್ಷ್ಮಶರೀರಗಳು (ದೆವ್ವಗಳು) ಅಂದರೆ ಏನೊ ತಿಳಿಯದು, ಹಾಗೆಯೇ ದೇವತೆಗಳು ಎಂದರೆ ಯಾರೊ ತಿಳಿಯದು. ದೆವ್ವಗಳನ್ನು, ದೇವತೆಗಳನ್ನು ತಿಳಿಯದವರಿಗೆ, ಅವುಗಳಿಗಿಂತ ದೊಡ್ಡವನಾದ ದೇವರು ಹೇಗೆ ತಿಳಿಯಬಲ್ಲನು. ರೋಗಿಯನ್ನು ನೋಡಿದ ಡಾಕ್ಟರಿಗೆ ರೋಗದ ಬಗ್ಗೆ ತಿಳಿದಿರುವುದರಿಂದ, ರೋಗವನ್ನು ಕುರಿತು ವಿವರವಾಗಿ ಮಾತನಾಡುತ್ತಿದ್ದಾನೆ ಆದರೆ, ರೋಗಕ್ಕೆ ಕಾರಣವಾದ ಕರ್ಮವನ್ನು ಕುರಿತು ತಿಳಿದುಕೊಳ್ಳಬೇಕೆಂದುಕೊಳ್ಳುತ್ತಿಲ್ಲ. ತನಗೆ ರೋಗದ ವರೆಗೂ ತಿಳಿದಿದೆ ಅಲ್ಲಿಯವರೆಗೇ ಹದ್ದು

ಅಂದುಕೊಳ್ಳುವುದರಿಂದ ಡಾಕ್ಟರಿಗೆ ಮುಂದಾಲೋಚನೆ ಇಲ್ಲದಹಾಗೆಹೋಗಿದೆ. ಹಾಗೆಯೇ ಬಹಳಜನ ಬಹಳ ವಿಷಯಗಳಲ್ಲಿ, ತಮಗೆ ತಿಳಿದಿರುವುದಕ್ಕಿಂತ ಮೀರಿ ಏನು ಇಲ್ಲ ಅಂದುಕೊಳ್ಳುವುದರಿಂದ, ಅವರು ಅಲ್ಲಿಗೆ ಪರಿಮಿತಿ ಯಾಗುತ್ತಿದ್ದಾರೆ. ತಮಗೆ ತಿಳಿಯದಿರುವವು ಎಷ್ಟೊ ರಹಸ್ಯಗಳನ್ನು ತಿಳಿಯಲಾರದೆ ಹೋಗುತ್ತಿದ್ದಾರೆ. ಈಗ ಲಿಂಗಮಯ್ಯ ನಿಮ್ಮನ್ನು ನನ್ನಹತ್ತಿರಕ್ಕೆ ತಂದಿದ್ದಾನಾದ್ದರಿಂದ ನೀವು ಕೇಳುತ್ತಿದ್ದೀರಾ. ಇದೇ ವಿಷಯವನ್ನೇ ಲಿಂಗಮಯ್ಯ ಸ್ವಃತವಾಗಿ ಹೇಳಿದರೂ, ಇದನ್ನು ಕಟ್ಟುಕಥೆಯಾಗಿ ಭಾವಿಸಿರುತ್ತಿದ್ದರೇನೊ!

ಈ ವಿಧವಾಗಿ ಅವರ ಸಂಭಾಷಣೆ ನಡೆದಿದೆ. ಇದೆಲ್ಲವೂ ಕೇಳಿದ ನಾವು ಪುನಃ ನಮ್ಮ ಪ್ರಶ್ನೆಯನ್ನು ಕುರಿತು ಈಗ ಹೇಳಿಕೊಳ್ಳುವುದು ಒಳ್ಳೆಯದು. ಅನ್ನ ತಿನ್ನದಂತೆ ಒಬ್ಬ ಮನುಷ್ಯ ಎಷ್ಟು ದಿನಗಳು ಬದುಕುತ್ತಾನೆ? ಅನ್ನುವುದು ನಮಗೆ ಇಲ್ಲಿ ಮುಖ್ಯವಾದ ಪ್ರಶ್ನೆ. ಶರೀರವನ್ನು ಕುರಿತು ನಮಗೆ ಚೆನ್ನಾಗಿ ತಿಳಿದಿದೆಯೆನ್ನುವ ಡಾಕ್ಟರ್ಸ್ ಮನುಷ್ಯ ಆಹಾರ ತೆಗೆದುಕೊಳ್ಳದಿರುವಾಗ "ಶರೀರದಲ್ಲಿ ನೆಲೆ ಇರುವ ಕೊಬ್ಬು ಗ್ಲೈಕೋಜಾಗಿ ಬದಲಾಗಿ, ನಂತರ ಗ್ಲೈಕೋಜ್ ಗ್ಲೂಕೋಜಾಗಿ ಬದಲಾಗಿ ಶರೀರಕ್ಕೆ ಆಹಾರವಾಗಿ ಉಪಯೋಗಪಡುತ್ತದೆ. ಆ ವಿಧವಾಗಿ ಶರೀರದಲ್ಲಿ ನೆಲೆ ಇರುವುದೆಲ್ಲಾ ಉಪಯೋಗಪಟ್ಟರೂ ಮನುಷ್ಯ ನಲವತ್ತು (40) ದಿನಗಳಿಗಿಂತ ಹೆಚ್ಚಾಗಿ ಬದುಕಲಾರನು." ಎಂದು ಅನ್ನುತ್ತಾರೆ. ಈ ಮಧ್ಯಕಾಲದಲ್ಲಿ ಆಹಾರ ತಿನ್ನದಂತೆ ಬದುಕುತ್ತಿರುವ ಮನುಷ್ಯ ಎಂದು ಗುಜರಾತ್ ರಾಷ್ಟ್ರದಲ್ಲಿ ಅಹಮ್ಮದಾಬಾದ್‌ನಲ್ಲಿರುವ ಪ್ರಹ್ಲಾದ್‌ಜಾನಿ ಎಂಬ 85 ವರ್ಷಗಳ ವಯಸ್ಸಿರುವ ವ್ಯಕ್ತಿಯನ್ನು ಕುರಿತು ಚೆನ್ನಾಗಿ ಪ್ರಚಾರವಾಗಿದೆ. ಕಂಪ್ಯೂಟರ್‌ಗಳಲ್ಲಿ ಆತನನ್ನು ಕುರಿತಾದ ಎಷ್ಟೋ ವೆಬ್‌ಸೈಟ್‌ಗಳು ಕೂಡಾ ಇವೆ. ಆತನನ್ನು ಕುರಿತು ಸಮಾಚಾರ ನೆಟ್‌ನಲ್ಲಿ ಎಷ್ಟೋ ಇದೆ. ಚಿಕ್ಕವಯಸ್ಸಿನಲ್ಲಿ ಒಂಭತ್ತು ವರ್ಷಗಳವರೆಗೂ ಆಹಾರವನ್ನು ತೆಗೆದುಕೊಂಡ ಪ್ರಹ್ಲಾದ್‌ಜಾನಿ ನಂತರ ಹತ್ತನೆಯ ವರ್ಷದಿಂದ ಆಹಾರ ನೀರು ಎರಡನ್ನು ತೆಗೆದುಕೊಳ್ಳುವುದು ಬಿಟ್ಟಿದ್ದಾನೆ. ಆಹಾರ ನೀರು ಇಲ್ಲದೆ 75 ವರ್ಷಗಳಿಂದ ಸಜೀವವಾಗಿದ್ದೂ ತನ್ನ ಕಾರ್ಯಗಳನ್ನು ತಾನು ನಿರಾತಂಕವಾಗಿ ಮಾಡಿಕೊಳ್ಳುತ್ತಿದ್ದಾನೆ. ಆತನ ಮೆದಳು

ಯುಕ್ತವಯಸ್ಸು ಇರುವವರ ಮದುಳಿನಂತೆ ಚುರುಕಾಗಿ ಕೆಲಸ ಮಾಡುತ್ತಿದೆ. ಇಲ್ಲಿಯವರೆಗೂ ಆತನಿಗೆ ಯಾವ ರೋಗಗಳೂ ಬರಲಿಲ್ಲ. 85 ವರ್ಷದಲ್ಲಿ ಯುವಕನಂತೆ ಚುರುಕಾಗಿರುವ ಆತನನ್ನು ನೋಡಿ ಆಶ್ಚರ್ಯಪಡದವರು ಇಲ್ಲ.

ಈ ದಿನಕ್ಕೂ ಸಜೀವವಾಗಿರುವ ಪ್ರಹ್ಲಾದ್‌ಜಾನಿಯನ್ನು ನೋಡಿದ ಸೈಂಟಿಸ್ಟರು "ಆತನು ಯಾರಿಗೂ ತಿಳಿಯದಂತೆ ಆಹಾರವನ್ನು ಯಾವುದೊ ಒಂದು ರೂಪದಲ್ಲಿ ತೆಗೆದುಕೊಳ್ಳುತ್ತಿರುತ್ತಾರೆ. ಹಾಗೆ ತೆಗೆದುಕೊಳ್ಳದೆ ಇರುವುದಕ್ಕೆ ಅವಕಾಶವೇ ಇಲ್ಲ" ಅನ್ನುತ್ತಿದ್ದಾರೆ. ಇಲ್ಲಿಯವರೆಗೂ ಯಾರಿಗೂ ಸಾಧ್ಯವಾಗದ ಕೆಲಸ ಆತನಿಗೆ ಹೇಗೆ ಸಾಧ್ಯವಾಗುತ್ತದೆ. ಶರೀರದಲ್ಲಿ ಉಷ್ಣತೆ ಇದ್ದರೇನೆ ಮನುಷ್ಯ ಬದುಕುತ್ತಾನೆ. ಬಿಸಿಯಾಗಬೇಕೆಂದರೆ ಬಾಯಿ ಮೂಲಕ ಆಹಾರವನ್ನು, ಮೂಗಿನಮೂಲಕ ಉಸಿರೆಳೆಯುವ ಗಾಳಿ ಉರಿಸಬೇಕು. ಶರೀರದಲ್ಲಿ ಜೀರ್ಣಾಶಯದಲ್ಲಿ ಬದಲಾವಣೆಹೊಂದಿದ ಆಹಾರವು ಗ್ಲೂಕೋಜಾಗಿ ಬದಲಾಗುತ್ತದೆ. ಹಾಗೆ ಶ್ವಾಸಕೋಶಗಳಲ್ಲಿ ಬದಲಾವಣೆಯಾದ ಗಾಳಿ ಆಕ್ಸಿಜನಾಗಿ ಬದಲಾಗುತ್ತದೆ. ಈಕಡೆ ಗ್ಲೂಕೋಜ್, ಆಕಡೆ ಆಕ್ಸಿಜನ್ ವಾಯುವು ಎರಡೂ ಶರೀರವೆಲ್ಲಾ ಇರುವ ಕೋಟ್ಯಾಂತರ ಧಾತುಕಣಗಳವರೆಗೂ ಹೋಗಿ ಉರಿಯುವ ಫ್ಯಾಕ್ಟರಿಯಾಗಿರುವ ಪ್ರತಿ ಧಾತುಕಣದಲ್ಲಿಯೂ ಗ್ಲೂಕೋಜ್ ಆಕ್ಸಿಜನ್ ವಾಯುವಿನೊಂದಿಗೆ ಬೆರೆತು ಉರಿಯುತ್ತಿರುವುದರಿಂದ ಶರೀರವೆಲ್ಲಾ ಬಿಸಿಯಾಗಿರುತ್ತಿದೆ. ಹಾಗಲ್ಲದೆ ಸುಡಲ್ಪಡುವ ಗ್ಲೂಕೋಜ್ ಎಂಬ ಆಹಾರ ಇಲ್ಲದೆ, ಶರೀರದಲ್ಲಿ ಉಷ್ಣತೆಇರುವ ಅವಕಾಶವೇ ಇರುವುದಿಲ್ಲವೆಂದು ಡಾಕ್ಟರ್ಸ್ ಹೇಳುತ್ತಿದ್ದಾರೆ. ಆಹಾರವನ್ನು ತಿನ್ನದಂತೆ ಪ್ರತ್ಯಕ್ಷವಾಗಿ 75 ವರ್ಷಗಳಿಂದ ಇರುವ ವ್ಯಕ್ತಿಯನ್ನು ನಂಬದಂತಿದ್ದಾರೆ. ಯಾರು ನಂಬಿದರೂ ನಂಬದಿದ್ದರೂ ಆಹಾರವಾಗಲಿ, ನೀರಾಗಲಿ ಬಳಸದಂತೆ, ಮಲ ಮೂತ್ರ ವಿಸರ್ಜನೆ ಇಲ್ಲದಂತೆ ಒಬ್ಬ ಮನುಷ್ಯ ಪ್ರತ್ಯಕ್ಷವಾಗಿ ಬದುಕುತ್ತಿರುವುದು ಪೂರ್ತಿ ಸತ್ಯ. ಆದರೆ ಯಾರಿಗೂ ಸಾಧ್ಯವಾಗದಿರುವುದು ಆತನಿಗೆ ಹೇಗೆ ಸಾಧ್ಯವಾಗಿದೆಯೆಂದು, ಪ್ರಶ್ನೆ ಸಹಜವಾಗಿ

ಯಾರಿಗಾದರೂ ಬರಬಹುದು. ಅದಕ್ಕೆ ಉತ್ತರವನ್ನು ಸೈನ್ಸ್ ಪ್ರಕಾರ ನೋಡಿದರೆ ನಾವು ಮೊದಲು ಹೇಳಿಕೊಂಡ ಸಮಾಚಾರದಲ್ಲಿ, ಯಾರಿಗೂ ಬದಲಾಗದ ಕಲ್ಲುಗಳು ಲಿಂಗಮಯ್ಯನಿಗೇ ಏಕೆ ಬದಲಾವಣೆಯಾಗಿವೆ ಎಂಬ ಪ್ರಶ್ನೆಗೆ ಉತ್ತರವನ್ನು ನೋಡಿದರು, ವಿವರದಲ್ಲಿ ಲಿಂಗಮಯ್ಯನಿಗೆ ಮಾತ್ರವೇ ಆತನ ಕೋಡ್‌ಗೆ ಸರಿಹೋಗುವವಿಧವಾಗಿ ಕಲ್ಲುಗಳು ಇರುವುದರಿಂದ ಕಲ್ಲುಗಳು ರಸಾಯನ ಬದಲಾವಣೆಹೊಂದಿವೆ ಎಂದು ತಿಳಿದುಕೊಂಡಿದ್ದೇವೆ. ಅಲ್ಲಿ ಲಿಂಗಮಯ್ಯನಿಗೆ ಸರಿಹೋದ ಉತ್ತರದಂತೆಯೇ ಇಲ್ಲಿ ಪ್ರಹ್ಲಾದ್‌ಜಾನಿಗೂ ಕೂಡಾ ಉತ್ತರ ಇದೆ.

ಉರಿಯುವ ಇಂಧನವಾದ ಕಟ್ಟಿಗೆಗಳು ಇಲ್ಲದಂತೆ ಲಿಂಗಮಯ್ಯ ಗ್ಯಾಸನಿಂದ ಉರಿಸುತ್ತಿದ್ದಾನೆ. ಹಾಗೆಯೇ ಉರಿಯುವ ಇಂಧನವಾದ ಗ್ಲೂಕೋಜ್ ಇಲ್ಲದೆ ಪ್ರಹ್ಲಾದ್‌ಜಾನಿ ಶರೀರದಲ್ಲಿ ಶ್ವಾಸಕೋಶಗಳಿಂದ ಬಂದಿರುವ ಆಕ್ಸಿಜನ್ ಮಾತ್ರ ಧಾತುಕಣಗಳಲ್ಲಿ ತನ್ನಷ್ಟಕ್ಕೆತಾನು ಉರಿದುಹೋಗುತ್ತಿದೆ. ಕಟ್ಟಿಗೆಗಳು ಕಿರೋಸಿನ್‌ನಿಂದ ಎಲ್ಲರಿಗೂ ಅಡಿಗೆ ತಯಾರಾಗುತ್ತಿರುವಾಗ, ಜ್ಞಾನಕ್ಷೇತ್ರವೆಂಬ ಊರಿನಲ್ಲಿ ಲಿಂಗಮಯ್ಯ ಎಂಬ ಒಬ್ಬ ವ್ಯಕ್ತಿಯಿಂದ ಕಟ್ಟಿಗೆಗಳು ಇಲ್ಲದಂತೆ, ಕಿರೋಸಿನಿಂದ ಮಾತ್ರ ಬೆಂಕಿ ಉರಿದು ಅಡಿಗೆ ಮಾಡಲಾಗುತ್ತಿದೆ. ಹಾಗೆಯೇ ಗುಜರಾತ್‌ನಲ್ಲಿ ಪ್ರಹ್ಲಾದ್‌ಜಾನಿ ಎಂಬ ಒಬ್ಬ ವ್ಯಕ್ತಿಯಲ್ಲಿ ಮಾತ್ರ ಆಹಾರವಾದ ಗ್ಲೂಕೋಜ್ ಇಲ್ಲದಹಾಗೆ ಒಂದೇ ಆಕ್ಸಿಜನ್‌ನಿಂದ ಮಾತ್ರವೇ ಧಾತುಕಣಗಳಲ್ಲಿ ಉರಿದು ಶರೀರದಲ್ಲಿ ಉಷ್ಣ ಬರುತ್ತಿದೆ. ಅಲ್ಲಿ ಒಂದು ಲಿಂಗಮಯ್ಯನಿಗೆ ಸಾಧ್ಯವಾದ ರಸಾಯನಿಕಚರ್ಯೆ, ಇಲ್ಲಿ ಪ್ರಹ್ಲಾದ್‌ಜಾನಿಗೆ ಮಾತ್ರ ಸಾಧ್ಯವಾಗುತ್ತಿದೆ. ಆತನ ಶರೀರದಲ್ಲಿ ಆತ್ಮಶಕ್ತಿಯಿಂದ ತುಂಬಿಕೊಂಡ ಧಾತುಕಣಗಳಿಗೆ ಪ್ರಪಂಚದಲ್ಲಿ ಯಾರಿಗಿಲ್ಲದ ಪ್ರತ್ಯೇಕವಾದ ರಸಾಯನ ಪ್ರಭಾವ ಇರುವುದರಿಂದ ಆಹಾರ ಇಲ್ಲದಂತೆ ಅಲ್ಲಿಗೆ (ಧಾತುಕಣಗಳಿಗೆ) ಸೇರಿದ ವಾಯುವು ಉರಿದುಹೋಗುತ್ತಿದೆ. ಪ್ರಹ್ಲಾದ್‌ಜಾನಿ ಶರೀರದಲ್ಲಿ ಪ್ರತ್ಯೇಕವಾದ ಪ್ರಭಾವ ಇದೆಯೆಂದು, ಆ ಪ್ರಭಾವ ಶರೀರದಲ್ಲಿನ ಆತ್ಮಯಿಂದ ನಡೆದಿದೆಯೆಂದು ತಿಳಿಯದವರು, ಪ್ರತ್ಯಕ್ಷವಾಗಿರುವ

ವ್ಯಕ್ತಿಯನ್ನು ನೋಡಿ ನಂಬಲಾರದೆ ಹೋಗುತ್ತಿದ್ದಾರೆ. ಒಂದು ದಿನ ಪ್ರಹ್ಲಾದ್‌ಜಾನಿಯನ್ನು ಕುರಿತು ಟಿ.ವಿ ಪ್ರೋಗ್ರಾಮ್‌ನಲ್ಲಿ ನಡೆಯುವ ಚರ್ಯದಲ್ಲಿ ಡಾಕ್ಟರ್ ಸಮರ್‌ರವರು (ನಾಸ್ತಿಕವಾದಿ) ಪ್ರಹ್ಲಾದ್‌ಜಾನಿ ವಿಷಯ ಪೂರ್ತಿ ಅಸತ್ಯವೆಂದು, ಹಾಗೆ ಇರುವುದು ಅಸಂಭವವೆಂದು, ಇದೆಲ್ಲವೂ ಅಸತ್ಯ ಪ್ರಚಾರವೆಂದು ಹೇಳುವುದು ನಾನು ಕೇಳಿದ್ದೇನೆ. ತಮಗೆ ತಿಳಿದಿರುವುದೆ ವಿಜ್ಞಾನವೆಂದು ಹದ್ದು ಏರ್ಪಡಿಸಿಕೊಂಡವರಿಗೆ ಪ್ರತ್ಯಕ್ಷ ಸತ್ಯ ಅಸತ್ಯವಾಗಿಯೇ ಕಾಣಿಸುತ್ತದೆ. ಏಕೆಂದರೆ ಸತ್ಯವನ್ನು ತಿಳಿದುಕೊಳ್ಳುವ ವಿವೇಕವಾಗಲಿ, ಸತ್ಯವನ್ನು ನೋಡುವ ಜ್ಞಾನದೃಷ್ಟಿಯಾಗಲಿ ಅವರಿಗೆ ಇರುವುದಿಲ್ಲ. ಆತ್ಮ ಎನ್ನುವುದೂ ಪ್ರತ್ಯೇಕವಾಗಿ ನಮ್ಮ ಶರೀರದಲ್ಲಿ ಒಂದಿದೆಯೆಂದು ತಿಳಿಯದವರಿಗೆ ಆತ್ಮದಿಂದ ಉಂಟಾಗುವ ಅನೇಕ ಕೆಲಸಗಳು ಅರ್ಥವಾಗುವುದಿಲ್ಲ.

ಪ್ರತಿ ಮನುಷ್ಯನಿಗು ಪ್ರತ್ಯೇಕವಾದ ಗುರುತುಗಳಿರುವಾಗ, ಅವುಗಳನ್ನೆ ನಾವು ಕೋಡ್‌ಆಗಿ ಹೇಳಿಕೊಂಡರೂ, ಸಂಖ್ಯೆಯಾಗಿ ಹೇಳಿಕೊಂಡರೂ ಅವನಿಗಿರುವ ಕೋಡ್ ಅಥವಾ ಸಂಖ್ಯೆ ಮತ್ತೊಬ್ಬನಿಗೆ ಇಲ್ಲವೆಂದು ಹೇಳುತ್ತಿದ್ದೇವೆ. ಒಬ್ಬ ಮನುಷ್ಯನಿಗಿರುವ ಬೆರಳಿನ ಗುರುತುಗಳು ಮತ್ತೊಬ್ಬ ಮನುಷ್ಯನಿಗೆ ಇಲ್ಲದಿರುವಾಗ, ಒಬ್ಬ ಮನುಷ್ಯನಿಗಿರುವ ಆತ್ಮಶಕ್ತಿ ಮತ್ತೊಬ್ಬ ಮನುಷ್ಯನಿಗೆ ಇರುವುದಿಲ್ಲವೆಂದೇ ಹೇಳಬಹುದು. ಪ್ರತಿ ಮನುಷ್ಯನಿಗೂ ಮೂರು ಪ್ರತ್ಯೇಕವಾದವು ಇರುತ್ತವೆಂದು ಅವುಗಳೆ ಒಂದು ವಾಸನೆ, ಎರಡು ಬೆರಳಿನ ಗುರುತುಗಳು, ಮೂರು ಶಕ್ತಿ (ಆತ್ಮಶಕ್ತಿ) ಎಂದು ಹೇಳಿಕೊಂಡಿದ್ದೇವೆ. ಮನುಷ್ಯನಿಗಿರುವ ವಾಸನೆಗಳಲ್ಲಿ ಪ್ರತ್ಯೇಕವಾದ ವಾಸನೆ ಇರುವ ಪ್ರತ್ಯೇಕವಾದ ವ್ಯಕ್ತಿಗೆ ಹಾವುಗಳು, ಚೇಳುಗಳು ಭಯಪಟ್ಟಂತೆ, ಹಾಗೆಯೇ ಒಬ್ಬರಲ್ಲಿರುವ ಪ್ರತ್ಯೇಕವಾದ ಗುರುತು (ಕೋಡ್)ನಿಂದ, ಪ್ರತ್ಯೇಕವಾದ ರಸಾಯನಚರ್ಯ ನಡೆದಂತೆ, ಮನುಷ್ಯನಿಗಿರುವ ಪ್ರತ್ಯೇಕವಾದಶಕ್ತಿಯಿಂದ, ಪ್ರತ್ಯೇಕವಾದ ಗುರ್ತಿರುವ ಕಾರ್ಯ ಆತನಲ್ಲಿ ನಡೆಯುತ್ತಿದೆ. ಇಲ್ಲಿ ಪ್ರಹ್ಲಾದ್‌ಜಾನಿ ಶರೀರದಲ್ಲಿ ಅಣುವಣುವಿನಲ್ಲಿರುವ ಧಾತುಕಣಗಳಲ್ಲಿರುವ ಶಕ್ತಿಯಿಂದ, ದಹಿಸಲ್ಪಡುವ ಪದಾರ್ಥ ಇಲ್ಲದಂತೆಯೇ ಅಲ್ಲಿಗೆ ಸೇರಿದ ವಾಯುವು ತನಷ್ಟಕ್ಕೆತಾನು ಉರಿದುಹೋಗುತ್ತಿದೆ. (ಈ

ವಿಷಯವನ್ನು ಕುರಿತು ಪೂರ್ತಿ ವಿವರವಾಗಿ ನಮ್ಮ ರಚನೆಯಲ್ಲಿನ **"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಬರೆಯಲ್ಪಟ್ಟಿದೆ.) ಪ್ರತ್ಯಕ್ಷವಾಗಿ ನಡೆಯುವುದು ಏನಾದರೂ ಸೈನ್ಸೆ. ಸತ್ಯವನ್ನು ಸೈನ್ಸು ಅಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಯಾರಲ್ಲಿಯೂ ನಡೆಯದಂತೆ ಕೇವಲ ಒಬ್ಬ ವ್ಯಕ್ತಿಯಲ್ಲಿಯೇ ನಡೆಯುವುದು ಆಶ್ಚರ್ಯದಿಂದ ಕೂಡಿಕೊಂಡ ಕೆಲಸವಾದರೂ, ಅದು ಒಳಗೆ ಸೂಕ್ಷ್ಮವಾಗಿ ಕಾಣಿಸದೆ ನಡೆಯುವ ಕಾರ್ಯವಾಗಿರುವುದರಿಂದ ಅದನ್ನು ಸೂಪರ್‌ಸೈನ್ಸಗೆ ಸಂಬಂಧಿಸಿದ ವಿಷಯವೆಂದು ಹೇಳಬಹುದು. ಆಹಾರ, ನೀರು ಇಲ್ಲದಂತೆ ಒಬ್ಬ ಮನುಷ್ಯ 75 ವರ್ಷಗಳಿಂದ ಬದುಕಿರುವಂತೆ, ಒಂದು ವಿಚಿತ್ರವಾದ ಕಾರ್ಯವನ್ನು ದೇವರು ಮಾಡಿ ತೋರಿಸಿ, ಒಬ್ಬ ಮನುಷ್ಯನಲ್ಲಿನ ಪ್ರತ್ಯೇಕವಾದ ಶಕ್ತಿ ಇದೆಯೆಂದು ದೇವರು ನಿರೂಪಿಸಿ ತೋರಿಸಿದ್ದಾನೆ. ಹಾಗೆಯೇ ಒಬ್ಬ ಮನುಷ್ಯನಿಗಿರುವ ಗುರ್ತು ಮತ್ತೊಬ್ಬ ಮನುಷ್ಯನಿಗೆ ಇರುವುದಿಲ್ಲವೆಂದು ಕೂಡಾ ತೋರಿಸಿದ್ದಾನೆ. ಇನ್ನೂ ಒಬ್ಬ ಮನುಷ್ಯನಿಗಿರುವ ವಾಸನೆ ಮತ್ತೊಬ್ಬರಿಗೆ ಇರುವುದಿಲ್ಲವೆಂದು ಕೂಡಾ ತಿಳಿಸಿದ್ದಾನೆ. ಈ ವಿಧವಾಗಿ ಪ್ರತಿ ಮನುಷ್ಯನಲ್ಲಿಯೂ ತ್ರಿವಿಧ ಭೇದಗಳನ್ನು ದೇವರಿಟ್ಟು, ಆ ವ್ಯತ್ಯಾಸಗಳನ್ನು ಮನುಷ್ಯರು ಗಮನಿಸುವಂತೆ, ಅವರಲ್ಲಿ ಪ್ರತ್ಯೇಕವಾದ ಕಾರ್ಯಗಳು ನಡೆಯುವಂತೆ ಮಾಡಿದ್ದಾನೆ. ಇದರಿಂದ ಎಲ್ಲಿಯಾದರೂ ನಮ್ಮ ಮೇಧಸ್ಸಿಗೆ ಸಿಗದಿರುವುದೇನಾದರೂ ಕಾರ್ಯವಿದ್ದರೆ, ಅದು ಯಾರಿಗೂ ಕೈಲಾಗದೆ ಒಬ್ಬನಿಗೆ ಮಾತ್ರ ಸಾಧ್ಯವಾದಾಗ, ಅದನ್ನು ಬೂಟಕವೆಂದು, ಮೂಢನಂಬಿಕೆಯೆಂದು ಹೊಡೆದುಹಾಕದೆ ಅಲ್ಲಿ ಏನಾದರೂ ನಮಗೆ ತಿಳಿಯದ ರಹಸ್ಯ ಇರುತ್ತದೆಂದು ಯೋಚಿಸಿ ನೋಡಿರಿ. ಕುರುಡರಂತೆ ಏನನ್ನು ಖಂಡಿಸಬೇಡಿರಿ.

**ಪ್ರಶ್ನೆ :–** ಈಗಿನಕಾಲದಲ್ಲಿ ಎಷ್ಟೋಜನ ವಿಶ್ವವಿದ್ಯಾಲಯಗಳಲ್ಲಿ (ಯೂನಿವರ್ಸಿಟಿಯಲ್ಲಿ) ಉನ್ನತ ವಿದ್ಯೆಗಳನ್ನು ಓದಿದವರಿದ್ದಾರೆ. ಅಂತಹ ವಿದ್ಯಾವಂತರೇ ಹೆಚ್ಚಾಗಿ ನಾಸ್ತಿಕರಾಗಿ ತಯಾರಾಗುತ್ತಿದ್ದಾರೆ. ಓದದವನು ದೇವರಿದ್ದಾನೆಂದು ನಂಬಿದರೂ, ಚೆನ್ನಾಗಿ ಓದಿದವನು ದೇವರೇ ಇಲ್ಲ ಅನ್ನುತ್ತಿದ್ದಾನೆ. ನನಗೆ

ತಿಳಿಯದೆ ಕೇಳುತ್ತಿದ್ದೇನೆ. ಯೂನಿವರ್ಸಿಟಿ ಎಂದರೆ ಅರ್ಥ ಏನು? ಯೂನಿವರ್ಸಿಟಿಯಲ್ಲಿ ವಿದೆಗಳು ಕೊನೆಗೆ ದೇವರು ಇಲ್ಲವೆಂದು ಬೋಧಿಸುತ್ತವಾ?

**ಉತ್ತರ :–** ಯೂನಿವರ್ಸಿಟಿ ಎಂಬ ಪದ ಆಂಗ್ಲಭಾಷಗೆ ಸಂಬಂಧಿಸಿರುವುದು. ಅದನ್ನೆ ಕನ್ನಡಭಾಷೆಯಲ್ಲಿ ವಿಶ್ವವಿದ್ಯಾಲಯ ಎನ್ನುತ್ತಾರೆ. ವಿಶ್ವ ಎಂದರೆ ಜೀವರಾಶಿಗಳಿಂದ ಕೂಡಿದ ಪ್ರಪಂಚ ಎಂದು ಅರ್ಥ. ಇನ್ನೊಂದು ವಿಧವಾಗಿ ಎಲ್ಲಕಡೆ ವ್ಯಾಪಿಸಿದೆಯೆಂದು ಕೂಡ ಹೇಳಬಹುದು. ಒಟ್ಟಾರೆ ಚರಾ ಅಚರಾ ಪ್ರಕೃತಿ ಎಲ್ಲಿಯವರೆಗಿದೆಯೊ, ಅದನ್ನೆಲ್ಲವನ್ನು ವಿಶ್ವ ಅನ್ನುತ್ತೇವೆ. ವಿಶ್ವವೆಲ್ಲಾ ವ್ಯಾಪಿಸಿರುವುದನ್ನು ಕುರಿತು ಕಲಿತುಕೊಳ್ಳುವ ವಿದ್ಯೆಯನ್ನು ವಿಶ್ವವಿದ್ಯೆ ಅನ್ನುತ್ತೇವೆ. ವಿಶ್ವವಿದ್ಯೆ ಎಲ್ಲಿಯಾದರೆ ಹೇಳಲಾಗುತ್ತಿದೆಯೊ, ಅದನ್ನು ವಿಶ್ವವಿದ್ಯಾಲಯ ಎಂದು ಹೇಳಬೇಕು. ವಿಶ್ವವಿದ್ಯಾಲಯ ಎಂಬ ಹೆಸರನ್ನು ಹೇಳುತ್ತಿದ್ದೇವೆ. ನಮ್ಮ ರಾಷ್ಟ್ರದಲ್ಲಿ ನೂರಾರು ಸಂಖ್ಯೆಯಲ್ಲಿ ವಿಶ್ವವಿದ್ಯಾಲಯಗಳಿವೆ. ಆದರೆ ಅಲ್ಲಿ ವಿಶ್ವವೆಲ್ಲಾ ವ್ಯಾಪಿಸಿರುವುದೇನೊ, ಅದನ್ನು ಕುರಿತು ಹೇಳುವುದು ನಡೆಯುತ್ತಿದೆಯಾ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಅದಕ್ಕಿಂತ ಮೊದಲು ಕೆಲವು ಪ್ರಶ್ನೆಗಳು ಬರುತ್ತವೆ. ಅದರಲ್ಲಿ ಮೊದಲನೆಯದು ವಿಶ್ವವೆಲ್ಲಾ ವ್ಯಾಪಿಸಿರುವುದೇನು? ಎಂಬ ಪ್ರಶ್ನೆ ಇದೆ. ಅದಕ್ಕೆ ಉತ್ತರವನ್ನು ನೋಡಿದರೆ ಈ ವಿಧವಾಗಿದೆ.

ವಿಶ್ವ ಎರಡು ವಿಧಗಳು ಇವೆ. ಒಂದು ಕಾಣಿಸುವ ವಿಶ್ವ, ಎರಡು ಕಾಣಿಸದ ವಿಶ್ವ. ಕಾಣಿಸುವ ವಿಶ್ವವನ್ನು ಪ್ರಕೃತಿ ಅನ್ನುತ್ತೇವೆ. ಕಾಣಿಸದ ವಿಶ್ವವನ್ನು ಪರಮಾತ್ಮ (ದೇವರು) ಅನ್ನುತ್ತಿದ್ದೇವೆ. ಕಾಣಿಸುವ ವಿಶ್ವವಾದ ಪ್ರಕೃತಿಯನ್ನು ಐದು ಭಾಗಗಳಾಗಿ ವಿಭಜಿಸಿ ಹೇಳಬಹುದು. ಕಾಣಿಸದ ವಿಶ್ವವಾದ ಪರಮಾತ್ಮನನ್ನು ಅಥವಾ ದೇವರನ್ನು ಮೂರು ಭಾಗಗಳಾಗಿ ವಿಭಜಿಸಿ ಹೇಳಬಹುದು. ಪ್ರಕೃತಿಯನ್ನು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂದು ಐದು ಭಾಗಗಳಾಗಿ, ದೇವರನ್ನು ಪರಮಾತ್ಮ, ಆತ್ಮ, ಜೀವಾತ್ಮ ಎಂದು ಮೂರು ಭಾಗಗಳಾಗಿ ಹೇಳಬಹುದು. ಪ್ರಸ್ತುತ ವಿಶ್ವವಿದ್ಯಾಲಯ ಎಂಬ ಹೆಸರು ಹೊಂದಿದವುಗಳಲ್ಲಿ ಕಾಣಿಸುವ ಪ್ರಕೃತಿಗೆ ಸಂಬಂಧಿಸಿದ ಐದು ಭಾಗಗಳನ್ನು

ಕುರಿತಾದ ವಿದ್ಯೆಗಳನ್ನು ಮನುಷ್ಯನಿಗೆ ಕಲಿಸುತ್ತಿದ್ದಾರೆ. ಐದು ಭಾಗಗಳಿಗೆ ಸಂಬಂಧಿಸಿದ ವಿದ್ಯೆಗಳನ್ನೆ ವಿಶ್ವವಿದ್ಯೆಯೆಂದು, ಅವುಗಳನ್ನು ಹೇಳುವ ಸ್ಥಳಗಳನ್ನೆ ವಿಶ್ವವಿದ್ಯಾಲಯಗಳೆಂದು ಹೇಳುವುದು ನಡೆಯುತ್ತಿದೆ. ಈದಿನ ಹೊರಗಿನ ಪ್ರಪಂಚದಲ್ಲಿ ಎಲ್ಲಿಯೂ ಯಾವ ವಿಶ್ವವಿದ್ಯಾಲಯ ಇದ್ದರೂ ಅದು ಪ್ರಕೃತಿಯನ್ನು ಬೋಧಿಸುವುದಾಗಿದೆ. ಪ್ರಕೃತಿ ವಿದ್ಯೆಗಳನ್ನು ಕಲಿತವನಿಗೆ ಪರಮಾತ್ಮ ವಿದ್ಯೆ ಹಿಡಿಸುವುದಿಲ್ಲ. ಕಾಣಿಸುವ ಪ್ರಕೃತಿಯನ್ನು ಕುರಿತು ಅನೇಕ ವಿಷಯಗಳನ್ನು ತಿಳಿದ ಮನುಷ್ಯ, ತಾನು ದೊಡ್ಡ ವಿದ್ಯಾವೇತ್ತನೆಂದು ಅಂದುಕೊಳ್ಳುತ್ತಾನೆ. ವಾಸ್ತವಕ್ಕೆ ಆತನು ದೊಡ್ಡ ವಿದ್ಯಾವೇತ್ತನು ಅಲ್ಲ. ಆತನು ಕಲಿತಿರುವುದು ದೊಡ್ಡ ವಿದ್ಯೆಯಲ್ಲ. ಆತನು ಕಲಿತಿರುವುದು ಚಿಕ್ಕ ವಿದ್ಯೆಯೇ. ದೊಡ್ಡವಿದ್ಯೆಯನ್ನು ಬ್ರಹ್ಮವಿದ್ಯೆ ಎನ್ನುತ್ತಾರೆ. ಬ್ರಹ್ಮ ಎಂದರೆ ದೊಡ್ಡದು ಎಂದು ಅರ್ಥ. ಪ್ರಕೃತಿಗಿಂತ ದೊಡ್ಡದು, ಪ್ರಕೃತಿಯನ್ನು ಸೃಷ್ಟಿಸಿರುವುದಾದ ಪರಮಾತ್ಮಗಿಂತ ಎಲ್ಲಾ ವಿಧಗಳ ಪ್ರಕೃತಿ ಚಿಕ್ಕದು. ಎಲ್ಲದಕ್ಕಿಂತ ದೊಡ್ಡವಿದ್ಯೆ ಆಗಿರುವುದರಿಂದ, ಪರಮಾತ್ಮ ವಿದ್ಯೆಯನ್ನು ಬ್ರಹ್ಮವಿದ್ಯೆ ಎಂದು ಹೇಳುತ್ತಿದ್ದಾರೆ. ಈದಿನ ಪ್ರಕೃತಿಬೋಧನೆಯನ್ನು ಬೋಧಿಸುತ್ತಿರುವ ವಿಶ್ವ ವಿದ್ಯಾಲಯಗಳಲ್ಲಿ ತಾವು ಎಷ್ಟು ವರ್ಷಗಳು ಓದಿದರೂ, ಎಷ್ಟೋ ಕೋರ್ಸುಗಳು ಕಲಿತು ಡಿಗ್ರಿಗಳು ತೆಗೆದುಕೊಂಡರೂ ಅವೆಲ್ಲವೂ ಪ್ರಕೃತಿ ಸಂಬಂಧ ಚಿಕ್ಕ ವಿದ್ಯೆಗಳೆಯೆಂದು ತಿಳಿಯದವರು, ನಾವು ದೊಡ್ಡ ಓದುಗಳು ಓದಿದ್ದೇವೆಂದು ಹೇಳಿಕೊಳ್ಳುತ್ತಿರುತ್ತಾರೆ. ಹಾಗೆ ಅವರು ತಮ್ಮ ವಿದ್ಯೆಗಳನ್ನು ದೊಡ್ಡ ವಿದ್ಯೆಗಳೆಂದು ಹೇಳಿಕೊಂಡರೂ, ವಾಸ್ತವಕ್ಕೆ ಅವು ಪೂರ್ತಿ ಚಿಕ್ಕವಿದ್ಯೆಗಳೆ. ಅವರು ಓದದೆಯಿರುವ ವಿದ್ಯೆ, ಎಲ್ಲದಕ್ಕಿಂತ ದೊಡ್ಡ ವಿದ್ಯೆ ಮತ್ತೊಂದು ಇದೆ. ಅದೇ ಬ್ರಹ್ಮ (ದೊಡ್ಡ) ವಿದ್ಯೆ.

ಪ್ರಕೃತಿ ಸಂಬಂಧ ವಿದ್ಯೆಯನ್ನು ಕಲಿತವರು ಕೇವಲ ನಾಲ್ಕು ಶಾಸ್ತ್ರಗಳನ್ನು ಕುರಿತೆ ತಿಳಿದುಕೊಳ್ಳುತ್ತಿದ್ದಾರೆ. ಶಾಸ್ತ್ರಗಳು ಎಲ್ಲಾ ಆರು ಇರುವಾಗ, ಈದಿನ ಇರುವ ಯೂನಿವರ್ಸಿಟಿಗಳಲ್ಲಿ ಎಷ್ಟು ವಿಧಗಳ ವಿದ್ಯೆಗಳನ್ನು ಕಲಿತರೂ ಅವೆಲ್ಲವೂ ಎಲ್ಲಾ ಸುತ್ತಿ ನೋಡಿದರೂ ನಾಲ್ಕು ಶಾಸ್ತ್ರಗಳೊಂದಿಗೆ ಸಂಬಂಧಹೊಂದಿರುತ್ತವೆ

ಗಣಿತ, ಖಗೋಳ, ರಸಾಯನ, ಭೌತಿಕ ಎಂಬ ನಾಲ್ಕು ಶಾಸ್ತ್ರಗಳಲ್ಲಿನ ವಿದ್ಯೆಗಳನ್ನೇ ವಿಶ್ವವಿದ್ಯಾಲಯಗಳಲ್ಲಿ ಬೋಧಿಸುವುದು ನಡೆಯುತ್ತಿದೆ. ಉದಾಹರಣೆಗೆ ನ್ಯಾಯಸಂಬಂಧ ವಿದ್ಯೆಯನ್ನು ಕೆಲವು ವರ್ಷಗಳು ಕೋರ್ಸಾಗಿ ಕಲಿತರೂ, ಅದನ್ನು ನ್ಯಾಯ ಶಾಸ್ತ್ರವೆಂದು ಹೇಳಿಕೊಂಡರೂ, ಶಾಸ್ತ್ರಗಳಲ್ಲಿ ನ್ಯಾಯಶಾಸ್ತ್ರವಿಲ್ಲ. ಇರುವುದು ಷಟ್‌ಶಾಸ್ತ್ರಗಳೆ. ಆದ್ದರಿಂದ ನಾವು ನ್ಯಾಯಶಾಸ್ತ್ರವೆಂದು ಹೆಸರಿಟ್ಟುಕೊಂಡು ಓದಿದರೂ, ಕೊನೆಗದು ಅದು ಶರೀರ ಸಂಬಂಧವಾದ ಭೌತಿಕಶಾಸ್ತ್ರಕ್ಕೆ ಸಂಬಂಧಿಸಿರುವುದೇ ಆಗುತ್ತದೆ. ಹೀಗೆ ಬೇರೆಬೇರೆ ಹೆಸರುಗಳು ಇಟ್ಟುಕೊಂಡು, ಬೇರೆಬೇರೆ ವಿದ್ಯೆಗಳು ಕಲಿತರೂ, ಅವೆಲ್ಲವೂ ಪ್ರಪಂಚಸಂಬಂಧ ವಿದ್ಯೆಗಳೆ ಆಗುತ್ತದೆ. ಪ್ರಪಂಚ ಸಂಬಂಧವಿದ್ಯೆಗಳೆಲ್ಲವೂ ಕೇವಲ ನಾಲ್ಕು ಶಾಸ್ತ್ರಗಳಿಂದಲೇ ಮುಡಿಹಾಕಲ್ಪಟ್ಟಿವೆ. ಆರು ಶಾಸ್ತ್ರಗಳಲ್ಲಿ ಪೂರ್ತಿ ಪ್ರಕೃತಿಗೆ ಸಂಬಂಧವಾದ ಶಾಸ್ತ್ರಗಳು ನಾಲ್ಕು ಇರುವಾಗ, ಪರಮಾತ್ಮಕ್ಕೆ ಸಂಬಂಧಿಸಿರುವುದು ಒಂದು ಇದೆ. ಅದೇ ಬ್ರಹ್ಮವಿದ್ಯಾಶಾಸ್ತ್ರ. ಇನ್ನೂ ಉಳಿದಿರುವುದು ಜ್ಯೋತಿಷ್ಯಶಾಸ್ತ್ರ ಎನ್ನುವುದು ಐದನೆಶಾಸ್ತ್ರ ಒಂದು ಇದೆ. ಅದು ಆಕಡೆ ಪೂರ್ತಿ ಪ್ರಪಂಚ ವಿದ್ಯೆಯಲ್ಲದೆ, ಈಕಡೆ ಪರಮಾತ್ಮ ವಿದ್ಯೆಯೂ ಅಲ್ಲದಂತೆ ಮಧ್ಯೆದಲ್ಲಿ ಎರಡರೊಂದಿಗೆ ಸಂಬಂಧಹೊಂದಿದೆ. ಆದ್ದರಿಂದ ಗಣಿತ, ಖಗೋಳ, ರಸಾಯನ, ಭೌತಿಕಶಾಸ್ತ್ರಗಳನ್ನು ನಾಲ್ಕನ್ನು ಒಂದುಕಡೆ ಬೆರೆತಾಗ, ಬ್ರಹ್ಮವಿದ್ಯಾಶಾಸ್ತ್ರವನ್ನು ಮತ್ತೊಂದುಕಡೆ ಸೇರಿಸಿದಾಗ, ಎರಡಕ್ಕು ಮಧ್ಯದಲ್ಲಿ ಎರಡಕ್ಕು ಸಂಧಿಯಂತೆ ಜ್ಯೋತಿಷ್ಯಶಾಸ್ತ್ರ ನಿಂತುಹೋಗುತ್ತಿದೆ. ಎಲ್ಲಾ ಶಾಸ್ತ್ರಗಳಿಗಿಂತ ಯಾವಕಡೆಯಲ್ಲದಾದ ಜ್ಯೋತಿಷ್ಯಶಾಸ್ತ್ರ ಯಾವುದೆ ಅಭಿವೃದ್ಧಿ ಹೊಂದಲಾರದೆ ಹೋಗಿದೆ. ಕೆಲವರು ಇದನ್ನು ಶಾಸ್ತ್ರವಾಗಿಯೇ ಲೆಕ್ಕಿಸುತ್ತಿಲ್ಲ. ಎಲ್ಲದಕ್ಕಿಂತ ಪರಿಶೋಧನೆಯಲ್ಲಿ ಹಿಂದುಳಿದುಹೋಗಿದೆ, ಪರಿಶೋಧಕರು ಇಲ್ಲದ ಶಾಸ್ತ್ರ ಜ್ಯೋತಿಷ್ಯಶಾಸ್ತ್ರವೆಂದು ಹೇಳಬಹುದು.

ಪ್ರಕೃತಿ ಸಂಬಂಧ ಗಣಿತ, ಖಗೋಳ, ರಸಾಯನ, ಭೌತಿಕಶಾಸ್ತ್ರಗಳು ನಾಲ್ಕು ಚೆನ್ನಾಗಿ ಅಭಿವೃದ್ಧಿಹೊಂದಿದ ಶಾಸ್ತ್ರಗಳಾಗಿ ಇವೆ. ಈ ನಾಲ್ಕು ಶಾಸ್ತ್ರಗಳಲ್ಲಿ

ಎಷ್ಟೋಜನ ಪರಿಶೋಧಕರು ನಿತ್ಯ ಪರಿಶೋಧನೆ ಮಾಡುತ್ತಿದ್ದಾರೆ. ಆದ್ದರಿಂದ ಮನುಷ್ಯರ ಮೆದುಳಿನಲ್ಲಿ ನಾಲ್ಕುಶಾಸ್ತ್ರಗಳು ಬಹಳ ಹೆಸರು ಹೊಂದಿವೆ. ಪ್ರತಿ ವಿಶ್ವವಿದ್ಯಾಲಯದಲ್ಲಿಯೂ ನಾಲ್ಕು ಶಾಸ್ತ್ರಗಳನ್ನು ಕುರಿತು ಪರಿಶೋಧನೆ ಮಾಡುತ್ತಲೇ ಇದ್ದಾರೆ. ಆದರೆ ಒಂದು ಬ್ರಹ್ಮವಿದ್ಯಾಶಾಸ್ತ್ರ ಮಾತ್ರ ಮನುಷ್ಯರ ಪರಿಶೋಧನೆಗೆ ದೂರವಾಗಿದೆ. ಬ್ರಹ್ಮವಿದ್ಯಾಶಾಸ್ತ್ರವನ್ನು ಕುರಿತಾದ ಬೋಧನೆಗಳು ಯಾವ ವಿಶ್ವವಿದ್ಯಾಲಯಗಳಲ್ಲಿಯೂ ಹೇಳುತ್ತಿಲ್ಲ. ಷಟ್‌ಶಾಸ್ತ್ರಗಳಲ್ಲಿ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಹೊರತು ಉಳಿದ ಐದು ಶಾಸ್ತ್ರಗಳಿಗು ವಿದ್ಯಾಲಯಗಳಿರ ಬಹುದು, ಗುರುಗಳು ಇರಬಹುದಾಗಲಿ, ಒಂದು ಬ್ರಹ್ಮವಿದ್ಯಾಶಾಸ್ತ್ರಕ್ಕೆ ಯಾವ ಮನುಷ್ಯ ಗುರುವಾಗಿರುವುದಿಲ್ಲ. ಯಾವ ವಿದ್ಯಾಲಯಗಳಲ್ಲಿಯೂ ಅದು ಬೋಧಿಸಲ್ಪಡುವು ದಿಲ್ಲ. ಬ್ರಹ್ಮವಿದ್ಯೆಗೆ ಮನುಷ್ಯರು ಗುರುಗಳಾಗಿರುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಬ್ರಹ್ಮವಿದ್ಯಾಶಾಸ್ತ್ರ ದೇವರಿಗೆ ಹೊರತು ಮನುಷ್ಯರ್‍ಯಾರಿಗೂ ತಿಳಿದಿಲ್ಲವೆಂದು ಅದೇ ಶಾಸ್ತ್ರದಲ್ಲಿದೆ. ಮನುಷ್ಯ ಯಾರಾದರೂ ಗ್ರಹಿಸಿಕೊಳ್ಳುವ ಶಿಷ್ಯನಾಗಿ ಇಲ್ಲವೆ ವಿದ್ಯಾರ್ಥಿಯಾಗಿ ಇರಬೇಕಾಗಿದ್ದೆ ಆದರೆ, ಬೋಧಿಸುವ ಗುರುವಾಗಿ ಅರ್ಹನಲ್ಲ. ಒಂದುವೇಳೆ ತಾನು ಗುರುವೆಂದು ಯಾರಾದರೂ ಹೇಳಿಕೊಂಡರೂ, ಆ ಮಾತು ಕೇಳುವುದಕ್ಕೆ ಸರಿಹೋಗುತ್ತದೆ ಆದರೆ, ನಿಜಕ್ಕೆ ಆತನು ಗುರುವಲ್ಲ. ಎಲ್ಲಿಯಾದರೂ ಯಾವಾಗಾದರೂ ಬ್ರಹ್ಮವಿದ್ಯೆಯನ್ನು ಹೇಳುವುದಕ್ಕೆ ದೇವರು ಗುರುವಾಗಿ ಬದಲಾಗಬೇಕಾಗಿರುತ್ತದೆ. ಹಾಗೆ ದೇವರು ಗುರುವಾಗಿ ಬಂದರೂ, ಆತನು ದೇವರಾಗಿ ಬರುವುದಿಲ್ಲ, ಮಾರುವೇಷದಲ್ಲಿ ಮಾರು ಹೆಸರಿನಿಂದ ಬರುತ್ತಾನೆ. ಹಾಗೆ ಬಂದವನಿಗೆ ಗುರುತು ಇರುವುದಿಲ್ಲ. ಆತನು ಯಾರಿಗೂ ತಿಳಿಯದಂತೆ ಇರುತ್ತಾನೆ. ಆದ್ದರಿಂದ ಬೋಧಿಸುವುದಕ್ಕೆ ವಿದ್ಯಾಲಯಗಳು ಇರುವುದಿಲ್ಲ. ಬ್ರಹ್ಮವಿದ್ಯೆ ಎಲ್ಲಾ ಪ್ರತ್ಯೇಕತೆಯಿಂದ ಕೂಡಿಕೊಂಡಿದ್ದರೂ, ಅದನ್ನು ಬೋಧಿಸುವವನು ಮಾತ್ರ ಯಾವ ಪ್ರತ್ಯೇಕತೆ ಇಲ್ಲದವನಾಗಿ, ಯಾವ ಗುರುತು ಇಲ್ಲದವನಾಗಿ ತಾನು ಹೇಳಬೇಕಾಗಿರುವುದನ್ನು ಹೇಳಿಹೋಗುತ್ತಾನೆ.

ವಿಶ್ವ ಎಂದರೆ ಸ್ಥೂಲ ಸೂಕ್ಷ್ಮದೊಂದಿಗೆ ಕೂಡಿಕೊಂಡಿದೆಯೆಂದು, ಅದರಲ್ಲಿ ಸ್ಥೂಲವಾದ ಪ್ರಕೃತಿಯನ್ನು ಕುರಿತು ತಿಳಿಸುವ ವಿದ್ಯೆಯನ್ನು ಕಲಿಸುವುದಕ್ಕೇ

ಈಗಿನ ವಿಶ್ವವಿದ್ಯಾಲಯಗಳು ಇವೆಯೆಂದು, ಸೂಕ್ಷ್ಮವಾದ ಪರಮಾತ್ಮನನ್ನು ತಿಳಿಸುವ ವಿದ್ಯೆ, ಹೆಸರು ಇಡಲಾದ ವಿಶ್ವವಿದ್ಯಾಲಯದಲ್ಲಿ ಹೇಳುತ್ತಿಲ್ಲವೆಂದು, ಅದು ಎಲ್ಲಿ ಹೇಳಲಾಗುತ್ತದೊ, ಯಾರು ಹೇಳುತ್ತಾರೊ ಮೊದಲು ಯಾರಿಗೂ ತಿಳಿಯದೆಂದು ಹೇಳಿಕೊಂಡಿದ್ದೇವೆ. ಎಲ್ಲಿ ಬ್ರಹ್ಮವಿದ್ಯೆ ಹೇಳಿದರೆ, ಅಲ್ಲಿಯೇ ನಿಜವಾದ ವಿಶ್ವವಿದ್ಯಾಲಯ ಇದೆಯೆಂದು ಗ್ರಹಿಸಬೇಕು. ಹಾಗೆಯೇ ಯಾರು ಹೇಳುತ್ತಾರೊ, ಅವನನ್ನೇ ಗುರುವಾಗಿ ಲೆಕ್ಕಿಸಬೇಕು. ಪ್ರಕೃತಿ ಸಂಬಂಧ ಐದು ಶಾಸ್ತ್ರಗಳು, 64 ವಿದ್ಯೆಗಳು ಪ್ರಪಂಚ ಹುಟ್ಟಿದಾಗಿನಿಂದ ಬೋಧಿಸಲ್ಪಡುತ್ತಲೇ ಇವೆ. ಷಟ್‌ಶಾಸ್ತ್ರಗಳಲ್ಲಿ ಒಂದು ಬ್ರಹ್ಮವಿದ್ಯಾಶಾಸ್ತ್ರ ಮಾತ್ರ ಸೃಷ್ಟಿ ಆದಿಯಲ್ಲಿಯೇ ಸಂಪೂರ್ಣವಾಗಿ ಬೋಧಿಸಲ್ಪಟ್ಟಿದೆ. ಸೃಷ್ಟ್ಯಾದಿಯಿಂದ ಐದುಶಾಸ್ತ್ರಗಳು ಬಿಡುವಿಲ್ಲದೆ ಬೋಧಿಸಲ್ಪಡುತ್ತಿದ್ದರೂ, ಅವು ಇಲ್ಲಿಯವರೆಗೂ ಪೂರ್ತಿಯಾಗಿ ಬೋಧಿಸಲ್ಪಡಲಿಲ್ಲವೆಂದು, ಇನ್ನೂ ತಿಳಿದುಕೊಳ್ಳಬೇಕಾಗಿರುವುದು ಎಷ್ಟೋ ಇದೆಯೆಂದು ತಿಳಿಯುತ್ತಿದೆ. ಬ್ರಹ್ಮವಿದ್ಯೆ ಸೃಷ್ಟಿಆದಿಯಲ್ಲಿಯೇ ಬೋಧಿಸಲ್ಪಟ್ಟರೂ ಅದು ಸಂಪೂರ್ಣವಾಗಿ ಮೊದಲೆ ತಿಳಿದರೂ, ಅದನ್ನು ಮನುಷ್ಯ ಮರೆತುಹೋಗುತ್ತಿದ್ದಾನೆ. ಆದ್ದರಿಂದ ಬ್ರಹ್ಮವಿದ್ಯೆಯನ್ನು ಆಗಾಗ ಪುನಃ ಜ್ಞಾಪಕ ಮಾಡಬೇಕಾಗಿ ಬಂದಿದೆ. ಬ್ರಹ್ಮವಿದ್ಯೆಯನ್ನು ಯಾವಾಗ ಜ್ಞಾಪಕ ಮಾಡಿದರೂ, ಆಗಲಾದರೂ ಅದನ್ನು ಗುರುವೇ ಹೇಳುತ್ತಾನೆ. ಗುರುವು ಹೇಳಿರುವುದನ್ನು ನಂತರ ಮನುಷ್ಯರು ಯಾರಾದರೂ ಬೋಧಕರಾಗಿ ಹೇಳಬಹುದು ಆದರೆ, ಗುರುಗಳಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಗುರುವಾಗಿ ಒಬ್ಬ ಭಗವಂತನೊಬ್ಬನೆ ಹೇಳುತ್ತಾನೆ. ಈ ವಿಷಯವನ್ನು ಇಲ್ಲಿಗೆ ನಿಲ್ಲಿಸಿ ಮತ್ತೊಂದು ಪ್ರಶ್ನೆಯನ್ನು ನೋಡೋಣ.

**ಪ್ರಶ್ನೆ :–** ಆರೋಗ್ಯ ರಂಗದಲ್ಲಿ ಅಶಾಸ್ತ್ರೀಯ ಚಿಕಿತ್ಸೆಗಳು ಹೊರಗಿಡುವುದಕ್ಕೆ ಒಂದು ಸಂಘ ಕೆಲಸಮಾಡುತ್ತಿದೆ. ವಿಲಿಯಮ್ ಜಾರ್ವಿಸ್ ಅದಕ್ಕೆ ಅಧ್ಯಕ್ಷನು. ಅಕ್ಯೂಪಂಕ್ಚರ್, ಹೋಮಿಯೊ, ಕೈರೋಪ್ರಾಕ್ಟಿಸ್ ಮೊದಲಾದ ವೈದ್ಯ ವಿಧಾನಗಳಿಂದ ಉಂಟಾಗುವ ಹಾನಿಯನ್ನು, ಅಶಾಸ್ತ್ರೀಯತೆಯನ್ನು (ಶಾಸ್ತ್ರಿಯ ಹೇತುವಾದ, ಜನವರಿ 1998 ರಲ್ಲಿ) ಹೊರಗಿಟ್ಟಿದ್ದಾರೆ. ಈ ವಿಷಯವನ್ನು ಕುರಿತು ನೀವೇನನ್ನುತ್ತೀರಾ?

**ಉತ್ತರ :–** ನೀವು ಯಾವ ಪ್ರಶ್ನೆಯನ್ನು ಕೇಳಿದರೂ ಅದು ಆಧ್ಯಾತ್ಮಿಕಕ್ಕೆ ಸಂಬಂಧಿಸಿದ ಪ್ರಶ್ನೆಯನ್ನು ಕೇಳಿರಿ. ಹಾಗಲ್ಲದೆ ಇತರ ರಂಗಗಳಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ನಾನು ಉತ್ತರವನ್ನು ಕೊಡುವುದಿಲ್ಲ. ನೀವು ಕೇಳಿದ ಪ್ರಶ್ನೆಯಲ್ಲಿ ಸ್ವಲ್ಪವಾದರೂ ಆಧ್ಯಾತ್ಮಿಕಕ್ಕೆ ಸಂಬಂಧಿಸಿರುವುದಾಗಿದ್ದರೆ ಅದರಿಂದ ಪೂರ್ತಿ ಉತ್ತರವನ್ನು ಪಡೆಯಬಹುದು. ಈಗ ನೀವು ಕೇಳಿದ ಪ್ರಶ್ನೆ ಪೂರ್ತಿ ವೈದ್ಯರಂಗಕ್ಕೆ ಸಂಬಂಧಿಸಿರುವುದಾದರೂ, ಇದರಲ್ಲಿ ಸ್ವಲ್ಪ ಸೂಕ್ಷ್ಮಜ್ಞಾನ ಒಳಗೊಂಡಿದೆ. ಆದ್ದರಿಂದ ಈ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ ನೋಡಿರಿ. ರೋಗವನ್ನು ಕುರಿತು ತಿಳಿದು, ಆ ರೋಗವನ್ನು ರೋಗಿಯ ಶರೀರದಲ್ಲಿ ಇಲ್ಲದಹಾಗೆ ಮಾಡುವುದಕ್ಕೆ ಮಾಡುವ ವಿಧಾನವನ್ನು ವೈದ್ಯವಿಧಾನ ಎನ್ನುತ್ತೇವೆ. ಯಾವ ವೈದ್ಯ ವಿಧಾನವಾದರೂ ರೋಗವನ್ನು ಶಾಂತಿಮಾಡುವುದಕ್ಕೆ ಇದೆಯೆಂದು ಹೇಳಬಹದು. ಅಂಥವುಗಳಲ್ಲಿ ಈ ಮಧ್ಯಕಾಲದಲ್ಲಿ ಚೈನಾದಿಂದ ಅಕ್ಯುಪ್ರೆಸರ್, ಅಕ್ಯುಪಂಚರ್ ವೈದ್ಯವೂ, ಜರ್ಮನಿಯಿಂದ ಹೋಮಿಯೋವೈದ್ಯವೂ ಬಂದಿವೆ. ಅಮೆರಿಕಾದಿಂದ ಅಲೋಪತಿವೈದ್ಯ ಬಂದರೂ, ಅರಬ್ ದೇಶದಿಂದ ಯುನಾನಿ ವೈದ್ಯ ಬಂದರೂ, ಉತ್ತರಕೊರಿಯಾದಿಂದ ಸುಜೊಕ್ ಥೆರಪಿ ಮೊದಲಾದ ವೈದ್ಯಗಳಿದ್ದರೂ ಇಂದೂ ದೇಶವಾದ ಭಾರತದೇಶದಲ್ಲಿ ಪೂರ್ವದಿಂದ ಆಯುರ್ವೇದವೈದ್ಯವಿದೆ. ಅಷ್ಟೇಯಲ್ಲದೆ ಮಂತ್ರವೈದ್ಯ, ಅಂತ್ರವೈದ್ಯ ಅನ್ನುವವು ಇವೆ. ಈ ಮೂರು ವೈದ್ಯಗಳಿಗೆ ಮೊದಲು ತವರುಮನೆ ಭಾರತದೇಶದಲ್ಲಿನ ಕೇರಳರಾಷ್ಟ್ರವೆಂದೇ ಹೇಳಬಹುದು. ಆದಿಯಿಂದ ಮೂರು ವೈದ್ಯಗಳು ನಮ್ಮದೇಶದಲ್ಲಿ ಇದ್ದರೂ, ನಾಗರಿಕತೆ ಬೆಳೆದಂತೆಲ್ಲ ಸ್ವದೇಶವೈದ್ಯದ ಮೇಲೆ ಆಸಕ್ತಿ ಕಡಿಮೆಯಾಗಿ, ವಿದೇಶಿವೈದ್ಯದ ಮೇಲೆ ಶ್ರದ್ಧೆ ಬೆಳೆದಿದೆ. ಆದ್ದರಿಂದ ಇತರ ದೇಶ ವೈದ್ಯವಿಧಾನಗಳು ಎಲ್ಲಾ ನಮ್ಮ ಭಾರತದೇಶದಲ್ಲಿ ಇವೆ. ಎಷ್ಟು ವೈದ್ಯಗಳಿದ್ದರೂ ಅವುಗಳಲ್ಲಿ ಅಲ್ಲೋಪತಿ ವೈದ್ಯವನ್ನು ಶಾಸ್ತ್ರಬದ್ಧತೆಯಾದುದೆಂದು, ಉಳಿದ ವಿಧಾನಗಳೆಲ್ಲವನ್ನು ಅಶಾಸ್ತ್ರೀಯತೆ ಹೊಂದಿರವವೆಂದು ಹೇಳುವುದು ಕೆಲವರಿಗೆ ಅಭ್ಯಾಸವಾಗಿದೆ. ಶಾಸ್ತ್ರೀಯತೆ ಎಂದರೆ ಏನೊ ತಿಳಿಯದವರು ಕೂಡಾ ತಮಗೆ ಇಷ್ಟ ಇಲ್ಲದಿರುವವು, ತಮಗೆ ತಿಳಿಯದಿರುವವುಗಳನ್ನು

ಅಶಾಸ್ತ್ರೀಯವಾದವುಗಳು ಎನ್ನುತ್ತಿದ್ದಾರೆ. ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರವು ಎಷ್ಟು ಅಗತ್ಯವೋ, ಹಾಗೆ ಒಂದು ವಿಷಯವನ್ನು ವಿಮರ್ಶಿಸುವುದಕ್ಕು ಕೂಡಾ ಶಾಸ್ತ್ರ ಅಷ್ಟೇ ಅಗತ್ಯವೆಂಬ ಮಾತನ್ನು ಮರೆತುಹೋದವರು, ಸ್ವಲ್ಪವೂ ಶಾಸ್ತ್ರಬದ್ಧತೆಯಿಂದ ಹೊಡೆದುಹಾಕದಂತೆ, ಉಳಿದವುಗಳಲ್ಲಿರುವ ಅಶಾಸ್ತ್ರೀಯತೆ ಏನೊ ಹೇಳದಂತೆ, ಮೂಢವಾಗಿ ತಮಗೆ ತಿಳಿಯದವುಗಳನ್ನು ಮೂಢನಂಬಿಕೆ, ಅಶಾಸ್ತ್ರೀಯ ಅನ್ನುತ್ತಿದ್ದಾರೆ.

ಅಲ್ಲೊಪತಿ ವೈದ್ಯವನ್ನು ಸಮರ್ಥಿಸುವವರು, ಹೋಮಿಯೊಪತಿ ವೈದ್ಯವನ್ನು ವಿಮರ್ಶಿಸುತ್ತಿದ್ದಾರೆ. ಹೋಮಿಯೊ ವೈದ್ಯದಲ್ಲಿ ಔಷಧಿಯೇ ಇಲ್ಲವೆಂದು, ಹೋಮಿಯೊ ವೈದ್ಯ ಪೂರ್ತಿ ಅಶಾಸ್ತ್ರೀಯವೆಂದು ಅನ್ನುತ್ತಿದ್ದಾರೆ. ಅಲೋಪತಿ ವೈದ್ಯ ಪೂರ್ತಿ ಶಾಸ್ತ್ರಬದ್ಧವಾದಾಗ, ಹೋಮಿಯೊ ಹೇಗೆ ಅಶಾಸ್ತ್ರೀಯವಾಗಿದೆಯೋ ವಿವರಿಸದಂತೆ, ಅದರಲ್ಲಿ ಔಷಧಿಯೇ ಇಲ್ಲ ಅನ್ನುವುದು ಸರಿಯಾದ ವಿಧಾನವಾ! ಎಂದು ಕೇಳುತ್ತಿದ್ದೇವೆ. ಹೋಮಿಯೊವೈದ್ಯ ಶಾಸ್ತ್ರಬದ್ಧತೆ ಇಲ್ಲದಿರುವುದಾದರೆ, ಅದನ್ನು ಅನುಸರಿಸಿ ಅಲೋಪತಿ ವೈದ್ಯ ಕೂಡಾ ಶಾಸ್ತ್ರಬದ್ಧತೆ ಇಲ್ಲದಿರುವುದೆಂದೇ ಹೇಳಬಹುದು. ಹೇಗೆಂದರೆ! ಉದಾಹರಣೆಗೆ ಅಲೋಪತಿವೈದ್ಯದಲ್ಲಿ ಒಂದು ರೋಗ ಭವಿಷ್ಯತ್ತಿನಲ್ಲಿ ಬರದಂತಿರುವುದಕ್ಕೆ ಟೀಕಾಗಳು ಹಾಕುತ್ತಿದ್ದಾರೆ. ಮಶೂಚಿ (ದೊಡ್ಡಅಮ್ಮ) ಎಂಬ ರೋಗವನ್ನು ಇಲ್ಲದಂತೆ ಮಾಡುವುದಕ್ಕೆ ಆ ರೋಗ ಭವಿಷ್ಯತ್ತಿನಲ್ಲಿ ಯಾವಾಗಲೂ ಬಾರದಂತಿರುವುದಕ್ಕೆ ಮನುಷ್ಯನ ಶರೀರದಲ್ಲಿ ರೋಗನಿರೋಧಕಶಕ್ತಿಯನ್ನು ಬೆಳೆಸುವುದಕ್ಕೆ ಮೊದಲು ಕೊಡುವ ಔಷಧಿಯನ್ನು ಟೀಕಾ ಅನ್ನುತ್ತಿದ್ದೇವೆ. ಟೀಕಾಔಷಧಿ ಸೂಜಿರೂಪದಲ್ಲಿ ಇರಬಹುದು ಇಲ್ಲವೆ ಹನಿಗಳ ರೂಪದಲ್ಲಿ ಇರಬಹುದು. ಪೋಲಿಯೊ ರೋಗ ಬಾರದಂತಿರುವುದಕ್ಕೆ ಪ್ರಾರಂಭದಲ್ಲಿಯೇ ಪೊಲಿಯೊಔಷಧಿಯನ್ನು ಹನಿಗಳರೂಪದಲ್ಲಿ ಚಿಕ್ಕವಯಸ್ಸಿನಲ್ಲಿಯೇ ಕೊಡುವುದು ಎಲ್ಲರಿಗೂ ತಿಳಿದ ವಿಷಯವೇ. ಅದೇ ವಿಧವಾಗಿ ಮಶೂಚಿ ರೋಗ ಬಾರದಂತಿರುವುದಕ್ಕೆ ಸೂಜಿರೂಪದಲ್ಲಿ ಔಷಧಿಯನ್ನು ಶರೀರದೊಳಗೆ ಕಳುಹಿಸುತ್ತಿದ್ದಾರೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ! ಯಾವಾಗಲೊ ಹತ್ತು

ವರ್ಷಗಳ ನಂತರ ರೋಗ ಬರದಂತಿರುವುದಕ್ಕೆ ಈಗ ಔಷಧಿಹಾಕಿದರೆ ಅಷ್ಟುಕಾಲ ಆ ಔಷಧಿ ಶರೀರದಲ್ಲಿ ಇರುತ್ತದಾ? ಭೌತಿಕಶಾಸ್ತ್ರದ ಪ್ರಕಾರ ಶರೀರದೊಳಗೆ ಸೇರಿದ ಔಷಧಿಕೂಡಾ ಆಗ ಮಾತ್ರವೇ ವಿನಿಯೋಗಿಸಲ್ಪಟ್ಟು ನಂತರ ಬದಲಾವಣೆ ಹೊಂದಿರುವುದಾಗಿ ಮೂತ್ರದ ಮೂಲಕ ಹೊರಗೆಹೋಗುತ್ತದೆಂದು ತಿಳಿಸಲಾಗಿದೆ. ಅಂತಹದರಲ್ಲಿ ಮೊದಲೇ ಔಷಧಿ ಬಳಸಿದರೆ ಅದು ಭವಿಷ್ಯತ್ತಿನಲ್ಲಿ ಯಾವಾಗಲೊ ಹತ್ತು ಇಲ್ಲವೆ ಹದಿನೈದು ವರ್ಷಗಳ ನಂತರ ಬರುವ ರೋಗವನ್ನು ನಿರೋಧಿಸುತ್ತದಾ? ಅಷ್ಟುಕಾಲ ಶರೀರದಲ್ಲಿ ಔಷಧಿ ಇರುವುದಿಲ್ಲ ಅಲ್ಲವೆ! ಎಂದು ಕೇಳುವುದಕ್ಕೆ ಅವಕಾಶ ಇದೆ. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ.

ಶರೀರದಲ್ಲಿ ರೋಗ ಇದ್ದಾಗ ರೋಗಕ್ಕೆ ವಿರುದ್ಧವಾಗಿ, ರೋಗಕ್ರಿಮಿಗಳು ಸಾಯುವಂತೆ ಔಷಧಿಯನ್ನು ಕೊಡುವುದು ನಡೆಯುತ್ತಿದೆ. ರೋಗಕ್ಕೆ ವಿರುದ್ಧವಾಗಿ ಕೊಟ್ಟಿರುವ ಔಷಧಿ ಆಗ ಇರುವ ರೋಗವನ್ನು ಶರೀರದಿಂದ ಇಲ್ಲದಂತೆ ಮಾಡುವುದಕ್ಕೆ, ಆ ರೋಗಕ್ಕೆ ವಿರುದ್ಧದಿಶೆಯಲ್ಲಿ ಕೆಲಸ ಮಾಡುತ್ತಿದೆ. ಟೀಕಾರೂಪದಲ್ಲಿ ಮೊದಲೇ ಕೊಡುವ ಔಷಧಿರೋಗಕ್ಕೆ ಅನುಕೂಲವಾಗಿ ಇರುವುದು. ರೋಗ ಇರುವಾಗ ಕೊಡುವ ಔಷಧಿ ರೋಗಕ್ಕೆ ಪ್ರತಿಕೂಲವಾಗಿ ಇರುತ್ತದೆ. ರೋಗಕ್ರಿಮಿಗಳನ್ನು ಸಾಯಿಸುವುದಾಗಿ ಇರುತ್ತದೆ. ಆದರೆ ಟೀಕಾದಲ್ಲಿ ಕೊಡುವಔಷಧಿ ರೋಗಕ್ರಿಮಿಗಳನ್ನು ಹೊಂದಿ, ರೋಗವನ್ನು ಉಂಟುಮಾಡುವುದಾಗಿರುತ್ತದೆ. ರೋಗವನ್ನು ಭವಿಷ್ಯತ್ತಿನಲ್ಲಿ ಬರದಂತೆ ಮಾಡುವುದಕ್ಕೆ ಈಗಲೇ ಆ ರೋಗವನ್ನು ಶರೀರದೊಳಗೆ ಸ್ವಲ್ಪ ಏರಿಸುವುದನ್ನು ಟೀಕಾ ಹಾಕುವುದು ಅನ್ನುತ್ತಿದ್ದೇವೆ. ಟೀಕಾ ಪದ್ಧತಿ ಭವಿಷ್ಯತ್ತಿನಲ್ಲಿ ರೋಗವನ್ನು ಇಲ್ಲದಂತೆ ಮಾಡುವುದಕ್ಕೆ ಎಂದು ಹೇಳಿದಾಗ ಈಗಲೇ ರೋಗಕ್ರಿಮಿಯನ್ನು ಶರೀರದೊಳಗೆ ಏರಿಸುವುದು ಏನು? ಎಂಬ ಪ್ರಶ್ನೆ ಬರುತ್ತದೆ ಅಲ್ಲವೆ! ಅದಕ್ಕೆ ಉತ್ತರ ಏನೆಂದರೆ! ಬಲಹೀನಪಡಿಸದ ರೋಗಕ್ರಿಮಿಯನ್ನು ಶರೀರದೊಳಗೆ ಕಳಿಸುವುದರಿಂದ,ಶರೀರದಲ್ಲಿ ಸಹಜ ಶಕ್ತಿಯಾದ ರೋಗನಿರೋಧಕಶಕ್ತಿ

ತಯಾರಾಗಬಲ್ಲದೆಂಬ ಸೂತ್ರದ ಪ್ರಕಾರ, ಟೀಕಾಪದ್ಧತಿಯಲ್ಲೆ ರೋಗವನ್ನೇ ಶರೀರದೊಳಗೆ ಏರಿಸುವುದು ನಡೆಯುತ್ತಿರುತ್ತದೆ. ಆರೋಗ್ಯವಾದ ಶರೀರದೊಳಗೆ ಬಲಹೀನವಾದ ರೋಗಕ್ರಿಮಿಯನ್ನು ಕಳುಹಿಸುವುದರಿಂದ, ಶರೀರದಲ್ಲಿ ಆ ರೋಗಕ್ಕೆ ವಿರುದ್ಧವಾದ ಔಷಧಿ ತಯಾರಾಗಿ, ಆ ಕ್ರಿಮಿಯನ್ನು ಸಾಯಿಸುವು ದರಿಂದ, ಶರೀರದೊಳಗೆ ಭವಿಷ್ಯತ್ತಿನಲ್ಲಿ ಯಾವಾಗ ಆ ರೋಗಕ್ರಿಮಿ ಪ್ರವೇಶಿಸಿದರೂ, ಶರೀರದಲ್ಲಿನ ರೋಗನಿರೋಧಕಶಕ್ತಿ ತಕ್ಷಣ ಗುರುತಿಸಿ ರೋಗಕ್ರಿಮಿಯನ್ನು ಸಾಯಿಸಿಹಾಕುತ್ತದೆ. ಹಾಗೆ ಶರೀರದಲ್ಲಿ ಮೊದಲೇ ಆ ರೋಗ ಕ್ರಿಮಿ ವಿಷಯ ಟೀಕಾ ಮೂಲಕ ತಿಳಿದಿರುವುದರಿಂದ, ಶರೀರ ಸುಲಭವಾಗಿ ಆ ರೋಗಕ್ರಿಮಿಗೆ ವಿರುದ್ಧವಾದ ಔಷಧಿಯನ್ನು ಶರೀರದಲ್ಲಿಯೇ ತಯಾರು ಮಾಡಿಕೊಳ್ಳುತ್ತಿದೆ. ಆದ್ದರಿಂದ ಮೊದಲೆ ಟೀಕಾ ಹಾಕಲ್ಪಟ್ಟ ರೋಗಗಳು ನಂತರ ಶರೀರದೊಳಗೆ ಬರಲಾರವು. ರೋಗಕ್ರಿಮಿಯನ್ನು ಮೊದಲೆ ಶರೀರಕ್ಕೆ ತೋರಿಸುವುದಕ್ಕೆ ರೋಗಕ್ರಿಮಿಯನ್ನು ಶರೀರದೊಳಗೆ ಕಳಿಸುವುದೆ ಟೀಕಾಪದ್ಧತಿ ಅನ್ನುತ್ತಿದ್ದೇವೆ.

ಅಲ್ಲೊಪತಿವೈದ್ಯ ವಿಧಾನದಲ್ಲಿ ಪ್ರಸ್ತುತ ರೋಗಕ್ಕೆ ವಿರುದ್ಧವಾಗಿ ಔಷಧಿ ಕೊಡುವುದು ನಡೆಯುತ್ತಿದೆ. ಹಾಗೆಯೇ ಭೌವಿಷ್ಯತ್ತಿನಲ್ಲಿ ಬರುವಂತಹ ರೋಗಕ್ಕೆ ಮೊದಲೆ ಶರೀರದಲ್ಲಿ ರೋಗನಿರೋಧಕಶಕ್ತಿಯನ್ನು ತಯಾರು ಮಾಡುವುದಕ್ಕೆ ರೋಗಕ್ಕೆ ಅನುಕೂಲವಾದ ಔಷಧಿಯನ್ನು ಬಳಸುವುದು ನಡೆಯುತ್ತಿದೆ. ಅಲ್ಲೋಪತಿಯಲ್ಲಿರುವ ಎರಡು ವಿಧಾನಗಳನ್ನು ತಿಳಿದ ಯಂ. ಡಿ ಡಾಕ್ಟರ್ (ಅಲ್ಲೊಪತಿ ಡಾಕ್ಟರ್ ಸಾಮ್ಯೂಯೇಲ್) ಅಲ್ಲೊಪತಿಯಲ್ಲಿನ ಟೀಕಾಪದ್ಧತಿಯನ್ನು ಇಲ್ಲವೆ ಟೀಕಾ ಸೂತ್ರವನ್ನು ಮಾತ್ರ ತೆಗೆದುಕೊಂಡು ಅದನ್ನು ಒಂದನ್ನೆ ಅಭಿವೃದ್ಧಿಪಡಿಸಿ, ಅದನ್ನು ಪ್ರತ್ಯೇಕವಾದ ವೈದ್ಯವಾಗಿ ಹೋಮಿಯೊಪತಿ ವೈದ್ಯ ಅಂದಿದ್ದಾನೆ. ವಾಸ್ತವಕ್ಕೆ ಅಲ್ಲೋಪತಿ ವ್ಯದ್ಯದಲ್ಲಿನ ಒಂದು ಭಾಗವೇ ಹೋಮಿಯೊಪತಿ. ಅಂತಹದರಲ್ಲಿ ಹೋಮಿಯೊ ಅಶಾಸ್ತ್ರಿಯ ಹೇಗೆ ಆಗುತ್ತದೆ? ಅಲ್ಲೊಪತಿ ಶಾಸ್ತ್ರವಾದಾಗ ಹೋಮಿಯೊಪತಿ ಕೂಡ ಶಾಸ್ತ್ರವೇ ಆಗುತ್ತದೆ.

ಹೋಮಿಯೊಪತಿ ಒಂದರ ಪೂರ್ವಾಪರಾಗಳು ತಿಳಿಯದವರು, ಬಾಯಿಂದ ದೊಡ್ಡದಾಗಿ ಮಾತನಾಡಿದರೆ ಹಾಡು, ಚಿಕ್ಕದಾಗಿ ಮಾತನಾಡಿದರೆ ಮಾತು ಎಂದು ಹೇಳಿದಂತಿದೆ. ಒಂದುಕಡೆ ಮಾತನಾಡಿದರೆ ಮಾತು ಅನ್ನುತ್ತಾ, ದೊಡ್ಡದಾಗಿ ಮಾತನಾಡಿದರೆ ಹಾಡು ಅನ್ನುವುದೇನು? ಬಾಯಿಂದ ದೊಡ್ಡದಾಗಿ ಮಾತನಾಡಿದರೂ, ಚಿಕ್ಕದಾಗಿ ಮಾತನಾಡಿದರೂ ಮಾತೇ ಅನ್ನಲಾಗುತ್ತದಾಗಲಿ, ಹಾಡು ಅನ್ನಲಾಗುವುದಿಲ್ಲ ಅಲ್ಲವೆ! ಅದೇ ವಿಧವಾಗಿ ಅಲ್ಲೋಪತಿಯಲ್ಲಿ ಎರಡು ಭಾಗಗಳಿರುವಾಗ ಒಂದು ಭಾಗ ಶಾಸ್ತ್ರವಾದರೆ, ಮತ್ತೊಂದು ಭಾಗ ಕೂಡಾ ಶಾಸ್ತ್ರವೇ ಆಗುತ್ತದಾಗಲಿ ಅಶಾಸ್ತ್ರ ಹೇಗಾಗುತ್ತದೆ? ಹಾಗೆ ಅಶಾಸ್ತ್ರವೆಂದರೆ ಅದನ್ನು ತಿಳುವಳಿಕೆ ಇಲ್ಲದ ಮಾತುಯೆಂದು ಅನ್ನಬಹುದು. ಹೋಮಿಯೊದಲ್ಲಿ ಔಷಧಿ ಇಲ್ಲ ಎನ್ನುತ್ತಿದ್ದಾರೆ, ಅದನ್ನು ಕೇಳಿದ ಬಹಳಜನ ಆ ಮಾತನ್ನು ನಿಜವೇನೊ ಎಂದು ಅಂದುಕೊಳ್ಳುತ್ತಿದ್ದಾರೆ. ಹೋಮಿಯೊದಲ್ಲಿನ ವಾಸ್ತವಿಕತೆ ಯನ್ನು ತಿಳಿಯುವುದಕ್ಕೆ ಅದನ್ನು ಕುರಿತು ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

ಮನುಷ್ಯನ ಶರೀರದೊಳಗೆ ಪ್ರವೇಶಿಸಿದ ರೋಗವನ್ನು ಎದುರುಗೊಂಡು ಅದರಿಂದ ರಕ್ಷಣೆ ಕಲ್ಪಿಸುವುದು ಔಷಧ. ರೋಗಕ್ಕೆ ವಿರುದ್ಧವಾದುದು ಔಷಧ. ಒಂದು ರೋಗಕ್ಕೆ ಪೂರ್ತಿ ವಿರುದ್ಧವಾದ ಔಷಧ ಎರಡು ವಿಧಗಳು ಇದೆ. ಒಂದು ಮನುಷ್ಯ ತಯಾರು ಮಾಡುವುದು. ಎರಡು ಶರೀರದಲ್ಲಿ ಯಾರಿಗೂ ತಿಳಿಯದ ಆತ್ಮ ತಯಾರು ಮಾಡುವುದು. ಬಾಹ್ಯದಲ್ಲಿರುವ ಮನುಷ್ಯನ ಮೂಲಕ ತಯಾರು ಮಾಡಲ್ಪಡುವ ಔಷಧಗಳು ಈದಿನ ಔಷಧಿಷಾಪುಗಳಲ್ಲಿ ಲಭ್ಯವಾಗುತ್ತಿವೆ. ಒಬ್ಬ ವ್ಯಕ್ತಿಗೆ ಒಂದು ರೋಗ ಬಂದರೆ, ಡಾಕ್ಟರು ಆ ರೋಗಕ್ಕೆ ಸರಿಹೋಗುವ ಔಷಧಿಯನ್ನು ಸೂಚಿಸಿದರೆ, ಅದನ್ನು ತೆಗೆದುಕೊಂಡು ಬಳಸುವುದೂ, ರೋಗವನ್ನು ಇಲ್ಲದಂತೆ ಮಾಡಿಕೊಳ್ಳುವುದೂ ನಡೆಯುತ್ತಿದೆ. ಮೂವರು ಮನುಷ್ಯರಿಗೆ ಒಂದೇ ರೋಗ, ಒಂದೇ ದಿನ ಬಂದಿದೆ ಅಂದುಕೊಳ್ಳೋಣ. ಅವರಲ್ಲಿ ಇಬ್ಬರು ಒಂದೇ ಡಾಕ್ಟರ್ ಹತ್ತಿರಕ್ಕೆ ಹೋದರೆ ಡಾಕ್ಟರು ಔಷಧಿಯನ್ನು ಕೊಟ್ಟರೆ, ಆ ಔಷಧಿಯನ್ನು ಇಬ್ಬರೂ ಕ್ರಮ ತಪ್ಪದೆ

ಬಳಸುವುದು ನಡೆದಿದೆ. ಮೂರನೆಯವನು ತನ್ನಹತ್ತಿರ ಹಣ ಇಲ್ಲದಿರುವುದರಿಂದ ಡಾಕ್ಟರ್ ಹತ್ತಿರಕ್ಕೆ ಹೋಗಲಿಲ್ಲ, ಔಷಧವನ್ನು ಬಳಸಲಿಲ್ಲ, ಡಾಕ್ಟರ್ ಹತ್ತಿರಕ್ಕೆ ಹೋಗಿ ರೋಗಕ್ಕೆ ಔಷಧಿಯನ್ನು ಬಳಸಿದರು ಅವರಲ್ಲಿ, ಒಬ್ಬನಿಗೆ ಮೂರು ದಿನಗಳಿಗೆ  ಆ ರೋಗ ಗುಣವಾಗಿ ಹೋಗಿದೆ ಎರಡನೆಯವನಿಗೆ ಐದುದಿನ ಗಳವರೆಗೂ ಔಷಧಿಬಳಸಿದರೆ. ಐದು ದಿನಗಳಿಗೆ ಪೂರ್ತಿಯಾಗಿ ಗುಣವಾಗಿದೆ. ಮೂರನೆಯವನು ಡಾಕ್ಟರ್ ಹತ್ತಿರಕ್ಕೆ ಹೋಗಲಿಲ್ಲ, ಔಷಧಿಯನ್ನು ಬಳಸಲಿಲ್ಲ. ಆದರೂ ಆತನ ರೋಗವು ನಾಲ್ಕುದಿನಗಳಿಗೆ  ಪೂರ್ತಿಯಾಗಿ ಗುಣವಾಗಿ ಹೋಗಿದೆ. ಇಲ್ಲಿ ಚೆನ್ನಾಗಿ ಗಮನಿಸಿದರೆ ಒಂದೇ ರೋಗವು ಒಂದೇ ದಿನ ಒಂದೇ ಜಾತಿ ಮನುಷ್ಯರಿಗೆ ಬಂದಾಗ, ಒಂದೇ ಔಷಧಿಯನ್ನು ಬಳಸಿದರು ಇಬ್ಬರಲ್ಲಿ ಒಬ್ಬರಿಗೆ ಮೂರು ದಿನಗಳಿಗೆ, ಎರಡನೆಯವನಿಗೆ ಐದು ದಿನಗಳಿಗೆ ರೋಗ ಹೋಗಿದೆ. ಇಬ್ಬರು ವ್ಯಕ್ತಿಗಳು ಒಂದೇ ಔಷಧಿಯನ್ನು ಬಳಸಿದರೂ, ಒಬ್ಬನಿಗೆ ಮೂರು ದಿನಗಳಿಗೆ ಹೋದ ರೋಗ, ಮತ್ತೊಬ್ಬನಿಗೆ ಎರಡು ದಿನಗಳು ಆಲಸ್ಯವಾಗಿ ಗುಣವಾಗಿದೆ. ಅಲ್ಲಿ ಎರಡು ದಿನಗಳು ವ್ಯತ್ಯಾಸ ಏಕೆ ಬಂದಿದೆಂಬ ಪ್ರೆಶ್ನೆ ಬರುತ್ತದೆ. ಅಷ್ಟೇ ಅಲ್ಲದೆ ಅಸಲಿಗೆ ಯಾವುದೇ ಔಷಧಿಯನ್ನು ಬಳಸದವನಿಗೆ ನಾಲ್ಕು ದಿನಗಳಿಗೆ ಪೂರ್ತಿ ಗುಣವಾಗುವುದರಲ್ಲಿ ಕೂಡಾ ನಮಗೆ ಅದೇಗೆ ನಡೆದಿದೆಯೆಂಬ ಪ್ರೆಶ್ನೆಬರುತ್ತದೆ. ಔಷಧಿಯನ್ನು ಬಳಸಿದವರಲ್ಲಿ ಐದು ದಿನಗಳಿಗೆ ಒಬ್ಬನಿಗೆ ರೋಗಹೋದರೆ, ಔಷಧಿಯನ್ನು ಬಳಸದವನಿಗೆ ಒಂದುದಿನ ಮೊದಲೇ ಹೋಗುವುದು ಹೇಗೆ ಸಾಧ್ಯವಾಗಿದೆಯೆಂದು ಯಾರಾದರೂ ಕೇಳಬಹುದು, ಅದಕ್ಕೆ ಉತ್ತರವನ್ನು ನೋಡಿದರೆ, ಈ ವಿಧವಾಗಿ ಇದೆ.

ಯಾವ ರೋಗಕ್ಕಾದರೂ ಔಷಧಿ ಎರಡು ವಿಧಗಳಾಗಿ ತಯಾರಾಗುತ್ತಿದೆ ಯೆಂದು ತಿಳಿದುಕೊಂಡಿದ್ದೇವೆ. ಒಂದು ವಿಧದ ಔಷಧಿಯನ್ನು ಮನುಷ್ಯ ಬಾಹ್ಯವಾಗಿ ಮಾಡುತ್ತಿದ್ದಾನೆ. ಎರಡನೆ ವಿಧವಾಗಿ ಔಷಧಿಯನ್ನು ಶರೀರದಲ್ಲಿನ ಆತ್ಮವೇ ಮಾಡುತ್ತಿದೆ. ಔಷಧದಿಂದ ರೋಗ ನಿರೋಧಿಸಲ್ಪಡುತ್ತಿದೆ. ಈಗ ರೋಗ ಬಂದವರು ಮೂವರು, ಔಷಧಿಗಳು ಎರಡು ವಿಧಗಳು, ಔಷಧವನ್ನು

ಬಳಸಿದವರು ಇಬ್ಬರು, ಬಳಸದವನು ಒಬ್ಬನು ಎಂದು ಅಂದುಕೊಂಡಿದ್ದೇವೆ ಅಲ್ಲವೆ! ಇಲ್ಲಿಯೇ ನಮ್ಮಲೆಕ್ಕ ತಪ್ಪಾಗಿದೆ. ರೋಗಿಗಳು ಮೂವರು ವಾಸ್ತವವೇ, ಔಷಧಿಗಳು ಎರಡು ವಿಧಗಳು, ಒಂದು ಬಾಹ್ಯವಾಗಿ ಮನುಷ್ಯ ತಯಾರು ಮಾಡಿರುವುದು, ಎರಡು ಅಂತರಂಗದಲ್ಲಿ ಆತ್ಮ ಮಾಡಿರುವುದು, ರೋಗಕ್ಕೆ ಔಷಧಿ ಬಳಸಿದವರು ಹೊರಗೆ ತಿಳಿದು ಇಬ್ಬರಾದರೂ, ಒಬ್ಬರು ಬಳಸದಿದ್ದರೂ ವಾಸ್ತವಕ್ಕೆ ಮೂವರು ಬಳಸಿದ್ದಾರೆಂದೇ ಹೇಳಬಹುದು. ಬಾಹ್ಯವಾಗಿ ಮೂರನೆಯುವನು ಡಾಕ್ಟರು ಹತ್ತಿರಕ್ಕೆ ಹೋಗಲಿಲ್ಲ, ಔಷಧಿಯನ್ನು ತೆಗೆದುಕೊಳ್ಳಲಿಲ್ಲ. ಆದರೂ ಅಂತರಂಗದಲ್ಲಿಯೇ ಅಂದರೆ ಶರೀರದಲ್ಲಿಯೇ ಮೂರನೆಯವನಿಗೆ ಸ್ವತಹವಾಗಿ ಆತ್ಮವೇ ಔಷಧಿ ಕೊಟ್ಟಿದೆ. ರೋಗ ಬಂದಿರುವ ದಿನ ಮೊದಲ ಇಬ್ಬರು ರೋಗಿಗಳು ಬಾಹ್ಯವಾಗಿರುವ ಡಾಕ್ಟರ್ ಹತ್ತಿರ ಔಷಧಿಯನ್ನು ತೆಗೆದುಕೊಂಡರೆ, ಅದು ಪೂರ್ತಿಯಾಗಿ ಕೆಲಸ ಮಾಡುವುದಕ್ಕೆ ಒಬ್ಬನಿಗೆ ಮೂರುದಿನಗಳ ವ್ಯವಧಿ ಹಿಡಿಸಿದೆ. ಎರಡನೆಯವನಿಗೆ ಐದುದಿನಗಳ ವ್ಯವಧಿ ಹಿಡಿಸಿದೆ. ವಾಸ್ತವಕ್ಕೆ ಸರಿಯಾದ ಔಷಧಿಗೆ ಒಂದುದಿನದ ವ್ಯವಧಿಯಲ್ಲಿಯೇ ಆ ರೋಗ ಗುಣ ಆಗಬೇಕಾಗಿತ್ತು, ಸರಿಯಾದ ಔಷಧಿ ಬಳಸಿದರೂ ಒಬ್ಬನಿಗೆ ಮೂರು, ಮತ್ತೊಬ್ಬನಿಗೆ ಐದು ದಿನಗಳಕಾಲ ಹಿಡಿಸಿದೆ. ಆದರೆ ಮೂರನೆಯವನಿಗೆ ರೋಗ ಬಂದ ಮೂರನೆದಿನ ಆತ್ಮ ಔಷಧವನ್ನು ಶರೀರದಲ್ಲಿ ಒದಗಿಸುವುದು ನಡೆದಿದೆ. ಆತ್ಮ ಒದಗಿಸಿದ ಔಷಧಕ್ಕೆ ಮರುದಿನವೇ ರೋಗ ಹೋಗಿದೆ. ಬಾಹ್ಯವಾಗಿ ಮೂವರಿಗೆ ಒಂದೇ ದಿನ ರೋಗ ಬಂದರೂ, ಅವರಲ್ಲಿ ಇಬ್ಬರು ಹೊರಗಿರುವ ಡಾಕ್ಟರ್ ಕೊಟ್ಟಿರುವ ಔಷಧಿಯನ್ನು ಬಳಸಿದಾಗ, ಮೂರು ದಿನಗಳಿಗೆ ಒಬ್ಬನಿಗೆ, ಐದು ದಿನಗಳಿಗೆ ಎರಡನೆಯವನಿಗೆ ರೋಗ ಹೋಗುವುದು ನಡೆದಾಗ, ಹೊರಗಿನ ಔಷಧಿಯನ್ನು ಬಳಸಿದವನಿಗೆ ಆತ್ಮ ಒದಗಿಸಿದ ಔಷಧಿಯಿಂದ ರೋಗ ಮರುದಿನವೇ ಅಂದರೆ ನಾಲ್ಕನೆದಿನ ಹೋಗುವುದು ನಡೆದಿದೆ. ಆತ್ಮ ಕೊಟ್ಟಿರುವ ಔಷಧಿಗೆ ಎರಡನೆ ದಿನವೇ ರೋಗಹೋಗಿದೆ, ಡಾಕ್ಟರ್ ಕೊಟ್ಟಿರುವ ಔಷಧಿಗೆ ಒಬ್ಬರಿಗೆ ಮೂರು ದಿನಗಳು, ಎಡನೆಯವನಿಗೆ ಐದುದಿನಗಳ ಕಾಲ ಹಿಡಿದಿದೆ.

ಒಬ್ಬ ಡಾಕ್ಟರೇ, ಒಂದೇ ಔಷಧಿಯನ್ನು ಕೊಟ್ಟಾಗ ಒಬ್ಬನಲ್ಲಿ ಮೂರು ದಿನಗಳಿಗೆ, ಎರಡನೆಯವನಲ್ಲಿ ಐದುದಿನಗಳಿಗೆ ಕೆಲಸ ಮಾಡುವುದರಲ್ಲಿ ಹೇತುವು ಏನೋ ಮನುಷ್ಯರಿಗೆ ತಿಳಿದಿಲ್ಲ. ಈ ವಿಷಯವನ್ನು ಒಂದು ಪ್ರಶ್ನೆಯಾಗಿ ತೆಗೆದುಕೊಂಡು ನೋಡಿದರೆ, ಅದಕ್ಕೆ ಉತ್ತರ ಈ ವಿಧವಾಗಿ ಇದೆ. ರೋಗ ಬಂದಿರುವುದು ಶರೀರಕ್ಕೆ, ಶರೀರಕ್ಕೆ ಅಧಿಪತಿ ಅಥವಾ ಯಜಮಾನ ಆತ್ಮ. ಶರೀರದಲ್ಲಿ ನಡೆಯುವ ಪ್ರತಿ ಕೆಲಸವನ್ನು ಆತ್ಮವೇ ಮಾಡುತ್ತಿದೆ. ಆತ್ಮಕ್ಕೆ ತಿಳಿಯದಂತೆ ಮತ್ತು ಆತ್ಮ ಅನುಮತಿ ಇಲ್ಲದ್ದು ಶರೀರದಲ್ಲಿ ಏನು ನಡೆಯುವುದಕ್ಕು ಸಾಧ್ಯವಿಲ್ಲ. ಎಲ್ಲವೂ ಆತ್ಮಕ್ಕೆ ತಿಳಿದು, ಆತ್ಮ ಅನುಮತಿಯಿಂದಲೇ ನಡೆಯುತ್ತಿರುತ್ತದೆ. ಇಲ್ಲಿ ರೋಗಿ ಶರೀರದೊಳಗೆ ಹೊರಗಿನಿಂದ ಔಷಧಿಯನ್ನು ಬಳಸಿದಾಗ, ಅದು ಆತ್ಮಕ್ಕೆ ತಿಳಿದೇ ಒಳಗೆ ಹೋಗುತ್ತಿದೆ. ಹಾಗೆ ಬಳಸಿದ ಔಷಧಿ ಆತ್ಮ ಅನುಮತಿಯಿಂದಲೇ ಶರೀರದಲ್ಲಿ ಕೆಲಸ ಮಾಡಬೇಕಾಗಿರುತ್ತದೆ. ಇಬ್ಬರು ವ್ಯಕ್ತಿಗಳು ಒಂದೇ ರೋಗಕ್ಕೆ, ಒಂದೇ ದಿನ ಔಷಧಿಯನ್ನು ಡಾಕ್ಟರ್ ಹತ್ತಿರ ತೆಗೆದು ಕೊಂಡರೂ, ಆ ಔಷಧಿ ಶರೀರದಲ್ಲಿರುವ ಆತ್ಮ ಅನುಮತಿಯಿಂದಲೇ ಕೆಲಸ ಮಾಡಬೇಕಾಗಿರುತ್ತದೆ. ಆತ್ಮ ಒಪ್ಪಿಕೊಂಡಾಗಲೇ ಔಷಧಿ ಪ್ರಭಾವ ರೋಗದಮೇಲೆ ತೋರಿಸುತ್ತದೆ. ಆತ್ಮ ಒಬ್ಬನ ಶರೀರದಲ್ಲಿ ಎರಡು ದಿನಗಳಿಗೆ ಔಷಧಿಯನ್ನು ಒಪ್ಪಿಕೊಂಡರೆ, ಮೂರನೆದಿನ ಅವನಿಗೆ ರೋಗ ಗುಣವಾಗಿದೆ ಆದರೆ, ಎರಡನೆಯವನಿಗೆ ಅವನ ಶರೀರದಲ್ಲಿನ ಆತ್ಮ ಅವನು ತೆಗೆದುಕೊಂಡ ಔಷಧಿಯನ್ನು ನಾಲ್ಕುದಿನ ಒಪ್ಪಿಕೊಂಡರೆ, ಐದನೆದಿನ ಆತನ ರೋಗ ಹೋಗಿದೆ. ಆದ್ದರಿಂದ ರೋಗ ಇಬ್ಬರಲ್ಲಿ ಗುಣವಾಗುವುದಕ್ಕೆ ಒಬ್ಬನಿಗೆ ಮೂರುದಿನಗಳು, ಮತ್ತೊಬ್ಬನಿಗೆ ಐದುದಿನಗಳ ಕಾಲ ಹಿಡಿಸಿದೆ. ಇಬ್ಬರು ವ್ಯಕ್ತಿಗಳು ಬಾಹ್ಯ ಔಷಧವನ್ನು ಬಳಸಿದರೂ ಒಬ್ಬನ ಶರೀರದಲ್ಲಿ ಬಳಸಲ್ಪಟ್ಟ ಔಷಧಿ ಎರಡು ದಿನಗಳು ವ್ಯರ್ಥವಾಗಿಹೋಗಿದೆ. ಎರಡನೆಯವನ ಶರೀರದಲ್ಲಿ ನಾಲ್ಕುದಿನಗಳು ಬಳಸಲ್ಪಟ್ಟ ಔಷಧಿ ಆತ್ಮ ಅನುಮತಿ ಹೊಂದಲಿಲ್ಲ. ಆದ್ದರಿಂದ ಆ ನಾಲ್ಕುದಿನಗಳ ಔಷಧಿ ವ್ಯರ್ಥವಾಗಿ ಹೋಗಿದೆ.

ಆತ್ಮ ಅನುಮತಿ ಇಲ್ಲದ್ದು ಶರೀರದಲ್ಲಿ ಯಾವ ಕೆಲಸ ನಡೆಯುವುದಿಲ್ಲ. ಆದ್ದರಿಂದ ಬಳಸಲ್ಪಟ್ಟ ಔಷಧಿಗಳೆಲ್ಲ ಎಲ್ಲರ ಶರೀರಗಳಲ್ಲಿ ಒಂದೇ ವಿಧವಾಗಿ ಕೆಲಸ ಮಾಡುತ್ತಿಲ್ಲ. ಔಷಧಿಗಳು ಬಳಸಿದರೂ ಮರಣಿಸಿದವರು ಇದ್ದಾರೆ. ಔಷಧಿಗಳು ಬಳಸದಿದ್ದರೂ ಬದುಕಿದವರು ಇದ್ದಾರೆ. ಆತ್ಮ ಅಂದುಕೊಂಡರೆ ಏನಾದರೂ ಮಾಡಬಲ್ಲದು. ಒಂದು ಮಾತ್ರೆಯಲ್ಲಾಗಲಿ, ಒಂದು ಸೂಜಿಯಲ್ಲಾಗಲಿ, ಯಾವ ಔಷಧಿಯಿದೆ ಡಾಕ್ಟರ್‌ಗೆ ತಿಳಿದರೂ, ಅದು ಯಾರಲ್ಲಿ ಎಷ್ಟರಮಟ್ಟಿಗೆ ಕೆಲಸಮಾಡುತ್ತದೊ ಖಚ್ಚಿತವಾಗಿ ಹೇಳಲಾರರು. ಆದ್ದರಿಂದ ಕೆಲವರು ಅನುಭವವಿರುವ ಡಾಕ್ಟರ್ಸ್ "ನಾವು ಮಾಡುವುದೆಲ್ಲಾ ಮಾಡಿದ್ದೇವೆ, ನಂತರ ಮನುಷ್ಯ ಬದುಕುತ್ತಾನೊ ಇಲ್ಲವೊ, ರೋಗ ಹೋಗುತ್ತದೊ ಇಲ್ಲವೊ, ಅದು ನಮ್ಮ ಕೈಯಲ್ಲಿ ಇಲ್ಲ" ಎಂದು ಹೇಳುತ್ತಿದ್ದಾರೆ. ಹೊರಗಿನ ಔಷಧಿಗಳೆಲ್ಲ ಡಾಕ್ಟರ್‌ಗೆ ತಿಳಿದರೂ, ತನ್ನ ಮನೆಯಲ್ಲಿ ತನ್ನ ಮಗನಿಗೆ ರೋಗಬಂದರೆ, ತನಗೆ ತಿಳಿದ ಔಷಧಿಗಳಿಂದ ರೋಗವನ್ನು ಹೋಗಲಾಡಿಸುತ್ತೇನೆಂದು, ತನ್ನಮಗನನ್ನು ರೋಗದಿಂದ ರಕ್ಷಿಸಿಕೊಳ್ಳುತ್ತೇನೆಂಬ ನಂಬಿಕೆ ಡಾಕ್ಟರ್‌ಗಿಲ್ಲ. ಪೂರ್ವದಲ್ಲಿ ವೈದ್ಯರಂಗದಲ್ಲಿ ಪಂಡಿತನೆಂದು ಹೆಸರುವಾಸಿಯಾದ ಒಬ್ಬ ಯಂ.ಡಿ. ಡಾಕ್ಟರ್ ತನ್ನ ಮಗನಿಗೆ ಬಂದಿರುವ ರೋಗವನ್ನು ಹೋಗಲಾಡಿಸುವುದಕ್ಕೆ ವಿಶ್ವಪ್ರಯತ್ನ ಮಾಡಿ, ತನಗೆ ತಿಳಿದ ಔಷಧಿಗಳನ್ನೆಲ್ಲಾ ಬಳಸಿ ನೋಡಿದ್ದಾನೆ. ಆ ರೋಗಕ್ಕೆ ನಿರ್ದೇಶಿಸಲ್ಪಟ್ಟ ಯಾವ ಔಷಧಿಯೂ ಆ ರೋಗದ ಮೇಲೆ ಕೆಲಸಮಾಡಲಿಲ್ಲ. ಕೊನೆಗೆ ಆತನ ಕುಮಾರನು ಮರಣಿಸುವುದು ನಡೆದಿದೆ. ಕುಮಾರನು ಮರಣಿಸುವುದರಿಂದ ಆ ಡಾಕ್ಟರ್ ಬಹಳ ದುಃಖಪಟ್ಟಿದ್ದಾನೆ. ಆ ಡಾಕ್ಟರು ಸ್ವಲ್ಪ ಆಧ್ಯಾತ್ಮಿಕಚಿಂತನೆ ಹೊಂದಿದವನು, ಆದ್ದರಿಂದ ಶರೀರದಲ್ಲಿನ ರೋಗವನ್ನು ಶರೀರದಲ್ಲಿರುವ ದೇವರೇ ಗುಣಪಡಿಸಬೇಕಾಗಲಿ, ಮನುಷ್ಯ ಎಷ್ಟು ದೊಡ್ಡ ಡಾಕ್ಟರಾದರೂ ಗುಣ ಮಾಡಲಾರನೆಂಬ ಉದ್ದೇಶಕ್ಕೆ ಬಂದಿದ್ದಾನೆ. ಅಂತಹದರಲ್ಲಿ ಡಾಕ್ಟರಾಗಿರುವವನು ಮನುಷ್ಯನಿಗಿರುವ ರೋಗವನ್ನು ಒಳಗೆ ತಿಳಿಸಿ, ಈ ರೋಗವನ್ನು ಗುಣ ಮಾಡೆಂದು ಕೋರಿಕೊಳ್ಳಬೇಕಾಗಲಿ, ನಾನು ಗುಣ ಮಾಡುತ್ತೇನೆಂದು ಅಂದುಕೊಳ್ಳಬಾರದು ಅಂದುಕೊಂಡಿದ್ದಾನೆ. ಇಲ್ಲಿ

ಡಾಕ್ಟರ್ ಅಂದುಕೊಂಡಿರುವುದು ಒಳ್ಳೆಯ ಉದ್ದೇಶವೇ ಆದರೆ ದೇವರು ಏನು ಮಾಡುವುದಿಲ್ಲವೆಂದು, ದೇವರ ಸ್ಥಾನದಲ್ಲಿ ಆತ್ಮ ಇದ್ದು ಎಲ್ಲಾ ಕೆಲಸಗಳೂ ಮಾಡಿಸುತ್ತಿದೆಯೆಂದು ತಿಳಿಯದು. ಹಾಗೆ ತಿಳಿಯದೆಹೋದರೂ ಫರವಾಗಿಲ್ಲ, ತಾನು ಮಾಡುತ್ತಿದ್ದೇನೆಂದು ಅಂದುಕೊಳ್ಳುತ್ತಿಲ್ಲ, ಹಾಗೆ ನಾನು ಎಂಬ ಅಹಮ್‌ನ್ನು ಬಿಡುವುದು ಮುಖ್ಯ. ಯಾವ ವಿಧವಾಗಿಯಾದರೇನು ತಾನು ಏನು ಮಾಡಲಾರನೆಂದು ಶರೀರದಲ್ಲಿರುವವನು ರೋಗವನ್ನು ಗುಣ ಮಾಡುತ್ತಾನೆಂದು, ರೋಗವನ್ನು ಕುರಿತಾದ ಅಭ್ಯರ್ಥನ ಮಾತ್ರ ಮಾಡುವುದು ಡಾಕ್ಟರೊಂದರ ಮುಖ್ಯವಾದ ಕೆಲಸ ಎಂದು ಅಂದುಕೊಂಡಿದ್ದಾನೆ. ಈ ಮನುಷ್ಯನಿಗೆ ಈ ರೋಗವನ್ನು ಗುಣಮಾಡೆನ್ನುವುದಕ್ಕೆ, ಮನುಷ್ಯನಿಗಿರುವ ರೋಗಕ್ಕೆ ಗುರುತಾಗಿ ಶರೀರದೊಳಗೆ ಡಾಕ್ಟರಾದವನು ರೋಗವೊಂದರ ಗುರುತನ್ನು ಕಳಿಸಬೇಕೆಂದು ಕೊಂಡಿದ್ದಾನೆ. ರೋಗಿಗೆ ಯಾವ ರೋಗವಿದ್ದರೆ ಅದೇ ರೋಗಕ್ರಿಮಿಯನ್ನು ಆ ರೋಗಕ್ಕೆ ಗುರುತಾಗಿ ಶರೀರದೊಳಗೆ ಕಳಿಸುವುದರಿಂದ, ಆ ರೋಗವನ್ನು ಗುಣಮಾಡೆಂದು ದೇವರನ್ನು ಕೇಳಿದಂತಾಗುತ್ತದೆಂದು ಅಂದುಕೊಂಡಿದ್ದಾನೆ. ಹಾಗೆ ಅಭ್ಯರ್ಥಿಸಿದರೆ ಒಳಗಿರುವ ದೇವರು ಆ ರೋಗವನ್ನು ತಪ್ಪದೆ ಗುಣ ಮಾಡುತ್ತಾನೆಂಬ ನಂಬಿಕೆಯೊಳಗೆ ಆ ಯಂ.ಡಿ. ಡಾಕ್ಟರ್ ಬಂದಿದ್ದಾನೆ.

ನಂಬಿಕೆಯೆನ್ನುವುದು ಸತ್ಯ ಆಗಬಹುದು ಇಲ್ಲವೆ ಅಸತ್ಯವೂ ಆಗಬಹುದು. ನಂಬಿಕೆ ಸತ್ಯವಾದರೆ ಅದು ಯಥಾರ್ಥವಾಗುತ್ತದೆ. ಅಸತ್ಯವಾದರೆ ಮೂಢನಂಬಿಕೆಯಾಗುತ್ತದೆ. ತನ್ನ ನಂಬಿಕೆ ಮೂಢನಂಬಿಕೆಯಾ, ಸತ್ಯವಾದ ಯಥಾರ್ಥವಾ ಎಂದು ತಿಳಿಯುವುದಕ್ಕೆ ಒಂದುಬಾರಿ ತನ್ನ ಅನುಭವದೊಳಗೆ ನಂಬಿಕೆಯನ್ನು ತಂದುಕೊಂಡು ನೋಡಬೇಕು. ಅದಕ್ಕೋಸ್ಕರ ಯಂ.ಡಿ. ಡಾಕ್ಟರ್ ಒಬ್ಬ ರೋಗಿಗಿರುವ ರೋಗಕ್ರಿಮಿ ನಮೂನೆಯನ್ನು ರೋಗಿ ಶರೀರದೊಳಗೆ ಕಳಿಸಿ, ಶರೀರದೊಳಗಿರುವ ದೇವರನ್ನು (ಆತ್ಮವನ್ನು)ಆ ರೋಗವನ್ನು ಗುಣಪಡಿಸೆಂದು ಕೇಳಿದ್ದಾನಂತೆ! ಆಗಿನಿಂದ ಆ ರೋಗ ಗುಣವಾಗುವುದಕ್ಕೆ ಮೊದಲುಮಾಡಿದೆ. ಮನುಷ್ಯನಿಗಿರುವ ರೋಗ ಪೂರ್ತಿಯಾಗಿ ಗುಣವಾಗುವ

ವರೆಗೂ ಆ ಡಾಕ್ಟರವರು ರೋಗವೊಂದರ ಗುರುತನ್ನು ಶರೀರದೊಳಗೆ ಕಳಿಸುತ್ತಿರುವಾಗ ಆ ವಿಷಯವನ್ನು ಪ್ರತಿದಿನ ದೇವರನ್ನು ಕೇಳಿದಂತಿರುತ್ತದೆಂದು ಅಂದುಕೊಂಡು ಹಾಗೆಯೇ ಮಾಡಿದ್ದಾನೆ. ಕೆಲವು ದಿನಗಳಿಗೆ ಆ ರೋಗ ರೋಗಿಯೊಂದರ ಶರೀರದಲ್ಲಿ ಇಲ್ಲದಂತೆ ಹೋಗಿದೆ. ಅಷ್ಟೇಯಲ್ಲದೆ ರೋಗ ಬಾರದಮೊದಲೇ ಒಂದು ರೋಗವೊಂದರ ನಮೂನೆಯನ್ನು ಶರೀರದೊಳಗೆ ಕಳಿಸಿದರೆ, ಆ ರೋಗಕ್ಕೆ ಮೊದಲೇ ಶರೀರದಲ್ಲಿ ದೇವರು ಔಷಧಿಯನ್ನು ತಯಾರು ಮಾಡಿಡುತ್ತಾನೆಂಬ ಸೂತ್ರ ಕೂಡಾ ಆ ಯಂ.ಡಿ ಡಾಕ್ಟರವರು ಹೇಳುವುದು ನಡೆದಿದೆ. ಹಾಗೆಯೇ ಮಾಡಿ ನೋಡಿ ಅದು ಸತ್ಯವೆಂದು ತೀರ್ಮಾನಿಸಿ ಹೇಳುವುದು ನಡೆದಿದೆ. ಇದೆಲ್ಲವೂ ಶರೀರವೆಂಬ ಮನೆಯಲ್ಲಿ ಆತ್ಮಯೆಂಬ ಮನೆ ಯಜಮಾನನಿಂದ ನಡೆಯುವ ಕೆಲಸವಾದ್ದರಿಂದ ಈ ವೈದ್ಯ ವಿಧಾನಕ್ಕೆ ಮನೆ ಜ್ಞಾಪಕಬರುವಂತೆ ಇಂಗ್ಲೀಷ್‌ನಲ್ಲಿ ಹೋಮ್ ಎಂಬ ಪದಬರುವಂತೆ ಹೋಮಿಯೊಪತಿ ಅಂದಿದ್ದಾರೆ. ಕರೋಡ್‌ಪತಿ ಎಂದರೆ ಕೋಟಿಗೆ ಯಜಮಾನಿ ಅನ್ನುವಂತೆ ಹೋಮಿಯೊಪತಿ ಎಂದರೆ ಮನೆಯಜಮಾನ ಎಂದು ಅರ್ಥ ಮಾಡಿಕೊಳ್ಳಬಹುದು.

ಹೋಮಿಯೊಪತಿ ವೈದ್ಯ ಮೊಟ್ಟಮೊದಲು ಇಟ್ಟಿರುವ ಸೂತ್ರವನ್ನು ಆಧಾರ ಮಾಡಿಕೊಂಡು ಇನ್ನೂ ಮುಂದಕ್ಕೆಹೋಗಿದೆ. ಆ ನೇತೃತ್ವದಲ್ಲಿ ಹೋಮಿಯೊ ವೈದ್ಯವು ಮೂರು ಪಾಟೆನ್ಸಿಗಳಾಗಿ ತಯಾರಾಗಿದೆ. ಈದಿನ ಹೋಮಿಯೊ ಔಷಧಗಳು ಮೂರು ವಿಧಗಳ ಬಲವಾದ ಹಂತಗಳಲ್ಲಿ ದೊರೆಯುತ್ತಿವೆ. ಹೊಸಧನವನ್ನು ಸಂಪಾದಿಸಿಕೊಂಡ ಹೋಮಿಯೊಪತಿ ಔಷಧಿಗಳು 30 ಪಾಟೆನ್ಸಿ, 200 ಪಾಟೆನ್ಸಿ, 1000 ಪಾಟೆನ್ಸಿ ಎಂಬ ಮೂರು ಪಾಟೆನ್ಸಿಗಳಲ್ಲಿ ದೊರೆಯುತ್ತಿವೆ. ಪಾಟೆನ್ಸಿ ಎಂದರೆ ಆ ಔಷಧಿವೊಂದರ ಶಕ್ತಿ ಎಂದು ಅರ್ಥ ಮಾಡಿಕೊಳ್ಳಬೇಕು. ಮೂರು ಹಂತಗಳಲ್ಲಿ ಹೋಮಿಯೊ ಔಷಧಿಗಳು ಈದಿನ ಲಭ್ಯವಾಗುತ್ತಿವೆ. ಪಾಟೆನ್ಸಿ ಎಂದರೆ ದೇವರನ್ನು ಬೇಡಿಕೊಳ್ಳುವ ಅಭ್ಯರ್ಥನ ಎಂದು ನಾವು ಅರ್ಥ ಮಾಡಿಕೊಳ್ಳಬೇಕಾಗಿರುತ್ತದೆ. 30 ಪಾಟೆನ್ಸಿ

ಔಷಧಿ ಎಂದರೆ ಶರೀರವೆಂಬ ಮನೆಯಲ್ಲಿನ (ಬಾಡೀಹೋಮ್‌ನಲ್ಲಿನ) ದೇವರನ್ನು ಇಲ್ಲವೆ ಆತ್ಮವನ್ನು ಮೂವತ್ತುಬಾರಿ ಅಭ್ಯರ್ಥಿಸಿದಂತೆ ಅರ್ಥ. 200 ಪಾಟೆನ್ಸಿ ಎಂದರೆ ಆತ್ಮವನ್ನು ಇಲ್ಲವೆ ದೇವರನ್ನು 200 ಬಾರಿ ಕೇಳಿದಂತೆ ಅರ್ಥ. 1000 ಪಾಟೆನ್ಸಿ ಅಂದರೂ ದೇವರನ್ನು 1000 ಬಾರಿ ರೋಗದಿಂದ ಕಾಪಾಡೆಂದು ಅಭ್ಯರ್ಥಿಸಿದಂತೆ ಅರ್ಥ.

ದೇವರನ್ನು ಅಭ್ಯರ್ಥಿಸುವುದರಲ್ಲಿ ಸಮಾನವೆಂದು ಪಾಟೆನ್ಸಿ ಒಂದರ ಅರ್ಥ ಹೇಳಿಕೊಂಡಿದ್ದೇವೆ ಅಲ್ಲವೆ! ಹೋಮಿಯೊದಲ್ಲಿ ಒಂದು ಪಾಟೆನ್ಸಿ ಹೇಗೆ ತಯಾರು ಮಾಡುತ್ತಾರೊ ತಿಳಿದುಕೊಂಡರೆ ಮೂರು ವಿಧಗಳಾದ 30, 200, 1000 ಪಾಟೆನ್ಸಿಗಳ ವಿಷಯ ತಿಳಿದುಹೋಗುತ್ತದೆ. ಆದ್ದರಿಂದ ಇಲ್ಲಿ ಪಾಟೆನ್ಸಿ ವಿಷಯವನ್ನು ತಿಳಿದುಕೊಳ್ಳೋಣ. ಇಲ್ಲಿ ಎಲ್ಲರಿಗೂ ಅರ್ಥವಾಗುವುದಕ್ಕೆ ಉದಾಹರಣೆಯಾಗಿ ಇಲ್ಲಿ ಸಕ್ಕರೆ ನೀರನ್ನು ಕುರಿತು ಹೇಳುತ್ತಿದ್ದೇನೆ. ಹೇಳುವ ನಮೂನೆಯನ್ನನುಸರಿಸಿ ಹೋಮಿಯೊಪತಿ ವೈದ್ಯವಿರುತ್ತದೆ ಎಂದು ತಿಳಿದು ಕೊಳ್ಳಬೇಕು. ಒಂದು ಸ್ಪೂನ್ (ಒಂದು ಚಮಚ) ಸಕ್ಕರೆಯನ್ನು ತೆಗೆದುಕೊಂಡು ಅದಕ್ಕೆ ಮೂವತ್ತು ಸ್ಪೂನ್‌ಗಳ ನೀರು ಬೆರೆಸಿದರೆ ಅದು ಸಕ್ಕರೆ ದ್ರವವಾಗುತ್ತದೆ. ಹಾಗೆ ಬೆರೆಸಿದ ನೀರಿನಲ್ಲಿ ಸಕ್ಕರೆಅಂಶ ಬಹಳ ಕಡಿಮೆ ಇರುವುದರಿಂದ ಆ ನೀರಿನಲ್ಲಿ ಸಿಹಿ ಕಾಣಿಸಿ ಕಾಣಿಸದಂತೆ ಇರುತ್ತದೆ. ನೂರರಲ್ಲಿ 3.33 ರಷ್ಟು ಮಾತ್ರ ಸಕ್ಕರೆ ಇದೆಯೆಂದು ಹೇಳಬಹುದು. ಆದರೆ ಇಲ್ಲಿ ಲೋಕ ವಿರುದ್ಧವಾದ ಮಾತುಗಳನ್ನು ಹೇಳಬೇಕಾಗಿ ಬಂದಿದೆ. ದೈವಜ್ಞಾನವೆಲ್ಲವೂ ಲೋಕವಿರುದ್ಧ ವಾಗಿರುತ್ತದೆ. ಆದ್ದರಿಂದ ನಾವು ಈಗ ಸ್ವಲ್ಪ ಲೋಕವಿರುದ್ಧವಾದ, ದೈವಸಂಬಂಧ ವಾದ ವಿಧಾನವನ್ನು ಅನುಸರಿಸಿ ಹೇಳಿಕೊಳ್ಳೋಣ. ತನ್ನನ್ನು ತಾನು ಕಡಿಮೆಮಾಡಿಕೊಳ್ಳುವವನು ಹೆಚ್ಚಿಸಲ್ಪಡುತ್ತಾನೆ ಎಂಬ ದೈವ ಸೂತ್ರವೊಂದು ಇದೆ. ಪ್ರಪಂಚದಲ್ಲಿ ತನ್ನನ್ನು ತಾನು ಕಡಿಮೆಮಾಡಿಕೊಂಡವನು ದೈವಮಾರ್ಗದಲ್ಲಿ ಎಷ್ಟೊಹಂತಗಳು ಹೆಚ್ಚಿಸಲ್ಪಡುತ್ತಾನೆ. ಇದರಿಂದ ದೈವಮಾರ್ಗದಲ್ಲಿ ತಗ್ಗಿದರೆ ಪ್ರಪಂಚ ಮಾರ್ಗದಲ್ಲಿ ಲಕ್ಷದಷ್ಟು ಹೆಚ್ಚಾಗಿ ಕಾಣಿಸುತ್ತದೆಂದು, ಒಂದುವೇಳೆ

ಪ್ರಪಂಚಮಾರ್ಗದಲ್ಲಿ ತಗ್ಗಿದರೆ ದೈವಮಾರ್ಗದಲ್ಲಿ ಲಕ್ಷದಷ್ಟು ಹೆಚ್ಚಾಗುತ್ತದೆಯೆಂದು ಕೆಲವರು ಜ್ಞಾನಿಗಳು ಹೇಳುವಾಗ ಕೂಡಾ ಕೇಳಿದ್ದೇವೆ. ಅದೇ ವಿಧವಾಗಿ ಪ್ರಪಂಚದಲ್ಲಿನ ಅರ್ಥಗಳನ್ನು ಕಡಿಮೆಮಾಡಿ ದೈವಮಾರ್ಗದಲ್ಲಿ ದೊಡ್ಡ ಅರ್ಥಗಳಾಗಿ ಹೇಳಿಕೊಂಡಿದ್ದೇವೆ. ಕನ್ನಡಭಾಷೆಯಲ್ಲಿ ಪತಿ ಎಂದರೆ ಗಂಡ ಇಲ್ಲವೆ ಯಜಮಾನ ಎಂದು ಹೇಳಬಹುದು. ಕರೋಡ್‌ಪತಿ ಎಂಬ ಇತರ ಭಾಷೆ ಪದವನ್ನು ಕನ್ನಡದಲ್ಲಿ ಕೋಟೀಶ್ವರನು ಎಂದು ಹೇಳಿಕೊಂಡಂತೆ, ಹೋಮಿಯೊಪತಿ ಎಂಬ ಪದವನ್ನು ಕೂಡಾ ಆ ಭಾಷೆಯಲ್ಲಿನ ಅರ್ಥವನ್ನು ಬಿಟ್ಟು ಅಡ್ಡವಾಗಿ ಮನೆ ಯಜಮಾನ ಎಂದು ಅರ್ಥ ಹೇಳಿಕೊಂಡಿದ್ದೇವೆ. ಈಗ ಒಂದು ಭಾಗ ಸಕ್ಕರೆಯನ್ನು ಮೂವತ್ತು ಭಾಗಗಳ ನೀರಿಗೆ ಬೆರೆಸಿ ಸಕ್ಕರೆಯನ್ನು ಮೂವತ್ತು ಭಾಗಗಳಾಗಿ ತೆಳುವಾಗಿ ಮಾಡಿದ್ದೇವೆ ಎನ್ನದೆ, ಅದನ್ನೇ ಪುನಃ ಮಾತನಾಡುತ್ತಾ, ಸಕ್ಕರೆ ಮೂವತ್ತು ಭಾಗಗಳ ದೃಢವಾಗಿದೆಯೆಂದು ಹೇಳುವುದು ಲೋಕವಿರುದ್ಧ. ಲೋಕವಿರುದ್ಧವಾದರೆ ದೈವ ಅನುಕೂಲ ವಾಗುತ್ತದೆಂಬ ಸೂತ್ರದ ಪ್ರಕಾರ ಹೇಳುತ್ತಿದ್ದೇವೆಂದು ಅರ್ಥ ಮಾಡಿಕೊಳ್ಳಿ, ಒಂದು ಸ್ಪೂನ್ ಸಕ್ಕರೆಗೆ ಎರಡುನೂರು ರಷ್ಟು ನೀರು ಬೆರೆಸಿ ಸಕ್ಕರೆಯನ್ನು ಪೂರ್ತಿ ತೆಳುವಾಗಿ ಮಾಡಿ ಅಲ್ಲ ಸಕ್ಕರೆಯನ್ನು 200 ರಷ್ಟು ಬಲ ಮಾಡಿದ್ದೇನೆಂದು ಹೇಳುತ್ತಿದ್ದೇವೆ. ಎರಡುನೂರು ರಷ್ಟು ನೀರು ಬೆರೆಸಿ ತೆಳುವಾಗಿ ಮಾಡಿದ್ದೇವೆನ್ನುವುದು ಪ್ರಪಂಚ ಸತ್ಯ. ಎರಡುನೂರರಷ್ಟು ನೀರು ಬೆರೆಸಿ ಎರಡುನೂರರಷ್ಟು ಬಲವಾಗಿ ಮಾಡಿದ್ದೇವೆಂಬುದು ಪ್ರಪಂಚ ವಿರುದ್ಧ ಮತ್ತು ಅಸತ್ಯ. ದೈವ ಮಾರ್ಗದಲ್ಲಿ ಅದೇಮಾತು ಪೂರ್ತಿ ಸತ್ಯ. ಹೋಮಿಯೊಪತಿ ವಿಧಾನದಲ್ಲಿ ಲೋಕ ವಿರುದ್ಧವಾದ ಮಾತನ್ನೇ ಹೇಳುವುದು ನಡೆದಿದೆ. ಒಂದು ಭಾಗ ಸಕ್ಕರೆಗೆ ಸಾವಿರ ಭಾಗಗಳ ನೀರು ಬೆರೆಸಿ, ಆ ದ್ರವದಲ್ಲಿ ಸಕ್ಕರೆಶಕ್ತಿ ಸಾವಿರದಷ್ಟು ಇದೆಯೆಂದು ಹೇಳುವುದು ನಡೆಯುತ್ತಿದೆ. ಅದು ಪ್ರಪಂಚದಲ್ಲಿ ಅಸತ್ಯವೆಂದು, ದೈವಿಕವಾಗಿ ಸತ್ಯವೆಂದು ಹೇಳುವುದು ನಡೆಯುತ್ತಿದೆ.

ಸ್ಥೂಲವಾಗಿರುವ ಅಲ್ಲೊಪತಿಯಿಂದ ಸೂಕ್ಷ್ಮವಾಗಿರುವ ಹೋಮಿಯೊ ಪತಿಯನ್ನು ಹೇಳುವುದು ನಡೆದಿದೆ. ಆದ್ದರಿಂದ ಹೋಮಿಯೊಪತಿ ವಿಷಯ

ಕೆಲವರಿಗೆ ಅರ್ಥವಾಗದೆ, ಅದರಲ್ಲಿ ಔಷಧಿಯೇ ಇಲ್ಲ ಎನ್ನುವುದು ನಡೆದಿದೆ. ಪ್ರಪಂಚಕ್ಕೆ ಹತ್ತಿರವಾಗಿರುವ ಅಲೋಪತಿಯಿಂದ ಪ್ರಪಂಚಕ್ಕೆ ಸುಲಭವಾಗಿ ಅರ್ಥವಾಗದ ಹೋಮಿಯೊಪತಿ ಹೊರಗೆ ಬಂದಿದೆ. ಅಲೋಪತಿಯನ್ನು ಸ್ಥೂಲವಾಗಿ ಹೋಮಿಯೊಪತಿಯನ್ನು ಸೂಕ್ಷ್ಮವಾಗಿ ಅರ್ಥ ಮಾಡಿಕೊಳ್ಳಬೇಕು. ನಮ್ಮ ಶರೀರದಲ್ಲಿ ಸೂಕ್ಷ್ಮವಾದ ಜೀವಾತ್ಮ, ಆತ್ಮ, ಪರಮಾತ್ಮರು ಮೂರು ಅನ್ನುವಂತೆ ಹೋಮಿಯೊಪತಿಯಲ್ಲಿನ ಔಷಧಿ ಮೂರು ಶಕ್ತಿಗಳಾಗಿ ವಿಭಜಿಸಲ್ಪಟ್ಟಿದೆ. ಅವುಗಳನ್ನೆ 30 ಪಾಟೆನ್ಸಿ, 200 ಪಾಟೆನ್ಸಿ, 1000 ಪಾಟೆನ್ಸಿಗಳೆಂದು ಹೇಳಬಹುದು. ಮೂರು ಭಾಗಗಳಾಗಿರುವ ಪಾಟೆನ್ಸಿಗಳು ಹೇಗೆ ಏರ್ಪಟ್ಟಿವೆ ಎಂದರೆ! ಒಂದು ರೋಗಕ್ಕೆ ಸಂಬಂಧಿಸಿದ ರೋಗಕ್ರಿಮಿಯನ್ನಾಗಲಿ, ರೋಗಕ್ಕಿರುವ ಯಾವ ಭಾಗವನ್ನಾದರೂಸರಿ ಸ್ವಲ್ಪ ಭಾಗವನ್ನು ಮಾತ್ರ ಶರೀರದೊಳಗೆ ಕಳಿಸಿದಾಗ ಆ ಶರೀರದಲ್ಲಿನ ಆತ್ಮ, ಆ ರೋಗವನ್ನು ಗ್ರಹಿಸಿ ಅದರ ನಿವಾರಣೆಗೆ ಬೇಕಾದ ರೋಗ ನಿರೋಧಕಶಕ್ತಿಯನ್ನು ಒದಗಿಸುತ್ತದೆ. ರೋಗ ನಿರೋಧಕಶಕ್ತಿ ಶರೀರದಲ್ಲಿ ತಯಾರಾಗುವುದರಿಂದ ಆಗ ಆ ರೋಗವಿದ್ದರೆ ಇಲ್ಲದಂತೆ ಹೋಗುತ್ತದೆ. ಆಗ ಇಲ್ಲದಿದ್ದರೂ ಅದಕ್ಕೆ ಬೇಕಾದ ನಿರೋಧಶಕ್ತಿ ಒನಗೂಡಿರುವುದರಿಂದ, ಆ ರೋಗ ಎಂದಿಗೂ ಅವನಿಗೆ ಬರುವುದಿಲ್ಲ. ಇದರ ವಿಧಾನವೆಲ್ಲವನ್ನು ಗ್ರಹಿಸಿದರೆ ಹೋಮಿಯೊಪತಿ ವೈದ್ಯದಲ್ಲಿ ರೋಗವನ್ನು ಎದುರಿಸಿ ಗುಣಪಡಿಸುವ ಔಷಧಿ ಇರುವುದಿಲ್ಲ ಆದರೆ, ಆ ರೋಗಕ್ಕೆ ಸಂಬಂಧಿಸಿದ ಧಾತುವೇ ಅದರಲ್ಲಿ ಇರುತ್ತದೆ. ಆದ್ದರಿಂದ ಹೋಮಿಯೊಪತಿ ವೈದ್ಯದಲ್ಲಿ ರೋಗ ಧಾತು ಇರುವುದರಿಂದ, ರೋಗ ಬರುವುದಕ್ಕೆ ಅವಕಾಶವಿರುತ್ತದೆ ಆದರೆ, ರೋಗ ಹೋಗುವುದಕ್ಕೆ ಅವಕಾಶವಿಲ್ಲ. ಮನುಷ್ಯ ಕೊಡುವ ಹೋಮಿಯೊ ವೈದ್ಯದಲ್ಲಿ ಅಷ್ಟೊ ಇಷ್ಟೊ ರೋಗ ಉಂಟಾಗುತ್ತದೆ. ಆದ್ದರಿಂದ ಹೋಮಿಯೊ ಔಷಧಿ ಬಳಸಿದವನಿಗೆ ಇರುವ ರೋಗ ಹೆಚ್ಚಾಗುವುದಾಗಲಿ, ರೋಗ ಇಲ್ಲದಿದ್ದರೂ ಅದರ ಲಕ್ಷಣಗಳು ಕಾಣಿಸುವುದಾಗಲಿ ನಡೆಯುತ್ತದೆ. ಆಗ ಶರೀರದಲ್ಲಿ ಆತ್ಮ ಆ ರೋಗಕ್ಕೆ ಔಷಧಿಯನ್ನು ಒಳಗೇ ತಯಾರುಮಾಡಿ ಕೊಡುವುದರಿಂದ ರೋಗ ಪೂರ್ತಿಯಾಗಿ ಇಲ್ಲದಂತೆಹೋಗುತ್ತದೆ. ಆತ್ಮ ಕೊಟ್ಟಿರುವ ಔಷಧಿ

ಎಲ್ಲದಕ್ಕಿಂತ ಶ್ರೇಷ್ಠವಾದುದು, ರೋಗಕ್ಕೆ ಪೂರ್ತಿಯಾಗಿ ಸರಿಹೋಗುವುದಾಗಿರುವು ದರಿಂದ ರೋಗ ಪೂರ್ತಿಯಾಗಿ ಹೋಗುತ್ತದೆ. ಆ ವಿಧವಾಗಿ ನಡೆಯುವುದನ್ನನು ಸರಿಸಿ ಹೊಮಿಯೊ ಔಷಧಿ ಬಳಸಿದರೆ ಮೊದಲು ರೋಗ ಹೆಚ್ಚಾಗಿ ನಂತರ ಕಡಿಮೆಯಾಗುತ್ತದೆಂದು ಹೇಳುತ್ತಾರೆ.

ಒಂದು ರೋಗಕ್ರಿಮಿಯನ್ನಾಗಲಿ, ರೋಗ ಕಣವನ್ನಾಗಲಿ, ಇಲ್ಲವೆ ರೋಗವನ್ನು ಉಂಟುಮಾಡುವ ಏನನ್ನಾದರೂ ಆಗಲಿ ತೆಗೆದುಕೊಂಡು ಅದಕ್ಕೆ ಮೂವತ್ತು ಭಾಗಗಳು ಹೆಚ್ಚಾಗಿ ಆಲ್ಕಹಾಲನ್ನು ಸೇರಿಸಿ ಸ್ವಲ್ಪ ದಿನಗಳು ಅದನ್ನು ಅಲ್ಕಾಹಾಲ್‌ನಲ್ಲಿ ಕಲಕುತ್ತಿರುವಾಗ ಅದು ಆಲ್ಕಾಹಾಲ್ (ಸಾರಾದ್ರವದಂತ ಹದ್ದು)ದಲ್ಲಿ ಪೂರ್ತಿಯಾಗಿ ಬೆರೆತುಹೋಗಿ ಶರೀರದಲ್ಲಿ ಆತ್ಮ ಗ್ರಹಿಸುವಂತೆ ಬದಲಾವಣೆಯಾಗುತ್ತದೆ. ಆತ್ಮ ಗ್ರಹಿಸುವಂತೆ ಅನ್ನುವುದಕ್ಕಿಂತ ಆತ್ಮವನ್ನು ಅಭ್ಯರ್ಥಿಸುವಂತೆ ಬದಲಾವಣೆಯಾಗುತ್ತದೆ ಎನ್ನುವುದು ಸಮಂಜಸ. ಆ ವಿಧವಾಗಿ ಒಂದು ರೋಗ ಭಾಗಕ್ಕೆ ಮೂವತ್ತು ಭಾಗಗಳು ಆಲ್ಕಾಹಾಲ್ ಬೆರೆತಿರುವುದನ್ನು ಮೂವತ್ತುಹಂತಗಳ ಶಕ್ತಿ ಇರುವ ಹೋಮಿಯೊಔಷಧಿಯಾಗಿ ಹೇಳಿಕೊಳ್ಳುತ್ತಾರೆ. ಹಾಗೆಯೇ ಒಂದು ಭಾಗಕ್ಕೆ ಎರಡುನೂರು ಭಾಗಗಳು ಆಲ್ಕಾಹಾಲ್‌ನನ್ನು ಬೆರೆಸಿ ಸ್ವಲ್ಪದಿನಗಳು ಚೆನ್ನಾಗಿ ಕಲಕುತ್ತಿರುವಾಗ, ಅದು ಎರಡುನೂರರಷ್ಟು ಶಕ್ತಿವಂತವಾಗಿ ತಯಾರಾಗುತ್ತದೆಯೆಂದು ಹೋಮಿಯೊ ಸಿದ್ಧಾಂತಕರ್ತರಾದವರು ಹೇಳುತ್ತಿರುತ್ತಾರೆ. ಹಾಗೆಯೇ ಸಾವಿರ ಭಾಗಗಳು ಆಲ್ಕಾಹಾಲನ್ನು ಬೆರೆಸಿ ಸ್ವಲ್ಪ ದಿನಗಳು ಕಲಕುತ್ತಿದ್ದರು ಅದು ಸಾವಿರಹಂತಗಳು ಶಕ್ತಿವಂತವಾಗಿ ತಯಾರಾಗಿದೆಂದು ಹೇಳುತ್ತಾರೆ. ಈ ವಿಧವಾಗಿ ಹೋಮಿಯೊ ವೈದ್ಯ ಮೂರು ವಿಧಗಳ ಶಕ್ತಿಗಳಲ್ಲಿ (ಮೂರು ವಿಧಗಳ ಪಾಟೆನ್ಸಿಗಳಲ್ಲಿ) ಲಭಿಸುತ್ತದೆ. ಇಲ್ಲಿ ಕೆಲವರಿಗಲ್ಲದೆ ಎಲ್ಲರಿಗೂ ಒಂದು ಪ್ರಶ್ನೆ ಬರುತ್ತದೆ. ಒಂದು ಭಾಗಕ್ಕೆ ಮೂವತ್ತು ಭಾಗಗಳು ಜೊತೆಮಾಡಿದಾಗ ಅದು ಮೂವತ್ತುಹಂತಗಳ ತೆಳುವಾಗಿಹೋಗುತ್ತದೆ ಆದರೆ, ಮೂವತ್ತುಹಂತಗಳು ಶಕ್ತಿವಂತ ಹೇಗಾಗುತ್ತದೆ ಯೆಂದು ಕೇಳಬಹುದು. ಹಾಗೆಯೆ ಎರಡುನೂರು ಭಾಗಗಳನ್ನು, ಸಾವಿರ

ಭಾಗಗಳನ್ನು ರೋಗಕ್ರಿಮಿಗೆ ಇಲ್ಲವೆ ಧಾತುವಿಗೆ ಬೆರೆಸಿದಾಗ ಅದು ಎರಡುನೂರು ಭಾಗಗಳಾಗಿ, ಸಾವಿರ ಭಾಗಗಳಾಗಿ ತೆಳುವಾಗಿಹೋಗುತ್ತದೆ ಅಲ್ಲವೆ! ಹಾಗಲ್ಲದೆ ಎಷ್ಟು ತೆಳುವಾಗಿ ಮಾಡಿದರೆ ಅಷ್ಟು ಬಲ ಕೈಗೂಡುತ್ತದೆನ್ನುವುದು ಲೋಕವಿರುದ್ಧ ಅಲ್ಲವಾಯೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ.

ಒಂದು ಭಾಗ ರೋಗ ಧಾತುವಿಗೆ ಮೂವತ್ತುಭಾಗಗಳ ಆಲ್ಕಾಹಾಲ್ ಬೆರೆಸುವುದರಿಂದ ಅದು ಮೂವತ್ತುಹಂತಗಳು ತೆಳುವಾಗದೆ, ಮೂವತ್ತು ಹಂತಗಳ ಶಕ್ತಿವಂತ ಆಗುವುದಕ್ಕೆ ಕೆಲವು ಕಾರಣಗಳು ಇವೆ. ರೋಗ ಧಾತುವು ನೀರಿನಲ್ಲಾಗಲಿ, ಇತರ ಪಾನೀಯಗಳಲ್ಲಿ ಬೆರೆತಿದ್ದರೆ ಅದು ವಾಸ್ತವವಾಗಿ ತೆಳುವಾಗಿಹೋಗುವುದೆ. ಆದರೆ ಇಲ್ಲಿ ಬೆರೆತಿರುವುದು ಆಲ್ಕಾಹಾಲು ಆದ್ದರಿಂದ, ಅದು ತೆಳವಾಗುತ್ತಿಲ್ಲ. ಅದಕ್ಕೆ ಕಾರಣ ಏನೆಂದರೆ! ರೋಗಗಳು ಹುಟ್ಟಿಬರುತ್ತಿರುವುದು ಮಾಂಸ ಸಂಬಂಧ ಪದಾರ್ಥಗಳಿಂದ ಇಲ್ಲವೆ ಮಾಂಸ ಸಂಬಂಧ ಪದಾರ್ಥಗಳಿಂದ ಎಂದು ಹೇಳಬಹುದು. ರೋಗಗಳಿಗೆ ವಿರುದ್ಧವಾಗಿ ಔಷಧಿಗುಣವನ್ನು ಹೊಂದಿರುವವು ವೃಕ್ಷ ಸಂಬಂಧ ಪದಾರ್ಥಗಳು ವೃಕ್ಷಗಳಿಗಾಗಲಿ, ಚಿಕ್ಕ ಸಸಿಗಳಿಗಾಗಲಿ, ಬಳ್ಳಿಗಳಿಗಾಗಲಿ ಔಷಧಿ ಗುಣ ಆಕಾಶದಿಂದ ಚಂದ್ರನ ಮೂಲಕ ಉಂಟಾಗುತ್ತಿದೆ. ಜ್ಞಾನ ಸ್ವರೂಪನು, ಅಮೃತಸ್ವರೂಪನಾದ ಚಂದ್ರನನಿಂದ ಚಂದ್ರಕಿರಣಗಳು ಭೂಮಿಮೇಲಿರುವ ಅನೇಕ ಗಿಡಗಳಿಗೆ ಅನೇಕ ಔಷಧಿಗುಣಗಳನ್ನು ಒದಗಿಸುತ್ತಿವೆ. ಆದ್ದರಿಂದ ಪೂರ್ವದಲ್ಲಿ ಹಿರಿಯರು ಪ್ರತಿಎಲೆ ಔಷಧವೇ ಎಂದಿದ್ದಾರೆ. ಆದರೆ ಯಾವ ಎಲೆ ಯಾವ ಔಷಧವೊ ಈದಿನ ಬಹಳಜನರಿಗೆ ತಿಳಿದಿಲ್ಲ. ಕೆಲವು ಎಲೆಗಳ ವಿಷಯಗಳು ದೇವರಿಗೆ ಹೊರತು ಪ್ರಪಂಚದಲ್ಲಿ ಯಾರಿಗೂ ತಿಳಿಯದೆಂದೇ ಹೇಳಬಹುದು. ಸ್ವಚ್ಛವಾದ ಆಲ್ಕಾಹಾಲ್ ದ್ರವದಲ್ಲಿ ಎಲ್ಲಾ ವೃಕ್ಷಗಳಿಗೆ ಸಂಬಂಧಿಸಿದ ವಾಸನೆ, ರುಚಿ ಬೆರೆತಿರುವುದರಿಂದ ಹೋಮಿಯೊ ವಿಧಾನದಲ್ಲಿ ಆಲ್ಕಾಹಾಲ್‌ನಲ್ಲಿಯೇ ಒಂದು ರೋಗಧಾತುವನ್ನು ತೆಳುವಾಗಿ ಮಾಡುತ್ತಿದ್ದಾರೆ. ರೋಗಧಾತುವು ಎಷ್ಟು ತೆಳುವಾದರೆ ಆಲ್ಕಾಹಾಲು ಅಷ್ಟು ಶಕ್ತಿವಂತವಾಗುತ್ತದೆಂದು ಹೋಮಿಯೊ ಸಿದ್ಧಾಂತಕರ್ತರಿಗೆ ಬಂದಿರುವ

ಊಹೆ ಪ್ರಕಾರ ಮಾಡಿನೋಡಿದ್ದಾರೆ. ರೋಗ ಹೆಚ್ಚಾಗಿರುವಾಗ ಆ ರೋಗಕ್ಕೆ ಸಂಬಂಧಿಸಿದ ಧಾತುಕಣವನ್ನು ಸಾವಿರಹಂತಗಳು ತೆಳ್ಳಗೆ ಮಾಡಲ್ಪಟ್ಟ ಆಲ್ಕಾಹಾಲು ಔಷಧಿಯಾಗಿ ಬಳಸುವುದು ನಡೆಯುತ್ತಿದೆ.

ಒಂದು ರೋಗ ಧಾತುವನ್ನು ಆಲ್ಕಾಹಾಲ್‌ನಲ್ಲಿ ತೆಳುವಾಗಿಮಾಡಿದಾಗ 30, 200, 1000 ಪಾಟೆನ್ಸಿಗಳಾಗಿ (ಹಂತಗಳಾದ) ಶಕ್ತಿವಂತ ಮಾಡುತ್ತಿದ್ದಾರೆ. ಹಾಗೆ ಮಾಡಲ್ಪಟ್ಟ ಆಲ್ಕಾಹಾಲ್‌ನನ್ನು ಮದರ್‌ಟಿಂಚರ್ ಎಂದು ಹೇಳುತ್ತಿದ್ದಾರೆ. ಮದರ್ ಟಿಂಚರ್ (ತಾಯಿ ದ್ರಾವಕ) ಕೇವಲ ವೃಕ್ಷಸಂಬಂಧವಾದುದೇ ಎಂದು ತಿಳಿಯಬೇಕು. ವೃಕ್ಷಸಂಬಂಧ ಮದರ್‌ಟಿಂಚರ್‌ನನ್ನು ಮಾಂಸ ಸಂಬಂಧ ಶರೀರದಲ್ಲಿನ ರೋಗಗಳನ್ನು ನಿವಾರಿಸುವುದಕ್ಕೆ ಬಳಸುತ್ತಿದ್ದಾರೆ. ಮದರ್ ಟಿಂಚರ್‌ನಲ್ಲಿನ ಶಕ್ತಿ ಸೂಕ್ಷ್ಮವಾದುದು. ಆದ್ದರಿಂದ ಅದನ್ನು ಶ್ರದ್ಧೆಯಿಂದ ಸ್ವಲ್ಪ ಪರಿಮಾಣದಲ್ಲಿ ಬಳಸಿದರೂ ಫರವಾಗಿಲ್ಲವಾಗಲಿ, ಅದನ್ನು ಪವಿತ್ರವಾಗಿ ಬಳಸಬೇಕಾಗಿರುತ್ತದೆ. ಹೋಮಿಯೊಪತಿ ಔಷಧಿಯನ್ನು ಮಾಂಸ ಸಂಬಂಧವಾದ ನಮ್ಮ ಕೈಗಳಿಂದ ಮುಟ್ಟಿಕೊಳ್ಳದೆ ಎಲೆಗಳಲ್ಲಾಗಲಿ, ಪೇಪರ್‌ಗಳಲ್ಲಾಗಲಿ ಹಾಕಿಕೊಂಡು ಬಾಯಲ್ಲಿ ಹಾಕಿಕೊಳ್ಳುವುದು ಒಳ್ಳೆಯದು. ಹಾಗೆ ಹಾಕಿದರೆ ರೋಗ ಬೇಗನೆ ಗುಣವಾಗಿ ಹೋಗುತ್ತದೆ. ಹೋಮಿಯೊಪತಿ ಔಷಧಿಯನ್ನು ತಯಾರು ಮಾಡುವುದರಲ್ಲಿಯೂ, ಅದಕ್ಕೆ ಹೋಮಿಯೊಪತಿ ಎಂದು ಹೆಸರು ಇಡುವುದರಲ್ಲಿಯೂ, ಅದನ್ನು ಬಳಸುವುದರಲ್ಲಿಯೂ, ಎಷ್ಟೋ ಸೂತ್ರಗಳನ್ನು ಅನುಸರಿಸಲ್ಪಡುತ್ತಿರುವ ವಿಧಾನ ಹೋಮಿಯೊ ವಿಧಾನ. ಅದನ್ನು ಕಂಡುಹಿಡಿದ ಸಿದ್ಧಾಂತಕರ್ತ ಅಲೋಪತಿ ವೈದ್ಯದಲ್ಲಿ ಯಂ.ಡಿ. ಓದಿದವನು. ಸ್ವಂತ ಮಗನನ್ನೆ ಒಂದು ರೋಗದಿಂದ ರಕ್ಷಿಸಿಕೊಳ್ಳಲಾರದೆ ಜರ್ಮನಿ ದೇಶದ ಡಾಕ್ಟರ್ ಅನಿಮುನ್ ಸಾಮ್ಯೂಲ್ ಅನ್ನುವಾತನು ಅಧಿಕಾರವಾಗಿ ಸುಮಾರು 200 ವರ್ಷಗಳ ಪೂರ್ವದಲ್ಲಿ ಹೋಮಿಯೊ ವಿಧಾನವನ್ನು ಹೊರಗಿಡುವುದು ನಡೆದಿದೆ. ಆದಿನದ ಡಾಕ್ಟರ್ ಸಾಮ್ಯೂಲ್ ಉದ್ದೇಶವನ್ನು ತಿಳಿಯದ ಪ್ರಜೆಗಳು ಹೋಮಿಯೊಪತಿ ಯನ್ನು ಅನುಸರಿಸದೆ ಹೆಚ್ಚಾಗಿ ಅಲೋಪತಿಯನ್ನೆ ಅನುಸರಿಸುತ್ತಿದ್ದಾರೆ.

ಹೊಮಿಯೊಪತಿ ವೈದ್ಯವೊಂದರ ವಿಧಾನವನ್ನಾಗಲಿ, ಅದರಲ್ಲಿನ ಆಧ್ಯಾತ್ಮಿಕತೆಯಾಗಲಿ, ಔಷಧಿಮೇಲಿರುವ ಭಾವವಾಗಲಿ ತಿಳಿಯದ ಕೆಲವರು ವಿಜ್ಞಾನಿಗಳು ಹೊಮಿಯೊದಲ್ಲಿ ಔಷಧಿಯೇ ಇಲ್ಲ ಅನ್ನುತ್ತಿದ್ದಾರೆ. ಸ್ಥೂಲವಾಗಿ ಹೊಮಿಯೊ ವಿಧಾನದಲ್ಲಿ ಔಷಧಿ ಇಲ್ಲವಾಗಲಿ, ಸೂಕ್ಷ್ಮವಾಗಿ ಅದರಲ್ಲಿ ರೋಗವನ್ನು ನಿರೋಧಿಸುವ ಶಕ್ತಿ ತಯಾರಾಗಿದೆ. ಹೋಮಿಯೊವೈದ್ಯ ಸೂಕ್ಷ್ಮದೃಷ್ಟಿಯಿಂದ ತಯಾರು ಮಾಡಲ್ಪಟ್ಟಿದೆ. ಆದ್ದರಿಂದ ಸ್ಥೂಲವಾಗಿರುವ ಅಲ್ಲೊಪತಿಗಿಂತ ಬಲಹೀನವಾಗಿ ಕಾಣಿಸಿದರೂ, ರೋಗವನ್ನು ಇಲ್ಲದಂತೆ ಮಾಡುವುದರಲ್ಲಿ ಬಲವಾದುದೇ ಎಂದು ಹೇಳಬಹುದು.

ಇನ್ನು ಅಕ್ಯುಪಂಚರ್ ವೈದ್ಯ ವಿಧಾನವನ್ನು ಕುರಿತು ಹೇಳಿಕೊಳ್ಳೋಣ. ಇದು ಚೈನಾದೇಶದಲ್ಲಿ ಕಂಡುಹಿಡಿದ ವೈದ್ಯ. ಶರೀರದಲ್ಲಿರುವ ರೋಗವನ್ನು ಅನುಸರಿಸಿ ಶರೀರದಲ್ಲಿ ಕೆಲವು ಕೇಂದ್ರಗಳನ್ನು ಗುರುತಿಸಿ ಆ ಕೇಂದ್ರಗಳಲ್ಲಿ ಚಿಕ್ಕ ಸೂಜಿಗಳನ್ನು ಸ್ವಲ್ಪ ಚುಚ್ಚಿ ಇಡುವುದನ್ನು ಆಕ್ಯುಪಂಚರ್ ವೈದ್ಯ ಅನ್ನುತ್ತೇವೆ ಹಾಗೆ ಕೆಲವು ಕೇಂದ್ರಗಳಲ್ಲಿ ಸೂಜಿಗಳನ್ನು ಚುಚ್ಚಿ ಇಡುವುದರಿಂದ, ಆ ಶರೀರ ಕೇಂದ್ರಗಳಲ್ಲಿರುವ ಶಕ್ತಿ ಎಚ್ಚರಗೊಂಡು, ಆ ಶಕ್ತಿ ಶರೀರದಲ್ಲಿನ ರೋಗವನ್ನು ಇಲ್ಲದಂತೆ ಮಾಡುವುದೆನ್ನುವುದು ಇದರಲ್ಲಿನ ಮುಖ್ಯ ಸೂತ್ರ. ಇಲ್ಲಿ ಕೂಡಾ ಶರೀರದಲ್ಲಿನ ಶಕ್ತಿಯೇ ರೋಗನಿವಾರಣೆಗೆ ಉಪಯೋಗಪಡುತ್ತಿದೆಯೆಂದು ಹೇಳುತ್ತಿರುವುದು ಗಮನಾರ್ಹ. ಈ ವೈದ್ಯ ಚೈನಾದಲ್ಲಿ ಕಂಡುಹಿಡಿಯಲ್ಪಟ್ಟಿದೆಯೆಂದು ಹೇಳಿದರೂ, ವಾಸ್ತವಕ್ಕೆ ಅದರ ಮೂಲ ಭಾರತದೇಶದಲ್ಲಿನದೇ ಎಂದು ಹೇಳಬಹುದು. ಏಕೆಂದರೆ! ಪೂರ್ವದಲ್ಲಿ ಕೆಲವು ರೋಗಗಳಿಗೆ ಶರೀರದಲ್ಲಿ ಕೆಲವು ಪ್ರತ್ಯೇಕವಾದ ಸ್ಥಳಗಳನ್ನು ಗುರ್ತಿಸಿ, ಶರೀರದಲ್ಲಿರುವ ರೋಗಕ್ಕೆ ಶರೀರದಲ್ಲಿ ಗುರ್ತಿಸಿದ ಭಾಗಕ್ಕೆ ಸಂಬಂಧ ಇದೆಯೆಂದು ಹೇಳಿ, ಆ ಶರೀರ ಭಾಗದಮೇಲೆ ಒಂದು ಬರೆಯನ್ನು ಇಡುತ್ತಿದ್ದರು. ಮನುಷ್ಯರಿಗಾದರೆ ಸೂಜಿಯನ್ನು ಸುಟ್ಟು, ಬಿಸಿಯಾಗಿರುವ ಸೂಜಿಯಿಂದ ಬರೆ ಇಡುತ್ತಿದ್ದರು. ಹಾಗೆ ಮಾಡುವುದರಿಂದ ಶರೀರದಲ್ಲಿನ ರೋಗ ಇಲ್ಲದಂತೆ ಹೋಗುತ್ತಿತ್ತು. ಇದೇ ವಿಧಾನವನ್ನೆ ಪಶುಗಳಿಗು

ಕೂಡಾ ಉಪಯೋಗಿಸುತ್ತಿದ್ದರು. ಪಶುಗಳಿಗೆ ಬಿಸಿಮಾಡಿದ ದೊಡ್ಡ ಕಬ್ಬಿಣಕಡ್ಡಿಯಿಂದ ಬರೆಗಳ ಇಡುತ್ತಿದ್ದರು. ಇದನ್ನು ಬರೆಗಳ ವೈದ್ಯ ಅನ್ನುತ್ತಿದ್ದರು. ಇಂದಿಗೂ ಕಾಮಾಲೆಗೆ ಕೈಮೇಲಾಗಲಿ, ಕತ್ತಿನಮೇಲಾಗಲಿ ಸುಡುವುದು ಇದೆ. ಈಗಲೂ ಕೆಲವು ಹಳ್ಳಿಪ್ರಾಂತಗಳಲ್ಲಿ ಮಕ್ಕಳು ಹುಟ್ಟುತ್ತಲೇ ಭವಿಷತ್ತಿನಲ್ಲಿ ಕೆಲವು ರೋಗಗಳು ಬಾರದಂತಿರುವುದಕ್ಕೆ ಸೂಜಿಯಿಂದ ಸುಡುವುದು ನಡೆಯುತ್ತಿದೆ. ಇಂಡಿಯಾದಲ್ಲಿನ ಬರೆಗಳ ವೈದ್ಯವನ್ನು ಗ್ರಹಿಸಿದ ಚೈನಿಯರು ಅದನ್ನು ಸ್ವಲ್ಪ ಬದಲಾವಣೆಮಾಡಿ, ಇದು ಇಂಡಿಯಾ ವೈದ್ಯವೆಂದು ಯಾರಿಗೂ ತಿಳಿಯದಂತಿರುವುದಕ್ಕೆ, ಶರೀರದಲ್ಲಿನ ಕೆಲವು ಪ್ರಾಂತಗಳಲ್ಲಿ ಸೂಜಿಗಳನ್ನು ಸ್ವಲ್ಪಸಮಯ ಚುಚ್ಚಿ ಇಡುವುದು ನಡೆಯುತ್ತಿದೆ. ಇಂಡಿಯಾದಲ್ಲಿನ ಬರೆಗಳ ವೈದ್ಯ ಚೈನಾದಲ್ಲಿ ಸ್ವಲ್ಪ ನವೀನ ಮಾಡಲ್ಪಟ್ಟು, ಸೂಜಿಗಳವೈದ್ಯವಾಗಿ ಬದಲಾವಣೆ ಯಾಗಿ ಚೈನಾ ವೈದ್ಯವಾಗಿದೆ.

ಪೂರ್ವದಲ್ಲಿ ಶರೀರದಲ್ಲಿನ ನರಗಳನ್ನು ಗುರ್ತಿಸಿ ನರಗಳಿರುವ ಪ್ರಾಂತಗಳಲ್ಲಿ ನರದ ಮೇಲೆ ಬರೆ ಇಡುವುದರಿಂದ ತಕ್ಷಣ ರೋಗ ಹೋಗುತ್ತಿತ್ತು. ಮಾರುಮೂಲೆ ಹಳ್ಳಿಪ್ರಾಂತಗಳಲ್ಲಿಯೂ, ಅಡವಿಪ್ರಾಂತ ಗಳಲ್ಲಿಯೂ ಬರೆಗಳ ವೈದ್ಯ ಹೆಚ್ಚಾಗಿ ಪ್ರಚಾರದಲ್ಲಿ ಇರುತ್ತಿತ್ತು. ಅಲೋಪತಿವೈದ್ಯವಿಲ್ಲದ ಆ ದಿನಗಳಲ್ಲಿ, ಆಯುರ್ವೇದ ವೈದ್ಯ ಕೂಡಾ ಬರವಾದ ಸ್ಥಳಗಳಲ್ಲಿ ಹೆಚ್ಚಾಗಿ, ಬರೆಗಳ ವೈದ್ಯರು ಇರುತ್ತಿದ್ದರು. ಈದಿನ ಅಲ್ಲೋಪತಿ ಬರುವಿಕೆಯಿಂದ ಬರೆಗಳವೈದ್ಯ ಕಾಣಿಸದಂತೆ ಹೋಗಿದೆ. ಇಲ್ಲಿ ಮಾಯವಾದ ವೈದ್ಯ ಚೈನಾದಲ್ಲಿ ಸೂಜಿಗಳ ವೈದ್ಯವಾಗಿ ಹೊರಟು ಆಕ್ಯುಪಂಚರ್ ಎಂಬ ಹೆಸರಿನಿಂದ ಪುನಃ ಇಂಡಿಯಾಗೆ ಬಂದಿದೆ. ಚರಿತ್ರೆ ತಿಳಿಯದವರು, ಬರೆಗಳ ವೈದ್ಯವೊಂದರ ವಿಷಯವೇ ತಿಳಿಯದವರು ಸೂಜಿಗಳ ವೈದ್ಯ ಚೈನಾದೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಬರೆಗಳಿಂದ ಸುಡುವುದು ಹೋಗಿ, ಸೂಜಿಗಳಿಂದ ಚುಚ್ಚುವುದು ಬಂದರೂ, ವೈದ್ಯ ಮಾತ್ರ ಒಂದೇಯೆಂದು ಹೇಳಬಹುದು. ಬರೆಗಳು ಇಟ್ಟಾಗ ರೋಗ ಗುಣವಾಗಿ ಹೋದಂತೆ, ಸೂಜಿಗಳಿಂದ ಚುಚ್ಚುವ ವೈದ್ಯದಿಂದಲೂ ಕೂಡಾ ರೋಗಗಳು

ಗುಣವಾಗಿಹೋಗುತ್ತಿವೆ. ಚೈನಾದೇಶದಲ್ಲಿ ಹೆಚ್ಚಾಗಿ ಪ್ರಚಾರದಲ್ಲಿರುವ ಆಕ್ಯುಪಂಚರ್ ವೈದ್ಯ ಈ ದಿನ ಇಂಡಿಯಾದಲ್ಲಿ ಕೂಡಾ ಪ್ರಚಾರ ವಾಗುತ್ತಿದೆ. ರೋಗ ಗುಣವಾಗುತ್ತಿದೆ ಆದ್ದರಿಂದ ಈ ವಿಧಾನವನ್ನು ಕೂಡಾ ವೈದ್ಯವಾಗಿ ಲೆಕ್ಕಿಸಬೇಕಾಗಿದ್ದೆ. ಇದರ ವಿಷಯ ಪೂರ್ತಿ ತಿಳಿಯದ ಕೆಲವರು ವಿಜ್ಞಾನಿಗಳು ಆಕ್ಯುಪಂಚರ್ ಎಂಬುದು ವೈದ್ಯ ಅಲ್ಲವೆಂದರೂ ಯಥಾರ್ಥವಾಗಿ ನಡೆಯುವುದನ್ನನುಸರಿಸಿ ವೈದ್ಯವೆಂದೇ ಹೇಳಬಹುದು.

**ಪ್ರಶ್ನೆ :–** ಕೆಲವರು ಕ್ರೈಸ್ತವರಾಗಲಿ, ಕ್ರೈಸ್ತವ ಗುರುಗಳಾಗಲಿ, ನಮಗೆ ಏಸು ಕಾಣಿಸಿದ್ದಾನೆ, ನಮ್ಮೊಂದಿಗೆ ಮಾತನಾಡಿದ್ದಾನೆ ಎಂದು ಅನ್ನುತ್ತಿದ್ದಾರೆ. ಮತ್ತೆಕೆಲವರು ಕ್ರೈಸ್ತವರಾಗಿ ಬದಲಾದವರು ನಮಗೆ ಏಸು ಕಾಣಿಸಿ ಕ್ರೈಸ್ತಮತದೊಳಗೆ ಬನ್ನಿಎಂದು ಹೇಳಿದ್ದಾನೆ. ಆದ್ದರಿಂದ ನಾವು ಕ್ರೈಸ್ತರಾಗಿ ಬದಲಾಗಿದ್ದೇವೆಂದು ಕೂಡಾ ಪ್ರಚಾರ ಮಾಡುತ್ತಿದ್ದಾರೆ. ಇದೆಲ್ಲವೂ ವಾಸ್ತವವೇನಾ, ಯಾವಾಗಲೋ ಮರಣಿಸಿದ ಏಸು ಈಗ ಕಾಣಿಸಿ ಮಾತನಾಡುವುದು ನಡೆಯುತ್ತದಾ? ಈ ವಿಷಯವನ್ನು ಕುರಿತು ನೀವೇನು ಹೇಳುತ್ತೀರಾ?

**ಉತ್ತರ :–** ಲೋಕದಲ್ಲಿ ಅನೇಕ ಮನಸ್ತತ್ವಗಳು ಇರುವವರಿದ್ದಾರೆ. ಅವರವರ ಮನಸ್ತತ್ವವನ್ನನುಸರಿಸಿ ಅವರು ಮಾತನಾಡುತ್ತಿರುತ್ತಾರೆ. ಕೆಲವರು ಸತ್ಯವನ್ನು ಹೆಚ್ಚಾಗಿ ಮಾತನಾಡುತ್ತಾ, ಅಸತ್ಯವನ್ನು ಬಹಳ ಕಡಿಮೆಯಾಗಿ ಮಾತನಾಡುತ್ತಿರುತ್ತಾರೆ. ಕೆಲವರಾದರೆ ಅಸತ್ಯವನ್ನೆ ಹೆಚ್ಚಾಗಿ ಮಾತನಾಡುತ್ತಾ, ಸತ್ಯವನ್ನು ಕಡಿಮೆ ಮಾತನಾಡುತ್ತಾರೆ. ಕೆಲವರು ಪ್ರಪಂಚ ವಿಷಯಗಳಲ್ಲಿ ಅಸತ್ಯವನ್ನು ಹೇಳಿದರೂ, ದೈವವಿಷಯದಲ್ಲಿ ಮಾತ್ರ ಅಸತ್ಯ ಹೇಳುವುದಿಲ್ಲ. ಕೆಲವರು ದೈವ ವಿಷಯಗಳಲ್ಲಿಯೇ ಹೆಚ್ಚಾಗಿ ಅಸತ್ಯ ಹೇಳುತ್ತಿರುತ್ತಾರೆ. ಮತ್ತೆಕೆಲವರು ಸಮಾಜದಲ್ಲಿ ಗುರುಗಳಾಗಿ, ಬೋಧಕರಾಗಿ, ಸ್ವಾಮಿಗಳಾಗಿ, ಜ್ಞಾನಿಗಳಾಗಿ ಹೇಳಿಕೊಳ್ಳುವವರು ತಾವು ದೈವವಿಷಯಗಳನ್ನು ಚೆನ್ನಾಗಿ ತಿಳಿದವರೆಂದು ಇತರರನ್ನು ನಂಬಿಸುವುದಕ್ಕೆ ಬಹಳ ದೊಡ್ಡ ದೊಡ್ಡ ಅಸತ್ಯಗಳನ್ನು ಹೇಳುತ್ತಿರುತ್ತಾರೆ. ದೈವ ವಿಷಯಗಳು ಎಲ್ಲರಿಗೂ ಅಷ್ಟಾಗಿ ತಿಳಿಯದು, ಆದ್ದರಿಂದ

ಸ್ವಲ್ಪ ಜ್ಞಾನಿಗಳಾಗಿ ಕಾಣಿಸುವವರು ಏನು ಹೇಳಿದರೂ ಸಾಮಾನ್ಯ ಪ್ರಜೆಗಳು ಕೇಳುವಸ್ಥಿತಿಯಲ್ಲಿ ಇರುತ್ತಾರೆ. ಆದ್ದರಿಂದ ದೈವವಿಷಯಗಳಲ್ಲಿ ಬಹಳಜನರು ಅಸತ್ಯಗಳನ್ನು ಹೇಳಿ ನಂಬಿಸುತ್ತಿದ್ದಾರೆ.

ನಾನು ಒಂದು ದಿನ ಒಬ್ಬ ಕ್ರೈಸ್ತವ ಪಾಸ್ಟರೊಂದಿಗೆ ಬೇಟಿಯಾಗಿದ್ದೇನೆ. ಆ ಸಮಯದಲ್ಲಿ ಆತನು ಒಬ್ಬ ರೋಗಿಗೆ ಸ್ವಸ್ಥತೆ ಕೈಗೂಡಿಸುವುದಕ್ಕೆ ಏಸುನನ್ನು ಪ್ರಾರ್ಥಿಸುತ್ತಿದ್ದನು. ಆ ಪಾಸ್ಟರ್‌ರವರು ಸ್ವಲ್ಪ ದೈವಶಕ್ತಿ ಇರುವವನೆಂದು, ಆತನು ಪ್ರಾರ್ಥನೆ ಮಾಡಿದರೆ ಇತರರ ರೋಗಗಳು ಗುಣವಾಗುತ್ತವೆಂದು ಸ್ವಲ್ಪ ಪ್ರಚಾರವಿದೆ. ಅದೇ ನಂಬಿಕೆಯಿಂದ ಆತನ ಹತ್ತಿರಕ್ಕೆ ಕೆಲವರು ರೋಗಿಗಳು ಬಂದು ಹೋಗುತ್ತಿದ್ದರು. ಮುಖ್ಯವಾದ ವ್ಯಕ್ತಿಯಾಗಿ ಕ್ರೈಸ್ತವ ಸಮಾಜದಲ್ಲಿ ಪಾಸ್ಟರಾಗಿ ಹೆಸರುವಾಸಿಯಾದ ಆತನನ್ನು ನಾವು ಬೇಟಿಯಾದಾಗ ಆತನನ್ನು ನಾವು ಕೆಲವು ವಿಷಯಗಳನ್ನು ಕೇಳಿದಾಗ ಆತನು ಸಮಾಧಾನ ಕೊಡುವುದು ನಡೆದಿದೆ. ನಮ್ಮ ಸಂಭಾಷಣೆ ಈ ವಿಧವಾಗಿ ಸಾಗಿದೆ, ನೋಡಿರಿ.

**ನಾನು :–** ನೀವು ಕ್ರೈಸ್ತವರಾಗಿ ಬದಲಾಗಿ ಎಷ್ಟು ಕಾಲವಾಗಿದೆ?

**ಪಾಸ್ಟರ್ :–** ನಾನು ಕ್ರೈಸ್ತವನಾಗಿ ಬದಲಾಗಿದ್ದೇನೆಂದು ನೀವೇಕೆ ಅಂದು ಕೊಳ್ಳುತ್ತಿದ್ದೀರಾ. ನಾವು ಮೊದಲಿನಿಂದ ಕ್ರೈಸ್ತವರೆ.

**ನಾನು :–** ನನ್ನ ವಯಸ್ಸು 63 ವರ್ಷಗಳು. ನನಗೆ ಹತ್ತು (10) ವರ್ಷಗಳ ಚಿಕ್ಕವಯಸ್ಸಿನಿಂದ ಮತಗಳ ಕುರಿತಾದ ಜ್ಞಾಪಕ ಚೆನ್ನಾಗಿದೆ. ಸುಮಾರು 50 ವರ್ಷಗಳ ಪೂರ್ವದಲ್ಲಿ ತೆಲುಗು ರಾಷ್ಟ್ರವಾದ ಆಂಧ್ರಪ್ರದೇಶದಲ್ಲಿ ಕ್ರೈಸ್ತವ ಮತ ಕೇವಲ ಎರಡು ರಷ್ಟು ಇತ್ತು. ಪ್ರಸ್ತುತ ಕಾಲದಲ್ಲಿ ಕ್ರೈಸ್ತವ ಮತವನ್ನು ಕ್ರೈಸ್ತರು ಹೆಚ್ಚಾಗಿ ಪ್ರಚಾರ ಮಾಡುವುದರಿಂದ ಶೇ.22 ರಷ್ಟು ಕ್ರೈಸ್ತರಿದ್ದಾರೆ. 50 ವರ್ಷಗಳ ಕಾಲದಲ್ಲಿ ಸುಮಾರು ಶೇ.20 ರಷ್ಟು ಕ್ರೈಸ್ತರು ಬೆಳೆದಿದ್ದಾರೆ. ಈಗ ನಿಮ್ಮ ವಯಸ್ಸು ಸುಮಾರು 45 ವರ್ಷಗಳು ಇರಬಹುದು. ನೂರಕ್ಕೆ ಇಬ್ಬರು ಪೂರ್ವದಲ್ಲಿ ಕ್ರೈಸ್ತವರು ಇರಬಹುದು. ಉಳಿದವರೆಲ್ಲರು ಈ 50

ವರ್ಷಗಳಲ್ಲಿ ಕ್ರೈಸ್ತರಾಗಿ ಬದಲಾದವರಿರುತ್ತಾರೆ. ಪೂರ್ವದಲ್ಲಿ ಎರಡರಷ್ಟು ಜನರು ಕೂಡಾ ಇಲ್ಲಿನ ಹಿಂದೂಗಳೆ ಆಗಿರುತ್ತಾರೆ. ನೀವು ನಿಮ್ಮ ಜೀವನದಲ್ಲಿ ಕ್ರೈಸ್ತವರಾಗಿ ಬದಲಾಗಿರಬಹುದು. ಇಲ್ಲದಿದ್ದರೆ ನಿಮಗಿಂತ ಮೊದಲು ನಿಮ್ಮ ದೊಡ್ಡವರಾದ ಕ್ರೈಸ್ತವರಾಗಿ ಬದಲಾಗಿರಬಹುದು. ಪೂರ್ವದಲ್ಲಿ 60 ಇಲ್ಲವೆ 70 ವರ್ಷಗಳ ಕೆಳಗೆ ಬದಲಾದವರು ಕೇವಲ ಕ್ರೈಸ್ತರಾಗಿಯೇ ಬದಲಾಗಿರುತ್ತಾರೆ. ಆದಿನ ಓದಿಕೊಂಡವರು ಕಡಿಮೆ, ಆದ್ದರಿಂದ ಹಿಂದೂಗಳಿಂದ ಕ್ರೈಸ್ತವರಾಗಿ ಬದಲಾದವರು ಕ್ರೈಸ್ತವರಾಗಿಯೇ ಇದ್ದಾರೆ. ಯಾರಿಗಾದರೂ ಚರ್ಚಿಗಳ ಹತ್ತಿರ ವಾಚ್‌ಮ್ಯಾನ್ ಉದ್ಯೋಗ ದೊರೆತಿರಬಹುದು. ಆದರೆ ಈ ಮಧ್ಯಕಾಲದಲ್ಲಿ ಕ್ರೈಸ್ತವರಾಗಿ ಬದಲಾದವರು ಬಹಳಜನ ಫಾದರ್‌ಗಳಾಗಿ, ಪಾಸ್ಟರ್‌ಗಳಾಗಿ, ಬೋಧಕರಾಗಿ ತಯಾರಾಗಿದ್ದಾರೆ. ನೀವು ಪಾಸ್ಟರ್‌ಗಳಾಗಿ ಇರುವುದಾದ್ದರಿಂದ ನಮ್ಮ ಅಂಚನೆಯ ಪ್ರಕಾರ ನೀವು ಈ ಮಧ್ಯಕಾಲದಲ್ಲಿ ಕ್ರೈಸ್ತವರಾಗಿ ಬದಲಾಗಿರಬಹುದೆಂದುಕೊಳ್ಳುತ್ತೇನೆ. ನನ್ನ ಅಂಚನೆ ತಪ್ಪೊ, ಒಪ್ಪೊ ನೀವೆ ಹೇಳಬೇಕು.

**ಪಾಸ್ಟರ್ :–** (ಆತನು ಸ್ವಲ್ಪ ನಗುತ್ತಾ) ನಿಮ್ಮ ಅಂಚನೆ ಕರೆಕ್ಟೇ. ನಾನು ಹತ್ತು ವರ್ಷಗಳ ಕೆಳಗೆ ಹಿಂದೂವೇ. ನನ್ನ ಕುಲ ರಜಕ ಕುಲ. ಕುಲದ ಕಾರಣವಾಗಿ ನಮ್ಮ ಊರಿನಲ್ಲಿ ಕೆಲವರು ಅಗ್ರಕುಲಸ್ಥರು ನನ್ನನ್ನು ಚೌಕಬಾರದಂತೆ, ಹೇಳನವಾಗಿ ಮಾತನಾಡುತ್ತಿದ್ದರು. ನಾನು ಚೆನ್ನಾಗಿ ಅಭಿಮಾನ ಇರುವವನಾದ್ದರಿಂದ ಅವರ ಮಾತುಗಳು ನನಗೆ ಕೋಪವನ್ನು ಜಿಗುಪ್ಸೆಯನ್ನು ತರುತ್ತಿದ್ದವು. ಅಂತಹ ಪರಿಸ್ಥಿತಿಯಲ್ಲಿ ನಾನು ನಮ್ಮ ಊರುಬಿಟ್ಟು ಹೈದರಾಬಾದ್ ಸೇರಿಹೋಗಿದ್ದೇನೆ. ಅಲ್ಲಿ ಕೆಲವರ ಪರಿಚಯದಿಂದ ಕ್ರೈಸ್ತವ ಮತ ವಿಷಯಗಳು ಚೆನ್ನಾಗಿ ತಿಳಿದುಹೋಗಿವೆ. ಆಗ ಹಿಂದೂಗಳಲ್ಲಿ ಹೆಚ್ಚುಕಡಿಮೆ ಕುಲಗಳಿವೆ. ಕಡಿಮೆ ಕುಲದವರಿಗೆ ಮರ್ಯಾದೆಯಿಲ್ಲ. ಕ್ರೈಸ್ತವ ಮತದಲ್ಲಿ ಎಲ್ಲರೂ ಸಮಾನವಾಗಿ ಇದ್ದಾರೆ. ಅದರಲ್ಲಿ ಕುಲ ಪ್ರಸಕ್ತಿಯೇ ಇಲ್ಲ ಅಲ್ಲವೆ! ಹಿಂದೂವಾಗಿರುವುದಕ್ಕಿಂತ ಕ್ರೈಸ್ತವನಾಗಿ ಬದಲಾಗುವುದು ಒಳ್ಳೆಯದೇನೊ ಅನಿಸಿದೆ ಆದರೂ ಸ್ವಲ್ಪಕಾಲ

ಹಿಂದೂ ಮತವನ್ನು ಬಿಡಲಿಲ್ಲ. ಪೂರ್ವದಿಂದ ಇರುವ ಹಿಂದೂಮತವನ್ನು ಬಿಟ್ಟು ಕ್ರೈಸ್ತವಮತದೊಳಗೆ ಸೇರಲಾರದೆ ಹಾಗೆಯೇ ಸ್ವಲ್ಪ ಕಾಲ ಇದ್ದು ಹೋಗಿದ್ದೇನೆ.

**ನಾನು :–** ಕ್ರೈಸ್ತವ ಮತದೊಳಗೆ ಬದಲಾಗುವುದಕ್ಕೆ ಇಷ್ಟ ಇಲ್ಲದಿರುವಾಗ ಕೊನೆಗೆ ಕ್ರೈಸ್ತರಾಗಿ ಹೇಗೆ ಬದಲಾಗಿದ್ದೀರಾ. ಯಾವಾಗ ಬದಲಾಗಿದ್ದೀರಾ?

**ಪಾಸ್ಟರ್ :–** ನಾನು ಹೈದರಾಬಾದ್ ಸೇರಿದ ನಂತರ ಸಿನಿಮಾ ಫೀಲ್ಡಿನೊಳಗೆ ಹೋಗಿದ್ದೇನೆ. ಒಬ್ಬ ಡೈರೆಕ್ಟರ್ ಕೆಳಗೆ ಕೋಡೈರೆಕ್ಟರಾಗಿ ಕೆಲಸ ಮಾಡಿದ್ದೇನೆ. ಆ ಸಮಯದಲ್ಲಿ ನನಗೆ ಬಹಳಜನರೊಂದಿಗೆ ಪರಿಚಯಗಳು ಏರ್ಪಟ್ಟಿವೆ. ಅಲ್ಲಿಯವರೆಗೂ ಮತ್ತು ಪಾನೀಯಗಳು ಕುಡಿಯುವುದು ಅಭ್ಯಾಸವಿಲ್ಲದ ನಾನು ಕುಡಿಯುವುದಕ್ಕೆ ಅಭ್ಯಾಸವಾಗಿದ್ದೇನೆ. ಒಂದು ದಿನ ರಾತ್ರಿ ಸಮಯದಲ್ಲಿ ನಾನು ನನ್ನ ಸ್ನೇಹಿತರು ಎಲ್ಲರೂ ಸೇರಿ ಜೀಪಿನಲ್ಲಿ ಹೈದರಾಬಾದ್ ನಿಂದ ಬೆಂಗಳೂರಿಗೆ ಹೋಗುವುದಕ್ಕೆ ಹೊರಟಿದ್ದೇವೆ. ಆಗ ಫೋರ್‌ವೇ ರೋಡ್ ಇಲ್ಲ, ಅಗಲವಾದ ಒಂದೇ ರೋಡ್ಡು ಇತ್ತು. ಕರ್ನೂಲು ದಾಟಿ ಸ್ವಲ್ಪ ದೂರ ಹೋದ ನಂತರ ಒಂದು ಊರಿನಲ್ಲಿ ರಸ್ತೆಮೇಲೆ ಸ್ಪೀಡ್‌ಬ್ರೇಕರ್ಸ್ ಇರುವುದರಿಂದ ಜೀಪ್ ವೇಗವನ್ನು ಕಡಿಮೆಮಾಡಿ ಸ್ಪೀಡ್‌ಬ್ರೇಕರನ್ನು ಡ್ರೈವರ್ ದಾಟಿಸಿದ್ದಾನೆ. ಆಗ ಜೀಪ್‌ನಲ್ಲಿ ಡ್ರೈವರ್ ಹೊರತು ಎಲ್ಲರೂ ಚೆನ್ನಾಗಿ ಕುಡಿದಿದ್ದೇವೆ. ನಾನು ಜೀಪಿನ ಕೊನೆಯಲ್ಲಿ ಕುಳಿತಿರುವುದರಿಂದ ಸ್ಪೀಡ್‌ಬ್ರೇಕರನ್ನು ಜೀಪು ದಾಟುವಾಗ ಪೂರ್ತಿ ಮತ್ತಿನಲ್ಲಿರುವ ನಾನು ಜೀಪಿನ ಹಿಂದಿನ ಡೋರ್ ಹತ್ತಿರದಿಂದ ರಸ್ತೆಮೇಲಕ್ಕೆ ಬೀಳುವುದು ನಡೆಯಿತು. ನಾನು ಕೆಳಗೆ ಬೀಳುವುದನ್ನು ಡ್ರೈವರ್ ಗಮನಿಸಲಿಲ್ಲ. ಆದರೆ ನನ್ನ ಪಕ್ಕದಲ್ಲಿರುವ ವ್ಯಕ್ತಿ ನಾನು ಕೆಳಗೆ ಬಿದ್ದಿರುವುದು ನೋಡಿದ್ದಾನೆ. ತಕ್ಷಣ ಆತನು “ಡ್ರೈವರ್ ನೀನು ಹಿಂದಕ್ಕೆ ಬಾ” ಎಂದನು. ಬ್ರೇಕರ್ಸ್ ದಾಟಿದ ನಂತರ ಮುಂದಕ್ಕೆ ಹೋದ ಡ್ರೈವರ್ ಏಕೆ ಅಂದರೂ ಆತನು ನಾನು ಬಿದ್ದಿರುವ ವಿಷಯ ಹೇಳದಂತೆ ಹಿಂದಕ್ಕೆ ಬಾ ಎಂದು ಹೇಳುವುದರಿಂದ ಡ್ರೈವರ್ ರಿವರ್ಸ್‌ಗೇರ್ ಹಾಕಿ ಸ್ಪೀಡಾಗಿ ಹಿಂದಕ್ಕೆ ಬಂದನು. ಆಗ ಕೆಳಗೆಬಿದ್ದಿರುವ ನಾನು

ಏಳುವುದಕ್ಕೆ ಪ್ರಯತ್ನ ಮಾಡುತ್ತಿದ್ದರೂ ಮೇಲೇಳಲಾರದೆ ಹೋಗುತ್ತಿದ್ದೇನೆ. ಅಷ್ಟರಲ್ಲಿ ರಿವರ್ಸ್‌ನಲ್ಲಿ ಬಂದಿರುವ ಜೀಪ್ ಹಿಂದಿನ ಚಕ್ರಗಳು ನನ್ನಮೇಲೆ ಹತ್ತಿ ಇಳಿದಿದೆ, ಕೆಳಗೆ ಬಿದ್ದಾಗ ತಲೆಗೆ ಗಾಯವಾದಾಗ, ಜೀಪು ನನ್ನ ಮೇಲೆ ಹತ್ತಿದಾಗ ಕಾಲು ಕೈಗಳು ಮುರಿದು ಪೂರ್ತಿ ಆಪತ್ತಿನ ಸ್ಥಿತಿಯೊಳಗೆ ಹೋಗಿದ್ದೇನೆ.

ಡ್ರೈವರ್ ತಪ್ಪು ಏನೂ ಇಲ್ಲ. ಕುಡಿದ ಮತ್ತಿನಲ್ಲಿ ನಾವು ಮಾಡಿಕೊಂಡ ತಪ್ಪಿನಿಂದ ನನಗೆ ದೊಡ್ಡ ದುರಂತ ನಡೆದಿದೆ. ನನ್ನ ಸ್ನೇಹಿತರು ತಕ್ಷಣ ನನ್ನನ್ನು ಜೀಪಿನೊಳಗೆ ಹಾಕಿಕೊಂಡು ಪುನಃ ಹಿಂದಕ್ಕೆ ಕರ್ನೂಲಿಗೆ ಬಂದರು. ನಾನು ಅಪಸ್ಮಾರಕ ಸ್ಥಿತಿಯಲ್ಲಿ ಇದ್ದುಹೋಗಿದ್ದೇನೆ. ನಾನು ಬದುಕುವುದಿಲ್ಲವೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಎರಡನೆ ದಿನ ನನ್ನ ಹೆಂಡತಿ ಮಕ್ಕಳು ಎಲ್ಲರೂ ಕರ್ನೂಲಿನಲ್ಲಿನ ಆಸ್ಪತ್ರೆಗೆ ಬಂದು ನನ್ನನ್ನು ನೋಡಿ ಅಳುತ್ತಿದ್ದಾರೆ. ಅವರು ಅಳುವುದು ನನಗೆ ಕಾಣಿಸುತ್ತಿದ್ದರೂ ನಾನು ಅವರೊಂದಿಗೆ ಮಾತನಾಡಲಾರದೆ ಹೋಗಿದ್ದೇನೆ. ನನ್ನ ಹೆಂಡತಿಯೊಂದಿಗೆ ಕೂಡಾ ನನಗೆ ಚಿಕಿತ್ಸೆ ಮಾಡುವ ಡಾಕ್ಟರ್ ನಾನು ಬದುಕುವುದಿಲ್ಲವೆಂದು ಹೇಳಿದ್ದಾನಂತೆ. ಎಲ್ಲರನ್ನು ನೋಡುತ್ತಿದ್ದರೂ ನಾನು ಯಾರೊಂದಿಗೂ ಮಾತನಾಡಲಾರದೆ ಹೋಗುತ್ತಿದ್ದೇನೆ. ಅಂತಹ ಸ್ಥಿತಿಯಲ್ಲಿ ಏಸು ನನಗೆ ಕಾಣಿಸಿ "ನೀನು ನಿನ್ನ ಮನಸ್ಸನ್ನು ಬದಲಾಯಿಸು. ನೀನು ನನಗೆ ಇಷ್ಟನಾದವನಾಗಿ ಇರುತ್ತೀಯಾ." ಎಂದು ಹೇಳಿದ್ದಾನೆ. ಆ ಮಾತನ್ನು ಮಾತ್ರ ಹೇಳಿದ ಏಸು ನಂತರ ಕಾಣಿಸಲಿಲ್ಲ. ಎರಡನೆ ದಿನವೇ ನಾನು ಎಲ್ಲರೊಂದಿಗೆ ಮಾತನಾಡುವುದು ನಡೆದಿದೆ. ವಾರದ ದಿನಗಳೊಳಗೆ ಪೂರ್ತಿ ಚೆನ್ನಾಗಾಗಿದ್ದೇನೆ. ಹಾಗೆ ನಾನು ಗುಣ (ವಾಸಿ) ವಾಗುವುದು ಅಲ್ಲಿನ ಡಾಕ್ಟರ್‌ಗಳಿಗೆ ಆಶ್ಚರ್ಯವಾಗಿದೆ. ಏಸುಪ್ರಭುವೇ ನನ್ನನ್ನು ಅಪಾಯದಿಂದ ಕಾಪಾಡಿದ್ದಾನೆಂದು ಅರ್ಥವಾಗಿದೆ. ಆ ಸಂಘಟನೆಯಿಂದ ಪೂರ್ತಿಯಾಗಿ ದ ನಾನು, ಅದೇ ತಿಂಗಳಲ್ಲಿಯೇ ಏಸುನನ್ನು ವಿಶ್ವಾಶಿಸಿ ಕ್ರೈಸ್ತವ ಮತದೊಳಗೆ ಸೇರುವುದು ನಡೆದಿದೆ. ಆಗಿನಿಂದ ನಾನು ಸಿನಿಫೀಲ್ಡ್‌ನಿಂದ ಹೊರಗೆ ಬಂದು, ಏಸು ಜ್ಞಾನವನ್ನು ಬೋಧಿಸುವುದಕ್ಕೆ ಮೊದಲುಮಾಡಿದ್ದೇನೆ.

ನಾನು ಪ್ರಾರ್ಥನೆ ಮಾಡಿದಾಗ ಬಹಳಜನರ ರೋಗಗಳು ಗುಣವಾಗುತ್ತಾ ಬಂದಿವೆ. ನಂತರ ಪಾಸ್ಟರಾಗಿ ಬದಲಾಗಿಹೋಗಿದ್ದೇನೆ.

**ನಾನು :–** ಒಂದುಮಾತು. ನೀವು ಏಸುನನ್ನು ಗಾಳಿಯಾಗಿ ನೋಡಿದ್ದೀರಾ? ಧೂಳಿಯಾಗಿ ನೋಡಿದ್ದೀರಾ? ಹೊಗೆಯಾಗಿ ನೋಡಿದ್ದೀರಾ? ನೆರಳಾಗಿ ನೋಡಿದ್ದೀರಾ? ಸರ್ವಸಾಧಾರಣ ಮನುಷ್ಯನಾಗಿ ನೋಡಿದ್ದೀರಾ? ಇಲ್ಲವೆ ಆಕಾಶದಲ್ಲಿ ಬೊಂಬೆಯಾಗಿ ನೋಡಿದ್ದೀರಾ?

**ಪಾಸ್ಟರ್ :–** ಈಗ ನಿಮ್ಮನ್ನು ನೋಡಿದಂತೆ ನೋಡಿದ್ದೇನೆ. ಈಗ ಯಾವ ವಿಧವಾಗಿ ನೀವು ಎದುರುಗಡೆ ಇದ್ದು ಕಾಣಿಸಿ ಮಾತನಾಡುತ್ತಿದ್ದರೊ ಅದೇ ವಿಧವಾಗಿ ಏಸು ನನಗೆ ಕಾಣಿಸುವುದೂ, ನನ್ನೊಂದಿಗೆ ಮಾತನಾಡುವುದೂ ನಡೆದಿದೆ. ನಾನು ಆ ಸಮಯದಲ್ಲಿ ಎಂತಹ ಭ್ರಮೆಯಲ್ಲಿ ಇಲ್ಲ. ಏಸು ಬದುಕಿರುವಾಗ ಕಾಣಿಸಿದಂತೆ ಕಾಣಿಸಿದ್ದಾನೆ.

**ನಾನು :–** ನೀವು ಈಗ ಕ್ರೈಸ್ತವ ಬೋಧಕರಾಗಿ ಇದ್ದೀರಾ. ಆದ್ದರಿಂದ ಬೈಬಲ್ ಗ್ರಂಥದಲ್ಲಿನ ವಿಷಯಗಳೆಲ್ಲವೂ ಕ್ಷುಣ್ಣವಾಗಿ ತಿಳಿದಿರುತ್ತವೆ. ಬೈಬಲ್ ಗ್ರಂಥದಲ್ಲಿ ಯೋಹಾನು ಸುವಾರ್ತೆಯಲ್ಲಿ 16ನೆ ಅಧ್ಯಾಯದಲ್ಲಿ 16ನೆ ವಾಕ್ಯ ಹೀಗೆ ಇದೆ. **"ಸ್ವಲ್ಪ ಕಾಲವಾದ ನಂತರ ನೀವಿನ್ನು ನನ್ನನ್ನು ನೋಡುವುದಿಲ್ಲ, ಮತ್ತೆ ಸ್ವಲ್ಪ ಕಾಲಕ್ಕೆ ನನ್ನನ್ನು ನೋಡುತ್ತೀರೆಂದು ಹೇಳಿದನು."** ಈ ವಾಕ್ಯದಲ್ಲಿ "ಸ್ವಲ್ಪ ಕಾಲವಾದ ನಂತರ ನೀವಿನ್ನು ನನ್ನನ್ನು ನೋಡುವುದಿಲ್ಲ." ಎಂದು ಸ್ವತಹವಾಗಿ ಏಸುವೇ ಹೇಳಿದ್ದಾನೆ ಅಲ್ಲವೆ! ಅಂತಹದರಲ್ಲಿ ಆತನು ಹೋಗಿ ಎರಡುಸಾವಿರ ವರ್ಷಗಳಾದ ನಂತರ ನಿಮಗೆ ಹೇಗೆ ಕಾಣಿಸಿದ್ದಾನೆ? ಎಂಬ ಪ್ರಶ್ನೆ ನನಗೆ ಬಂದಿದೆ, ನನ್ನ ಪ್ರಶ್ನೆಗೆ ದಯಮಾಡಿ ಉತ್ತರಕೊಡಿ.

**ಪಾಸ್ಟರ್ :–** ಈಗ ನೀವು ಹೇಳಿದ ವಾಕ್ಯದಲ್ಲಿ ಮೊದಲು ಸ್ವಲ್ಪ ಭಾಗ ಮಾತ್ರವೇ ಹೇಳಿದ್ದೀರಿ. ಪೂರ್ತಿ ವಾಕ್ಯದಲ್ಲಿ ಎರಡನೆ ಭಾಗದಲ್ಲಿ ಕಾಮಾ ನಂತರ "ಮತ್ತೆಸ್ವಲ್ಪ ಕಾಲಕ್ಕೆ ನನ್ನನ್ನು ನೋಡುತ್ತೀರೆಂದು ಹೇಳಿದನು." ಎಂದು ಇದೆ ಅಲ್ಲವೆ!

ಆತನ ವಾಕ್ಯದ ಪ್ರಕಾರ ಆತನು ಹೋದ ನಂತರ ಈಗ ನನಗೆ ಕಾಣಿಸಿದ್ದಾನೆಂದು ನೀವೇಕ್ಕೆ ಅಂದುಕೊಳ್ಳಬಾರದು.

**ನಾನು :–** ಏಸು ಸ್ವತಃವಾಗಿ ಈ ವಾಕ್ಯವನ್ನು ಹೇಳಿದ ದಿನದಂದು ಈ ವಾಕ್ಯವನ್ನು ಕೇಳಿದ ಆತನ ಶಿಷ್ಯರಲ್ಲಿ ಕೆಲವರು (ಯೊಹಾನ್ 16,17) "ಸ್ವಲ್ಪ ಕಾಲವಾದ ನಂತರ ನನ್ನನ್ನು ನೋಡುವುದಿಲ್ಲ, ಮತ್ತೆಸ್ವಲ್ಪ ಕಾಲಕ್ಕೆ ನನ್ನನ್ನು ನೋಡುತ್ತೀರಾ, ನಾನು ತಂದೆಯ ಹತ್ತಿರಕ್ಕೆ ಹೋಗುತ್ತಿದ್ದೇನೆಂದು ಆತನು ನಮ್ಮೊಂದಿಗೆ ಹೇಳುತ್ತಿರುವ ಮಾತು ಏನೆಂದು" ಒಬ್ಬರೊಂದಿಗೆ ಒಬ್ಬರು ಹೇಳಿಕೊಂಡರು. (ಯೊಹಾನ್–16–18) "ಸ್ವಲ್ಪ ಕಾಲವೆಂದು ಆತನು ಹೇಳುತ್ತಿರುವುದೇನು? ಆತನು ಹೇಳುತ್ತಿರುವ ಸಂಗತಿ ನಮಗೆ ತಿಳಿಯದೆಂದು ಹೇಳಿಕೊಂಡರು? ಈ ವಿಷಯ ಬೈಬಲ್‌ನಲ್ಲಿಯೇ ಅದೇ ಸುವಾರ್ತೆಯಲ್ಲಿ 17,18 ವಾಕ್ಯಗಳಲ್ಲಿ ಇದೆ. ನಂತರ (ಯೊಹಾನ್–16–19,20,21,22 ರಲ್ಲಿ) ತನ್ನ ಶಿಷ್ಯರು ಅಂದು ಕೊಳ್ಳುತ್ತಿರುವ ವಿಷಯವನ್ನು ಗ್ರಹಿಸಿದ ಏಸು ಅವರಿಗೆ ಪ್ರಸವ ವೇದನೆಯನ್ನು ಪಡುವ ಸ್ತ್ರೀಯನ್ನು ಕುರಿತು ಉಪಮಾನವನ್ನು ಹೇಳಿದನು. ನಂತರ ಕೂಡಾ ತಾನು ಹೇಳಿದ ವಿಷಯ ಅವರಿಗೆ ಪೂರ್ತಿ ಅರ್ಥವಾಗಲಿಲ್ಲ ಎಂಬ ಉದ್ದೇಶದಿಂದ ಅದೇ ಸುವಾರ್ತೆಯಲ್ಲಿ 16ನೆ ಅಧ್ಯಾಯದಲ್ಲಿ 25ನೆ ವಾಕ್ಯದಲ್ಲಿ ಹೀಗೆ "ಈ ಸಂಗತಿಗಳನ್ನು ಗೂಢಾರ್ಥವಾಗಿ ನಿಮ್ಮೊಂದಿಗೆ ಹೇಳಿದೇನು, ಆದರೆ ನಾನೀನ್ನು ಎಂದಿಗೂ ಗೂಢಾರ್ಥವಾಗಿ ನಿಮ್ಮೊಂದಿಗೆ ಮಾತನಾಡದೆ ತಂದೆಯನ್ನು ಕುರಿತು ನಿಮಗೆ ಸ್ಪಷ್ಟವಾಗಿ ತಿಳಿಸುವ ಗಡಿಯ ಬರುತ್ತಿದೆ." ಎಂದು ಹೇಳಿದ್ದಾನೆ. 16ನೆ ವಾಕ್ಯದಿಂದ 24ನೆ ವಾಕ್ಯದವರೆಗೂ ಆತನು ಹೇಳಿದ ಉಪಮಾನದಿಂದ ಸಹಾ ಯಾರಿಗೂ ಅರ್ಥವಾಗಲಿಲ್ಲ ಎಂಬ ಉದ್ದೇಶದಿಂದ 25ನೆ ವಾಕ್ಯದಲ್ಲಿ **"ನಾನು ಈ ಸಂಗತಿಗಳನ್ನು ಗೂಢಾರ್ಥದಿಂದ ನಿಮಗೆ ಹೇಳಿದ್ದೇನೆ"** ಅಂದಿದ್ದಾನೆ. ಏಸು ಹೇಳಿದ ಈ ಮಾತನ್ನನುಸರಿಸಿ ಆತನು ಹೇಳಿದ ಮಾತುಗಳಲ್ಲಿ ನಾವು ಅರ್ಥಮಾಡಿಕೊಂಡಿರುವುದು ತಪ್ಪೆಂದು ತಿಳಿಯುತ್ತಿದೆ. ಗೂಢಾರ್ಥವಾಗಿ ಎಂದು ಹೇಳಿದಾಗ ಆ ವಿಷಯ ಪೂರ್ತಿ ಅರ್ಥವಾಗಲಿಲ್ಲವೆಂದು ಸ್ಪಷ್ಟವಾಗುತ್ತಿದೆ.

ಆದ್ದರಿಂದ ಆತನು ಹೋದ ನಂತರ ಈಗ ಕಾಣಿಸಿದ್ದಾನೆಂದು ಏಕೆ ಅಂದುಕೊಳ್ಳಬೇಕು? ನೀವಿನ್ನು ನನ್ನನ್ನು ನೋಡುವುದಿಲ್ಲ ಎನ್ನುವಂತೆ ಆತನು ಎಂದಿಗೂ ಕಾಣಿಸುವುದಿಲ್ಲ ಎಂದು ಏಕೆ ಅಂದುಕೊಳ್ಳಬಾರದು. ಈಗ ಕಾಣಿಸಿದ್ದಾನೆ ಅನ್ನುವುದು ಏಸು ಮಾತಿನ ಪ್ರಕಾರ ತಪ್ಪಲ್ಲವಾ? ಇದಕ್ಕೆ ನೀವೇನು ಹೇಳುತ್ತೀರಾ?

**ಪಾಸ್ಟರ್ :–** ಏಸು ಹೇಳಿದ 16ನೆ ಅಧ್ಯಾಯ 16ನೆ ವಾಕ್ಯದಲ್ಲಿ "ಸ್ವಲ್ಪ ಕಾಲವಾದರು ನಂತರ ನನ್ನನ್ನು ನೋಡುವುದಿಲ್ಲ." ಎಂದು ಹೇಳಿದ ಮೊದಲ ಮಾತಿನಲ್ಲಿ ನಾನು ಭೂಮಿಮೇಲೆ ಇಲ್ಲದಂತೆ ಹೋಗುತ್ತೇನೆಂದು ಪೂರ್ತಿ ಅರ್ಥವಾಗುತ್ತಿದೆ. "ಸ್ವಲ್ಪಕಾಲಕ್ಕೆ ನನ್ನನ್ನು ನೋಡುತ್ತೀರಾ." ಅಂದಿರುವ ಎರಡನೆ ಮಾತಿನಲ್ಲಿ ನಂತರ ಸ್ವಲ್ಪ ಕಾಲಕ್ಕೆ ಕಾಣಿಸುತ್ತೇನೆಂದು ಅರ್ಥವಾಗುತ್ತಿದೆ. ಇದರಲ್ಲಿ ಅರ್ಥವಾಗದ ವಿಷಯ ಏನಿದೆ.

**ನಾನು :–** ಅರ್ಥವಾಗದ ವಿಷಯವಿದೆಯೆಂದಲ್ಲವೆ ಅದೇ ಸುವಾರ್ತೆಯಲ್ಲಿ ಅದೇ ಅಧ್ಯಾಯದಲ್ಲಿ, ಆ ಮಾತಿನ ನಂತರವೇ 25ನೆ ವಾಕ್ಯದಲ್ಲಿ "ನಾನು ಈ ಸಂಗತಿಗಳನ್ನು ಗೂಢಾರ್ಥವಾಗಿ ಹೇಳಿದೆನು" ಅಂದಿದ್ದಾನೆ. ಇದರಿಂದ 16ನೆ ವಾಕ್ಯದಲ್ಲಿ ಗೂಢಾರ್ಥ ಇಲ್ಲ ಅಂದರೆ ಏಸು ಹೇಳಿದಮಾತು ತಪ್ಪಾಗಿರಬೇಕು. ಆತನು ಹೇಳಿದಮಾತು ಎಂದಿಗೂ ಅಸತ್ಯವಲ್ಲ, ಆತನ ಮಾತು ಎಂದಿಗೂ ಸತ್ಯ ಎಂದು ನೀನು ಒಪ್ಪಿಕೊಂಡರೆ ನೀನು ಅರ್ಥಮಾಡಿಕೊಂಡಿರುವುದು, ನೀನು ಏಸುನನ್ನು ನೋಡಿದ್ದೇನೆಂದು ಹೇಳಿದ ವಿಷಯ ತಪ್ಪಾಗಿರಬೇಕು. ಈಗ ಏಸು ಹೇಳಿರುವುದು ಸತ್ಯವಾ? ನೀವು ಹೇಳಿರುವುದು ಸತ್ಯವಾ? ನೀವೆ ಹೇಳಿರಿ.

**ಪಾಸ್ಟರ್ :–** ಏಸು ಮಾತು ಸತ್ಯವೆಂದು ನಾನು ಒಪ್ಪಿಕೊಳ್ಳುತ್ತೇನೆ. ಕೆಲವರಿಗೆ ಅಂದರೆ! ಇತರ ಮತಸ್ಥರಿಗೆ ಏಸು ಮರಣಿಸಿದ ನಂತರ ಕಾಣಿಸುವುದಿಲ್ಲ ಅನ್ನುವವರಿಗೆ ಆತನ ಮಾತುಗಳು ಅರ್ಥ ವಾಗಲಿಲ್ಲವೆಂದು ಹೇಳಬಹುದು.

ಅಂತಹವರಿಗೆ ಆತನ ಮಾತುಗಳು ಗೂಢಾರ್ಥವಾಗಿ ಇರುತ್ತವೆ. ಹಾಗಲ್ಲದೆ ಏಸು ಹೇಳಿದಮಾತು ಸತ್ಯವೆನ್ನುವ ನಮ್ಮಂಥವರಿಗೆ ಹೇಗೆ ಗೂಢಾರ್ಥವಾಗುತ್ತದೆ? ನೀವೆ ಹೇಳಿರಿ.

**ನಾನು :–** ಪಾಸ್ಟರವರೆ! ನೀವು ಬೈಬಲ್ ಬೋಧಕರು, ನಿಮ್ಮಂಥವರು ಎಲ್ಲಿಯೂ ತಪ್ಪಾಗಿ ಅರ್ಥಮಾಡಿಕೊಳ್ಳಬಾರದು. ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ ಏಸು ಹೇಳಿದ 16 ವಾಕ್ಯ ನಿನಗಾಗಲಿ, ನನಗಾಗಲಿ ಅಲ್ಲ. ಆ ದಿನ ಆತನ ಸಮೀಪದಲ್ಲಿರುವ ಹನ್ನೊಂದುಜನ ಶಿಷ್ಯರನ್ನು ಉದ್ದೇಶಿಸಿ ಹೇಳಿದ ಮಾತೆಂದು ಮರೆತುಹೋಗಬಾರದು. 17ನೆ ವಾಕ್ಯ ಮೊದಲಿನಲ್ಲಿಯೇ **ಆತನ ಶಿಷ್ಯರಲ್ಲಿ ಕೆಲವರು** ಎಂದು ಇದೆ. ಆದ್ದರಿಂದ ಆ ದಿನ ಆತನ ಶಿಷ್ಯರು ಅಂದುಕೊಳ್ಳುವ ಮಾತನ್ನು ಹೇಳಿಕೊಳ್ಳುತ್ತಿದ್ದೇವೆ. 18ನೆ ವಾಕ್ಯದ ಮೊದಲಿನಲ್ಲಿಯೇ **ಸ್ವಲ್ಪಕಾಲವೆಂದು ಆತನು ಹೇಳುತ್ತಿರುವುದೇನು**? ಎಂದು ಶಿಷ್ಯರು ಅಂದುಕೊಳ್ಳುವ ಮಾತಿಗೆ ಸಮಾನವಾಗಿ 19 ರಿಂದ 24 ವಾಕ್ಯದವರೆಗೂ ಪ್ರಸವವೇದನೆ ಪಡುವ ಸ್ತ್ರೀಯನ್ನು ಉಪಮಾನವಾಗಿ ಹೇಳುವುದೇ ಅಲ್ಲದೆ 25ನೆ ವಾಕ್ಯದಲ್ಲಿ ಈ ಸಂಗತಿಗಳು ನಿಮ್ಮೊಂದಿಗೆ ಗೂಢಾರ್ಥವಾಗಿ ಹೇಳಿದೇನು, ಬರುವಂತಹ ಕಾಲದಲ್ಲಿ ಸ್ಪಷ್ಟವಾಗಿ ತಿಳಿಸುವ ಕಾಲ ಬರುತ್ತದೆಂದು ಹೇಳಿದ್ದಾನೆ. ಅಲ್ಲಿ ಹೇಳಿರುವುದು ಶಿಷ್ಯರಿಗೆಂದೇ ಇದೆಯಾಗಲಿ, ನಿನಗೆ ಎಂದಾಗಲಿ, ಇತರ ಮತಸ್ಥರಿಗೆಂದಾಗಲಿ ಹೇಳಲ್ಪಡಲಿಲ್ಲ. ಆ ದಿನ 16ನೆ ವಾಕ್ಯದಲ್ಲಿ ಮೊದಲು ಸ್ವಲ್ಪ ಕಾಲವಾದ ನಂತರ ನೀವಿನ್ನು ನನ್ನನ್ನು ನೋಡುವುದಿಲ್ಲ ಎಂದಿದ್ದಾನೆ. ಆತನ ಮಾತಿನಲ್ಲಿನ ಗೂಢಾರ್ಥ ಏನೆಂದರೆ! ಮರುದಿನ ಅಂದರೆ ಎರಡನೆದಿನ ಆತನು ಸಿಲುಬೆ ಹಾಕಲ್ಪಡುತ್ತಾನೆ. ಮೂರನೆಯದಿನ ಆತನು ಪುನಃ ಏಳುತ್ತಾನೆ. ಪುನಃ ಎದ್ದ ನಂತರ ನಲವತ್ತು (40) ದಿನಗಳು ಶಿಷ್ಯರಿಗೆ ಕಾಣಿಸುತ್ತಾನೆ. ಆ ನಂತರ ಆತನು ಕಾಣಿಸದಂತೆ ಹೋಗುತ್ತಾನೆ. ಒಟ್ಟಾರೆ ಈ ವಿಷಯವೆಲ್ಲವನ್ನು ಎರಡು ಮಾತುಗಳಲ್ಲಿ ಹೇಳುವುದು ನಡೆದಿದೆ. ನಾಳೆಯ ದಿನದವರೆಗೂ ನಿಮ್ಮ ಮುಂದಿರುವ ನಾನು ಶಿಲುಬೆಹಾಕಲ್ಪಟ್ಟು ಇಲ್ಲದಂತೆಹೋಗಿ, ಮೂರು ದಿನಗಳಿಗೆ ಕಾಣಿಸುತ್ತೇನೆ ಎಂದು ಹೇಳಿಹೋದ ವಿಷಯವನ್ನು ಗೂಢಾರ್ಥವಾಗಿ ಮತ್ತೆ ಸ್ವಲ್ಪ ಕಾಲಕ್ಕೆ ನನ್ನನ್ನು ನೋಡುತ್ತೀರೆಂದು

ಶಿಷ್ಯರಿಗೆ ಹೇಳಿದ್ದಾನೆ. ನಡೆಯುವಂತಹ ವಿಷಯವನ್ನು ಏಸು ಹೇಳಿದ್ದಾನೆಂದು ಆಗ ಅವರು ಗ್ರಹಿಸಲಾರದೆಹೋಗಿದ್ದಾರೆ. ಮೂರು ದಿನಗಳಿಗೆ ಪುನಃ ನಾನು ಕಾಣಿಸುತ್ತೇನೆಂದು ಆತನು ಹೇಳಿದ ಭಾವನೆ ಗೂಢಾರ್ಥದಿಂದ ಕೂಡಿಕೊಂಡಿದೆ ಯೆಂದು ಒಪ್ಪಿಕೊಳ್ಳದೆತಪ್ಪುವುದಿಲ್ಲ. ಇಲ್ಲಿ ಚೆನ್ನಾಗಿ ಗಮನಿಸಿದರೆ ಏಸು ಸಿಲುಬೆ ಹಾಕಲ್ಪಟ್ಟಿರುವುದು ಶುಕ್ರವಾರ. ಆತನು ಪುನಃ ಎದ್ದಿರುವುದು ಆದಿ (ಭಾನು) ವಾರ ಆತನು ಕಾಣಿಸದಂತೆ ಇರುವುದು ಶುಕ್ರವಾರ ಸಾಯಂಕಾಲದಿಂದ ಮತ್ತು ಶನಿವಾರ ಎರಡು ದಿನಗಳು ಕೂಡಾ ಪೂರ್ತಿಯಿಲ್ಲ. ಆದಿವಾರ ಮುಂಜಾನೆ ಬೆಳ್ಳಗಾಗದ ಮೊದಲೆ ಕಾಣಿಸಿದ್ದಾನೆ. ಈ ಲೆಕ್ಕಪ್ರಕಾರ ಆತನು ಕಾಣಿಸದಂತೆ ಇರುವುದು ಎರಡು ದಿನಗಳು ಮಾತ್ರವೇ. ಕೊನೆಯದಾಗಿ ಆತನು ತನ್ನ ಶಿಷ್ಯರೊಂದಿಗೆ ಮಾತನಾಡಿರುವುದು ಗುರುವಾರ. ಆತನು ಹೇಳಿದ ದಿನವಾದ ಗುರುವಾರದಿಂದ ಲೆಕ್ಕಿಸಿದರೆ ಏಸು ಎದ್ದಿರುವುದು ಮೂರನೆ ದಿನವಾಗುತ್ತದೆ. ಆತನು ಮಾತನಾಡಿದ ಮಾತುಗಳಲ್ಲಿ ಗೂಢಾರ್ಥವಾಗಿ ನಾನು ಮೂರು ದಿನಗಳಿಗೆ ಕಾಣಿಸುತ್ತೇನೆಂದು ಹೇಳುತ್ತಾ "ಮತ್ತೆ ಸ್ವಲ್ಪಕಾಲಕ್ಕೆ ನನ್ನನ್ನು ನೋಡುತ್ತೀರಾ." ಎಂದು ಅಂದಿದ್ದಾನೆ. ಮೊದಲು ನಡೆದುಹೋಗುವ ವಿಷಯವನ್ನು ಗೂಢಾರ್ಥ ವಾಗಿ ಹೇಳುವುದಲ್ಲದೆ ಆ ವಿಷಯವನ್ನು 16ನೆ ವಾಕ್ಯದಲ್ಲಿ ಎರಡನೆ ಭಾಗದಲ್ಲಿ ಹೇಳುವುದು ನಡೆದಿದೆ. ಮೊದಲು ನಡೆದುಹೋಗುವುದು ಹಿಂದೆ, ಹಿಂದೆ ನಡೆದುಹೋಗುವುದು ಮೊದಲು ಹೇಳುವುದರಿಂದ, ವಾಕ್ಯ ಅರ್ಥವಾಗದ ಸ್ಥಿತಿಯಲ್ಲಿ ನಿಂತುಹೋಗಿದೆ.

16ನೆ ವಾಕ್ಯದಲ್ಲಿ ಮೊದಲೇ **"ಸ್ವಲ್ಪ ಕಾಲವಾದ ನಂತರ ನೀವಿನ್ನು ನನ್ನನ್ನು ನೋಡುವುದಿಲ್ಲ."** ಎಂದು ಇದೆ ಅಲ್ಲವೆ! ಅದನ್ನು ಪರಿಶೀಲಿಸಿ ನೋಡಿದರೆ, ಏಸು ಶಿಲುವೆ ಹಾಕಲ್ಪಟ್ಟು ಸ್ವಲ್ಪ ಕಾಲ ಅನ್ನಲ್ಪಡುವ ಎರಡು ದಿನಗಳಿಗೆ ಅಂದರೆ ಆದಿವಾರ ಕಾಣಿಸುತ್ತಾನೆಂದು ಅರ್ಥ. ಹಾಗೆ ಮಾತನಾಡಿದಾಗಿನಿಂದ ಮೂರು ದಿನಗಳಿಗೆ ಇಲ್ಲವೆ ಶಿಲುಬೆ ಹಾಕಲ್ಪಟ್ಟಾಗಿನಿಂದ ಎರಡು ದಿನಗಳಿಗೆ ಪುನಃ ಕಾಣಿಸಿದ ಏಸು ನಲವತ್ತು (40) ದಿನಗಳ ವರೆಗೂ ಶಿಷ್ಯರಿಗೆ ಕಾಣಿಸಿ ನಂತರ ಶಾಶ್ವತವಾಗಿ ಕಾಣಿಸದಂತೆ ಹೋಗಿದ್ದಾನೆ. ಇದೇ

ವಿಷಯವನ್ನೆ ಗೂಢಾರ್ಥವಾಗಿ **"ಸ್ವಲ್ಪ ಕಾಲವಾದ ನಂತರ ನೀವಿನ್ನು ನನ್ನನ್ನು ನೋಡುವುದಿಲ್ಲ."** ಎಂದು ಅಂದಿದ್ದಾನೆ. ವಾಕ್ಯ ಗೂಢಾರ್ಥವಾಗಿ ಇರುವುದಕ್ಕೆ ಒಂದೇ ವಾಕ್ಯದಲ್ಲಿಯೇ ಮುಂದಿನದು ಹಿಂದಕ್ಕೆ, ಹಿಂದಿನದು ಮುಂದಕ್ಕೆ ಹೇಳುವುದು ನಡೆದಿದೆ. ಅದು ಗೂಢಾರ್ಥವಾದ ವಿಷಯವೆಂದು ಅವರಿಗೆ ತಿಳಿಯದು. ಆದ್ದರಿಂದ ನಾನು ನಿಮ್ಮೊಂದಿಗೆ ಗೂಢಾರ್ಥವಾಗಿ ಹೇಳಿದ್ದೇನೆ ಎಂದು 25ನೆ ವಾಕ್ಯದಲ್ಲಿ ಹೇಳಿದ್ದಾನೆ. ಅದೇ 25ನೆ ವಾಕ್ಯದ ಕೊನೆಯಲ್ಲಿ **"ಸ್ಪಷ್ಟವಾಗಿ ತಿಳಿಸುವ ಗಡಿಯ(ಕಾಲ) ಬರುತ್ತಿದೆ"** ಎಂದು ಸಹಾ ಅಂದಿದ್ದಾನೆ. ಆ ಗಡಿಯ ಬಂದಿದೆಯಾದ್ದರಿಂದ ನಮಗೆ ಆ ದಿನ ಹೇಳಿದ ನಿಗೂಢವಾದ ವಿಷಯ ಸುಲಭವಾಗಿ ಅರ್ಥವಾಗಿಹೋಗಿದೆ. ಈಗ ನಮಗೆ ಸ್ಪಷ್ಟವಾಗಿ ಅರ್ಥವಾಗಿರುವುದನ್ನನುಸರಿಸಿ, ಆ ದಿನ ಏಸು ಶಿಷ್ಯರೊಂದಿಗೆ ಮಾತನಾಡಿದ ನಂತರ ಮರುದಿನ ಶಿಲುಬೆ ಹಾಕಲ್ಪಟ್ಟ ಎರಡು ದಿನಗಳಿಗೆ ಅಂದರೆ ಸ್ವಲ್ಪಕಾಲಕ್ಕೆ ಆತನು ಪುನಃ ಕಾಣಿಸಿದ್ದಾನೆ. ಅದು ನಡೆದ ನಂತರ ಅಂದರೆ ಸ್ವಲ್ಪ ಕಾಲವಾದ ನಂತರ ನೀವಿನ್ನು ನನ್ನನ್ನು ನೋಡುವುದಿಲ್ಲ ಅಂದಂತೆ, ಶಿಷ್ಯರಿಗೆ ಅವರ ಜೀವಿನಪೂರ್ತಿಯವರೆಗು ಕಾಣಿಸದಂತೆ ಹೋಗಿದ್ದಾನೆ. ಆದ್ದರಿಂದ 16ನೆ ವಾಕ್ಯ ಆ ದಿನ ಶಿಷ್ಯರಿಗೆ ಹೇಳಿರುವುದಾಗಲಿ, ನಮಗೆ ಹೇಳಿರುವುದಲ್ಲ. ಇದರಿಂದ ಆ ದಿನ ಏಸು ಹೇಳಿದಂತೆ ಯಾರಿಗೂ ಕಾಣಿಸಲಿಲ್ಲ.

**ಪಾಸ್ಟರ್ :–** ನೀವು ಹೇಳಿದಂತೆ ನನಗೆ ಕಾಣಿಸಿರುವುದು ಅಸತ್ಯವೇ ಆಗಿರಬಹುದು. ಆದರೆ ನನ್ನಂತೆ ಏಸುನನ್ನು ನೋಡಿದ್ದೇನೆ, ಏಸು ಮಾತನಾಡಿದ್ದಾನೆ ಎಂದು ಹೇಳುವವರು ಬಹಳಜನ ಇದ್ದಾರೆ ಅಲ್ಲವೆ! ಅವರ ವಿಷಯವೇನನ್ನುತ್ತಿರಾ?

**ನಾನು :–** ನಿನ್ನಂತೆ ಅವರು ತಪ್ಪಾಗಿ ತಿಳಿದಿರಬಹುದು. ಯಾರಾನ್ನೊ ನೋಡಿ, ಯಾರನ್ನೊ ಅಂದುಕೊಂಡಿರಬಹುದು. ಏಸು ಬದುಕಿರುವ ಸಮಯದಲ್ಲಿ ಪ್ರತ್ಯಕ್ಷವಾಗಿ ನೋಡಿದವರಿಗೆ ಹೊರತು, ಆತನು ಹೇಗಿರುತ್ತಾನೊ ಯಾರಿಗೂ ತಿಳಿದಿಲ್ಲ. ಈಗಿರುವ ಮನುಷ್ಯರಿಗೆ ಆತನ ನಿಜವಾದ ಆಕಾರ ಹೇಗಿರುತ್ತದೊ ತಿಳಿಯದಿರುವಾಗ, ಕಾಣಿಸದ ಮನುಷ್ಯನನ್ನು ಏಸುವೇಯೆಂದು (ಆತನೇಯೆಂದು)

ಹೇಳುವುದು ತಪ್ಪಲ್ಲವೆ! ಒಂದುಬಾರಿ ಮಾನವ ಶರೀರವನ್ನು ಬಿಟ್ಟವರು ಯಾರಾಗಲಿ, ಪುನಃ ಅದೇ ರೂಪದಿಂದ ಕಾಣಿಸುವುದಕ್ಕೆ ಸಾಧ್ಯವಿಲ್ಲ. ಯಾರಿಷ್ಟಕ್ಕವರು ಊಹಿಸಿಕೊಂಡು ಭ್ರಮೆ ಪಟ್ಟಿರಬಹುದು ಆದರೆ, ಆತನನ್ನು ಯಾರೂ ನೋಡಲಿಲ್ಲ. ಇದೇ ವಿಷಯವನ್ನೇ ಯೊಹಾನ್ ಸುವಾರ್ತೆ 16ನೆ ಅಧ್ಯಾಯದಲ್ಲಿ 16ನೆ ವಚನದಲ್ಲಿ ಸ್ಪಷ್ಟವಾಗಿ ಹೇಳುತ್ತಾ "ಸ್ವಲ್ಪ ಕಾಲವಾದ ನಂತರ ನೀವಿನ್ನು ನನ್ನನ್ನು ನೋಡುವುದಿಲ್ಲ." ಎಂದು ಅಂದಿದ್ದಾನೆ. ಆತನ ಮಾತು ಅಸತ್ಯವಲ್ಲ, ಆದ್ದರಿಂದ ಯಾರಾಗಲಿ ಏಸುನನ್ನು ನೋಡಿದ್ದೇನೆ ಎನ್ನುವುದು ತಪ್ಪಾಗುತ್ತದೆ.

**ಪಾಸ್ಟರ್ :–** ನೀವು ಹೇಳುವುದೆಲ್ಲಾ ಚೆನ್ನಾಗೆ ಇದೆಯಾಗಲಿ, ನೀವು ಏನಾದರೂ ತಪ್ಪಾಗಿ ಹೇಳುತ್ತಿದ್ದೀರಾ? ಎಂಬ ಅನುಮಾನ ನನ್ನಲ್ಲಿ ಸ್ವಲ್ಪ ಇದೆ. ಏಕೆಂದರೆ! ನಿಮ್ಮ ಮಾತನ್ನು ಶಂಕಿಸುವುದಕ್ಕೆ ನನಗೆ ಬೈಬಲ್‌ನಲ್ಲಿ ಒಂದು ಆಧಾರವಿದೆ. ಅದು ಯೊಹಾನ್ ಸುವಾರ್ತೆ 14ನೆ ಅಧ್ಯಾಯದಲ್ಲಿ ಮೂರನೆ (3) ವಚನದಲ್ಲಿ **"ನಾನಿರುವ ಸ್ಥಳದಲ್ಲಿ ನೀವೂ ಇರುವಂತೆ ಪುನಃ ಬಂದು ನನ್ನಹತ್ತಿರ ಇರುವುದಕ್ಕೆ ನಿಮ್ಮನ್ನು ತೆಗೆದುಕೊಂಡು ಹೋಗುತ್ತೇನೆ."** ಎಂದು ಅಂದಿದ್ದಾನೆ ಅಲ್ಲವೆ! ಅಂತಹದರಲ್ಲಿ ಆತನು ಬರುತ್ತೇನೆಂದು ಹೇಳಿದಮಾತನ್ನು ನೀವು ಸತ್ಯವೆಂದು ಒಪ್ಪಿಕೊಳ್ಳದೆತಪ್ಪದು. ಆತನು ಬಂದಾಗ ನಾವು ಆತನನ್ನು ನೋಡಿದಂತೆ ಅಲ್ಲವೆ! ಆತನು ನಮಗೆ ಕಾಣಿಸಿದಂತೆ ಅಲ್ಲವೆ! ಇದಕ್ಕೆ ನೀವೆನನ್ನುತ್ತೀರಾ?

**ನಾನು :–** ಏನನ್ನುತ್ತೇನೆ! ನೀವು ಪುನಃ ತಪ್ಪು ಮಾಡಿದ್ದೀರೆಂದು ಹೇಳುತ್ತೇನೆ. ಆತನು ಹೇಳಿದ ಪ್ರತಿಮಾತು ಸತ್ಯವೇ, ಆದರೆ ನಾನು ಬಂದು ನಿಮ್ಮನ್ನು ತೆಗೆದುಕೊಂಡು ಹೋಗುತ್ತೇನೆ ಅಂದಿದ್ದಾನಾಗಲಿ, ನೀವು ನನ್ನನ್ನು ನೋಡುತ್ತೀರೆಂದು ಹೇಳಿದ್ದಾನಾ? ಅಲ್ಲಿ ಆತನು ಆ ಮಾತನ್ನು ಹೇಳಲಿಲ್ಲ. ಯೊಹಾನ್ 14ನೆ ಅಧ್ಯಾಯದಲ್ಲಿ 18ನೆ ವಾಕ್ಯ ಹೀಗೆ ಇದೆ ನೋಡಿರಿ. "ನಿಮ್ಮನ್ನು ಅನಾಥರನ್ನಾಗಿ ಬಿಡುವುದಿಲ್ಲ, ನಿಮ್ಮ ಹತ್ತಿರಕ್ಕೆ ಬರುತ್ತೇನೆ. ಸ್ವಲ್ಪಕಾಲವಾದ ನಂತರ ಲೋಕವು ಪುನಃ ನನ್ನನ್ನು ಎಂದಿಗೂ ನೋಡುವುದಿಲ್ಲ" ಎಂದು

ಅಂದಿದ್ದಾನೆ ಅಲ್ಲವೆ! ಈ ದಿನ ನಾವೂ ಕೂಡಾ ದೇವರನ್ನು ನೋಡಬೇಕೆಂದು ಇದ್ದೇವೆ. ಆದರೆ ದೇವರು ಕಾಣಿಸುತ್ತಾನಾ? ದೇವರಿಗೆ ರೂಪವೇ ಇಲ್ಲ ಆದ್ದರಿಂದ ಕಾಣಿಸುವವನು ದೇವರೇ ಅಲ್ಲ. ಆದ್ದರಿಂದ ನಾವು ದೇವರನ್ನು ಎಂದಿಗೂ ನೋಡಲಾರೆವು. ಪ್ರಪಂಚದಲ್ಲಿ ಯಾರಾದರಾಗಲಿ ಮನುಷ್ಯನಾಗಿ ಅಲ್ಲದೆ ಇದ್ದಂತಾದರೆ ಆಗ ದೇವರನ್ನು ನೋಡುತ್ತಾನೆ, ತಿಳಿಯುತ್ತಾನೆ. "ದೇವರ ವಿಷಯ ದೇವರಿಗೆ ತಿಳಿದಿದೆ" ಎಂಬ ಸೂತ್ರದ ಪ್ರಕಾರ ನೀನು ಮನುಷ್ಯನಾಗಲ್ಲದೆ ದೇವರಾಗಿ ಬದಲಾದರೆ ಆಗ ನೀನು, ದೇವರು ಬೇರೆಯಲ್ಲ ಆದ್ದರಿಂದ ನಿನಗೆ ದೇವರ್ಯಾರೊ ತಿಳಿಯಲ್ಪಡುತ್ತದೆ. ಆಗ ನೀನು ದೇವರನ್ನು ನೋಡಿದಂತೆಯೆ. ಅಲ್ಲಿಯವರೆಗೂ ನೀನ್ಯಾರೊ ನಿನ್ನ ಆಕಾರವೇನೊ ನಿನಗೆ ತಿಳಿಯದು, ದೇವರುಹೇಗೆ ನಿನಗೆ ತಿಳಿಯುತ್ತಾನೆ.

ದೇವರು ನಿನ್ನನ್ನು ತನ್ನಲ್ಲಿ ಬೆರೆಸಿಕೊಳ್ಳಬೇಕೆಂದುಕೊಂಡಾಗ ಆತನೇ ನಿನ್ನಹತ್ತಿರಕ್ಕೆ ಬಂದು ನಿನ್ನನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ. ಅಲ್ಲಿಯವರೆಗೂ ಆತನು ಯಾರೋ ತಿಳಿಯದ ನೀನು ದೇವರತ್ತಿರಕ್ಕೆ ಹೋಗಲಾರೆ, ಆತನಲ್ಲಿ ಐಕ್ಯ ಆಗಲಾರೆ. ದೇವರಲ್ಲಿ ಐಕ್ಯವಾಗಿಹೋದರೂ ಏಸು ತನ್ನಂತೆ ತನ್ನ ಶಿಷ್ಯರನ್ನು ಬದಲಾಯಿಸುವುದಕ್ಕೆ ಬರುತ್ತಾನೆ. ಆತನ ಶರೀರ ಇಲ್ಲದಿದ್ದರೂ ಜೀವಿಸಿದ್ದಾನೆ. ಅಂದರೆ ದೇವರಾಗಿ ಬದಲಾಗಿ ಸರ್ವವು ವ್ಯಾಪಿಸಿದ್ದಾನೆಂದು ಅರ್ಥ. ತನ್ನ ಶಿಷ್ಯರನ್ನು ಕೂಡಾ ತನ್ನಂತೆ ಜೀವಿಸುವಂತೆ ಮಾಡಿ ಅಂದರೆ ದೇವರಲ್ಲಿ ಐಕ್ಯವಾಗುವಂತೆ ಮಾಡುವುದರಿಂದ ಆಗ ಶಿಷ್ಯರು ಆತನನ್ನು ನೋಡಿದಂತಾ ಗುತ್ತದೆ. ಆಗ ಗುರು ಶಿಷ್ಯರೆಂಬ ಬೇಧವಿಲ್ಲ, ಎಲ್ಲರೂ ಒಂದೇ ಆಗಿರುತ್ತಾರೆ. ಆದ್ದರಿಂದ 14ನೆ ಅಧ್ಯಾಯದಲ್ಲಿನ 19ನೆ ವಾಕ್ಯದಲ್ಲಿ **"ಆದರೆ ನೀವು ನನ್ನನ್ನು ನೋಡುತ್ತೀರಾ, ನಾನು ಜೀವಿಸಿದ್ದೇನೆ ಆದ್ದರಿಂದ ನೀವೂ ಜೀವಿಸುತ್ತೀರಾ."** ಅಂದಿದ್ದಾನೆ. ಹಾಗೆ ನೋಡುವುದು ಆಗಲೇ ನಡೆಯುತ್ತದೆ. ಅದಕ್ಕುಮೊದಲು ಯಾರೂ ದೇವರನ್ನು ನೋಡಿರುವಂತೆ ದೇವರಲ್ಲಿ ಐಕ್ಯವಾದ ಏಸುನನ್ನು ಆತನ ಶಿಷ್ಯರು ಕೂಡಾ ನೋಡಿರಲಾರರು. ಎಲ್ಲರೂ ಒಂದಾಗಿ ಬೆರೆತುಹೋದಾಗ

ಮಾತ್ರವೇ ದೇವರ್ಯಾರಾಗಿರುವುದು ಮನುಷ್ಯನಿಗೆ, ಗುರುವು ಯಾರಾಗಿರುವುದು ಶಿಷ್ಯನಿಗೆ ತಿಳಿಯುತ್ತದೆ. ಆದ್ದರಿಂದ ಅದೇ 14ನೆ ಅಧ್ಯಾಯದಲ್ಲಿ 20ನೆ ವಾಕ್ಯದಲ್ಲಿ "ನಾನು ನನ್ನ ತಂದೆ (ದೇವರ) ಯಲ್ಲಿಯೂ ನೀವು ನನ್ನಲ್ಲಿಯೂ, ನಾನು ನಿಮ್ಮಲ್ಲಿಯೂ ಇದ್ದೇವೆಂದು ಆ ದಿನ ನೀವು ತಿಳಿಯುತ್ತೀರಾ" ಅಂದಿದ್ದಾನೆ. ಇದು ಎಲ್ಲದಕ್ಕಿಂತ ದೊಡ್ಡವಾಕ್ಯವೆಂದು ಪ್ರತಿ ಕ್ರೈಸ್ತವನು ಮುಖ್ಯವಾಗಿ ಗುರುತು ಇಟ್ಟುಕೊಳ್ಳಬೇಕು. ಈಗ ಹೇಳಿದ ವಾಕ್ಯಗಳಲ್ಲಿನ ವಿವರ ಅರ್ಥವಾಗದಿದ್ದರೆ ಇದಕ್ಕಿಂತ ವಿವರವಾಗಿ ಮತ್ತ್ಯಾವಾಗಲೂ ಹೇಳಲ್ಪಡುವುದಿಲ್ಲವೆಂದು ಕೂಡಾ ಜ್ಞಾಪಕ ಇಟ್ಟುಕೊಳ್ಳಿ.

ಇಲ್ಲಿಯವರೆಗೂ ಹೇಳಿರುವುದು ಕ್ರೈಸ್ತವರಿಗೆಂದು, ತಮಗೆ ಸಂಬಂಧವಿಲ್ಲವೆಂದು, ಇತರ ಮತದವರಂದುಕೊಳ್ಳುವುದಕ್ಕೆ ಅವಕಾಶ ಇದೆ. ಮಾಯೆ ಮನುಷ್ಯನನ್ನು ಯಾವಕಡೆಯಾದರೂ ಬದಲಾವಣೆ ಮಾಡಬಲ್ಲದು. ಕೊನೆಗೆ ನನ್ನನ್ನು ಕೂಡಾ ಕ್ರೈಸ್ತವನನ್ನಾಗಿ ತೋರಿಸಿ, ಈತನು ಇಂದೂವೆ (ಹಿಂದೂ) ಅಲ್ಲವೆಂದು, ನಿಮ್ಮಿಂದಲೇ ಎನಿಸಬಲ್ಲನು. ಯಾರೇನಂದುಕೊಂಡರೂ, ನಾನು ಎಂದಿಗೂ ಇಂದೂವೇ, ಆದಿಯಿಂದ ಇಂದೂವೇ, ನನ್ನ ವಿಷಯ ಪಕ್ಕಕ್ಕಿಟ್ಟು ನಿಮ್ಮ ವಿಷಯದಲ್ಲಿ ಆಲೋಚಿಸಿರಿ. ಈಗ ಹೇಳಿದ ವಿಷಯ ಒಂದು ಕ್ರೈಸ್ತವರಿಗೇ ಅಲ್ಲ. ಎಲ್ಲಾ ಮತದವರಿಗೂ ಒಂದೇ ಸೂತ್ರ ಅನ್ವಯಿಸುತ್ತದೆ. ಇದೇ ವಿಷಯ ಭಗವದ್ಗೀತೆಯಲ್ಲಿ ಇದೆ, ಖುರಾನ್‌ಲ್ಲಿ ಇದೆ. ಆದರೆ ಈ ವಿಷಯವೆಲ್ಲವೂ ನಿಗೂಢವಾಗಿ ಇರುವುದರಿಂದ, ನಾವು ಜ್ಞಾನಿಗಳು ಅಂದುಕೊಂಡವರಿಗೆ ಸಹಿತ ಅರ್ಥವಾಗದಂತೆ ಹೋಗಿದೆ. ನಾನು ಭಗವದ್ಗೀತೆಯನ್ನು ಸಂಪೂರ್ಣವಾಗಿ ಓದಿದ್ದೇನೆ. ನಂತರ ತ್ರೈತ ಸಿದ್ಧಾಂತ ಭಗವದ್ಗೀತೆಯಾಗಿ ವಿವರಿಸಿ ಬರೆದಿದ್ದೇನೆ. ಭಗವದ್ಗೀತೆಯಲ್ಲಿನ ಜ್ಞಾನ ನನ್ನ ಸ್ವಂತವಾಗಿ ಹೋಗಿದೆ. ಅದರಲ್ಲಿ ದೇವರಿಗೆ ಸಂಬಂಧಿಸಿದ ಧರ್ಮಗಳೆಲ್ಲ ನನ್ನಲ್ಲಿ ನಿಂತುಹೋಗಿವೆ. ದೇವರ ಜ್ಞಾನ ನನ್ನ ಸ್ವಂತ ಧನವಾಗಿ, ದೇವರ ಧರ್ಮಗಳು ನನ್ನ ಸ್ವಂತ ಆಸ್ತಿಯಾಗಿ ತಯಾರಾಗಿ ಹೋಗಿರುವುದರಿಂದ,

ನಾನು ಯಾವ ಮತದಲ್ಲಿನ ಜ್ಞಾನವನ್ನಾದರೂ ಸುಲಭವಾಗಿ ವಿವರಿಸಬಲ್ಲೆನು. ನನಗೆ ಮತಗಳೊಂದಿಗೆ ಸಂಬಂಧವಿಲ್ಲ. ಅದರಲ್ಲಿನ ದೇವರ ಜ್ಞಾನದೊಂದಿಗೆ ಸಂಬಂಧವಿದೆ. ಆದ್ದರಿಂದ ದೇವರ ಜ್ಞಾನ ಯಾವ ಮತದಲ್ಲಿನದಾದರೂ, ಅದು ನನಗೆ ಸುಲಭಸಾಧ್ಯವೇ. ಸ್ಪಷ್ಟವಾಗಿ ಹೇಳುವ ಗಡಿಯ (ಟೈಮ್) ಬರುತ್ತಿದೆಯೆನ್ನುವಂತೆ, ಆ ಗಡಿಯೆ ಬಂದಿದೆಂದು ನಾನಂದುಕೊಳ್ಳುತ್ತಿದ್ದೇನೆ. ಆದ್ದರಿಂದ ಗೂಢಾರ್ಥವಾಗಿರುವುದು ಅರ್ಥವಾಗದ ಜ್ಞಾನ ಇರುವುದಕ್ಕೆ ಅವಕಾಶವೇ ಇಲ್ಲ. ಆದರೂ ಮನುಷ್ಯ ತನ್ನ ಅಹಮ್‌ನಿಂದ ಇತರರು ಹೇಳಿರುವುದಕ್ಕಿಂತ, ನನಗೆ ಹೆಚ್ಚಾಗಿ ತಿಳಿದಿದೆ ಅಂದುಕೊಂಡರೆ ಅವನ ಕರ್ಮಕ್ಕೆ ಅವನೇ ಹೊಣೆ. ಈ ಜ್ಞಾನ ನಿಜವಾಗಲು ದೇವರ ಜ್ಞಾನವೇ ಎಂದು ತಿಳಿಯದಿದ್ದರೆ, ನಿಮ್ಮ ಕರ್ಮಗಳಿಂದ ನಿಮ್ಮನ್ನು ರಕ್ಷಿಸುವ ಜ್ಞಾನವೇ ಇರುವುದಿಲ್ಲ. ಇದೆಲ್ಲವೂ ನಿಮ್ಮ ಒಳ್ಳೆಯದನ್ನು ಕೋರಿ ಹೇಳುವುದಾಗಿ ತಿಳಿಯಬೇಕು.

**ಪ್ರಶ್ನೆ :–** ಜ್ಞಾಪಕಶಕ್ತಿಗು ಜ್ಞಾನಶಕ್ತಿಗು ಏನಾದರೂ ಸಂಬಂಧವಿದೆಯಾ? ಜ್ಞಾಪಕಶಕ್ತಿ ಇರುವವನಿಗೆ ಒಳ್ಳೆಯ ಜ್ಞಾನವಿರುವುದೂ, ಜ್ಞಾಪಕಶಕ್ತಿ ಇಲ್ಲದವನು ಜ್ಞಾನದಲ್ಲಿ ಹಿಂದುಳಿಯುವುದು ಇರುತ್ತದಾ? ಓದುಬರದವನಿಗೆ, ಓದು ಬರುವವನಿಗೆ ಜ್ಞಾನದಲ್ಲಿ ವ್ಯತ್ಯಾಸ ಇರುತ್ತದಾ? ದಯಮಾಡಿ ವಿವರವಾಗಿ ಹೇಳುತ್ತೀರೆಂದು ಕೋರುತ್ತಿದ್ದೇವೆ.

**ಉತ್ತರ :–** ಜ್ಞಾಪಕಶಕ್ತಿ ಎಂಬುದು ಶರೀರದಲ್ಲಿನ ಮನಸ್ಸನ್ನನುಸರಿಸಿ ಇರುತ್ತದೆ. ಶರೀರದಲ್ಲಿ ಹೊರ ಅವಯವಗಳು, ಒಳ ಅವಯವಗಳೆಂದು ಎರಡು ವಿಧಗಳಿರುತ್ತವೆ. ಒಳಗಿನ ಅವಯವಗಳು ಸೂಕ್ಷ್ಮವಾಗಿ ಕಾಣಿಸುವುದಿಲ್ಲ. ಹೊರಗಿನ ಅವಯವಗಳು ಒಟ್ಟು ಹತ್ತು ಹೆಸರುಗಳು ಹೊಂದಿವೆ ಹೊರಗೆ ಕಾಣಿಸುತ್ತಿರುತ್ತವೆ. ಶರೀರದಲ್ಲಿನ ಕಾಣಿಸದ ಒಳಗಿನ ಅವಯವಗಳಲ್ಲಿ ಮನಸ್ಸು ಮತ್ತು ಬುದ್ಧಿ ಅನ್ನುವವು ಎರಡು ಮುಖ್ಯವಾದವು ಇವೆ. ಮನಸ್ಸಿಗೆ ಬಲ ಜ್ಞಾಪಕ, ಬುದ್ಧಿಗೆ ಬಲ ಜ್ಞಾನ ಎಂದು ಹೇಳಬಹುದು. ಮನಸ್ಸು ಎಷ್ಟು ದೃಢವಾಗಿ ಇದ್ದರೆ ಅದಕ್ಕೆ ಜ್ಞಾಪಕಶಕ್ತಿ ಸಹ ಅಷ್ಟೇ ಬಲವಾಗಿ ಇರುತ್ತದೆ. ಮನಸ್ಸು ಬಲಹೀನವಾದರೆ

ಜ್ಞಾಪಕಶಕ್ತಿ ಕೂಡಾ ಕಡಿಮೆಯಾಗಿರುತ್ತದೆ. ಅದೇ ವಿಧವಾಗಿ ಬುದ್ಧಿ ಕೂಡಾ ಎಷ್ಟು ದೃಢವಾಗಿ ಇದ್ದರೆ ಅದಕ್ಕೆ ಜ್ಞಾನಶಕ್ತಿ ಕೂಡಾ ಅಷ್ಟೇ ಬಲವಾಗಿರುತ್ತದೆ. ಶರೀರದೊಳಗಿರುವ ಮನಸ್ಸಿಗು, ಬುದ್ಧಿಗು ಹೆಸರಿರುವಾಗ ನಾಮ ಇದ್ದರೆ (ಹೆಸರಿದ್ದರೆ) ರೂಪವಿರುತ್ತದೆ, ರೂಪವಿದ್ದರೆ ನಾಮವಿರುತ್ತದೆ ಎಂಬ ಸೂತ್ರದ ಪ್ರಕಾರ ಶರೀರದಲ್ಲಿನ ಎರಡು ಮುಖ್ಯವಾದ ಅವಯವಗಳಿಗು ಹೆಸರಿದೆ, ಆದ್ದರಿಂದ ಅವುಗಳಿಗೆ ರೂಪವಿದೆಯೆಂದೇ ಹೇಳಬಹುದು. ಆದರೆ ಅವುಗಳ ರೂಪ ಕಣ್ಣಿಗೆ ಕಾಣಿಸುವಂತೆ ಸ್ಥೂಲವಾಗಿ ಇರುವುದಿಲ್ಲ. ಕಣ್ಣಿಗೆ ಕಾಣಿಸದಂತೆ ಮತ್ತು ಯಾವ ಯಂತ್ರದೃಷ್ಟಿಗು ತಿಳಿಯದಂತೆ ಸೂಕ್ಷ್ಮರೂಪ ಹೊಂದಿವೆ. ಬುದ್ಧಿ ಸೂಕ್ಷ್ಮವಾದ ಆಕಾರವನ್ನು ಹೊಂದಿದೆ ಎಂದು ಪ್ರತ್ಯೇಕಿಸಿ **ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ** ಹೇಳಿಕೊಂಡಿದ್ದೇವೆ. ಬುದ್ಧಿಗಿರುವ ಸೂಕ್ಷರೂಪವನ್ನು ನಾವು ಗ್ರಹಿಸಿದ್ದೇವೆ. ಆದ್ದರಿಂದ ನಾವು ಗ್ರಹಿಸಿದ ಬುದ್ಧಿಯೊಂದರ ಸೂಕ್ಷ್ಮ ರೂಪವನ್ನು ಸ್ಥೂಲವಾಗಿ ಎಲ್ಲರಿಗೂ ತಿಳಿಯುವಂತೆ ಚಿತ್ರಿಸಿ ತೋರಿಸಿದ್ದೇವೆ. ಬುದ್ಧಿಗೆ ಇರುವ ರೂಪ ಎಲ್ಲರಲ್ಲಿ ಒಂದೇ ವಿಧವಾಗಿದ್ದರೂ, ದಪ್ಪ ತೆಳುವು ಎಂಬ ವ್ಯತ್ಯಾಸಗಳಾಗಿ ಎಲ್ಲರಲ್ಲಿ ಇದ್ದಂತೆ ಹೇಳಿಕೊಂಡಿದ್ದೇವೆ. ಮನುಷ್ಯ ಶರೀರದಲ್ಲಿ ಬುದ್ಧಿ ಎಲ್ಲಿ ಸ್ಥಾನ ಹೊಂದಿರುವುದು, ಯಾವ ಆಕಾರದಿಂದ ಇರುವುದು, ಏನು ಕೆಲಸ ಮಾಡುತ್ತಿರುವುದು, ಎಲ್ಲವನ್ನು ಸಂಕ್ಷಿಪ್ತವಾಗಿ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ನಾವು ಹೇಳುವುದು ನಡೆದಿದೆ. ಇಲ್ಲಿಯವರೆಗೂ ಯಾರಿಗೂ ಬುದ್ಧಿವೊಂದರ ಆಕಾರದ ಬಗ್ಗೆ ತಿಳಿಯದು, ಅದರ ಸ್ಥಾನದ ಬಗ್ಗೆ ತಿಳಿಯದು. ಸೂಕ್ಷ್ಮವಾಗಿ ಯಾರಿಗೂ ತಿಳಿಯದಂತಿರುವ ಬುದ್ಧಿಯೊಂದರ ಆಕಾರವನ್ನು, ಸ್ಥಾನವನ್ನು ಹೇಳುವುದರಿಂದ **ತ್ರೈತ ಸಿದ್ಧಾಂತ ಭಗವದ್ಗೀತೆ** ಒಳ್ಳೆಯ ಹೆಸರು ಸಂಪಾದಿಸಿ ಕೊಂಡಿದೆ. ಒಂದು ಬುದ್ಧಿವೊಂದರ ಆಕಾರವನ್ನೇ ಅಲ್ಲದೆ ಶರೀರದಲ್ಲಿ ಮುಖ್ಯಪಾತ್ರ ಪೋಷಿಸುತ್ತಿರುವ ಜೀವಿಯೊಂದರ ಆಕಾರವನ್ನು ಕೂಡಾ ತ್ರೈತ ಸಿದ್ಧಾಂತ ಭಗವದ್ಗೀತೆ ತಿಳಿಸಿದೆಯೆಂದು ಗರ್ವದಿಂದ ಹೇಳುತ್ತಿದ್ದೇನೆ. ಅಷ್ಟೇಯಲ್ಲದೆ ಎಷ್ಟೋಜನ ಜ್ಞಾನಿಗಳು ಸಹಿತ ಮನಸ್ಸನ್ನು ಕುರಿತು ಪೂರ್ತಿ ವಿಷಯವನ್ನು ತಿಳಿಯಲಾರದೆ ಅದನ್ನು ಅನೇಕ ವಿಧಗಳಾಗಿ ಹೋಲಿಸಿಕೊಂಡು

ಹೇಳಿಕೊಂಡಿದ್ದಾರೆ. ಆದರೂ ಅದು ಏನೊ ಅರ್ಥವಾಗದೆ ಜುಟ್ಟು ಕಿತ್ತುಕೊಂಡಿದ್ದಾರೆ. ಅಂತಹ ಅರ್ಥವಾಗದ ಮನಸ್ಸಿಗು ಸಹಿತ ಅರ್ಥ ಹೇಳಿ, ಆಕಾರವನ್ನು ಕೂಡಾ ಹೇಳಿರುವುದು **ತ್ರೈತ ಸಿದ್ಧಾಂತ ಭಗವದ್ಗೀತೆ.**

ಶರೀರದಲ್ಲಿ ಕಾಣಿಸದ ಬುದ್ಧಿಗು, ಜೀವಿಗು ಆಕಾರವಿದೆಯೆಂದು ಹೇಳುವುದೇ ಅಲ್ಲದೆ, ಅವುಗಳಿಗೆ ಆಕಾರವನ್ನು ಎಲ್ಲಾರ ಸ್ಥೂಲ ಕಣ್ಣುಗಳಿಗೆ ತಿಳಿಯುವಂತೆ ಚಿತ್ರಪಟವನ್ನು ಗೀಚಿ ತೋರಿಸುವುದು ನಡೆದಿದೆ. ಆದರೆ ಆ ದಿನ ಮನಸ್ಸಿಗೆ ಆಕಾರವಿದೆಯೆಂದು ಹೇಳಿದ ನಾವು ಮನಸ್ಸೊಂದರ ಆಕಾರವನ್ನು ಬೊಂಬೆಯಾಗಿ ಗೀಚಿ ತೋರಿಸಲಾರದೆ ಹೋಗಿದ್ದೇವೆ. ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಮನಸ್ಸೊಂದರ ಆಕಾರವನ್ನು ತೋರಿಸಲಾರದೆ ಹೋಗುವುದಕ್ಕೆ ಕಾರಣ ಅದು ಒಂದು ಆಕಾರದಲ್ಲಿ ಸ್ಥಿರಸ್ಥಾಯಿಯಾಗಿ ಇರುವುದಿಲ್ಲ. ಮನುಷ್ಯನಲ್ಲಿ ನಡೆಯುವ ಮೂರು ಅವಸ್ಥೆಗಳಲ್ಲಿ ಮೂರು ವಿಧಗಳ ಆಕಾರವನ್ನು ಹೊಂದುತ್ತಿರುತ್ತದೆ. ನಿದ್ರೆಯಲ್ಲಿ ಒಂದು ವಿಧದ ಆಕೃತಿಯಿಂದಿರುವ ಮನಸ್ಸು, ಎಚ್ಚರದಲ್ಲಿ ಎರಡನೆ ಆಕಾರವನ್ನು ಹೊಂದುತ್ತದೆ. ಹಾಗೆಯೇ ಸ್ವಪ್ನದಲ್ಲಿ ನಿದ್ರೆ, ಎಚ್ಚರದಲ್ಲಿರುವ ಆಕಾರಗಳಾಗಿರದೆ ಬದಲಾಗಿರುತ್ತದೆ. ಆದ್ದರಿಂದ ಅಲ್ಲಿ ತೋರಿಸಲಿಲ್ಲ. ಇಲ್ಲಿ ಮನಸ್ಸನ್ನು ಕುರಿತು ಪ್ರಸ್ಥಾವನೆ ಬಂದಿದೆಯಾದ್ದರಿಂದ ಅದು ನಿದ್ರೆಯಲ್ಲಿರುವ ಆಕಾರವನ್ನಾದರೂ ಇಲ್ಲಿ ಸ್ಥೂಲವಾಗಿ ತೋರಿಸಿದ್ದೇವೆ. ನಂತರ ಪ್ರಚರಿಸಲ್ಪಡುವ **ತ್ರೈತ ಸಿದ್ಧಾಂತ ಭಗವದ್ಗೀತೆ**ಯಲ್ಲಿ ಮೂರು ಆಕಾರಗಳನ್ನು ತೋರಿಸುವುದು ನಡೆಯುತ್ತದೆಂದು ತಿಳಿಸುತ್ತಿದ್ದೇವೆ. ಮನಸ್ಸಿಗೆ ಒಂದು ಸ್ವಂತ ಆಕಾರವಿದೆ. ಅದು ಉಳಿದ ಎರಡು ಸಮಯಗಳಲ್ಲಿ ಆಕಾರವನ್ನು ಬದಲಾಯಿಸಿ ಕೊಂಡರೂ, ನಿದ್ರೆಯಲ್ಲಿರುವಾಗ ತನ್ನ ಸ್ವಂತ ಆಕಾರದೊಳಗೆ, ಸ್ವಂತ ಸ್ಥಳಕ್ಕೆ ಬರುತ್ತದೆ. ಮನಸ್ಸೊಂದರ ಸ್ವಸ್ಥಾನ ಬ್ರಹ್ಮನಾಡಿಯೆಂದು, ಅಲ್ಲಿನ ಅದರ ಆಕಾರವನ್ನು ಬಿಂದು ಆಕಾರವೆಂದು ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಮೊದಲೆ ಹೇಳಿಕೊಂಡಿದ್ದೇವೆ.

ನಮ್ಮಿಂದ ಬರೆಯಲ್ಪಟ್ಟ ಗೀತೆಯಲ್ಲಿ ಬುದ್ಧಿಯನ್ನು ಕುರಿತು ಹೇಳಿ, ಅದರ ಸ್ಥಾನವನ್ನು ಕುರಿತು ಹೇಳಿ, ಕೊನೆಗೆ ಆಕಾರವನ್ನು ಮುದ್ರಿಸಿ ತೋರಿಸಿದ್ದೇವೆ. ಅದರಿಂದ ಬುದ್ಧಿವೊಂದರ ರೂಪ ನಮ್ಮ ಭಗವದ್ಗೀತೆಯನ್ನು ಓದಿದವರೆಲ್ಲರಿಗೂ ಒಂದು ವಿಧವಾಗಿ ತಿಳಿದುಹೋಗಿದೆ. ಬುದ್ಧಿವೊಂದರ ಸ್ವರೂಪ ಮನುಷ್ಯನಿಗೆ ಮೊಟ್ಟಮೊದಲು ತಿಳಿದಿರುವುದು ನಮ್ಮ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿಯೇ, ಚಂದ್ರನ ಮೇಲೆ ಮನುಷ್ಯ ಮೊದಲು ಹೆಜ್ಜೆ ಇಟ್ಟು ಚಂದ್ರನು ಹೀಗೆ ಇದ್ದಾನೆಂದು ತಿಳಿಸಿದರೆ, ಅದಕ್ಕೆ ಎಷ್ಟೊಪಟ್ಟು ಸಂತೋಷಿಸಿದ ಮನುಷ್ಯರು, ನಾವು ಯಾರಿಗೂ ತಿಳಿಯದ ಬುದ್ಧಿ ಆಕಾರವನ್ನು ಮೊಟ್ಟಮೊದಲು ನೋಡಿ, ಹೀಗೆ ಇದೆಯೆಂದು ಅದರ ಬೊಂಬೆಯನ್ನು ತೋರಿಸಿದರೂ ಮನುಷ್ಯರಲ್ಲಿ ಸ್ವಲ್ಪವಾದರೂ ಚಲನೆ ಇಲ್ಲ. ಚಂದ್ರಬಿಂಬದಲ್ಲಿ ಯಾರೋ ಹೆಜ್ಜೆ ಇಟ್ಟರೆ, ತನಗೆ ಎಂಥಹ ಪ್ರಯೋಜನೆ ಇಲ್ಲದಿದ್ದರೂ, ಸಂತೋಷಿಸಿ ತಾವು ದೊಡ್ಡ ಜಯವನ್ನು ಹೊಂದಿದಂತೆ ಹೇಳಿಕೊಂಡಿದ್ದಾರೆ. ತನ್ನ ಶರೀರದಲ್ಲಿ ತನ್ನ ಬುದ್ಧಿವೊಂದರ ಆಕಾರವನ್ನು ತಿಳಿದಾಗ, ಅದೇನೋ ತನಗೆ ಸಂಬಂಧವಿಲ್ಲದ ವಿಷಯವೆನ್ನುವಂತೆ, ಅದರಿಂದ ತನಗೆ ಏನು ಪ್ರಯೋಜನೆ ಇಲ್ಲವೆನ್ನುವಂತೆ ಮನುಷ್ಯರಿರುವುದು ಅವರಲ್ಲಿನ ತಿಳುವಳಿಕೆ ಇಲ್ಲದ ಕೆಲಸ ಅಲ್ಲವೇ ಅನ್ನುತ್ತಿದ್ದೇವೆ. ತಿಳುವಳಿಕೆ ಕಡಿಮೆ ಅಂದರೆ ಬುದ್ಧಿ ಕಡಿಮೆ ಎಂದು ಅರ್ಥ. ಮನುಷ್ಯ ಕೆಲವು ವಿಷಯಗಳಲ್ಲಿ ತಿಳುವಳಿಕೆಯಿಂದ ಪ್ರವರ್ತಿಸುವುದು, ಕೆಲವು ವಿಷಯಗಳಲ್ಲಿ ತಿಳುವಳಿಕೆ ಇಲ್ಲದಂತೆ ಪ್ರವರ್ತಿಸುವುದು ನಡೆಯುತ್ತಿದೆಯೆಂದು ಎಲ್ಲರಿಗೂ ತಿಳಿದಿದೆ. ಅಮೆರಿಕಾ ಶಾಸ್ತ್ರಜ್ಞ ಒಬ್ಬನು ಚಂದ್ರನ ಮೇಲೆ ಮೊದಲು ಇಳಿದಿದ್ದಾನೆ ಎಂದು ವಾರ್ತೆ ತಿಳಿಯುತ್ತಲೇ, ತನ್ನ ತಿಳುವಳಿಕೆಯೆಲ್ಲವನ್ನು ಉಪಯೋಗಿಸಿ ಆ ವಿಷಯವನ್ನು ತಿಳಿಯದವರಿಗೆ ಕೂಡಾ ತಿಳಿಯಪಡಿಸಿ ಸಂತೋಷಿಸಿದ ವ್ಯಕ್ತಿ, ತನ್ನ ಶರೀರದಲ್ಲಿನ ಬುದ್ಧಿ ವಿಷಯವನ್ನು ಮೊಟ್ಟಮೊದಲಿಗೆ ಬೊಂಬೆರೂಪದಲ್ಲಿ ನೋಡಿದಾಗ ಏಕೆ ಸಂತೋಷಿಸಲಾರದೆ ಹೋಗಿದ್ದಾನೆ? ಏಕೆ ಚುರುಕಾಗಿ ತಿಳುವಳಿಕೆ ಎಲ್ಲವನ್ನು ಉಪಯೋಗಿಸಿ ಉಳಿದವರಿಗೆ ಆ ವಿಷಯವನ್ನು ತಿಳಿಸಲಾರದೆಹೋಗಿದ್ದಾನೆ ಎಂದು ಪ್ರಶ್ನಿಸಿಕೊಂಡು ನೋಡಿದರೆ ಅದರ ವಿಷಯ ಹೀಗೆ ಇದೆ.

ಪ್ರತಿ ಮನುಷ್ಯನಲ್ಲಿನ ಬುದ್ಧಿ ಒಂದೇ ಆದರೂ, ಅದಕ್ಕೆ ಎರಡು ಆಕಾರಗಳು ಇವೆ. ಇದಕ್ಕುಮೊದಲು ಮೂರು ಸಿದ್ಧಾಂತಗಳ ಭಗವದ್ಗೀತೆಯಲ್ಲಿ ನಾವು ಬುದ್ಧಿವೊಂದರ ಆಕಾರವನ್ನು ಚಿತ್ರಪಟದ ಮೂಲಕ ತೋರಿಸಿದ್ದೇವೆ. ಅಲ್ಲಿ ತೋರಿಸಿರುವುದು ಬುದ್ಧಿವೊಂದರ ಮುಂದಿನ ಆಕೃತಿಯೆಂದು ತಿಳಿಯಬೇಕು. ಮನುಷ್ಯನಿಗೆ ಮುಂದೆಗಡೆಯಿಂದ ಒಂದು ಆಕಾರ, ಹಿಂದೆಗಡೆಯಿಂದ ಒಂದು ಆಕಾರ ಇದ್ದಂತೆ, ಬುದ್ಧಿಗೆ ಹಿಂದೆಗಡೆಯಿಂದ ನೋಡಿದರೆ ಮತ್ತೊಂದು ಆಕಾರವಾಗಿ ಕಾಣಿಸುತ್ತದೆ. ಬುದ್ಧಿಗೆ ಮುಂದೆ ಹಿಂದೆಗಡೆಯ ಆಕಾರ ಬೇರೆಬೇರೆಯಾಗಿರುವಂತೆ ತಿಳಿಯುತ್ತಿದೆ. ಬುದ್ಧಿಗೆ ಎರಡು ಕಡೆಯಲ್ಲಿಯೂ ಎರಡು ಆಕಾರಗಳಿರುವುದರಿಂದ, ಅದು ಎರಡು ಮುಖಗಳ ಪ್ರಭಾವ ಹೊಂದಿರುವುದಾಗಿ ಒಂದುಕಡೆ ಒಂದು ವಿಧವಾಗಿ, ಮತ್ತೊಂದುಕಡೆ ಮತ್ತೊಂದು ವಿಧವಾಗಿ ಕೆಲಸ ಮಾಡುತ್ತಿದೆ. ಮುಂದೆಗಡೆಯ ಭಾಗಕ್ಕೆ ಒಂದು ವಿಧವಾದ ಬಲ ಇರುವಾಗ, ಹಿಂದೆಗಡೆಯ ಆಕಾರಕ್ಕೆ ಮತ್ತೊಂದು ಬಲ ಇದೆ. ಆದ್ದರಿಂದ ಪ್ರತಿ ಮನುಷ್ಯನಲ್ಲಿನ ಬುದ್ಧಿ ಎರಡು ವಿಧಗಳ ಕೆಲಸ ಮಾಡುತ್ತಿದೆ. ಅಷ್ಟೇಯಲ್ಲದೆ ಬುದ್ಧಿವೊಂದರ ವಿಷಯವನ್ನು ಒಂದುಕಡೆಯಿಂದ ಆಲೋಚಿಸಿದರೆ, ಅದೇ ವಿಷಯವನ್ನೆ ಮತ್ತೊಂದುಕಡೆಯಿಂದ ಮತ್ತೊಂದು ವಿಧವಾಗಿ ಆಲೋಚಿಸುತ್ತದೆ. ಒಂದೇ ವಿಷಯವನ್ನೆ ಬುದ್ಧಿ ಎರಡು ವಿಧಗಳಾಗಿ ಆಲೋಚಿಸುತ್ತದೆಯೆಂದು ನಾವು ಮೊದಲೆ ಹೇಳಿಕೊಂಡಿದ್ದೇವೆ. ಈ ವಿಧವಾಗಿ ಬುದ್ಧಿವೊಂದರ ಎರಡು ಮುಖಗಳು ಕೆಲಸ ಮಾಡುತ್ತಿರುವುದಲ್ಲದೆ, ಮತ್ತೊಂದು ವಿಧಾನವನ್ನು ಕೂಡಾ ಹೊಂದಿವೆ. ಬುದ್ಧಿವೊಂದರ ಮುಂದೆಗಡೆಯ ಆಕಾರ ಪ್ರಪಂಚ ಸಂಬಂಧ ವಿಷಯಗಳ ಮೇಲೆ ಹೆಚ್ಚಾಗಿ ಆಸಕ್ತಿ ತೋರಿಸಿದರೆ, ಹಿಂದೆಗಡೆಯ ಆಕಾರ ಮುಂದೆಗಡೆಯದಕ್ಕೆ ವಿರುದ್ಧವಾಗಿ ದೇವರ ವಿಷಯಗಳ ಮೇಲೆ ಆಸಕ್ತಿಯನ್ನು ತೋರಿಸುತ್ತದೆ. (ಈ ವಿಷಯ ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಬುದ್ಧಿವೊಂದರ ಎರಡುಕಡೆಯ ಆಕಾರವನ್ನು ಮುಂದಿನಿಂದಲ್ಲದೆ ಪಕ್ಕದಿಂದ ತೋರಿಸುತ್ತಿದ್ದೇನೆ. ಕೆಳಗಿನ ಚಿತ್ರಪಟದಲ್ಲಿ ನೋಡಿರಿ.

ಮನುಷ್ಯನಲ್ಲಿನ ಐದು ಜ್ಞಾನೇಂದ್ರಿಯಗಳ ಮೂಲಕ ಸೇರುವವು ಎರಡು ವಿಧಗಳ ಜ್ಞಾನಗಳು ಇವೆ. ಅದರಲ್ಲಿ ಒಂದು ಪ್ರಪಂಚ ಜ್ಞಾನ, ಮತ್ತೊಂದು ಪರಮಾತ್ಮ ಜ್ಞಾನ. ಈ ವಿಧವಾಗಿ ಎರಡು ವಿಧಗಳ ಜ್ಞಾನಗಳು ಮನುಷ್ಯ ಶರೀರದೊಳಗೆ ಸೇರುವುದಕ್ಕೆ ಅವಕಾಶ ಇದೆ. ಆದರೆ ಬುದ್ಧಿವೊಂದರ ಮುಂದೆಕಡೆಯ ಆಕಾರ ಹೆಚ್ಚು ಆಸಕ್ತಿಹೊಂದಿರುತ್ತದೆ, ಹಿಂದುಗಡೆಯ ಭಾಗ ಕಡಿಮೆ ಆಸಕ್ತಿ ಹೊಂದಿರುತ್ತದೆ. ಅದನ್ನೇ ತಿಳುವಳಿಕೆ ಹೆಚ್ಚು, ತಿಳುವಳಿಕೆ ಕಡಿಮೆ ಎಂದು ಅನ್ನುತ್ತಿರುತ್ತೇವೆ. ಶರೀರದೊಳಗೆ ಸೇರುವ ಎರಡು ವಿಧಗಳ ಜ್ಞಾನಗಳಲ್ಲಿ ಮುಂದುಗಡೆಯ ಆಕಾರ ಅಥವಾ ಭಾಗ ದೇವರಜ್ಞಾನದ ಮೇಲೆ ಹೆಚ್ಚು ಆಸಕ್ತಿಯನ್ನು ಅಥವಾ ಹೆಚ್ಚಾಗಿ ತಿಳುವಳಿಕೆಯನ್ನು ತೋರಿಸಿದರೆ, ಹಿಂದೆಗಡೆಯ ಆಕಾರ ಅದಕ್ಕೆ ವಿರುದ್ಧವಾಗಿ ಪ್ರಪಂಚದಲ್ಲಿ ಕಡಿಮೆ ಆಸಕ್ತಿಯನ್ನು ತೋರಿಸುತ್ತದೆ. ಮುಂದೆಗಡೆಯ ಭಾಗ ಪ್ರಪಂಚ ವಿಷಯ ಜ್ಞಾನಗಳ ಮೇಲೆ ಹೆಚ್ಚಾಗಿ ಶ್ರದ್ಧೆಹೊಂದಿ ಸ್ವೀಕರಿಸಲ್ಪಟ್ಟರೆ ಹಿಂದೆಗಡೆಯ ಆಕಾರ ಮುಂದೆಗಡೆಯ



ಆಕಾರಕ್ಕೆ ವಿರುದ್ಧವಾಗಿ ಪರಮಾತ್ಮ ವಿಷಯ ಜ್ಞಾನಗಳ ಮೇಲೆ ಕಡಿಮೆ ಶ್ರದ್ಧೆಹೊಂದಿ ಸ್ವೀಕರಿಸುತ್ತದೆ. ಮುಂದಿನ ಆಕಾರಕ್ಕೆ ಹಿಂದೆಯ ಆಕಾರ ವಿರುದ್ಧ ಭಾವನೆಗಳನ್ನು ಸ್ವೀಕರಿಸಿದರೂ, ಅದು ಹಿಂದೆಗಡೆಯ ಆಕಾರದಲ್ಲಿ ಬಲಹೀನವಾಗಿ ಇರುವುದರಿಂದ ಕಡಿಮೆ ಶ್ರದ್ಧೆಯಿಂದಲೇ ಸ್ವೀಕರಿಸುತ್ತದೆ. ಏನಾದರೂ ಮುಂದಿರುವುದಕ್ಕೆ ಹಿಂದಿರುವುದು ವಿರುದ್ಧದಿಶೆಯಲ್ಲಿ ಕೆಲಸಮಾಡುತ್ತದೆ. (ಬುದ್ಧಿ ಒಂದರ ಮುಂದಿನ ಹಿಂದಿನ ಆಕಾರಗಳನ್ನು ಮುಂದಿನಿಂದ ಚಿತ್ರಿಸಿ ಕೆಳಗಿರುವ ಚಿತ್ರಪಟದಲ್ಲಿ ತೋರಿಸಿದ್ದೇವೆ.)

ಈ ವಿಧವಾಗಿ ಬುದ್ಧಿವೊಂದರ ಮುಂದಿನ ಪೊರೆ, ಹಿಂದಿನ ಪೊರೆಗಿಂತ ಬಲವಾಗಿರುವುದರಿಂದ ಬುದ್ಧಿಯ ಮುಂದಿನ ಪೊರೆ ತೆಗೆದುಕೊಳ್ಳುವ ಭಾವನೆಗಳಿಗೆ ವಿರುದ್ಧ ಭಾವನೆಗಳನ್ನು ಹಿಂದಿನ ಪೊರೆ ತೆಗೆದುಕೊಂಡರೂ, ಮುಂದಿನ ಪೊರೆ ತೆಗೆದುಕೊಂಡ ವಿಷಯಗಳಿಗಿಂತ ಕಡಿಮೆಯಾಗಿ ಹಿಂದಿನ ಪೊರೆ ತೆಗೆದುಕೊಳ್ಳುವ ವಿಷಯಗಳಿರುತ್ತವೆ. ಜೀವಿಗೆ ಸ್ವಂತ ಹಕ್ಕಾಗಿರುವ ಶ್ರದ್ಧೆ ಮುಂದೆಗಡೆ ಇರುವ ಬಲವಾದ ಬುದ್ಧಿಪೊರೆಗೆ ಸ್ವಂತವಾಗಿದ್ದು, ಅಶ್ರದ್ಧೆ ಬುದ್ಧಿಗೆ ಹಿಂದೆಗಡೆ ಇರುವ ಬಲಹೀನವಾದ ಪೊರೆಗೆ ಸ್ವಂತವಾಗಿದೆ. ಆದ್ದರಿಂದ

**ಮೇಲೆ ಬುದ್ಧಿ ಒಂದರ ಮುಂದಿನ ಪೊರೆ**



**ಒಳಗಿನ ಬುದ್ಧಿ ಒಂದರ ಹಿಂದಿನ ಪೊರೆ**

ಮನುಷ್ಯ ಜೀವನದಲ್ಲಿ ಪ್ರಪಂಚ ವಿಷಯಗಳ ಮೇಲೆ ಹೆಚ್ಚು ಆಸಕ್ತಿ ಇರುವವನು, ಪರಮಾತ್ಮ ವಿಷಯಗಳ ಮೇಲೆ ಕಡಿಮೆ ಆಸಕ್ತಿಯನ್ನು ಹೊಂದಿತ್ತಾನೆ. ಹಾಗೆಯೇ ಪರಮಾತ್ಮ ವಿಷಯಗಳ ಮೇಲೆ ಹೆಚ್ಚು ಶ್ರದ್ಧೆ ಇರುವವನು ಅದಕ್ಕೆ ವಿರುದ್ಧವಾದ ಪ್ರಪಂಚ ವಿಷಯಗಳ ಮೇಲೆ ಕಡಿಮೆ ಶ್ರದ್ಧೆಹೊಂದಿರುತ್ತಾನೆ. ಈ ವಿಧವಾಗಿ ಒಳಗಿರುವ ಬುದ್ಧಿಪೊರೆಗಳನ್ನು ಅನುಸರಿಸಿ, ಮನುಷ್ಯನಿಗಿರುವ ಶ್ರದ್ಧೆಯನ್ನನುಸರಿಸಿ ಹೊರಗಿನ ಜೀವನ ಕಾಣಿಸುತ್ತಿರುತ್ತದೆ. ಒಳಗೆ ಕಾಣಿಸದಂತಿರುವ ಬುದ್ಧಿ ಎಂತಹದೊ ಹೊರಗೆ ಮನುಷ್ಯನ ಪ್ರವರ್ತನೆಯನ್ನನುಸರಿಸಿ ಹೇಳಬಹುದು. ಜೀವಿಗೆ ದೈವಜ್ಞಾನದ ಮೇಲೆ ಶ್ರದ್ಧೆ ಅವನ ಇಷ್ಟವನ್ನನುಸರಿಸಿ ಇರುತ್ತದೆ. ಇಷ್ಟ ಎಂದರೂ ಶ್ರದ್ಧೆಯೆಂದೆ ಅರ್ಥ. ಆದ್ದರಿಂದ ಜೀವಿಗೆ ಸ್ವಂತ ಹಕ್ಕಾಗಿರುವ ದೇವರ ಮೇಲೆ ಶ್ರದ್ಧೆಯನ್ನು ಮನುಷ್ಯ ಉಪಯೋಗಿಸಿಕೊಂಡರೂ, ಅದು ಬುದ್ಧಿವೊಂದರ ಮುಂದಿನ ಪೊರೆಯನ್ನು ಸೇರಿ ದೈವವಿಷಯಗಳನ್ನು ಹೆಚ್ಚಾಗಿ ಸ್ವೀಕರಿಸುತ್ತದೆ. ಆಗ ಅವನು ಪ್ರಪಂಚ ವಿಷಯಗಳನ್ನು ಹಿಂದಿನ ಪೊರೆಯಿಂದ ಸ್ವೀಕರಿಸಬೇಕಾಗಿ ಬರುತ್ತದೆ. ಬುದ್ಧಿಯ ಹಿಂದಿನಪೊರೆ ಬಲಹೀನವಾದುದರಿಂದ, ಅದು ಕಡಿಮೆ ವಿಷಯಗಳನ್ನು ಸ್ವೀಕರಿಸುತ್ತದೆ. ಮನುಷ್ಯನಿಗೆ ಹಕ್ಕಾಗಿರುವ ದೈವಶ್ರದ್ಧೆ ಕರ್ಮಕ್ಕೆ ಆಧೀನವಾದುದು ಅಲ್ಲ. ಒಂದುವೇಳೆ ಮನುಷ್ಯ ಪರಮಾತ್ಮ ಶ್ರದ್ಧೆಗಿಂತ ಪ್ರಪಂಚ ಶ್ರದ್ಧೆಮೇಲೆ ಆಸಕ್ತಿತೋರಿಸಿದರೆ ಪ್ರಪಂಚ ವಿಷಯಗಳು ಅವನಿಗೆ ಹೆಚ್ಚಾಗಿ ಸೇರುತ್ತವೆ. ದೈವವಿಷಯಗಳ ಮೇಲೆ ಶ್ರದ್ಧೆ ಕಡಿಮೆ ಇರುವುದರಿಂದ, ದೈವವಿಷಯಗಳು ಕಡಿಮೆ ಸೇರುತ್ತವೆ. ದೈವವಿಷಯಗಳನ್ನು ಅವನಿಗೆ ಬಲವಂತವಾಗಿ ಹೇಳಿದರೂ, ಅವನ ಬುದ್ಧಿ ಅದನ್ನು ಗ್ರಹಿಸುವುದಿಲ್ಲ. ಪ್ರಪಂಚ ವಿಷಯಗಳನ್ನು ಹೇಳದಿದ್ದರೂ ಗ್ರಹಿಸುತ್ತದೆ. ಪ್ರಪಂಚ ಶ್ರದ್ಧೆ ಕರ್ಮಾಧೀನವಾದುದು ಆದ್ದರಿಂದ, ಕರ್ಮಪ್ರಕಾರ ವಿಷಯಗಳು ಸೇರುವುದೂ, ಅವುಗಳಲ್ಲಿ ಅವನ ಬುದ್ಧಿ ಲಗ್ನವಾಗಿಹೋಗುವುದೂ ಹೆಚ್ಚಾಗಿರುತ್ತದೆ. ಅಂತಹವನು ಪ್ರಪಂಚ ವಿಷಯಗಳಿಂದ ಹೊರಬೀಳಲಾರನು, ಪರಮಾತ್ಮ ವಿಷಯಗಳು ಗ್ರಹಿಸಲಾರನು.

ಒಬ್ಬ ಮನುಷ್ಯ ನಾಸ್ತಿಕನಾಗಾಗಲಿ, ಆಸ್ತಿಕನಾಗಾಗಲಿ, ಹೇತುವಾದಿಯಗಾಗಲಿ, ಮಿತವಾದಿಯಾಗಾಗಲಿ, ಮತ್ತೆ ಯಾವ ಇತರ ವಾದಿಯಾಗಾಗಲಿ ತಯಾರಾಗುವುದಕ್ಕೆ ಅವನ ಶರೀರದಲ್ಲಿನ ಬುದ್ಧಿಯೇ ಕಾರಣವೆಂದು ತಿಳಿಯಬೇಕು. ಒಬ್ಬ ಮನುಷ್ಯನಿಗಿರುವ ಆಸಕ್ತಿ, ಅನಾಸಕ್ತಿಯನ್ನನುಸರಿಸಿ ಅವನ ಬುದ್ಧಿವೊಂದರ ಮುಂದಿನ ಹಿಂದಿನ ಪೊರೆಗಳು ಕೆಲಸ ಮಾಡುತ್ತವೆ. ಮನುಷ್ಯನೊಂದರ ಶ್ರದ್ಧೆಯನ್ನನುಸರಿಸಿ ಬುದ್ಧಿ ಇರುವಾಗ, ಬುದ್ಧಿವೊಂದರ ಬಲವನ್ನನುಸರಿಸಿ ಅವನಿಗೆ ಶಕ್ತಿ ಕೈಗೂಡುತ್ತದೆ. ಮನುಷ್ಯನಿಗೆ ಪರಮಾತ್ಮ ಜ್ಞಾನದ ಮೇಲೆ ಶ್ರದ್ಧೆ ಇದ್ದರೆ ಅವನಬುದ್ಧಿ ದೈವಜ್ಞಾನ ವಿಷಯಗಳನ್ನು ಹೆಚ್ಚಾಗಿ ಗ್ರಹಿಸುವಂತೆ ಮಾಡಿ ದೈವಶಕ್ತಿಯನ್ನು ಆರ್ಜಿಸಿಡುತ್ತದೆ. ಆದ್ದರಿಂದ ಮನುಷ್ಯ ಒಂದರ ಬುದ್ಧಿಯನ್ನನುಸರಿಸಿ ಅವನಿಗೆ ದೈವಶಕ್ತಿ ಇರುತ್ತದೆ. ದೈವಶಕ್ತಿ ಕರ್ಮ ಆಧೀನದಲ್ಲಿ ಇಲ್ಲದಿರುವುದು, ಆದ್ದರಿಂದ ಮನುಷ್ಯನ ಇಷ್ಟವನ್ನನುಸರಿಸಿ ಸಂಪಾದಿಸಿಕೊಳ್ಳುತ್ತಾನೆ. ಪ್ರಪಂಚ ವಿಷಯಗಳಲ್ಲಿ ಬುದ್ಧಿ ಕೆಲಸಮಾಡಿದರೆ, ಅದಕ್ಕೆ ಪ್ರಪಂಚ ಶಕ್ತಿಬಂದರೂ, ಅದು ಮನುಷ್ಯನ ಇಷ್ಟವನ್ನನುಸರಿಸಿ ಇರುತ್ತದೆ. ಮೊದಲೆ ನಿರ್ಣಯಿಸಲ್ಪಟ್ಟ ಅವನ ಕರ್ಮವನ್ನನುಸರಿಸಿ ಇರುತ್ತದೆ. ಆದ್ದರಿಂದ ಪ್ರಪಂಚ ವಿಷಯಗಳಾಗಲಿ, ಪ್ರಕೃತಿಶಕ್ತಿಯಾಗಲಿ, ಮನುಷ್ಯನ ಇಷ್ಟವನ್ನನುಸರಿಸಿ ಇರುವುದಿಲ್ಲ. ಒಬ್ಬ ಮನುಷ್ಯನಲ್ಲಿನ ಪ್ರಪಂಚ ಜ್ಞಾನವನ್ನಾಗಲಿ, ಪರಮಾತ್ಮ ಜ್ಞಾನವನ್ನಾಗಲಿ, ಹೊರಗೆ ತೋರಿಸುವುದು ಅವನಲ್ಲಿನ ಬುದ್ಧಿಯೆಂದು ತಿಳಿಯಬೇಕು. ಬುದ್ಧಿಯನ್ನನುಸರಿಸಿ ಮನುಷ್ಯನಲ್ಲಿ ಯಾವ ಜ್ಞಾನವಿರುವುದು ತಿಳಿಯಬಹುದು. ಅಷ್ಟೇಯಲ್ಲದೆ ಮನುಷ್ಯನಲ್ಲಿ ದೈವಜ್ಞಾನ ಎಷ್ಟು ಇದೆಯೆಂದು ಕೂಡಾ ತಿಳಿಯಬಹುದು. ಒಬ್ಬನ ಬುದ್ಧಿ ಅಂತ್ಯೆಸಿಗದ ಜ್ಞಾನವನ್ನು ಹೊಂದಿದ್ದರೆ, ಅವನಲ್ಲಿನ ದೈವಶಕ್ತಿ ಕೂಡಾ ಅಂತ್ಯೆಸಿಗದಷ್ಟು ಅಪಾರವಾಗಿ ಇರುತ್ತದೆ. ಮನುಷ್ಯನಲ್ಲಿನ ಬುದ್ಧಿಯನ್ನನುಸರಿಸಿ ಪ್ರಪಂಚ ವಿಷಯಗಳಲ್ಲಿ ಕೂಡಾ ನಿಪುಣರು ಇರಬಹುದು. ಆದರೂ ಅದೆಲ್ಲವೂ ಅವನ ಇಷ್ಟದ ಪ್ರಕಾರ ನಡೆಯದೆ, ಕರ್ಮಪ್ರಕಾರ ನಡೆಯುತ್ತದೆಂದು ತಿಳಿಯಬೇಕು. ಪ್ರಪಂಚ ವಿಷಯಗಳಲ್ಲಿ ಅವರಿಗಿರುವ ಬುದ್ಧಿಯನ್ನನುಸರಿಸಿ ಎಷ್ಟೋಜನ ಮೇಧಾವಿಗಳು ಇದ್ದಾರೆ. ಪ್ರಕೃತಿ

ಸಂಬಂಧ ಗಣಿತ, ಖಗೋಳ, ರಸಾಯನ, ಭೌತಿಕಶಾಸ್ತ್ರಗಳಲ್ಲಿ ನಿಪುಣರಾದ ಶಾಸ್ತ್ರಜ್ಞರೂ ಮತ್ತು ಎಷ್ಟೋ ರಂಗಗಳಲ್ಲಿ ಕೆಲಸ ಮಾಡುವವರೂ ಇದ್ದಾರೆ. ಅಂತಹವರು ಪ್ರಪಂಚದಲ್ಲಿ ಎಷ್ಟುದೊಡ್ಡ ಮೇಧಾವಿಗಳಾದರೂ, ಪರಮಾತ್ಮ ವಿಷಯಗಳಲ್ಲಿ ಅವರ ಬುದ್ಧಿ ಕೆಲಸಮಾಡುವುದಿಲ್ಲ. ದೇವರ ಜ್ಞಾನ ವಿಷಯಗಳನ್ನು ಗ್ರಹಿಸಿಕೊಳ್ಳುವ ಸಾಮರ್ಥ್ಯವಿಲ್ಲದ ಬುದ್ಧಿ ಇರುವವರಾಗಿರುತ್ತಾರೆ. ಅವರ ಅಂತರಂಗಗಳಲ್ಲಿ ಬುದ್ಧಿಯ ಮುಂದಿನ ಪೊರೆ ಪ್ರಪಂಚ ವಿಷಯಗಳ ಮೇಲೆ, ಬುದ್ಧಿಯ ಒಳಗಿನ ಪೊರೆ ಪರಮಾತ್ಮ ವಿಷಯಗಳ ಮೇಲೆ ಇರುವುದರಿಂದ, ಅವರ ಪ್ರಪಂಚ ವಿಷಯಗಳನ್ನು ಗ್ರಹಿಸುವಂತೆ ಪರಮಾತ್ಮ ವಿಷಯಗಳನ್ನು ಗ್ರಹಿಸಲಾರದೆ ಹೋಗುತ್ತಿದ್ದಾರೆಂದು ತಿಳಿಯುತ್ತಿದೆ.

ಮನುಷ್ಯನಲ್ಲಿನ ಬುದ್ಧಿ ಮನುಷ್ಯನೊಂದರ ಎರಡು ವಿಧಗಳ ಜ್ಞಾನಗಳಲ್ಲಿ ಯಾವುದೊ ಒಂದನ್ನು ತೋರಿಸುವುದಾಗಿರುತ್ತದೆ. ಇದರಿಂದ ಮನುಷ್ಯನೊಂದರ ಬುದ್ಧಿ ಮನುಷ್ಯನಲ್ಲಿನ ಜ್ಞಾನವನ್ನು ಬಹಿರ್ಗತ ಮಾಡುತ್ತದೆಂದು ಹೇಳಬಹುದು. ಹಾಗೆ ಅಲ್ಲದಿದ್ದರೆ ಮತ್ತೊಂದು ವಿಧವಾಗಿ, ಮನುಷ್ಯನಲ್ಲಿನ ಜ್ಞಾನಕ್ಕೆ (ಪರಮಾತ್ಮ ಜ್ಞಾನಕ್ಕಾಗಲಿ, ಪ್ರಪಂಚ ಜ್ಞಾನಕ್ಕಾಗಲಿ) ಬುದ್ಧಿ ವಿಳಾಸವಾಗಿ ಇಲ್ಲವೆ ಕೇರ್‌ಆಫ್ ಅಡ್ರಸ್ ಆಗಿದೆಯೆಂದು ಹೇಳಬಹುದು. ಮನುಷ್ಯನಲ್ಲಿನ ಬುದ್ಧಿಯನ್ನನುಸರಿಸಿ ಜ್ಞಾನವಿರುವಂತೆ (ಯಾವುದೊ ಒಂದು ಜ್ಞಾನವಿರುವಂತೆ), ಮನುಷ್ಯನಲ್ಲಿನ ಮನಸ್ಸನ್ನನುಸರಿಸಿ ಅವನಿಗೆ ಜ್ಞಾಪಕಶಕ್ತಿ ಇರುತ್ತದೆ. ಮನುಷ್ಯನಲ್ಲಿನ ಜ್ಞಾನಶಕ್ತಿ, ಜ್ಞಾಪಕಶಕ್ತಿ ಬೇರಬೇರೆಯಾಗಿ ಇರುತ್ತದೆಂದು ಹೇಳಬಹುದು. ಶರೀರದಲ್ಲಿ ಅದೃಶ್ಯವಾಗಿರುವ ಬುದ್ಧಿಯನ್ನನುಸರಿಸಿ ಜ್ಞಾನಶಕ್ತಿ ಇರುವಾಗ ಬುದ್ಧಿಯಂತೆ ಅದೃಶ್ಯವಾಗಿ ಶರೀರದಲ್ಲಿರುವ ಮನಸ್ಸನ್ನನುಸರಿಸಿ ಜ್ಞಾಪಕಶಕ್ತಿ ಇರುತ್ತದೆ. ಮನಸ್ಸಿಗಿರುವ ಬಲವನ್ನನುಸರಿಸಿ ಮನುಷ್ಯನಿಗೆ ಜ್ಞಾಪಕಶಕ್ತಿ ಇರುತ್ತದೆಂದು ಹೇಳಬಹುದು. ಮನಸ್ಸೊಂದರ ಸ್ವಸ್ಥಳ ಆತ್ಮ ಕೇಂದ್ರವಾದ ಬ್ರಹ್ಮನಾಡಿಯೆಂದು ಮೊದಲೇ ಹೇಳಿಕೊಂಡಿದ್ದೇವೆ. ಮನುಷ್ಯ ನಿದ್ರಾವಸ್ಥೆಯಲ್ಲಿರುವ ಸಮಯದಲ್ಲಿ ಮನಸ್ಸು ಬ್ರಹ್ಮನಾಡಿಯಲ್ಲಿ ನಿವಾಸವಿರುತ್ತದೆ. ಬ್ರಹ್ಮನಾಡಿಯಲ್ಲಿರುವಾಗ ಮನಸ್ಸು

ತನ್ನ ಸ್ವಂತ ಆಕಾರವನ್ನು ಹೊಂದಿರುತ್ತದೆ. ಮನಸ್ಸೊಂದರ ಸ್ವಂತ ಆಕಾರ ಒಂದು ಬಿಂದುರೂಪದಲ್ಲಿ ಇರುತ್ತದೆ. ನಿದ್ರೆಯಲ್ಲಿನ ಮನಸ್ಸೊಂದರ ಚಿತ್ರಪಟವನ್ನು ನಂತರ ಪೇಜಿನಲ್ಲಿ ನೋಡಬಹುದು.



**ಬ್ರಹ್ಮನಾಡಿಯಲ್ಲಿರುವ ಮನಸ್ಸೊಂದರ ಆಕಾರ**

ನಿದ್ರೆಯಲ್ಲಿರುವವರೆಗೂ ಮನಸ್ಸು ಒಂದು ದುಂಡನೆ ಬಿಂದುವಾಗಿ ಕಾಣಿಸಿ ಕಾಣಿಸದಷ್ಟು ಚಿಕ್ಕದಾಗಿದ್ದು, ನಿದ್ರೆಯಿಂದ ಎಚ್ಚರಬಂದಾಗ ಜಾಗ್ರತಾವಸ್ಥೆಯೊಳಗೆ ಬರುತ್ತದೆ. ನಿದ್ರೆಯಲ್ಲಿ ದುಂಡನೆ ಬಿಂದುವಾಗಿರುವ ಮನಸ್ಸು ಎಚ್ಚರದೊಳಗೆ ಬರುವಾಗ ಬ್ರಹ್ಮನಾಡಿಯಲ್ಲಿ ಉದ್ದವಾಗಿ ಸಾಗಿ ಬ್ರಹ್ಮನಾಡಿಯೆಲ್ಲಾ ವ್ಯಾಪಿಸಿ, ಅಲ್ಲಿಂದ ನಾಡಿಗಳ ಮೂಲಕ ಶರೀರವೆಲ್ಲಾ ಕೆಲವು ಸೆಕೆಂಡುಗಳಲ್ಲಿ ಹರಡಿಹೋಗುತ್ತದೆ. ಹಾಗೆ ಶರೀರವೆಲ್ಲಾ ವ್ಯಾಪಿಸಿರುವ ಮನಸ್ಸು ಶರೀರವೆಲ್ಲಾ ಇದ್ದು ಪೂರ್ತಿ ಶರೀರ ಆಕೃತಿಯನ್ನು ಹೋಲಿರುತ್ತದೆ. ಎಚ್ಚರದಲ್ಲಿರುವ ಮನಸ್ಸಿನ ಆಕಾರವನ್ನು ನಂತರ ಪೇಜಿನಲ್ಲಿ ನೋಡಬಹುದು.

ಈ ವಿಧವಾಗಿ ಮನಸ್ಸು ಎರಡು ಸ್ಥಿತಿಗಳಲ್ಲಿ, ಎರಡು ವಿಧಗಳ ಆಕಾರದಿಂದ ಇರುತ್ತಿದೆ. ನಿದ್ರೆ, ಎಚ್ಚರ ಅವಸ್ಥೆಗಳು ಜೀವಿಗಿರುತ್ತವೆಂದು, ಮನಸ್ಸು ಬ್ರಹ್ಮನಾಡಿಯಲ್ಲಿರುವಾಗ ಜೀವಿಯು ನಿದ್ರೆಯನ್ನು ಹೊಂದುತ್ತಾನೆಂದು, ಮನಸ್ಸು ಜಾಗ್ರತೆಯೊಳಗೆ ಬಂದಿರುವ ಜೀವಿಯು ಎಚ್ಚರಗೊಳ್ಳುತ್ತಾನೆಂದು ಬಹಳಜನ ಆಧ್ಯಾತ್ಮಿಕತಜ್ಞರು ಅಂದುಕೊಳ್ಳುವುದು ನಡೆಯುತ್ತಿದೆ. ವಾಸ್ತವವಾಗಿ ಜೀವಿಗೆ ನಿದ್ರೆಯಿಲ್ಲ, ನಿದ್ರೆಯನ್ನು ಹೊಂದುವುದು ಜೀವಿಗೆ ತಿಳಿಯದು. ನಿದ್ರೆಯಾಗಲಿ



**ಜಾಗ್ರತೆಯ ಅವಸ್ಥೆಯಲ್ಲಿ ಮನಸ್ಸು ಶರೀರ ಆಕೃತಿಯಲ್ಲಿ ಇರುವ ದೃಶ್ಯವು**

ಎಚ್ಚರವಾಗಲಿ ಜೀವಿಗೆ ಯಾಮಾತ್ರ ಇರುವುದಿಲ್ಲ. ಹಾಗೆಯೇ ಬುದ್ಧಿಗು ಕೂಡಾ ನಿದ್ರೆ, ಎಚ್ಚರಗಳು ಇರುವುದಿಲ್ಲ, ಮನಸ್ಸನ್ನನುಸರಿಸಿ ಮನುಷ್ಯನಲ್ಲಿ ನಿದ್ರೆ, ಎಚ್ಚರಗಳು ಏರ್ಪಡುತ್ತಿವೆ. ಶರೀರದಲ್ಲಿನ ಮನಸ್ಸು ಜಾಗ್ರತಾವಸ್ಥೆಯಲ್ಲಿ ಮನಸ್ಸು ಶರೀರ ಆಕೃತಿಯಲ್ಲಿರುವ ದೃಶ್ಯ ಸ್ವಂತಸ್ಥಾನವಾದ ಬ್ರಹ್ಮನಾಡಿಯೊಳಗೆ ಹೋಗಲಾರದೆ ಇರಲಾರದು. ಪಕ್ಕದ ಊರಿಗೆ ಹೋದ ಮನುಷ್ಯ ತನ್ನ ಊರಿಗೆ ಹೋಗಬೇಕೆಂದು ಹೇಗೆ ಆತುರಪಡುತ್ತಿರುತ್ತಾನೊ, ಹಾಗೆಯೇ ಶರೀರವೆಲ್ಲಾ ವ್ಯಾಪಿಸಿ ಕೆಲವು ಗಂಟೆಗಳಿದ್ದ ಮನಸ್ಸು, ಪುನಃ ತನ್ನ ಸ್ವಂತ ಸ್ಥಾನವಾದ ಬ್ರಹ್ಮನಾಡಿಯೊಳಗೆ ಬರುವುದಕ್ಕೆ ಆತುರ ಪಡುತ್ತಿರುತ್ತದೆ. ಶರೀರದಲ್ಲಿ ಕಾರ್ಯಗಳನ್ನು ಮುಗಿಸಿಕೊಂಡು ತನ್ನ ಸ್ವಂತಸ್ಥಾನಕ್ಕೆ ಪ್ರತಿದಿನ ಬರುತ್ತಿರುತ್ತದೆ. ಒಂದುವೇಳೆ ಶರೀರದಲ್ಲಿ ಕಾರ್ಯಗಳು ಮುಗಿಯದಿದ್ದರೂ, ಅವುಗಳನ್ನು ಮಧ್ಯದಲ್ಲಿ ಬಿಟ್ಟು ಬ್ರಹ್ಮನಾಡಿಯೊಳಗೆ ಸೇರಿ ವಿಶ್ರಾಂತಿ ತೆಗೆದುಕೊಳ್ಳುತ್ತದೆ. ಆದ್ದರಿಂದ ಅನ್ನ ತಿನ್ನುತ್ತಾ ತಿನ್ನುತ್ತಾ ನಿದ್ರೆಹೋಗುವವರನ್ನು, ಮಾತನಾಡುತ್ತಾ ಮಧ್ಯದಲ್ಲಿ ನಿದ್ರೆಹೋಗುವವರನ್ನು, ಮಾಡುತ್ತಿರುವ ಕೆಲಸವನ್ನು ಬಿಟ್ಟು ಕುಳಿತುಕೊಂಡು ನಿದ್ರೆಹೋಗುವವರನ್ನು,

ಪುಸ್ತಕವನ್ನು ಓದುತ್ತಾ ಹಾಗೆಯೇ ಪುಸ್ತಕವನ್ನು ಕೈಯಲ್ಲಿಟ್ಟುಕೊಂಡು ನಿದ್ರೆಹೋಗುವವರನ್ನು ನಾವು ನೋಡಬಹುದು.

ಶರೀರದಲ್ಲಿ ನಿದ್ರೆ ಯಾವುದಕ್ಕು ಇಲ್ಲವಾಗಲಿ ಮನಸ್ಸಿಗೆ ಮಾತ್ರ ನಿದ್ರೆ ಇದೆ. ಮನಸ್ಸಿಗೆ ಎಚ್ಚರ, ಸ್ವಪ್ನ ಎಂಬ ಎರಡು ಕೆಲಸಗಳು ಇವೆ. ಮನಸ್ಸಿಗೆ ಹೆಚ್ಚಾದ ದೊಡ್ಡಕೆಲಸ ಎಚ್ಚರದಲ್ಲಿರುವಾಗ, ಅತಿ ಚಿಕ್ಕಕೆಲಸ ಸ್ವಪ್ನದಲ್ಲಿ ಇರುತ್ತದೆ. ಈ ಎರಡು ಕೆಲಸಗಳನ್ನು ಬಿಟ್ಟು ಮನಸ್ಸು ಯಾವಾಗ ವಿಶ್ರಾಂತಿ ತೆಗೆದು ಕೊಳ್ಳುತ್ತದೊ ಅದೇ ನಿದ್ರೆ. ಮನಸ್ಸಿಗೆ ನಿದ್ರೆಬಂದರೆ ಶರೀರದಲ್ಲಿ ಜೀವಿಯ ಮುಂದೆ ಪೂರ್ತಿ ಕತ್ತಲು ಏರ್ಪಟ್ಟು ಜೀವಿಗೆ ಏನು ತಿಳಿಯದಂತೆ ಹೋಗುತ್ತದೆ. ಆದ್ದರಿಂದ ಬಹಳಜನ ಜೀವಿಗೆ ನಿದ್ರೆ ಬರುತ್ತದೆಂಬ ಭ್ರಮೆಯಲ್ಲಿ ಬಿದ್ದು ಅವನು ನಿದ್ರೆಹೋಗುತ್ತಿದ್ದಾನೆಂದು, ಇವನು ಎಚ್ಚರಗೊಂಡಿದ್ದಾನೆಂದು ಹೇಳುತ್ತಿದ್ದಾರೆ. ವಾಸ್ತವಕ್ಕೆ ಅವನು ಇವನು ಎನ್ನುವ ಜೀವಿಗೆ ನಿದ್ರೆ ಇಲ್ಲವೆಂದು ಅವರಿಗೆ ತಿಳಿಯದು. ಮನಸ್ಸು ತಾನು ಮಾಡುವ ಕೆಲಸದಿಂದ ವಿಶ್ರಾಂತಿ ತೆಗೆದುಕೊಳ್ಳುವು ದನ್ನೆ ನಿದ್ರೆ ಅನ್ನುತ್ತಿದ್ದೇವೆ. ಆದ್ದರಿಂದ ಶರೀರದಲ್ಲಿನ ಮನಸ್ಸಿಗೇ ನಿದ್ರೆ ಎಂದು ತಿಳಿಯುತ್ತಿದೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು ಅದೇನೆಂದರೆ! ಮನಸ್ಸು ತನ್ನ ಕೆಲಸವನ್ನು ಬಿಡುವುದೇ ನಿದ್ರೆ ಆದರೆ, ಶರೀರದಲ್ಲಿ ಕಾಣಿಸದ ಮನಸ್ಸು ಮಾಡುತ್ತಿರುವ ಕೆಲಸವೇನು? ಎಂದು ಕೇಳಬಹುದು. ಈ ಪ್ರಶ್ನೆಗೆ ಉತ್ತರವಾಗಿ ಇದಕ್ಕಿಂತ ಮೊದಲ ಗ್ರಂಥಗಳಲ್ಲಿ ಮನಸ್ಸು ಮಾಡುತ್ತಿರುವ ಕೆಲಸವೇನೊ ಹೇಳಿದ್ದೇವೆ. ಆದರೂ ಈಗಲೂ ಕೂಡಾ ಸ್ವಲ್ಪ ವಿವರವಾಗಿ ಹೇಳುತ್ತಿದ್ದೇವೆ. ಶರೀರದಲ್ಲಿ ಬ್ರಹ್ಮನಾಡಿಯಲ್ಲಿ ನಿದ್ರಿಸುತ್ತಿರುವ ಮನಸ್ಸು ಪುನಃ ಬ್ರಹ್ಮನಾಡಿ ಮೂಲಕ ಹೊರಗೆ ಬಂದು ಶರೀರವೆಲ್ಲಾ ವ್ಯಾಪಿಸಿ, ತನ್ನ ಕಾರ್ಯವನ್ನು ಮಾಡುವುದು ಮಾದಲುಮಾಡುತ್ತದೆ. ಎಚ್ಚರದಲ್ಲಿ ಮನಸ್ಸಿಗೆ ಮುಖ್ಯವಾಗಿ ಎರಡು ಕೆಲಸಗಳು ಇವೆ. ಒಂದು ಶರೀರಕ್ಕೆ ಸ್ಥೂಲವಾಗಿರುವ ಐದು ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ ಅನ್ನುವವು ಐದು ಒದಗಿಸುವ ಸಮಾಚಾರವನ್ನು ಮನಸ್ಸು ಸ್ವೀಕರಿಸಿ ಒಳಗಿರುವ ಮುಖ್ಯ ಅವಯವವಾದ

ಬುದ್ಧಿಗೆ ತಿಳಿಸುತ್ತದೆ. ಹಾಗೆ ತಿಳಿಸಿದಾಗ ಬುದ್ಧಿ ಮನಸ್ಸು ತಿಳಿಸಿರುವುದನ್ನು ಸ್ವೀಕರಿಸಿ ಗುಣಗಳಿಗು, ಗುಣಗಳ ಮಧ್ಯದಲ್ಲಿರುವ ಜೀವಿಗು ತಿಳಿಸುತ್ತದೆ. ಬುದ್ಧಿ ತಿಳಿಸಿದ ವಿಷಯಕ್ಕೆ ಗುಣ ಭಾಗಗಳಿಂದ ಸಮಾಧಾನ ಬಂದರೆ, ಆ ಸಮಾಚಾರವನ್ನು ಬುದ್ಧಿಯಿಂದ ಮನಸ್ಸು ಸ್ವೀಕರಿಸಿ ಹೊರಗಿರುವ ಕರ್ಮೇಂದ್ರಿಯಗಳಿಗೆ ತಿಳಿಸುತ್ತದೆ. ಈ ವಿಧವಾಗಿ ಹೊರಗಿನ ಜ್ಞಾನೇಂದ್ರಿಯ ವಿಷಯಗಳನ್ನು ಒಳಗಿನ ಬುದ್ಧಿಗೆ, ಒಳಗಿನ ಬುದ್ಧಿ ತಿಳಿಸಿದ ವಿಷಯಗಳನ್ನು ಹೊರಗಿನ ಕರ್ಮೇಂದ್ರಿಯಗಳಿಗೆ ತಿಳಿಸುತ್ತಿರುತ್ತದೆ. ಹೊರಗಿರುವ ಸ್ಥೂಲ ವ್ಯವಸ್ಥೆಗೂ, ಒಳಗಿರುವ ಸೂಕ್ಷ್ಮ ವ್ಯವಸ್ಥೆಗೂ ಮಧ್ಯದಲ್ಲಿ ವಾರ್ತೆಗಳನ್ನು ಸೇರಿಸುವ ವಾರ್ತಾಹರನಾಗಿ ಇಲ್ಲವೆ ರಾಯಬಾರಿಯಾಗಿ, ಮಧ್ಯವರ್ತಿಯಾಗಿ ಮನಸ್ಸು ಕೆಲಸ ಮಾಡುತ್ತಿದೆ. ಮನಸ್ಸಿಗೆ ಎಚ್ಚರದಲ್ಲಿರುವ ಕೆಲಸದಲ್ಲಿ ಎರಡು ವಿಧಗಳ ಕಾರ್ಯಗಳು ಮಾಡುತ್ತಿದೆ.

ಮನಸ್ಸು ಹೆಚ್ಚಾಗಿ ಕೆಲಸಮಾಡಿ ಆಯಾಸಗೊಳ್ಳುವುದು ಎಚ್ಚರದಲ್ಲಿಯೆ. ಎಚ್ಚರದಲ್ಲಿ ಆಯಾಸವಾಗುವುದರಿಂದ ನಿದ್ರೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳಬೇಕಾದ ಅವಶ್ಯಕತೆ ಏರ್ಪಡುತ್ತಿದೆ. ಎಚ್ಚರದಲ್ಲಿ ಆಯಾಸಹೋಗುವಷ್ಟು ಎರಡು ಕಾರ್ಯಗಳನ್ನು ಒಂದರ ನಂತರ ಮತ್ತೊಂದನ್ನು ಮಾಡುತ್ತಿದೆ. ಆದ್ದರಿಂದ ಎಚ್ಚರದಲ್ಲಿ ಎಡಬಿಡದೆ ಕೆಲಸವನ್ನು ಮನಸ್ಸು ಮಾಡುತ್ತಿದೆ. ಮನಸ್ಸು ಮಾಡುವ ಎರಡು ಕಾರ್ಯಗಳಲ್ಲಿ ಒಂದು ಹೊರಗಿನ ವಿಷಯಗಳನ್ನು ಒಳಗಿನ ಬುದ್ಧಿವರೆಗೂ ಸೇರಿಸುವುದು, ಬುದ್ಧಿ ಹೇಳಿರುವುದನ್ನು ಹೊರಗಿನ ಇಂದ್ರಿಯಗಳ ವರೆಗೂ ಸೇರಿಸುವುದು. ಇದು ಎಚ್ಚರದಲ್ಲಿ ಮನಸ್ಸು ಮಾಡುವ ಕೆಲಸಗಳಲ್ಲಿ ಒಂದಾಗಿದ್ದು, ಇದಕ್ಕಿಂತ ಮುಖ್ಯವಾದುದು ಎರಡನೆ ಕಾರ್ಯ ಇದೆ. ಅದೇನೆಂದರೆ! ಮನುಷ್ಯ ಹೊರಗೆ ವ್ಯವಹಾರಗಳಲ್ಲಿ ವ್ಯವಹರಿಸುವಾಗ, ಹೊರಗಿನ ವಿಷಯಗಳು ಒಳಗೆ, ಒಳಗಿನ ವಿಷಯಗಳು ಹೊರಗೆ ತಿಳಿಸುವ ಮಧ್ಯವರ್ತಿಯಾಗಿ ಮನಸ್ಸು ಕೆಲಸ ಮಾಡುತ್ತಿರುತ್ತದೆ ಅಲ್ಲವೆ! ಅದೇ ಮನುಷ್ಯ ಎಲ್ಲಕಾಲದಲ್ಲಿ ಹೊರಗಿನ ಕೆಲಸಗಳು ಮಾಡುವುದು ನಡೆಯುವುದಿಲ್ಲ. ಆತನು ಕೆಲವು ಗಂಟೆಗಳು ಶರೀರದೊಂದಿಗೆ ಕೆಲಸ ಮಾಡಿದ ನಂತರ ಕೆಲವು ಗಂಟೆಗಳು ಕೆಲಸವಿಲ್ಲದೆ

ಕಳೆಯುವುದು ನಡೆಯುತ್ತಿರುತ್ತದೆ. ಮನುಷ್ಯ ಕೆಲಸವಿಲ್ಲದೆ ಸುಮ್ಮನಿರುವಾಗ ಹೊರಗಿನ ವಿಷಯಗಳು ಒಳಗೆ ಒಳಗಿನ ವಿಷಯಗಳು ಹೊರಗೆ ತಿಳಿಸುವ ಕಾರ್ಯವೂ ಕೂಡಾ ಮನಸ್ಸಿಗೆ ಇರುವುದಿಲ್ಲ. ಆ ಸಮಯದಲ್ಲಿ ಹೊರಗೆ ಮನುಷ್ಯ ಕೆಲಸ ಮಾಡದಿದ್ದರೂ, ಅಂತರಂಗದಲ್ಲಿನ ಮನಸ್ಸು ಕೆಲಸ ಮಾಡಿತೀರಲೇಬೇಕಾಗಿದ್ದೆ. ಮನಸ್ಸು ಕೆಲಸ ಮಾಡುವುದೇ ಎಚ್ಚರ. ಎಚ್ಚರದಲ್ಲಿ ಮನುಷ್ಯನಿಗೆ ಕೆಲಸವಿಲ್ಲದಿದ್ದರೂ ಮನಸ್ಸಿಗೆ ಮಾತ್ರ ಕೆಲಸ ಇರುತ್ತದೆ. ಮನಸ್ಸಿಗೆ ಕೆಲಸ ಇಲ್ಲದಿದ್ದರೆ ಅದು ನಿದ್ರೆ ಆಗುತ್ತದೆ. ಆದ್ದರಿಂದ ಎಚ್ಚರದಲ್ಲಿರುವ ಮನಸ್ಸು ಎಂದಿಗೂ ಕೆಲಸ ಮಾಡುತ್ತಲೇ ಇರುತ್ತದೆ. ಎಚ್ಚರದಲ್ಲಿ ಮನುಷ್ಯರೆಲ್ಲರೂ ಕೆಲಸ ಮಾಡುತ್ತಿದ್ದಾರಾ? ಎಂದು ಪ್ರಶ್ನಿಸಿಕೊಂಡರೆ, ಬಹಳಜನ ಕೆಲಸ ಮಾಡದಂತೆ ಕಾಲ ಕಳೆಯುತ್ತಿದ್ದಾರೆ. ಮನುಷ್ಯನಿಗೆ ಕೆಲಸವಿಲ್ಲದೆ ಸುಮ್ಮನೆ ಕಣ್ಣುಮುಚ್ಚಿಕೊಂಡು ಕುಳಿತುಕೊಂಡವನ ಶರೀರದಲ್ಲಿನ ಮನಸ್ಸು ಏನು ಕೆಲಸ ಮಾಡುತ್ತಿರುತ್ತದೆಂದು ಕೆಲವರು ಕೇಳಬಹುದು? ಅದಕ್ಕೆ ಸಮಾಧಾನ ಈ ವಿಧವಾಗಿ ಇದೆ. ಮನಸ್ಸು ಕೆಲಸ ಮಾಡುವುದೇ ಎಚ್ಚರವಾದಾಗ, ಮನುಷ್ಯ ಎಚ್ಚರದಲ್ಲಿರುವಾಗ ಅವನಲ್ಲಿನ ಮನಸ್ಸು ಕೆಲಸ ಮಾಡದಂತೆ ಒಂದು ಕ್ಷಣವಾದರೂ ಸುಮ್ಮನಿರುವುದಿಲ್ಲ.

ಮನಸ್ಸಿಗಿರುವ ಮುಖ್ಯವಾದ ಕೆಲಸದಿಂದ ಅದಕ್ಕೆ ಆ ಹೆಸರು ಬರುವುದು ನಡೆದಿದೆ. ಮನಸ್ಸು ಅಂದರೆ ಹೆಸರಿಗೆ ತಕ್ಕಂತೆ ಮನನ ಮಾಡುವುದು ಎಂದು ಅರ್ಥ. ಮನನ ಎಂದರೆ ಜ್ಞಾಪಕ ಎಂದು ಅರ್ಥವಿದೆ. ಮನಸ್ಸೊಂದರ ಎರಡನೆ ಕೆಲಸವನ್ನನುಸರಿಸಿ ಅದಕ್ಕೆ ಆ ಹೆಸರು ಬರುವುದರಿಂದ, ಆ ಕೆಲಸ ಮನಸ್ಸಿಗೆ ಮುಖ್ಯವಾದುದೆಂದು ತಿಳಿಯುತ್ತಿದೆ. ಆದ್ದರಿಂದ ಮನಸ್ಸನ್ನು ಜ್ಞಾಪಕಗಳ ಹುತ್ತಾ ಎಂದು ಕೆಲವರು ಹೇಳುತ್ತಿರುತ್ತಾರೆ. ಮನಸ್ಸು ಮನುಷ್ಯ ಖಾಲಿಯಾಗಿರುವ ಸಮಯದಲ್ಲಿ ಇಷ್ಟಕ್ಕುಮೊದಲು ಕಳೆದುಹೋದ ಕಾಲದಲ್ಲಿ ಐದು ಜ್ಞಾನ ಇಂದ್ರಿಯಗಳಿಗೆ ತಿಳಿದ ವಿಷಯಗಳನ್ನು ಮನುಷ್ಯ ಅಂತರಂಗದೊಳಗೆ ಕಳಿಸಿರುತ್ತಾನೆ. ಅಂತರಂಗದಲ್ಲಿನ ಬುದ್ಧಿ ತಿಳಿಸಿದ ಮೂರು ಗುಣಗಳ ವಿಷಯಗಳನ್ನು ಹೊರಗೆ ತಂದಿರುತ್ತದೆ ಅಲ್ಲವೆ! ಆ ವಿಷಯಗಳೆಲ್ಲವನ್ನು ಮನಸ್ಸು

ತನ್ನಲ್ಲಿ ಸೇರಿಸಿ ಇಟ್ಟುಕೊಳ್ಳುತ್ತಿರುತ್ತದೆ. ಆ ವಿಧವಾಗಿ ಎಲ್ಲಾ ವಿಷಯಗಳನ್ನು ತನ್ನಲ್ಲಿ ಸೇರಿಸಿ ಇಟ್ಟುಕೊಳ್ಳುವುದು ಮನಸ್ಸಿಗಿರುವ ಯೋಗ್ಯತೆ ಎಂದು ಹೇಳಬಹುದು. ಮನಸ್ಸಿಗಿರುವ ಯೋಗ್ಯತೆಯನ್ನೆ ಅರ್ಹತೆಯೆಂದು ಎಂದು ಕೂಡಾ ಹೇಳಬಹುದು. ಮನಸ್ಸಿಗೆ ಹುಟ್ಟಿನಿಂದಲೇ ಬಂದಿರುವ ಅದರ ಯೋಗ್ಯತೆಯನ್ನೇ ಅದಕ್ಕಿರುವ ಶಕ್ತಿ ಅನ್ನುತ್ತಿದ್ದೇವೆ. ಮನಸ್ಸಿಗಿರುವ ಯೋಗ್ಯತೆ ಯನ್ನನುಸರಿಸಿ ಅವನ ಮನಸ್ಸಿಗಿರುವ ಶಕ್ತಿಯನ್ನು ನಿರ್ಣಯಿಸಬಹುದು. ಮನಸ್ಸು ಎಷ್ಟು ಹೆಚ್ಚಾಗಿ ವಿಷಯಗಳನ್ನು ಶೇಕರಿಸಿ ಅದರಲ್ಲಿ ಬಚ್ಚಿಟ್ಟುಕೊಳ್ಳುವ ಸಾಮರ್ಥ್ಯಹೊಂದಿದ್ದರೆ, ಅದನ್ನು ಅಷ್ಟು ಹೆಚ್ಚಾಗಿ ದೃಢಹೊಂದಿರುವುದೆಂದು ಹೇಳಬಹುದು. ಅದರ ಸಾಮರ್ಥ್ಯವನ್ನನುಸರಿಸಿ ದೃಢವಾದುದೆಂದು, ಬಲವಾದುದೆಂದು ಮನಸ್ಸನ್ನು ಹೇಳಬಹುದು. ಕೆಲವರು ಮನುಷ್ಯರಲ್ಲಿ ದೃಢವಾದ ಮನಸ್ಸು ಇರುತ್ತದೆ. ಕೆಲವರಲ್ಲಿ ಬಲಹೀನವಾದ ಮನಸ್ಸು ಇರುತ್ತದೆ. ಮನಸ್ಸು ಕಳೆದ ವಿಷಯಗಳನ್ನು ಎಷ್ಟಾಗಿ ಶೇಕರಿಸಿ ತನ್ನಲ್ಲಿ ಬಚ್ಚಿಟ್ಟುಕೊಳ್ಳುವ ಸಾಮರ್ಥ್ಯ ಇದ್ದರೆ ಅಷ್ಟು ದೃಢವಾದುದಾಗಿ ಹೇಳಬಹುದೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಯಾರಲ್ಲಿ ಎಷ್ಟು ದೃಢವಾದ ಮನಸ್ಸು ಇದೆಯೆಂದು ಹೇಗೆ ಹೇಳಲಾಗುತ್ತದೆ ಎಂದು ನಮಗೆ ಪ್ರಶ್ನೆಬರಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ಹೊರಗಿನ ಸಮಾಜದಲ್ಲಿ ಯಾರಾದರೂ ಹೆಚ್ಚು ವಿಷಯಗಳನ್ನು ತನ್ನ ಜ್ಞಾಪಕದಲ್ಲಿಟ್ಟುಕೊಂಡು ಪುನಃ ಹೇಳಲ್ಪಟ್ಟರೆ, ಅವನಲ್ಲಿನ ಮನಸ್ಸು ಹೆಚ್ಚು ಬಲವಾದುದೆಂದು ಹೇಳಬಹುದು. ಹೊರಗಿನ ಸಮಾಜದಲ್ಲಿ ಯಾರಾದರೆ ವಿಷಯಗಳನ್ನು ಮರೆತುಹೋಗುತ್ತಾ ಪುನಃ ಜ್ಞಾಪಕ ತಂದುಕೊಂಡು ಹೇಳಲಾರದೆ ಹೋಗುತ್ತಿದ್ದಾನೊ, ಅವನಲ್ಲಿನ ಮನಸ್ಸು ಬಲಹೀನವಾದುದೆಂದು ಹೇಳಬಹುದು. ಕೆಲವರಲ್ಲಿ ಜ್ಞಾಪಕಶಕ್ತಿ ಪೂರ್ತಿ ಬಲಹೀನವಲ್ಲದೆ, ಪೂರ್ತಿ ಬಲವಾದುದೂ ಅಲ್ಲದೆ ಇರುವುದನ್ನು ನಾವು ಗ್ರಹಿಸಬಹುದು. ಅಂಥವರಲ್ಲಿ ಮನಸ್ಸು ಮಧ್ಯರೀತಿಯಾಗಿ ಇದೆಯೆಂದು ಹೇಳಬಹುದು. ಮನಸ್ಸಿಗೆ ಮನನ ಮಾಡುವ ಸಾಮರ್ಥ್ಯ ಜಾತಕಪ್ರಕಾರ (ಕರ್ಮರೀತ್ಯಾ) ಹುಟ್ಟುವಿಕೆಯಿಂದಲೇ ಬಂದಿರುತ್ತದೆ.

ದೃಢವಾದ ಮನಸ್ಸಿರುವವರು ಭೂಮಿಮೇಲಿರುವ ಯಾವ ಮತದಲ್ಲಿಯಾದರೂ ಹುಟ್ಟಿರಬಹುದು. ಆದ್ದರಿಂದ ಎಲ್ಲಾ ಮತಗಳಲ್ಲಿಯೂ ದೃಢವಾದ ಮನಸ್ಸಿರುವವರು ಕಾಣಿಸುತ್ತಿದ್ದಾರೆ. ಇಸ್ಲಾಮ್ ಸಮಾಜದಲ್ಲಿರುವ ಮುಸ್ಲಿಮ್‌ರಲ್ಲಿ ಕೆಲವರು ದೃಢವಾದ ಮನಸ್ಸಿರುವವರು ಇದ್ದಾರೆ. ಅಂತಹವರು ತಮಗಿರುವ ಜ್ಞಾಪಕಶಕ್ತಿಯನ್ನು ಆಸರೆಯಾಗಿ ಮಾಡಿಕೊಂಡು ಇತರ ಮತ ಗ್ರಂಥಗಳಲ್ಲಿನ ವಿಷಯಗಳನ್ನು ಕೂಡಾ ಪೂರ್ತಿಯಾಗಿ ಓದಿ ಅವುಗಳನ್ನು ಜ್ಞಾಪಕದಲ್ಲಿ ಇಟ್ಟುಕೊಂಡಿದ್ದಾರೆ. ಕೆಲವರು ಮುಸ್ಲಿಮ್‌ರು ವೇದಗಳಲ್ಲಿನ ಶ್ಲೋಕಗಳನ್ನು ಕ್ರಮವಾಗಿ ಹೇಳುತ್ತಿದ್ದಾರೆ. ಒಂದು ವೇದಗಳೇ ಅಲ್ಲದೆ ಉಪನಿಷತ್‌ಗಳು, ಪುರಾಣಗಳು, ಭಗವದ್ಗೀತೆ, ಬೈಬಲ್, ಖುರಾನ್ ವಿಷಯಗಳೆಲ್ಲವನ್ನು ಚೆನ್ನಾಗಿ ಜ್ಞಾಪಕವಿಟ್ಟುಕೊಂಡು ಯಾವ ಗ್ರಂಥದಲ್ಲಿ ಯಾವ ವಿಷಯ ಇರುವುದು, ಯಾವ ಗ್ರಂಥದಲ್ಲಿನ ಯಾವ ಪೇಜಿನಲ್ಲಿ ಯಾವ ಶ್ಲೋಕವಿರುವುದು ಸುಲಭವಾಗಿ ಹೇಳುತ್ತಿದ್ದಾರೆ. ಎಲ್ಲಾ ವಿಷಯಗಳನ್ನು, ಎಲ್ಲಾ ಸಮಯಗಳಲ್ಲಿಯೂ ಜ್ಞಾಪಕ ಇಟ್ಟುಕೊಳ್ಳಬೇಕೆಂದರೆ ಅವರಲ್ಲಿನ ಮನಸ್ಸು ಬಹಳ ಬಲವಾದುದಾಗಿ ಇರಬೇಕು.

ಈಗಿನಕಾಲದಲ್ಲಿ ಕೆಲವರು ಇತರ ಮತದವರು, ತಮ್ಮ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವುದಕ್ಕೆ ಹಿಂದೂಗಳ ಉಪನಿಷತ್‌ಗಳನ್ನು, ವೇದಗಳನ್ನು, ಭಗವದ್ಗೀತೆಯನ್ನು ಓದಿ ಅದರಲ್ಲಿ ಯಾವ ಪೇಜಿನಲ್ಲಿ ಯಾವ ಶ್ಲೋಕವಿರುವುದು ಹೇಳುತ್ತಾ, ಆ ಶ್ಲೋಕಗಳನ್ನು ಸುಲಭವಾಗಿ ಬಾಯಿಗೆ ಹೇಳುತ್ತಿದ್ದಾರೆ. ಹಾಗೆ ಹೇಳುವುದು ಹಾಗೆ ಸಾಧ್ಯವಾಗುತ್ತಿದೆಯೊ ಅವರಿಗೆ ಏನೂ ತಿಳಿಯದು. ಅವರಿಗೆ ತಿಳಿದಿರುವುದೆಲ್ಲಾ ತಾವು ಎಲ್ಲರಿಗಿಂತ ಹೆಚ್ಚು ಜ್ಞಾಪಕಶಕ್ತಿ ಇರುವವರೆಂದು ತಿಳಿದಿದೆ. ತಮಗಿರುವ ಮೇಧಸ್ಸು ದೊಡ್ಡದೆಂದು ಅಂದುಕೊಳ್ಳುತ್ತಿರುತ್ತಾರೆ. ಅದಕ್ಕೆ ತಮ್ಮ ತಿಳುವಳಿಕೆ ಕಾರಣವಲ್ಲವೆಂದು, ಮನೋಬಲದಿಂದ ಹಾಗೆ ಹೇಳುತ್ತಿದ್ದೇವೆಂದು ಏನೂ ಅಂದುಕೊಳ್ಳುತ್ತಿಲ್ಲ. ವಾಸ್ತವಕ್ಕೆ ಅವರಿಗೆ ಮನಸ್ಸನ್ನು ಕುರಿತಾಗಲಿ, ಬುದ್ಧಿಯನ್ನು ಕುರಿತಾಗಲಿ ತಿಳಿಯದು. ಅವರು ಒಂದುಬಾರಿ ಓದಿದರೆ ಅದನ್ನು ಅವರ ಮನಸ್ಸಿನಲ್ಲಿ ಇಟ್ಟುಕೊಂಡು, ಪುನಃ ಮನನ

ಮಾಡಿಕೊಳ್ಳುವುದರಿಂದ ಸುಲಭವಾಗಿ ಹೇಳುತ್ತಿದ್ದಾರೆ ಹೊರತು, ಅದು ಅವರ ಬುದ್ಧಿ (ತಿಳುವಳಿಕೆ) ವಿಶೇಷತೆಯಲ್ಲವೆಂದು, ಕೇವಲ ಮನಸ್ಸೊಂದರ ಬಲದಿಂದ ಹಾಗೆ ನಡೆಯುತ್ತಿದೆಯೆಂದು ಅವರಿಗೆ ತಿಳಿಯದು. ಜ್ಞಾಪಕಶಕ್ತಿಗು ಬುದ್ಧಿಗು ಯಾವ ಸಂಬಂಧವಿಲ್ಲ. ಜ್ಞಾಪಕಶಕ್ತಿ ಒಂದು ಮನಸ್ಸಿಗೆ ಸಂಬಂಧಿಸಿರುವುದು ಮಾತ್ರವೇ. ಮನಸ್ಸು ಬಲವಾಗಿರುವವರಿಗೆ ಬುದ್ಧಿ ಬಲವಾಗಿರುತ್ತದೆಂಬ ನಂಬಿಕೆಯಿಲ್ಲ. ಜ್ಞಾಪಕಶಕ್ತಿ ಇರುವವರಿಗೆ ಬುದ್ಧಿಬಲ ಕಡಿಮೆಯಾಗಿರುತ್ತದೆ. ಬುದ್ಧಿ ಬಲವಾಗಿರುವವರಿಗೆ ಮನಸ್ಸು ಬಲಹೀನವಾಗಿರಬಹುದು. ಆದ್ದರಿಂದ ಆತ್ಮಜ್ಞಾನವಾಗಲಿ, ಪರಮಾತ್ಮಜ್ಞಾನವಾಗಲಿ ಇರುವವರು ಸ್ವಲ್ಪ ಮರುವು ಇರುವವರಾಗಿ ಬಲಹೀನವಾದ ಮನಸ್ಸಿರುವವರಾಗಿ ಇರುತ್ತಾರೆ.

ಪ್ರಸ್ತುತ ನಿಮಗೆ ಬ್ರಹ್ಮಜ್ಞಾನವನ್ನು (ದೈವಜ್ಞಾನವನ್ನು) ಬರೆದು ಹೇಳುತ್ತಿರುವ ನಾನು ಕೆಲವರಿಗೆ ದೊಡ್ಡಜ್ಞಾನಿಯಾಗಿ ಕಾಣಿಸಿದರೂ, ವಾಸ್ತವವಾಗಿ ನನ್ನಲ್ಲಿನ ಮನಸ್ಸು ಬಹಳ ಬಲಹೀನವಾದುದೆಂದು ಹೇಳುವುದಕ್ಕೆ ನಾನು ನಾಚಿಕೆಪಡುತ್ತಿಲ್ಲ. ನಾನು ಯೋಗಿಯೇ ಆದರೂ, ನನ್ನ ಮನಸ್ಸು ಬಲಹೀನವಾದುದಾದ್ದರಿಂದ, ನಾನು ಹೆಚ್ಚು ಮರುವು ಇರುವವನಾಗಿದ್ದೇನೆ. ನಾನು ಭಗವದ್ಗೀತೆಯನ್ನು ತ್ರೈತ ಸಿದ್ಧಾಂತ ಭಗವದ್ಗೀತೆಯಾಗಿ ಬರೆದರೂ, ಯಾರಿಗೂ ತಿಳಿಯದ ಎಷ್ಟೋ ಗೂಡಾರ್ಥ ವಿಷಯಗಳನ್ನು ಸುಲಭವಾಗಿ ವಿವರಿಸಿದರೂ, ಜ್ಞಾನದಲ್ಲಿ ಎಷ್ಟು ಮೇಧಾವಿಯಾದರೂ, ಭಗವದ್ಗೀತೆಯಲ್ಲಿನ ಒಂದು ಶ್ಲೋಕ ಕೂಡಾ ಜ್ಞಾಪಕಬಂದು ಬಾಯಿಂದ ಹೇಳಲಾರೆನು. ಬೈಬಲ್‌ನಲ್ಲಿನ ರಹಸ್ಯವಾದ ಜ್ಞಾನವನ್ನು ಬಿಡಿಸಿ ಹೇಳಬಲ್ಲೆನು. ಆದರೆ ಆ ವಾಕ್ಯ ಯಾವ ಅಧ್ಯಾಯದಲ್ಲಿ ಇದೆಯೊ ತಿಳಿಯದು. ನೋಡಿ ಓದುವವರೆಗೂ ಆ ವಾಕ್ಯವನ್ನು ಹೇಳಲಾರೆವು. ಹಾಗೆಯೇ ಈದಿನ ಖುರಾನ್‌ಗ್ರಂಥದಲ್ಲಿ ಇಲ್ಲಿಯವರೆಗು ಮುಸ್ಲಿಮ್‌ರಿಗು ಕೂಡಾ ಅರ್ಥವಾಗದ ವಾಕ್ಯಗಳನ್ನು ವಿವರಿಸಿ ವಿವರವಾಗಿ ಎಲ್ಲಾ ಮತದವರಿಗೂ ಅರ್ಥವಾಗುವಂತೆ ಹೇಳಿದ್ದೇವೆ. ಆದರೆ ಆ ವಾಕ್ಯವನ್ನು ನೋಡಿ ಹೇಳಿರುವುದು ಬಾಯಿಗೆ ಹೇಳಲಾರೆವು. ಇದರಿಂದ ನನ್ನ ಮನಸ್ಸು ಬಲಹೀನವಾಗಿದೆಯೆಂದು ನನಗೆ ತಿಳಿದುಹೋಗಿದೆ. ನನ್ನ ಮನಸ್ಸು

ಬಲಹೀನವಾಗಿದೆಯೆಂದು ನಾನು ದುಃಖಪಡುತ್ತಿಲ್ಲ ಆದರೆ, ನನ್ನ ಬುದ್ಧಿ ದೊಡ್ಡದೆಂದು ಸಂತೋಷಿಸುತ್ತಿದ್ದೇನೆ. ನನ್ನ ಬುದ್ಧಿವೊಂದರ ಆಸಕ್ತಿ ಎಲ್ಲವೂ ಪರಮಾತ್ಮ ವಿಷಯಗಳ ಮೇಲೆ ಇರುವುದರಿಂದ ನಾನು ಸಂತೋಷಿಸುತ್ತಿದ್ದೇನೆ. ದೈವ ವಿಷಯಗಳನ್ನು ಸುಲಭವಾಗಿ ಹೇಳಿರುವುದಕ್ಕೆ ಸಂತೋಷಿಸುತ್ತಿದ್ದೇನೆ. ಇಲ್ಲಿ ಕೆಲವರು ನನ್ನನ್ನು ಒಂದು ಪ್ರಶ್ನೆ ಕೇಳುವುದಕ್ಕೆ ಅವಕಾಶ ಇದೆ. ಅದೇನೆಂದರೆ!

ನೀವು ಮೂಲ ಗ್ರಂಥಗಳಲ್ಲಿನ ವಿಷಯಗಳನ್ನು ಶ್ಲೋಕಗಳ ರೂಪದಲ್ಲಾಗಲಿ, ವಾಕ್ಯಗಳ ರೂಪದಲ್ಲಾಗಲಿ ಹೇಳುತ್ತಿಲ್ಲ. ಅದಕ್ಕೆ ನಿಮಗೆ ಜ್ಞಾಪಕಶಕ್ತಿ ಇಲ್ಲ, ನಿಮ್ಮ ಮನಸ್ಸು ಬಲಹೀವಾದುದೆಂದು ಹೇಳುತ್ತಿದ್ದೀರಿ. ಆದರೆ ಆಧ್ಯಾತ್ಮಿಕ ವಿಷಯಗಳಲ್ಲಿ ಯಾವ ಪ್ರಶ್ನೆಯನ್ನು ಕೇಳಿದರೂ, ಪ್ರಶ್ನೆ ಮುಗಿದುಹೋದ ತಕ್ಷಣ ಉತ್ತರ ಹೇಳುತ್ತಿದ್ದೀರಿ. ಜ್ಞಾಪಕಶಕ್ತಿ ಇಲ್ಲದವರಿಗೆ ಅದೇಗೆ ಸಾಧ್ಯವಾಗುತ್ತದೆ. ಎಷ್ಟೊ ಜ್ಞಾಪಕ ಇದ್ದರೆ ಹೊರೆತು ಸಾಧ್ಯವಾಗದ ಜ್ಞಾನವನ್ನು ನೀವು ಹೇಳುತ್ತಿರುವಾಗ, ನೀವು ನಿಮ್ಮ ಮನಸ್ಸು ಬಲಹೀನವಾಗಿದೆಯೆಂದರೆ ನಾವು ನಂಬಬೇಕಾ? ನೀವು ಇಲ್ಲಿಗೆ ಸುಮಾರು 52 ಗ್ರಂಥಗಳನ್ನು ಬರೆದಿದ್ದೀರಿ. ಅದರಲ್ಲಿ ಎಲ್ಲಿಯೂ ಸಹಾ ಒಂದುಕಡೆ ಒಂದುವಿಧ, ಮತ್ತೊಂದುಕಡೆ ಮತ್ತೊಂದುವಿಧವಾಗಿ ಹೇಳಲಿಲ್ಲ. ಅಷ್ಟೇಯಲ್ಲದೆ ಶಾಸ್ತ್ರಬದ್ಧತೆಯನ್ನು ಬಿಟ್ಟು ಎಲ್ಲಿಯೂ ಹೇಳಲಿಲ್ಲ. ನೀವು ಹೇಳುವ ವಿಷಯಗಳು ಮೂಲ ಗ್ರಂಥಗಳಲ್ಲಿ ಕೂಡಾ ಇವೆಯೆಂದು ಹೇಳುತ್ತಿದ್ದೀರಿ. ಇದೆಲ್ಲವೂ ಜ್ಞಾಪಕಶಕ್ತಿ ಇಲ್ಲದವರಿಗೆ ಸಾಧ್ಯವೆನ್ನುತ್ತೀರಾ? ನಿಮ್ಮ ಮನಸ್ಸು ಬಲಹೀನವಾದುದಾದರೆ 52 ಗ್ರಂಥಗಳು ಹೇಗೆ ಬರೆದಿದ್ದೀರ. 100 ಉಪನ್ಯಾಸಗಳು ಹೇಗೆ ಹೇಳಿದ್ದೀರಿ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ನಮ್ಮ ಮನಸ್ಸು ಬಲಹೀನವಾದುದೆಂದು ನೂರಕ್ಕೆ ನೂರರಷ್ಟು ಸತ್ಯ. ಇಲ್ಲಿಯವರೆಗು ನನ್ನ ಸೆಲ್‌ಫೋನ್ ನಂಬರ್ ನನಗೆ ಜ್ಞಾಪಕ ಇರುವುದಿಲ್ಲ. ಇತರರ ಸೆಲ್‌ಫೋನ್ ನಂಬರಾಗಲಿ ಕನಿಷ್ಟ ಒಬ್ಬರಿದಾದರೂ, ಒಂದು ಫೋನ್ ನಂಬರಾದರೂ ಜ್ಞಾಪಕದಲ್ಲಿ ಇರುವುದಿಲ್ಲ. ನನ್ನ ಸೆಲೆಫೋನಲ್ಲಿ ರಿಕಾರ್ಡಾದ ನಂಬರ್‌ಗಳಿಗೆ

ಹೆಸರುಗಳು ಇಟ್ಟುಕೊಂಡು, ಆ ಹೆಸರುಗಳ ಪ್ರಕಾರ ಯಾರಿಗಾದರೂ ಫೋನ್ ಮಾಡುವುದು ನಡೆಯುತ್ತಿದೆ. ಏನಾದರೂ ಬೇಕಾಗಿರುವ (ಕಷ್ಟ) ಸಮಯದಲ್ಲಿ ಸೆಲ್‌ಫೋನ್ ಹೋದರೆ, ಕನಿಷ್ಟ ನನ್ನ ಪತ್ನಿಗಾದರೂ ಫೋನ್‌ಮಾಡಿ ಹೇಳುವುದಕ್ಕೆ ಆ ನಂಬರ್ ಕೂಡಾ ನನ್ನಮನಸ್ಸಿನಲ್ಲಿ ಇಲ್ಲ. ಅಂತಹದರಲ್ಲಿ ನಾನು ಜ್ಞಾಪಕಶಕ್ತಿಯಲ್ಲಿ ಬಹಳ ಬಲಹೀನನೆಂದು ಯಾರಾದರೂ ಒಪ್ಪಿಕೊಳ್ಳದೆ ತಪ್ಪವುದಿಲ್ಲ. ಇನ್ನು ನಾವು 52 ಗ್ರಂಥಗಳು ಬರೆದಿರುವುದು, 100 ಉಪನ್ಯಾಸಗಳು ಹೇಳಿರುವುದು ವಾಸ್ತವವೇ. ಆದರೆ ಅಲ್ಲಿ ಬರೆದಿರುವುದು ಹೇಳಿರುವುದು ದೈವಜ್ಞಾನ. ದೈವಜ್ಞಾನವನ್ನು ಬರೆಯುವುದಕ್ಕಾಗಲಿ, ಹೇಳುವುದಕ್ಕಾಗಲಿ ಮನುಷ್ಯನ ಜ್ಞಾಪಕಶಕ್ತಿಯೊಂದಿಗೆ ಸಂಬಂಧ ಇರುವುದಿಲ್ಲ.

ಮನಸ್ಸಿಗೆ ಪ್ರಪಂಚ ವಿಷಯಗಳಲ್ಲಿ ಮಾತ್ರವೇ ಬಲ, ಬಲಹೀನ ಇರುತ್ತದಾಗಲಿ, ದೈವ ವಿಷಯಗಳು ಅದಕ್ಕೆ ಯಾವ ಸಂಬಂಧವಿಲ್ಲ. ಮನುಷ್ಯನ ಶರೀರದೊಳಗೆ ಐದು ದ್ವಾರಗಳ ಮೂಲಕ ಪ್ರವೇಶಿಸಿದ ವಿಷಯಗಳನ್ನು ಪ್ರಪಂಚ ವಿಷಯಗಳೆಂದು ಹೇಳಬಹುದು. ಐದು ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ ಎಂಬ ಐದು ಇಂದ್ರಿಯಗಳ ಮೂಲಕ ಪ್ರವೇಶಿಸಿದ ಪ್ರಪಂಚ ವಿಷಯಗಳ ಮೇಲೆ ಮನಸ್ಸೊಂದರ ಬಲ, ಬಲಹೀನವನ್ನು ಕುರಿತು ಹೇಳಬಹುದು. ಆದರೆ ಆತ್ಮ, ಪರಮಾತ್ಮಕ್ಕೆ, ಸಂಬಂಧಿಸಿದ ವಿಷಯಗಳು ಪ್ರಪಂಚ ಸಂಬಂಧವಲ್ಲ. ಅವು ದೈವ ಸಂಬಂಧ ವಿಷಯಗಳು ಆದ್ದರಿಂದ ಮನೋ ಜ್ಞಾಪಕಕ್ಕೆ ಯಾಮಾತ್ರ ಸಂಬಂಧ ಇರುವುದಿಲ್ಲ. ಇಲ್ಲಿ ಕೆಲವರಿಗೆ ಮತ್ತೊಂದು ಪ್ರಶ್ನೆ ಬರಬಹುದು, ಅದೇನೆಂದರೆ! ಮುಸ್ಲಿಮ್‌ರು ವೇದಗಳಲ್ಲಿನ, ಭಗವದ್ಗೀತೆಯಲ್ಲಿನ ಶ್ಲೋಕಗಳು ಹೇಳಿದರೆ ಅದು ಅವರ ಮನೋಶಕ್ತಿ ಎಂದಿದ್ದೀರಿ. ಇಲ್ಲಿಯೇನೊ ದೈವ ಸಂಬಂಧ ಜ್ಞಾನ ಮನಸ್ಸಿಗೆ ಸಂಬಂಧವಿಲ್ಲ ಅನ್ನುತ್ತಿದ್ದೀರಿ. ಅವರು ಹೇಳಿರುವುದು ದೈವಸಂಬಂಧ ಶ್ಲೋಕಗಳು, ವಾಕ್ಯಗಳೆ ಅಲ್ಲವೆ! ಅಂಥದರಲ್ಲಿ ಅವು ಅವರಿಗೆ ಮನೋಬಲಕ್ಕೆ ಸಂಬಂಧಿಸಿರುವವು ಹೇಗೆ ಆಗಿವೆ? ದೈವಸಂಬಂಧಗಳಾದವು ಏಕೆ ಆಗಲಿಲ್ಲ? ಈಗ ನೀವು

ಹೇಳಿರುವವು ದೈವಸಂಬಂಧ ವಿಷಗಳೆಂದು, ಮನೋಜ್ಞಾಪಕಕ್ಕೆ ಅವು ಸಂಬಂಧ ಇಲ್ಲವೆನ್ನುತ್ತಿದ್ದೀರಿ. ನೀವು ಹೇಳುವುದು ಸರಿಯಾಗಿ ನಮಗೆ ಅರ್ಥವಾಗುತ್ತಿಲ್ಲ. ದೈವಸಂಬಂಧ ವಿಷಯಗಳಿಗೆ ಮನೋ ಜ್ಞಾಪಕದೊಂದಿಗೆ ಸಂಬಂಧ ಇಲ್ಲದಿದ್ದರೆ ನೀವು ಯಾವ ಜ್ಞಾಪಕದೊಂದಿಗೆ 100 ಉಪನ್ಯಾಸಗಳು ಹೇಳಿದ್ದೀರಾ. 52 ಗ್ರಂಥಗಳು ಯಾವ ಜ್ಞಾಪಕದಿಂದ ಬರೆದಿದ್ದೀರಾ? ಎಂದು ಕೇಳಬಹುದು. ಅದಕ್ಕೆ ನನ್ನ ಸಮಾಧಾನ ಈ ವಿಧವಾಗಿದೆ. ಶ್ಲೋಕಗಳು, ಪದ್ಯಗಳು, ಗೂಡಾರ್ಥವಾಕ್ಯಗಳು ಜ್ಞಾನಸಂಬಂಧ ಆದವುಗಳಾದರೂ ಅವು ವಿವರವಾಗಿ ಅರ್ಥವಾದಾಗಲೇ ನಿನಗಾಗಲಿ, ನನಗಾಗಲಿ, ಯಾರಿಗಾದರೂ ಆಗಲಿ ಜ್ಞಾನವಾಗುತ್ತದೆ. ಅವುಗಳ ವಿವರ ಅರ್ಥವಾಗದಿರುವಾಗ ವೇದಗಳ ಮಂತ್ರಗಳಾಗಲಿ, ಗೀತಶ್ಲೋಕಗಳಾಗಲಿ, ಬೈಬಲ್ ವಚನಗಳಾಗಲಿ, ಖುರಾನ್ ಆಯತ್‌ಗಳಾಗಲಿ ಅಕ್ಷರ ಸಮೂಹಗಳೇ ಆಗಲಿ ಜ್ಞಾನ ಸಮುದಾಯಗಳು ಅಲ್ಲ. ಮುಸ್ಲಿಮ್‌ರು ಕಲಿತುಕೊಂಡ ಶ್ಲೋಕಗಳಾದರೂ, ಕ್ರೈಸ್ತರು ಓದುವ ವಾಕ್ಯಗಳಾದರೂ ವಿವರ ತಿಳಿಯದೆಹೋದರೆ ಅವುಗಳನ್ನು ದೈವ ವಿಷಯಗಳಾಗಲಿ ಲೆಕ್ಕಿಸುವುದಿಲ್ಲ. ಆದ್ದರಿಂದ ಮುಸ್ಲಿಮ್‌ರು ವೇದಗಳ ಮಂತ್ರಗಳನ್ನು, ಗೀತಾ ಶ್ಲೋಕಗಳನ್ನು, ಬೈಬಲ್ ವಾಕ್ಯಗಳನ್ನು ಮನೋಬಲದಿಂದಲೇ ಹೇಳುತ್ತಿದ್ದಾರೆಂದು ಹೇಳುತ್ತಿದ್ದೇವೆ. ಅವರು ಹೇಳುವ ಶ್ಲೋಕಗಳಲ್ಲಿ ಮನೋಬಲವು ಕಾಣಿಸುತ್ತಿದೆ. ಬುದ್ಧಿಬಲ ಕಾಣಿಸುತ್ತಿಲ್ಲ. ಏಕೆಂದರೆ! ದೇವರು ಹೇಳಿದ ಭಾವನೆ ಒಂದಿರುವಾಗ ಶ್ಲೋಕಗಳನ್ನು ಹೇಳುವವರು ಅವುಗಳಿಗೆ ಬೇರೆ ಭಾವವನ್ನು ಹೊಂದಿದ್ದಾರೆ. ಆದ್ದರಿಂದ ಅವರಿಗೆ ಜ್ಞಾಪಕಶಕ್ತಿ ಇದೆ ಆದರೆ, ಜ್ಞಾನಶಕ್ತಿಯಿಲ್ಲ ಎಂದು ಹೇಳಬಹುದು. ಅವರು ಹೇಳುವ ಶ್ಲೋಕಗಳು ದೈವಸಂಬಂಧವೇ ಆಗಿದ್ದರೂ, ಅವುಗಳ ನಿಜಭಾವ ತಿಳಿಯದಿರುವುದರಿಂದ ಅವು ನಮ್ಮ ಲೆಕ್ಕದಲ್ಲಿ ಪ್ರಪಂಚ ಸಂಬಂಧ ವಿದ್ಯೆಯಾಗಿ ಲೆಕ್ಕಿಸಲ್ಪಡುತ್ತಿವೆ. ಪ್ರಪಂಚ ಸಂಬಂಧ ವಿದ್ಯೆಗಳಾಗಿ ಲೆಕ್ಕಿಸಲ್ಪಡುವ ಕಂಠಾಪಾಟ ಶ್ಲೋಕಗಳನ್ನು, ವಾಕ್ಯಗಳನ್ನು ಮನೋಬಲದಿಂದ ಹೇಳುವವಾಗಿ ಹೇಳುತ್ತಿದ್ದೇವೆ.

ನಾವು ಹೇಳಿದ ಜ್ಞಾನ ದೈವಸಂಬಂಧವಾದುದು, ಆದ್ದರಿಂದ ಅದು ಮನೋ ಜ್ಞಾಪಕಕ್ಕೆ ಸಂಬಂಧವಿಲ್ಲ. ಬುದ್ಧಿ ದೈವಜ್ಞಾನವನ್ನು ಗ್ರಹಿಸಿಕೊಂಡರೂ, ಜ್ಞಾನವನ್ನು ಮನಸ್ಸು ಜ್ಞಾಪಕ ಮಾಡಲಿಲ್ಲ. ಮನೋಜ್ಞಾಪಕವೆಲ್ಲಾ ಪ್ರಪಂಚ ವಿಷಯಗಳವರೆಗೇ ಎಂದು ಮೊದಲೇ ಹೇಳಿಕೊಂಡಿದ್ದೇವೆಂದು ಜ್ಞಾಪಕವಿಟ್ಟು ಕೊಳ್ಳಬೇಕು. ನಾನು ಹೇಳಿದ ಉಪನ್ಯಾಸಗಳು, ಬರೆದ ಗ್ರಂಥಗಳು ಇದ್ದಲ್ಲಿಯೂ, ಅವುಗಳನ್ನು ಕುರಿತು ಹೇಳುವಾಗ ನಾನು ಹೇಳುವುದೇನೆಂದರೆ! ಹಾಗೆ ನಾನು ಬರೆದಿರುವುದೇನೆಂದರೇ! ಎಂದು ಉಚ್ಛರಿಸದೆ ನಾವು ಬರೆದಿರುವುದೇನೆಂದಾ ಗಲಿ, ನಾವು ಹೇಳುವುದು ಏನೆಂದರೇ ಎಂದಾಗಲಿ ಬರೆದಿರುತ್ತೇವೆ. ನಾನು ಎಂದು ಬರೆಯಬೇಕಾದಕಡೆ ಏಕವಚನವಾದ ನಾನು ಎಂದು ಬರೆಯದೆ, ಬಹುವಚನವಾದ ನಾವು ಎಂದು ಬರೆದಿದ್ದೇವೆ. ಹಾಗೆ ಬರೆಯುವುದಕ್ಕೆ ಕಾರಣವೇನೆಂದರೆ! ಅಲ್ಲಿ ಬರೆಯಲ್ಪಟ್ಟ ಗ್ರಂಥವಾಗಲಿ, ಹೇಳಲ್ಪಟ್ಟ ಉಪನ್ಯಾಸವಾ ಗಲಿ ವಾಸ್ತವವಾಗಿ ನಾನು ಹೇಳಿರುವುದು, ಬರೆದಿರುವುದಲ್ಲ. ಜ್ಞಾಪಕಶಕ್ತಿಯೇ ಇಲ್ಲದ ನಾನು ಗ್ರಂಥವನ್ನು ಬರೆಯಲಾರೆನೆಂದು, ಉಪನ್ಯಾಸವನ್ನು ಹೇಳಲಾರೆನೆಂದು ಹೇಳಬಹುದು. ಆದರೆ ಮೇಲ್ನೋಟಕ್ಕೆ ಕಾಣಿಸುವಂತೆ ನಿಮ್ಮ ದೃಷ್ಟಿಗೆ ನಾನು ಬರೆದರೂ, ನನ್ನ ಭಾವನೆಯಲ್ಲಿ ನಾನು ಮತ್ತು ನನ್ನ ಆತ್ಮ ಇಬ್ಬರೂ ಸೇರಿ ಬರೆದಿರುವವಾಗಿರುತ್ತವೆ. ಹಾಗೆಯೇ ನನ್ನ ಆತ್ಮ ಹೇಳಿರುವುದಾಗಿ ಲೆಕ್ಕಿಸುತ್ತಿದ್ದೇನೆ. ಆದ್ದರಿಂದ ಬಹಳಕಡೆ ಬಹುವಚನವಾದ ನಾವು ಎಂಬ ಪದವನ್ನು ಬರೆದಿರುತ್ತೇವೆ. ನನ್ನ ಶರೀರ ಮೇಲ್ನೋಟಕ್ಕೆ ಕಾಣಿಸುತ್ತಿದ್ದರೂ, ನನ್ನ ಶರೀರ ದೊಳಗೆ ಕಾಣಿಸದ ಆತ್ಮವಿದೆ. ನನ್ನಿಂದಲೇ ಬರೆಸಿದೆ. ಹೇಳಿಸಿರುವುದು ನಿಜವಾ ನನ್ನಲ್ಲಿನ ಆತ್ಮಯೆಂದು ತಿಳಿಸುತ್ತಿದ್ದೇನೆ. ಅಷ್ಟೇಯಲ್ಲದೆ ಎಲ್ಲರಿಗೂ ತಿಳಿಯದ ವಿಷಯ ಒಂದಿದೆ. ಅದೇನೆಂದರೆ! ದೈವ ಸಂಬಂಧ ವಿಷಯಗಳನ್ನು ಜ್ಞಾಪಕ ಮಾಡುವುದು ಶರೀರದಲ್ಲಿನ ಆತ್ಮೆಯೆಂದು ಯಾರಿಗೂ ತಿಳಿಯದು. ಪ್ರಪಂಚ ಸಂಬಂಧ ವಿಷಯುಗಳನ್ನು ಮನಸ್ಸು ತಿಳಿಸಿದಾಗ ಆತ್ಮ ಸಂಬಂಧಿತ (ದೈವಸಂಬಂಧಿತ) ಜ್ಞಾನ ವಿಷಯಗಳನ್ನು ಆತ್ಮ ತಿಳಿಸುತ್ತಿದೆ. ಆತ್ಮ ತಿಳಿಸುವ ಜ್ಞಾನ ಶ್ಲೋಕಗಳ ರೂಪದಲ್ಲಿ, ವಾಕ್ಯಗಳ ರೂಪದಲ್ಲಿ ಹೇಳಲಾಗದೆ ಹೋದರೂ

ಹೇಳಿದ ಜ್ಞಾನ ಮೂಲಗ್ರಂಥಗಳಲ್ಲಿ ಮೊದಲೇ ಹೇಳಿದ ಶ್ಲೋಕಗಳಿಗು, ವಾಕ್ಯಗಳಿಗು ಸಮಾನವಾಗಿರುತ್ತದೆ. ಅಂತರಂಗದಿಂದ ಆತ್ಮವೇ ಮಾತನಾಡುತ್ತಿರುವಾಗ ಮಧ್ಯದಲ್ಲಿ ನನ್ನ ಜ್ಞಾಪಕಶಕ್ತಿಯಿಂದ ಕೆಲಸವಿಲ್ಲ. ಎಲ್ಲಾ ಜ್ಞಾಪಕಶಕ್ತಿಗಳನ್ನು ಆತ್ಮವೇ ಆಗಿಂದಾಗ ಉಂಟುಮಾಡುತ್ತದೆ. ದೈವಜ್ಞಾನಕ್ಕೆ ಬೇಕಾದ ಮಾತುಗಳನ್ನು ಹೇಳಿಸುವುದು, ಬರಹಗಳನ್ನು ಬರೆಯಿಸುವುದು ಆತ್ಮವೇ, ಆದ್ದರಿಂದ ದೈವಜ್ಞಾನಕ್ಕೆ ಮನಸ್ಸೊಂದರ ಜ್ಞಾಪಕಶಕ್ತಿ ಅಗತ್ಯವಿಲ್ಲ. ಮುಸ್ಲಿಮ್‌ರು ಹೇಳಿದ ಶ್ಲೋಕಗಳು ಅವರ ಕಂಠಾಪಾಟವಾಗಿ ಹೇಳಿದರೂ, ಅವರು ನಾನು ಚೆನ್ನಾಗಿ ಹೇಳಿದ್ದೇನೆಂಬ ವ್ಯಕ್ತಿಗತ ಉದ್ದೇಶದಲ್ಲಿಯೇ ಇರುತ್ತಾರೆ. ಅವರು ಹೇಳಿದ ಶ್ಲೋಕಗಳಲ್ಲಿನ ಭಾವವನ್ನು ಅವರು ಕಲಿತುಕೊಂಡು ಹೇಳಿದರೂ, ಅದು ನಿಜಭಾವನೆ ಅಲ್ಲದಿರುವುದರಿಂದ, ಅವರದು ಪ್ರಪಂಚ ಓದಿಗೆ ಜಮಕಟ್ಟಲಾಗುತ್ತದೆ. ಆದ್ದರಿಂದ ಅವರಿಗೆ ಮನಸ್ಸೊಂದರ ಜ್ಞಾಪಕಶಕ್ತಿ ಹೆಚ್ಚಾಗಿದೆಯೆಂದು ಹೇಳಿದ್ದೇನೆ. ನಿಜಕ್ಕೆ ಜ್ಞಾಪಶಕ್ತಿಯಲ್ಲಿ ಪೂರ್ತಿ ಹಿಂದುಳಿದ ನಾನು ಹೇಳಿದ ಜ್ಞಾನ ವಿಷಯಗಳು ನನ್ನವು ಅಲ್ಲವೆಂದು, ಆತ್ಮ ಹೇಳಿರುವವೆಂದು, ನನಗೆ ಚೆನ್ನಾಗಿ ತಿಳಿದಿದೆ. ಆದ್ದರಿಂದ ದೈವ ಸಂಬಂಧ ವಿಷಯಗಳು ಯಾರಿಗಾದರೂ ಜ್ಞಾಪಕಶಕ್ತಿ ಪ್ರಸ್ತಾವನೆ ಇಲ್ಲದಂತೆ ಜ್ಞಾನಶಕ್ತಿ ಪ್ರಸ್ತಾವನೆಯಿಂದಲೇ ತಿಳಿಯಲ್ಪಡುತ್ತದೆಯೆಂದು ಮತ್ತೆ ಮತ್ತೆ ಹೇಳುತ್ತಿದ್ದೇನೆ. ಜ್ಞಾಪಕಶಕ್ತಿ ಇರುವವನು ಹೆಚ್ಚಾಗಿ ಪ್ರಪಂಚದಲ್ಲಿ ಸಿಕ್ಕಿಕೊಂಡುಹೋಗುತ್ತಾನೆ. ಜ್ಞಾನಶಕ್ತಿ ಇರುವವನಿಗೆ ಶ್ಲೋಕಗಳು ಬರದಿದ್ದರೂ, ವಾಕ್ಯಗಳು ತಿಳಿಯದಿದ್ದರೂ, ಅವುಗಳಲ್ಲಿನ ನಿಜಜ್ಞಾನ ಆತನಿಗೆ ತಿಳಿಯುತ್ತದೆ.

ಇನ್ನೂ ಓದುಬಾರದವನಿಗು, ಓದು ಬಂದವನಿಗು ಜ್ಞಾನದಲ್ಲಿ ಏನಾದರೂ ವ್ಯತ್ಯಾಸ ಇರುತ್ತದಾ ಎಂದು ಮೊದಲು ಕೇಳಿದ ಪ್ರಶ್ನೆಯಲ್ಲಿ ಇದೆ. ಅದನ್ನು ಕುರಿತು ಹೇಳುವ ಮೊದಲು ಒಂದು ಸೂತ್ರವನ್ನು ಹೇಳಿಕೊಳ್ಳೋಣ. ಅದೇನೆಂದರೆ! ಮನುಷ್ಯನಲ್ಲಿನ ಮನಸ್ಸನ್ನನುಸರಿಸಿ ಜ್ಞಾಪಕವೂ, ಬುದ್ಧಿಯನ್ನನು ಸರಿಸಿ ಜ್ಞಾನವೂ ಲಭಿಸುತ್ತದೆಂದು ಹೇಳುವುದು ಸೂತ್ರ. ಸೂತ್ರದ ಪ್ರಕಾರ ಮನುಷ್ಯನೊಂದರ ಬುದ್ಧಿಯನ್ನನುಸರಿಸಿ ಜ್ಞಾನವೆಂದು ಹೇಳುವುದು

ನಡೆದಿದೆಯಾಗಲಿ, ಓದನ್ನನುಸರಿಸಿ ಜ್ಞಾನವೆಂದು ಹೇಳಲಿಲ್ಲ ಅಲ್ಲವೆ! ಮನುಷ್ಯನಲ್ಲಿನ ಬುದ್ಧಿ ಅವನ ಕರ್ಮವನ್ನು ಅನುಸರಿಸಿ ಇರುತ್ತದೆ. ಕರ್ಮವನ್ನು ಅನುಸರಿಸಿ ಹುಟ್ಟುವಿಕೆಯಿಂದ ಬಂದಿರುವ ಬುದ್ಧಿಗೆ ಪ್ರಪಂಚ ಜ್ಞಾನವಿಷಯಗಳ ಮೇಲೆ ಆಸಕ್ತಿ ಹೆಚ್ಚಾಗಿರುತ್ತದೆ. ಬುದ್ಧಿ ಕರ್ಮವನ್ನನುಸರಿಸಿ ಬಂದರೂ ಗತಜನ್ಮಗಳ ಸಂಸ್ಕಾರ ಬಲವನ್ನನುಸರಿಸಿ ದೈವಮಾರ್ಗದ ಮೇಲೆ ಆಸಕ್ತಿ (ಶ್ರದ್ಧೆ) ಅವನ ಬುದ್ಧಿಗೆ ಸಿಗುವ ಅವಕಾಶ ಇದೆ. ಆದ್ದರಿಂದ ಕೆಲವರ ಬುದ್ಧಿಗೆ ಪ್ರಪಂಚ ಜ್ಞಾನದ ಮೇಲೆ ಹೆಚ್ಚಾಗಿ ಶ್ರದ್ಧೆ ಇರುವಾಗ, ಕೆಲವರ ಬುದ್ಧಿಗೆ ಪರಮಾತ್ಮ ವಿಷಯದಮೇಲೆ ಆಸಕ್ತಿ ಹೆಚ್ಚಾಗಿ ಇರುತ್ತದೆ. ಗತಜನ್ಮಗಳಲ್ಲಿ ದೈವವಿಷಯಗಳ ಮೇಲೆ ಆಸಕ್ತಿ ಇರುವವನಿಗೆ ಈ ಜನ್ಮದಲ್ಲಿ ಓದುಬಂದರೂ, ಓದು ಬಾರದಿದ್ದರೂ ದೈವಜ್ಞಾನ ಪುಷ್ಕಲವಾಗಿ ಲಭಿಸುತ್ತದೆ. ಆದ್ದರಿಂದ ಓದಿಗು ದೈವಜ್ಞಾನಕ್ಕು ಸಂಬಂಧ ಇಲ್ಲವೆಂದು, ಆಸಕ್ತಿಯಿದ್ದರೆ ಓದುಬಾರದವನಿಗಾದರೂ ಜ್ಞಾನ ಬರುತ್ತದೆಂದು ಹೇಳಬಹುದು. ಓದು ಚೆನ್ನಾಗಿ ಬಂದರೂ ದೈವಜ್ಞಾನ ಸ್ವಲ್ಪವೂ ಇಲ್ಲದವರು ಭೂಮಿಮೇಲೆ ಎಷ್ಟೋಜನ ಇದ್ದಾರೆ. ಓದುಬಾರದವನಿಗಿಂತ ಓದುಬರುವವನಿಗೆ ಜ್ಞಾನದಮೇಲೆ ಅನುಮಾನಗಳು ಹೆಚ್ಚು. ಆದ್ದರಿಂದ ಓದಿದವನಿಗೆ ದೈವಜ್ಞಾನ ಬರುತ್ತದೆಂಬ ನಂಬಿಕೆ ಇಲ್ಲ.

**ಪ್ರಶ್ನೆ :–** ಒಂದು ವಸ್ತುವು ಕಾಣಿಸದಂತೆ ಮಾಯವಾಗಿ ಹೋಗುತ್ತದೆಯೆಂದು, ಮಾಯ ಮಾಡುತ್ತೇವೆಯೆಂದು ಕೆಲವರನ್ನುತ್ತಿರುತ್ತಾರೆ. ಒಂದು ವಸ್ತುವನ್ನು ಕಣ್ಣಿಗೆ ಕಾಣಿಸದಂತೆ ಹಸ್ತಲಾಘವದಿಂದ ಬಚ್ಚಿಟ್ಟು, ಮಾಯವಾಗಿ ಹೋಗಿದೆಂದು ಕೆಲವರು ಇತರರನ್ನು ನಂಬಿಸುತ್ತಿರುತ್ತಾರೆ. ಹಾಗೆಯೇ ಕೆಲವರು ತಾವು ಬಚ್ಚಿಟ್ಟಿರುವ ವಸ್ತುವನ್ನು ಹಸ್ತಲಾಘವದಿಂದ ಕಾಣಿಸುವಂತೆ ಮಾಡಿ, ವಸ್ತುವನ್ನು ಸೃಷ್ಟಿಸಿದ್ದೇವೆಂದು ಅನ್ನುತ್ತಿದ್ದಾರೆ. ಇದೆಲ್ಲವೂ ಇತರರನ್ನು ಮೋಸ ಮಾಡುವುದು ಹೊರತು, ಯಾವುದೂ ವಾಸ್ತವ ಅಲ್ಲವೆಂದು, ನಿಜಕ್ಕೆ ಮಾಯೆ ಇಲ್ಲವೆ ಅದೃಶ್ಯ ಎನ್ನುವುದು ಇಲ್ಲವೇ ಇಲ್ಲವೆಂದು ಕೆಲವರು ಜನವಿಜ್ಞಾನವೇದಿಕೆಯವರು, ಇನ್ನುಕೆಲವರು ಹೇತುವಾದಿಗಳೆಂದು ಕರೆಯಲ್ಪಡುವವರು ಹೇಳುತ್ತಿದ್ದಾರೆ.

ವಾಸ್ತವಕ್ಕೆ ಮಾಯೆ ಎಂಬುದು ನಡೆಯುತ್ತದಾ? ನಡೆಯುವುದಿಲ್ಲವಾ? ಕಾಣಿಸುವ ವಸ್ತುವು ಯಾವ ಪ್ರಕ್ರಿಯೆ ಮೂಲಕವಾದರೂ ಕಾಣಿಸದಂತೆ ಹೋಗುವುದಕ್ಕೆ ಅವಕಾಶ ಇದೆಯಾ? ವಿವರಿಸಿ ಹೇಳಬೇಕಾಗಿ ಕೋರುತ್ತಿದ್ದೇವೆ.

**ಉತ್ತರ :–** ಮಾಯೆ ಎಂದರೆ ತಿಳಿಯುವುದು ತಿಳಿಯದಂತೆ ಹೋಗುವುದೆಂದೂ, ಕಾಣಿಸುವುದು ಕಾಣಿಸದಂತೆ ಹೋಗುವುದು ಎಂದೂ, ಇರುವುದು ಇಲ್ಲದಂತೆ ತೋಚುವುದು ಎಂದೂ ಅರ್ಥ ಹೇಳಬಹುದು. ಇದನ್ನು ಕುರಿತು ವಿವರವಾಗಿ ತಿಳಿದುಕೊಂಡರೆ "ಮಾಯೆ" ಎಂಬ ಪದದಿಂದ ಮಾಯಮ್ ಎಂಬ ಪದ ಹುಟ್ಟಿದೆ. ಮಾಯೆ ಎಂದರೆ ನಮ್ಮ ತಲೆಯಲ್ಲಿ ಮೂರು ಗುಣಭಾಗಗಳಲ್ಲಿನ 36 ಗುಣಗಳ ಸಮ್ಮೇಳನವೆಂದು ಹೇಳಬಹುದು. ನಮ್ಮ ಶರೀರದಲ್ಲಿನ ಗುಣಗಳು ಕಾಣಿಸುವುದಿಲ್ಲ. ಆದ್ದರಿಂದ ಮಾಯೆ ಕೂಡ ಕಾಣಿಸುವುದಿಲ್ಲ. ಶರೀರದಲ್ಲಿನ ತಲೆಯಲ್ಲಿರುವ ಮಾಯೆಯಲ್ಲಿ ಪ್ರತಿ ಜೀವಿಯು ನಿವಾಸ ಇದ್ದಾನೆ. ಶರೀರದಲ್ಲಿ ಜೀವಿಯ ನಿವಾಸಸ್ಥಳ ಮೂರು ಗುಣಭಾಗಗಳೆ, ಆದ್ದರಿಂದ ಮಾಯೆಯಲ್ಲಿ ಜೀವಿ ಇದ್ದಾನೆಂದು ಹೇಳಬಹುದು. ಮಾಯೆಯಲ್ಲಿರುವ ಪ್ರತಿ ಜೀವಿಗು ಇರುವ ದೇವರು ಇಲ್ಲದಂತೆ, ಜೀವಿಗೆ ಮಾಯೆಯೇ ಭ್ರಮಿಸುವಂತೆಮಾಡುತ್ತಿದೆ. ಪರಮಾತ್ಮನಿಂದ ಹುಟ್ಟಿರುವುದು ಪ್ರಕೃತಿ. ಪ್ರಕೃತಿಯಿಂದ ಹುಟ್ಟಿರುವವು ಮೂರು ಗುಣಭಾಗಗಳಲ್ಲಿನ 36 ಗುಣಗಳು. ಪ್ರಕೃತಿಗೆ ಮತ್ತೊಂದು ಹೆಸರಾಗಿ ಮೂರು ಗುಣಭಾಗದಲ್ಲಿನ ಗುಣಗಳನ್ನು ಆವಹಿಸಿರುವುದು ಮಾಯೆ. ಮಾಯೆಯೊಂದರ ಲಕ್ಷಣ ಇರುವುದನ್ನು ಇಲ್ಲದಂತೆ, ಇಲ್ಲದಿರುವುದನ್ನು ಇದ್ದಂತೆ ತೋರಿಸುವುದು. ಈ ನಿರ್ಣಯ ದೇವರು ಮಾಡಿರುವುದೇ ಎಂದು ತಿಳಿಯಬೇಕು. ದೇವರಿಗೆ ತಿಳಿಯದಂತೆ ಏನು ನಡೆಯುವುದಕ್ಕೆ ಸಾಧ್ಯವಿಲ್ಲ. ಆತನು ನಿರ್ಣಯಿಸಿದ ನಿರ್ಣಯದ ಪ್ರಕಾರ ಮಾಯೆ ಕೆಲಸ ಮಾಡುತ್ತಿದೆ. ಪ್ರಪಂಚವೆಲ್ಲಾ ವ್ಯಾಪಿಸಿರುವ ದೇವರನ್ನು ಯಾರಿಗೂ ತಿಳಿಯದಂತೆ ಮಾಡಿರುವುದು ಮಾಯೆಯೇ. ಇರುವ ದೇವರನ್ನು ಯಾರಿಗೂ ತಿಳಿಯದಂತೆ ಮಾಡಿದಂತೆ, ಇರುವುದು ಏನಾದರೂ ಅದು ಇದ್ದು ಕೂಡಾ ತಿಳಿಯದಂತೆ ಹೋದಾಗ ಅದನ್ನು "ಮಾಯಂ

(ಮಾಯವಾಗಿ)” ಆಗಿಹೋಗಿದೆ ಅನ್ನುವುದು ನಡೆಯುತ್ತಿದೆ. ಇರುವುದು ಎಲ್ಲಿಯಾದರೂ ಇಲ್ಲದಂತೆ ತಿಳಿಯದಂತೆಹೋದರೆ ಅದು ಮಾಯೆಯೊಂದರ ವಿಧಾನದಿಂದ ನಡೆದ ಕ್ರಿಯೆಯಂತೆ ಇರುವುದರಿಂದ, ಅದನ್ನು ಮಾಯೆಗೆ ಹತ್ತಿರವಾಗಿರುವ ಪದವನ್ನು ಉಪಯೋಗಿಸಿ “ಮಾಯಂ” ಎಂಬ ಶಬ್ದವಾಗಿ ಹೇಳುವುದು ನಡೆದಿದೆ.

ಕೆಲವರು ಒಂದು ವಸ್ತುವನ್ನು ಹಸ್ತಲಾಘದಿಂದ ಬಚ್ಚಿಟ್ಟು ಕಾಣಿಸದಂತೆ ಮಾಡಿ ಆ ವಸ್ತುವನ್ನು ಪೂರ್ತಿಯಾಗಿ ಮಾಯ ಮಾಡಿದ್ದೇನೆಂದು ಹೇಳಿಕೊಳ್ಳುತ್ತಾರೆ. ಇದು ಇತರರನ್ನು ಮೋಸಮಾಡುವ ವಿಧಾನವೇಯೆಂದು ಹೇಳಬಹುದು. ಆದರೆ ಒಂದು ವಸ್ತುವನ್ನು ಪೂರ್ತಿ ಕಾಣಿಸದಂತೆ ಮಾಯ ಮಾಡುವ ವಿಧಾನ ಕೂಡಾ ಇದೆ. ಆದರೆ ಆ ವಿಧಾನವನ್ನು ತಿಳಿಯದ ಕೆಲವರು ಒಂದು ವಸ್ತುವನ್ನು ಮತ್ತೊಬ್ಬ ವ್ಯಕ್ತಿಗೆ ತಿಳಿಯದಂತೆ ಬಚ್ಚಿಟ್ಟು ಆ ವಸ್ತು ಆತನಿಗೆ ಕಾಣಿಸದಿರುವಾಗ ಅದನ್ನು ಮಾಯ ಮಾಡಿದ್ದೇನೆಂದು ನಂಬಿಸುತ್ತಿರುತ್ತಾರೆ. ಇದು ಕೈಚಳಕೆಯಿಂದ ಮಾಡುವ ವಿಧಾನ. ವಸ್ತುವು ಮಾಯವಾಗದಿದ್ದರೂ ಮಾಯವಾದಂತೆ ನಂಬಿಸುವುದು ಕೂಡಾ ಒಂದು ವಿದ್ಯೆಯೇ ಎಂದು ಹೇಳಬಹುದು. ಅದನ್ನೇ ಪೂರ್ವದಲ್ಲಿ ಟಕ್ಕುಟಮಾರಾ ವಿದ್ಯೆ ಎನ್ನುತ್ತಿದ್ದರು. ಟಕ್ಕು ಎಂದರೆ ಸುಳ್ಳು. ಐಮಾರಾ ಎಂದರೆ ಅಸತ್ಯವಾಗಿ ಹೇಳಿರುವುದನ್ನು ನಂಬುವಂತೆ ಮಾಡುವುದು. ಒಂದು ವಿಧವಾಗಿ ಇದು ಮತ್ತೊಬ್ಬ ಮನುಷ್ಯನನ್ನು ಮೋಸಮಾಡುವುದೇ ಎಂದು ಹೇಳಬಹುದು. ಟಕ್ಕುಟಮಾರಾ ವಿದ್ಯೆಯಿಂದ ಇರುವುದನ್ನು ಇಲ್ಲದಹಾಗೆ ಭ್ರಮಿಸುವಂತೆ ಮಾಡಬಹುದು. ಆದರೆ ಇರುವ ವಸ್ತುವನ್ನು ಪೂರ್ತಿ ಕಾಣಿಸದಂತೆ ಮಾಯಮಾಡುವ ವಿದ್ಯೆ ಕೂಡ ಭೂಮಿಮೇಲೆ ಇದೆ. ಅದನ್ನೇ ಪೂರ್ವದಲ್ಲಿ ಇಂದ್ರಜಾಲ ಮಹೇಂದ್ರಜಾಲ ವಿದ್ಯೆ ಅನ್ನುತ್ತಿದ್ದರು. ಒಂದು ಗುಂಪಾಗಿ ಮೂರು ವಿದ್ಯೆಗಳನ್ನು ಮನುಷ್ಯ ಕಲಿತುಕೊಳ್ಳುತಿದ್ದರು. ಆ ಮೂರು ವಿದ್ಯೆಗಳ ಹೆಸರುಗಳನ್ನೆ ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ

ವಿದ್ಯೆಗಳೆಂದು ಕರೆಯುತ್ತಿದ್ದರು. ಪೂರ್ವದಲ್ಲಿ ಒಂದು ಗುಂಪಾಗಿರುವ ಮೂರು ವಿದ್ಯೆಗಳನ್ನು ಕಲಿಯುವ ಗುರುಗಳು ಕೂಡಾ ಇರುತ್ತಿದ್ದರು. ಆದರೆ ಈ ವಿದ್ಯೆಗಳು ಪೂರ್ತಿ ಪ್ರಪಂಚ ಸಂಬಂಧವಾದವುಗಳೇ ಆದರೂ, ಪರಮಾತ್ಮ ಸಂಬಂಧ ವಾದವುಗಳಲ್ಲ. ಪ್ರಪಂಚ ಸಂಬಂಧ ವಿದ್ಯೆ ಆದರೂ ಒಂದು ವಸ್ತುವನ್ನು ಪೂರ್ತಿ ಕಾಣಿಸದಂತೆ ಮಾಡುವ ವಿಧಾನವಿದೆ. ಕೆಲವರು ಈ ವಿಷಯವನ್ನು ನಂಬಲಾರದೆ ಹೋದರೂ ನಮ್ಮ ಮಾತು ವಾಸ್ತವ.

ಒಂದು ವಸ್ತುವನ್ನು ಬಚ್ಚಿಡದಂತೆ ಅದು ಇದ್ದರೂ ಕಣ್ಣಿನ ದೃಷ್ಟಿಗಾಗಲಿ, ಕೈಸ್ಪರ್ಶಕ್ಕಾಗಲಿ ತಿಳಿಯದಂತೆ ಮಾಡುವುದನ್ನು ಮಾಯ ಮಾಡುವುದೆನ್ನುವುದು ಹೇಳಬಹುದು. ಇದು ಇಂದ್ರಜಾಲ ಮಹೇಂದ್ರಜಾಲ ವಿದ್ಯೆಯಿಂದ ಸಾಧ್ಯ ವಾಗುತ್ತದೆ, ಆದರೆ ಆ ವಿದ್ಯೆಗಳನ್ನು ಈಗಿನಕಾಲದಲ್ಲಿ ಕಲಿತವರು ಇಲ್ಲ, ಕಲಿಸುವ ಗುರುಗಳೂ ಇಲ್ಲವೆಂದು ಹೇಳಬಹುದು. ನನಗೆ ತಿಳಿದಮಟ್ಟಿಗೆ ಯಾರೂ ಇಲ್ಲವಾಗಲಿ, ಎಲ್ಲಿಯಾದರೂ ಇರಬಹುದೇನೊ ಹೇಳಲಾರೆವು. ಮಾಯ ಮಾಡುವುದೆನ್ನುವುದು ಪ್ರಪಂಚದಲ್ಲಿ ಒಂದು ವಿದ್ಯೆ ಆದರೂ, ಪ್ರಕೃತಿ ಸಿದ್ಧವಾಗಿ ನಮ್ಮ ಶರೀರದಲ್ಲಿಯೇ ಆ ವಿಧಾನ ಜೋಡಣೆ ಇದೆಯೆಂದು ಹೇಳಬಹುದು. ಇರುವ ವಸ್ತುವನ್ನು ಮನುಷ್ಯನಿಗೆ ಕಾಣಿಸದಂತೆ ಮಾಡುವ ವಿಧಾನವನ್ನು "ಮಾಯಂ (ಮಾಯವಾಗಿ)" ಎಂದರೇ, ಇರುವ ದೇವರನ್ನು ಮನುಷ್ಯನಿಗೆ ತಿಳಿಯದಂತೆ ಮಾಡುವ ವಿಧಾನವನ್ನು "ಮಾಯ" ಅನ್ನುತ್ತಿದ್ದೇವೆ. ಮಾಯ ಎಂಬ ಶಬ್ದದಿಂದ ಹುಟ್ಟಿರುವುದೇ ಮಾಯಮ್ ಎಂದುಸಹ ಮೊದಲೇ ಹೇಳಿಕೊಂಡಿದ್ದೇವೆ. ಆದರೆ ಮಾಯಮ್ ಎನ್ನುವುದು ಭೌತಿಕವಾದುದು, ಮಾಯ ಎನ್ನುವುದು ಅಭೌತಿಕವಾದುದು. ವಿವರವಾಗಿ ಹೇಳಿದರೆ ಕಾಣಿಸುವ ಮನುಷ್ಯ ಇರುವ ವಸ್ತುವನ್ನು ಕಾಣಿಸದಂತೆ ಮಾಡುವುದನ್ನು ಮಾಯಮ್ ಅನ್ನುತ್ತಿದ್ದೇವೆ. ಕಾಣಿಸದ ಗುಣಗಳು ಇರುವ ದೇವರನ್ನು ತಿಳಿಯದಂತೆ ಮಾಡುವುದನ್ನು ಮಾಯ ಅನ್ನುತ್ತಿದ್ದೇವೆ. ಮಾಯಮ್ ಮಾಡುವ ವಿದ್ಯೆಯನ್ನು ತಿಳಿಯಲ್ಪಟ್ಟರೆ ವಸ್ತುವು ಹೇಗೆ ಕಾಣಿಸಲಿಲ್ಲವೊ ವಿವರ ತಿಳಿದಂತೆ, ಮಾಯ ಮಾಡುವ

ಗುಣಗಳನ್ನು ತಿಳಿಯಲ್ಪಟ್ಟರೆ ದೇವರು ಹೇಗೆ ತಿಳಿಯಲ್ಪಡಲಿಲ್ಲವೊ ಅರ್ಥವಾಗುತ್ತದೆ. ಮಾಯಮ್‌ಅನ್ನು ತಿಳಿಯುವುದು ಪ್ರಪಂಚವಿದ್ಯೆ ಆಗುತ್ತದೆ. ಮಾಯೆಯನ್ನು ತಿಳಿಯುವುದು ಬ್ರಹ್ಮವಿದ್ಯೆ ಆಗುತ್ತದೆ. ಇದೆಲ್ಲವೂ ಕೇಳಿದ ನಂತರ ಕೂಡಾ ಕೆಲವರು ನಾವು ವಿಜ್ಞಾನಿಗಳೆನ್ನುವವರು, ಇದೆಲ್ಲ ನಾವು ನಂಬುವುದಿಲ್ಲ, ದೃಶ್ಯವಾಗಿರುವ ಒಂದು ವಸ್ತುವು ಅದೃಶ್ಯವಾಗಿ ಬದಲಾಗಿ ಹೋಗುತ್ತದೆಯೆಂದು ಹೇಳುವುದು ಸೈನ್ಸಿಗೆ ಪೂರ್ತಿ ವಿರುದ್ಧ. ಈ ವಿಷಯವನ್ನು ಸೈನ್ಸು ಖಂಡಿಸುತ್ತದೆ. ಆದ್ದರಿಂದ ಮಾಯಮ್ ಅನ್ನುವ ವಿಧಾನವನ್ನು ನಾವು ನಂಬುವುದಿಲ್ಲ ಎಂದು ಕೆಲವರನ್ನಬಹುದು. ಅದಕ್ಕೆ ನಾವು ಏನನ್ನುತ್ತಿದ್ದೇವೆಂದರೆ, ಪ್ರತಿಯೊಂದನ್ನು ನಂಬದಿರುವುದು ಮೂಢತ್ವಕ್ಕೆ ಸಂಬಂಧಿಸಿದ ವಿಷಯ. ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವಲ್ಲ. ನಂಬಿಕೆಯಾಗಲಿ ನಂಬದಿರುವುದಾಗಲಿ ಶಾಸ್ತ್ರ ಬದ್ಧತೆಗೆ ಒಳಪಟ್ಟಿರಬೇಕು. ಒಂದು ವಿಷಯವನ್ನು ನಂಬಿಸುವುದಕ್ಕೆ ಶಾಸ್ತ್ರವನ್ನು ಆಧಾರ ಮಾಡಿ ಹೇಗೆ ತೋರಿಸುತ್ತಿದ್ದೇವೊ, ಹಾಗೆ ಒಂದು ವಿಷಯವನ್ನು ನಂಬದಿರುವುದಕ್ಕು ಕೂಡಾ ಶಾಸ್ತ್ರವನ್ನು ಆಧಾರಮಾಡಿ ತೋರಿಸಬೇಕಾಗಿರುತ್ತದೆ. ಹಾಗಲ್ಲದೆ ಒಂದು ವಿಷಯವನ್ನು ಸಮರ್ಥಿಸಿದರೂ, ಖಂಡಿಸಿದರೂ ಅದು ಮೂಢತ್ವವಾಗುತ್ತದಾಗಲಿ, ವಿಜ್ಞಾನವೆನಿಸಿಕೊಳ್ಳುವುದಿಲ್ಲ.

ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಒಂದು ಸೂತ್ರವನ್ನು ಹೇಳುತ್ತೇನೆ ನೋಡಿರಿ. ಯಾವುದಾದರೆ ಸತ್ಯವೊ ಅದು ಶಾಸ್ತ್ರವಾಗುತ್ತದೆ, ಯಾವುದಾದರೆ ಅಸತ್ಯವಾಗುತ್ತದೊ ಅದು ಶಾಸ್ತ್ರವೆನಿಸಿಕೊಳ್ಳುವುದಿಲ್ಲ. ಈ ಸೂತ್ರದ ಪ್ರಕಾರ ಸತ್ಯಾ ಅಸತ್ಯಗಳನ್ನನುಸರಿಸಿ ಶಾಸ್ತ್ರ ಅಶಾಸ್ತ್ರಗಳು ತಿಳಿಯುತ್ತವೆ. ಹಾಗಲ್ಲದೆ ನನಗೆ ತಿಳಿದಿರುವುದೆಲ್ಲಾ ಶಾಸ್ತ್ರವೆಂದು, ತಿಳಿಯದಿರುವುದೆಲ್ಲಾ ಅಶಾಸ್ತ್ರವೆಂದು, ಹೇಳುವುದಕ್ಕೆ ಸಾಧ್ಯವಿಲ್ಲ. ಹಾಗೆಯೆ ಯಾರಾದರೂ, ತನಗೆ ತಿಳಿದಿರುವುದು ಶಾಸ್ತ್ರವೆಂದು, ತಿಳಿಯದಿರುವುದು ಅಶಾಸ್ತ್ರವೆಂದು ಹೇಳಬಾರದು. ಈ ದಿನ ಬಹಳಜನ ವಿಜ್ಞಾನಿಗಳನ್ನುವವರು ತಮಗೆ ತಿಳಿದಿರುವುದೆ ಶಾಸ್ತ್ರ, ತಿಳಿಯದಿರುವುದು ಶಾಸ್ತ್ರವಲ್ಲವೆಂದು ಅನ್ನುತ್ತಿದ್ದಾರೆ. ರೂಪಾಯಿಯಲ್ಲಿ ಎರಡು

ಪೈಸೆಗಳಷ್ಟು ವಿಜ್ಞಾನ ತಿಳಿದವರು ನಾವು ಪೂರ್ತಿ ವಿಜ್ಞಾನಿಗಳೆಂದು ಭ್ರಮೆಹೊಂದಿ, ನಮಗೆ ತಿಳಿಯದಿರುವುದು ಎಷ್ಟೋ ಇದೆಯೆಂದು (98 ಪೈಸೆಗಳಷ್ಟು ಇದೆಯೆಂದು) ತಿಳಿಯದೆ ಮಾಯಮ್ ಎಂಬುದು ಅಸತ್ಯ ಅನ್ನುತ್ತಿದ್ದಾರೆ. ಅವರ ಮಾತಿನ ಪ್ರಕಾರ ಮಾಯಮ್ ಅಸತ್ಯವಾದರೆ ಮಾಯಕೂಡಾ ಅಸತ್ಯವೇ ಆಗಬೇಕು. ಆದರೆ ಮಾಯೆ ನಮ್ಮ ಶರೀರದಲ್ಲಿ ಇರುವುದು, ಎಲ್ಲರೂ ಅದರಿಂದ ಭ್ರಮಿಸಿ ಮಾಯೆಯಲ್ಲಿ ಮುಳುಗಿರುವುದು ಸತ್ಯ. ನಮ್ಮ ಶರೀರದಲ್ಲಿನ ಮಾಯೆ ಸತ್ಯವಾದಾಗ, ಹೊರ ಪ್ರಪಂಚದಲ್ಲಿ ಮಾಯಮ್ ಕೂಡಾ ಸತ್ಯವಾಗಿರುತ್ತದೆ. ಹೊರಗೆ ಪ್ರಪಂಚದಲ್ಲಿ ಮಾಯ ಎನ್ನುವುದು ಮನುಷ್ಯರು ಮಾಡುವುದೇ ಅಲ್ಲದೆ, ದೇವರಿಂದ ಸೃಷ್ಟಿಸಲ್ಪಟ್ಟಿರುವ ಪ್ರಕೃತಿ ಕೂಡಾ ಹೊರಗೆ ಮಾಯ ಮಾಡುತ್ತಲೇ ಇದೆ. ಪ್ರಕೃತಿ ಶರೀರದಲ್ಲಿಯೇ ಅಲ್ಲದೆ ಹೊರಗೂ ಕೂಡಾ ಇದೆ. ಶರೀರದಲ್ಲಿರುವ ಪ್ರಕೃತಿಯನ್ನು ಚೇತನಾ ಪ್ರಕೃತಿ ಅನ್ನುತ್ತಿದ್ದೇವೆ. ಹೊರಗಿರುವ ಪ್ರಕೃತಿಯನ್ನು ಅಚೇತನಾ ಪ್ರಕೃತಿ ಎನ್ನುತ್ತಿದ್ದೇವೆ. ಚೇತನಾ ಪ್ರಕೃತಿ ಶರೀರದಲ್ಲಿ ಮಾಯೆಯಾಗಿರುವಾಗ, ಅಚೇತನಾ ಪ್ರಕೃತಿ ಶರೀರದ ಹೊರಗೆ ಮಾಯಮ್ ಆಗಿದೆ.

ಪ್ರಕೃತಿ ಎಂದರೆ ಏನು? ಎಂದು ಕೆಲವರು ಅರ್ಥವಾಗದೆ ಕೇಳಬಹುದು. ಸಂಗೀತ ಕಲಿತುಕೊಳ್ಳುವವನಿಗೆ ರಾಗ, ತಾಳ, ಪಲ್ಲವಿ ಎಂದರೆ ಏನೊ ತಿಳಿಯದೆಹೋದರೆ, ಅವನು ಸಂಗೀತವನ್ನು ಕಲಿತುಕೊಳ್ಳುವುದಿಲ್ಲ. ಏಕೆಂದರೆ ಸಂಗೀತವೆಲ್ಲಾ ರಾಗ, ತಾಳ, ಪಲ್ಲವಿಮೇಲೆ ಆಧಾರಪಟ್ಟಿರುತ್ತದೆ. ಹಾಗೆಯೇ ದೈವಜ್ಞಾನ ತಿಳಿದುಕೊಳ್ಳುವವನಿಗೆ ಪ್ರಕೃತಿ, ಪರಮಾತ್ಮ, ಆತ್ಮ ತಿಳಿಯದೆಹೋದರೆ ಜ್ಞಾನವನ್ನು ತಿಳಿಯಲಾರನು. ಆದ್ದರಿಂದ ಮೊದಲು ಶರೀರದಲ್ಲಿ ಪ್ರಕೃತಿ ಹೇಗೆ ಚೇತನಾ ಪ್ರಕೃತಿಯಾಗಿದೆಯೋ ತಿಳಿದುಕೊಳ್ಳೋಣ. ಹಾಗೆಯೇ ಶರೀರದ ಹೊರಗೆ ಅಚೇತನಾ ಪ್ರಕೃತಿಯಾಗಿ ಹೇಗಿದೆಯೋ ತಿಳಿದುಕೊಳ್ಳೋಣ. ಪ್ರಕೃತಿ ಎಂದರೆ ಅಕ್ಷರಗಳ ವಿವರದ ಪ್ರಕಾರ "ಕೃತಿ" ಎಂದರೆ ಮಾಡಲ್ಪಟ್ಟಿದೆ, ಪ್ರ ಎಂದರೆ ಮುಖ್ಯವಾದುದೆಂದು, ಇಲ್ಲವೆ ವಿಶೇಷತೆ ಇದೆಯೆಂದು ಹೇಳಬಹುದು.

ಪ್ರಕೃತಿ ಎಂದರೆ ವಿಶೇಷತೆಯಿಂದ ಮಾಡಲ್ಪಟ್ಟಿದೆಯೆಂದು ಅರ್ಥ. ಹಾಗೆಯೆ ಮುಖ್ಯವಾಗಿ ಮಾಡಲ್ಪಟ್ಟಿದೆಯೆಂದು ಕೂಡಾ ಹೇಳಬಹುದು. ಮಾಡಲ್ಪಟ್ಟಿರುವುದು ಪ್ರಕೃತಿಯಾಗಿದ್ದು, ಮಾಡಿದವನು ಪರಮಾತ್ಮಯೆಂದು ಹೇಳಬಹುದು. ದೇವರಿಂದ (ಪರಮಾತ್ಮನಿಂದ) ಮಾಡಲ್ಪಟ್ಟು ಪ್ರಕೃತಿ ಐದು ಭಾಗಗಳಾಗಿದೆ. ಆ ಐದು ಭಾಗಗಳನ್ನು ಕ್ರಮವಾಗಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂದು ಹೇಳಬಹುದು. ಈ ಐದು ಭಾಗಗಳಾಗಿರುವ ಕೃತಿಯಲ್ಲಿ ಪ್ರ ಏನು ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಪ್ರ ಎಂದರೆ ಐದು ಭಾಗಗಳಾಗಿರುವ ಕೃತಿಯಲ್ಲಿ ಏನಾದರೆ ಮುಖ್ಯವಾಗಿ ಅಥವಾ ವಿಶೇಷವಾಗಿ ದೆಯೋ ಅದನ್ನೆ ಪ್ರ ಎಂದು ಹೇಳುವುದು ನಡೆದಿದೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂದು ಐದು ಭಾಗಗಳಲ್ಲಿ ದೈವಶಕ್ತಿಯಾದ ಆತ್ಮ ಐದು ಬಲಗಳಾಗಿ ತಯಾರಾಗಿದೆ. ಉದಾಹರಣೆಗೆ ಅಗ್ನಿಯಲ್ಲಿರುವ ಸುಡುವಶಕ್ತಿಯೇ ಅದರಲ್ಲಿನ ಆತ್ಮಶಕ್ತಿ ಎಂದು ತಿಳಿಯಬೇಕು. ಹಾಗೆಯೇ ಐದು ಭಾಗಗಳಲ್ಲಿ ಐದು ವಿಶೇಷವಾದ ಶಕ್ತಿಗಳಿರುವುದರಿಂದ ಅವುಗಳನ್ನು ಸೇರಿಸಿ ಪ್ರಕೃತಿ ಎಂದಿದ್ದೇವೆ. ಪ್ರಕೃತಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಅನ್ನುವ ಜ್ಞಾನೇಂದ್ರಿಯಗಳಿಗು ತಿಳಿಯುವ ಐದು ಭಾಗಗಳಾಗಿ ಇರುವುದರಿಂದ ಪ್ರಪಂಚ ಎಂದು ಅಂದಿದ್ದೇವೆ. ಪಂಚ ಎಂದರೆ ಐದು ಎಂದು ಅರ್ಥ. ಎಲ್ಲರಿಗೂ ತಿಳಿಯುವಂತೆ ಹೊರಗೆ ಪ್ರಪಂಚವಿದೆ. ಯಾರಿಗೂ ತಿಳಿಯದಂತೆ ಪ್ರಕೃತಿಯಲ್ಲಿನ ಐದು ಭಾಗಗಳಿಂದ ಶರೀರವಾಗಿ ತಯಾರಾಗಿವೆ. ಶರೀರದೊಳಗೆ ಬರುವಷ್ಟರಲ್ಲಿ ಪ್ರಕೃತಿಯಲ್ಲಿನ ಒಂದೊಂದು ಭಾಗ ಐದು ಭಾಗಗಳಾಗಿ ವಿಭಜನೆಯಾಗಿ, ಐದು ಭಾಗಗಳು 25 ಭಾಗಗಳಾಗಿ ತಯಾರಾಗಿವೆ. ಹಾಗೆ 25 ಭಾಗಗಳಾಗಿ ವಿಭಜನೆಯಾದ ಕೃತುಗಳುಆತ್ಮಶಕ್ತಿಯಿಂದ ಕೂಡಿ 25 ಶರೀರ ಭಾಗಗಳಾಗಿ ತಯಾರಾಗಿ ಚೇತನಾ ಪ್ರಕೃತಿಯೆಂದು ಹೆಸರು ಹೊಂದಿದೆ.

ಸೃಷ್ಟಿಸಲ್ಪಟ್ಟಿರುವುದು ಪ್ರಕೃತಿ, ಸೃಷ್ಟಿಸಿದವನು ಪರಮಾತ್ಮ ಪ್ರಕೃತಿ ಒಂದುಕಡೆ ಪ್ರಪಂಚವಾಗಿ ಕಾಣಿಸುತ್ತಾ, ಮತ್ತೊಂದುಕಡೆ ಸಕಲ ಜೀವರಾಶಿಗಳ

ಶರೀರಗಳಾಗಿಯೂ ಸಹಾ ಇವೆ. ಮಾಡಲ್ಪಟ್ಟಿರುವುದು ಪ್ರಕೃತಿಯಾದರೆ, ಮಾಡಿದವನು ಪರಮಾತ್ಮನಾಗಿದ್ದು, ಪರಮಾತ್ಮಶಕ್ತಿ ಆತ್ಮವಾಗಿ ತಯಾರಾಗಿ ಚೇತನಾ ಪ್ರಕೃತಿಯಲ್ಲಿಯೂ, ಅಚೇತನಾ ಪ್ರಕೃತಿಯಲ್ಲಿಯೂ ಇರುತ್ತಾ, ಎರಡು ವಿಧಗಳ ಪ್ರಕೃತಿಗಳಲ್ಲಿ ಒಳಗೊಂಡಿದೆ. ಜೀವಿಯು ಎಲ್ಲಿ ಯಾವ ಶರೀರದಲ್ಲಿ ನಿವಾಸಿಸಿದರೂ ಅಲ್ಲಿ ಆತ್ಮ ಇರುವಂತೆ ಪ್ರಕೃತಿಯೊಂದಿಗೆ ಜೊತೆಮಾಡಲ್ಪಟ್ಟಿದೆ. ಚರಾಚರ ಪ್ರಪಂಚವನ್ನು ತಯಾರು ಮಾಡಿದ ದೇವರು ಸೃಷ್ಟಿ ನಂತರ ರೂಪ, ನಾಮ, ಕ್ರಿಯೆಗಳು ಇಲ್ಲದವನಾಗಿ ಹೋಗಿದ್ದಾನೆ. ಅಂದರೆ ದೇವರಿಗೆ ಹೆಸರಿಲ್ಲ, ಆಕಾರವಿಲ್ಲ, ಕೆಲಸವಿಲ್ಲವೆಂದು ಅರ್ಥ. ಕೆಲಸವೇ ಮಾಡದ ದೇವರು ಸಕಲ ಜೀವರಾಶಿಗಳನ್ನು ಪಾಲಿಸುವುದಿಲ್ಲ, ಆದ್ದರಿಂದ ಜೀವರಾಶಿಗಳನ್ನು ಜೀವಿಸುವಂತೆ ಮಾಡುವುದಕ್ಕೆ ಒಂದುಕಡೆ ಪ್ರಕೃತಿಯನ್ನು ಮತ್ತೊಂದುಕಡೆ ಆತ್ಮವನ್ನು ನಿಯಮಿಸಿಕೊಂಡಿದ್ದಾನೆ. ಜೀವರಾಶಿಗಳ ಸಾವುಹುಟ್ಟುಗಳನ್ನು ದೇವರು ನೋಡದಿದ್ದರೂ, ದೇವರ ಆಧೀನದಲ್ಲಿರುವ ಪ್ರಕೃತಿ, ಆತ್ಮಗಳೂ ಎರಡೂ ಜೀವರಾಶಿಗಳ ಸಾವುಹುಟ್ಟುಗಳನ್ನೂ ಒಟ್ಟಾರೆ ಜೀವನವನ್ನೂ ಕರ್ಮಪ್ರಕಾರ ನಡೆಸುತ್ತಿವೆ. ಪ್ರಕೃತಿಯಲ್ಲಿ ಒಂದುಭಾಗವಾದ ಆಕಾಶದಲ್ಲಿ ಕೆಲವು ಭೂತಗಳೂ, ಗ್ರಹಗಳೂ ಕೆಲಸಮಾಡುತ್ತಾ ಭೂಮಿಮೇಲೆ ಜೀವರಾಶಿಗಳನ್ನು ಕರ್ಮಪ್ರಕಾರ ನಡೆಸುತ್ತಿವೆ. ಈ ವಿಧವಾಗಿ ಪ್ರಕೃತಿ ಆಧೀನದಲ್ಲಿ ದೇವರ ಪಾಲನೆ ಆರಂಭವಾಗಿದೆ. ಶರೀರದಲ್ಲಿ ಆತ್ಮ ಕೆಲಸಗಳು ಮಾಡುತ್ತಿರುವಾಗ, ಪ್ರಕೃತಿ ಮಾಯ ರೂಪದಲ್ಲಿ ಪ್ರೇರೇಪಣೆ ಮಾಡುತ್ತಿದೆ. ಒಂದುಕಡೆ ಆತ್ಮ ಕಾರ್ಯಾಚರಣೆಯಲ್ಲಿ ನಿಮಗ್ನವಾಗಿದ್ದು, ಪ್ರಕೃತಿ ಶರೀರದಲ್ಲಿ ಮಾಯೆಯಾಗಿ, ಶರೀರದ ಹೊರಗೆ 'ಮಾಯಂ' ಆಗಿ ಪ್ರವರ್ತಿಸುತ್ತಾ ಸೃಷ್ಟಿಯನ್ನು ನಡೆಸುತ್ತಿದೆ. ಶಕ್ತಿಗೂ ಕಾರ್ಯಗಳಿಗೂ ಪ್ರಕೃತಿ ಆತ್ಮವನ್ನು ಉಪಯೋಗಿಸಿಕೊಂಡಾಗ, ಪ್ರತಿ ಕಾರ್ಯದ ಹಿಂದೆ ಪ್ರೇರೇಪಣೆಯಾಗಿ ಪ್ರಕೃತಿ ಎಷ್ಟೋ ತತಂಗವನ್ನು ನಡೆಸುತ್ತಾ, ಶರೀರದ ಒಳಗಾಗಲಿ, ಶರೀರದ ಹೊರಗಾಗಲಿ ಇರುವ ದೇವರನ್ನು ತಿಳಿಯದಂತೆ ಮಾಡುತ್ತಿದೆ. ಅಷ್ಟೇಯಲ್ಲದೆ ಎಲ್ಲವೂ ವ್ಯಾಪಿಸಿರುವ ದೇವರಿಗೆ ಯಾವ ಕಾರ್ಯವೂ ಇಲ್ಲದಂತೆ ಎಲ್ಲಾ ಕಾರ್ಯಗಳನ್ನೂ ಪ್ರಕೃತಿಯೇ ನೋಡಿಕೊಳ್ಳುತ್ತಿದೆ.

ಶರೀರದಲ್ಲಿ ಮಾಯೆಯಾಗಿರುವ ಪ್ರಕೃತಿ ಶರೀರದ ಹೊರಗೆ ಮಾಯೆಯಾಗಿ ಇದೆಯೆನ್ನುವುದಕ್ಕೆ ಒಂದು ರುಜುವನ್ನು ಪರಿಶೀಲಿಸಬಹುದು. ಈಗ ನಾವು ತಿಳಿದುಕೊಳ್ಳುವಂತಹ ಉದಾಹರಣೆಯಾಗಿ ರುವ ಸತ್ಯವನ್ನು ಗ್ರಹಿಸಿದರೆ ಮಾಯೆ ಎಂದರೆ ಏನೊ, ಮಾಯಮ್ ಎಂದರೆ ಏನೊ ತಿಳಿಯಬಲ್ಲದು. 'ಮಾಯಮ್' ಎಂದರೆ ಅದೃಶ್ಯ ಎಂದು ಹೇಳಿಕೊಂಡಿದ್ದೇವೆ ಅಲ್ಲವೆ! ಒಂದು ವಸ್ತುವು ಇದ್ದರೂ ಅದು ಕಾಣಿಸದಂತೆ ಅದೃಶ್ಯವಾಗಿ ಹೋಗುವುದನ್ನು ಮಾಯಮ್ ಇಲ್ಲವೆ ಮಾಯ ಅನ್ನುತ್ತಿದ್ದೇವೆ. ಇರುವ ವಸ್ತುವು ಮಾಯ ಆಗುವುದಿಲ್ಲ ಅನ್ನುವವರು ಕೆಲವರು ಇದ್ದಾರೆ. ಅಂತಹವರಿಗೆ ಕಣ್ತೆರೆಸುವುದಕ್ಕೆ ವಿಶ್ವದಲ್ಲಿ ಪ್ರಕೃತಿ ಮಾಡುವ ಮಾಯ ಏನೊ ಕೆಲವು ಪ್ರತ್ಯಕ್ಷ ಯಥಾರ್ಥ ಸಂಘಟನೆಗಳ ಮೂಲಕ ತಿಳಿಸುತ್ತಿದ್ದೇವೆ. ಹೊರಗೆ ಪ್ರಪಂಚದಲ್ಲಿ ನಡೆಯುವ ಮಾಯೆಯನ್ನು ಕುರಿತು ತಿಳಿದುಕೊಂಡರೆ, ಒಳಗಿನ ಪ್ರಪಂಚವಾದ ಶರೀರದಲ್ಲಿ ಪ್ರಕೃತಿ ಹೇಗೆ ಮಾಯಮಾಡುತ್ತಿದೆಯೊ, ಉಳಿದವರಿಗೆ ಸುಲಭವಾಗಿ ತಿಳಿಯಬಲ್ಲದು.

ಆಕಾಶದಲ್ಲಿ ಕಾಣಿಸುವ ಗ್ರಹಗಳಿರುವಂತೆ, ಕಾಣಿಸದ ಗ್ರಹಗಳು ಕೂಡಾ ಎಷ್ಟೊ ಕೋಟಿಗಳಿವೆ. ಹಾಗೆಯೆ ಎಷ್ಟೊ ಕಾಣಿಸದ ಭೂತಗಳು ಕೂಡಾ ಇವೆ. ಗ್ರಹಗಳು ಮತ್ತು ಭೂತಗಳು ಎರಡೂ ಜೀವವಿರುವವೇ ಆದರೂ, ಕೆಲವು ಲಕ್ಷಣಗಳಲ್ಲಿ ಸ್ವಲ್ಪ ವ್ಯತ್ಯಾಸಹೊಂದಿವೆ. ಆದ್ದರಿಂದ ಅವುಗಳನ್ನು ಗ್ರಹಗಳು, ಭೂತಗಳು ಎಂದು ಎರಡು ಭಾಗಗಳಾಗಿ ಬಿಡಿಸಿ ಹೇಳುತ್ತಿದ್ದೇವೆ. ಗ್ರಹ ಎಂದರೇ ಗ್ರಹಿಸುವುದೆಂದು, ಭೂತ ಎಂದರೆ ತನ್ನರೂಪವನ್ನು ಬದಲಾಯಿಸಿಕೊಳ್ಳುತ್ತದೆಂಬ ಅರ್ಥವನ್ನು ಹೇಳಿಕೊಳ್ಳಬಹುದು. ಮನುಷ್ಯ ಕೂಡಾ ಜನ್ಮಜನ್ಮಕ್ಕು ಶರೀರ ರೂಪವನ್ನು ಬದಲಾಯಿಸಿಕೊಂಡು ಹುಟ್ಟುತ್ತಿದ್ದಾನೆ, ಆದ್ದರಿಂದ ಮನುಷ್ಯನನ್ನು ಭೂತ ಎಂದು ಹೇಳಬಹುದು. ಹಾಗೆಯೇ ಮನುಷ್ಯ ವಿಷಯಗಳನ್ನು ಗ್ರಹಿಸಿಕೊಳ್ಳುತ್ತಿದ್ದಾನೆ, ಆದ್ದರಿಂದ ಮನುಷ್ಯನನ್ನು ಗ್ರಹ ಎಂದು ಕೂಡ ಹೇಳಬಹುದು. ಖಗೋಳದಲ್ಲಿ ವಿಷಯಗಳನ್ನು ಗಮನಿಸುವವರನ್ನು ಮತ್ತು ಗ್ರಹಿಸುವವುಗಳನ್ನು ಗ್ರಹಗಳೆಂದೂ, ಮನುಷ್ಯರಿಗೆ ಶಿಕ್ಷೆಗಳನ್ನು ಜಾರಿ

ಮಾಡುವುದಕ್ಕಾಗಲಿ, ಮನುಷ್ಯರನ್ನು ಪಾಲಿಸುವುದಕ್ಕೆ ತಕ್ಕಾದ ಕೆಲಸಗಳು ಆಚರಿಸುವುದರಲ್ಲಾಗಲಿ, ತನ್ನ ರೂಪವನ್ನು ಸಮಯಾನುಕೂಲವಾಗಿ ಬದಲಾಯಿಸಿಕೊಳ್ಳುವವರನ್ನು ಅಥವಾ ಅವುಗಳನ್ನು ಭೂತಗಳೆಂದೂ ಹೇಳುತ್ತಿದ್ದೇವೆ. ಖಗೋಳದಲ್ಲಿರುವ ಕೆಲವು ಗ್ರಹಗಳನ್ನು ಕುರಿತು ಕೆಲವರಿಗೆ ತಿಳಿದಿದೆ. ಆದರೆ ಅದೇ ಖಗೋಳದಲ್ಲಿನ ಭೂತಗಳನ್ನು ಕುರಿತು ಬಹುಶಾ ಯಾರಿಗೂ ತಿಳಿಯದೆಂದುಕೊಳ್ಳುತ್ತೇನೆ. ಗತ ನಾಲ್ಕು ವರ್ಷಗಳ ಕೆಳಗೆ ನಾವು ಬರೆದ **"ದೆವ್ವಗಳ–ಭೂತಗಳ ಯಥಾರ್ಥ ಸಂಘಟಣೆಗಳು"** ಎನ್ನುವ ಗ್ರಂಥದಲ್ಲಿ ಭೂತಗಳನ್ನು ಕುರಿತು ಸ್ವಲ್ಪಮಟ್ಟಿಗೆ ಹೇಳುವುದು ನಡೆದಿದೆ. ಅಲ್ಲಿ ಮಾತುಮಾತಿಗು ರೂಪವನ್ನು ಬದಲಾಯಿಸಿಕೊಳ್ಳುತ್ತಾ ದೇವರ ಪಾಲನೆಯಲ್ಲಿ ಭಾಗಸ್ವಾಮಿಗಳಾಗಿರುವ ಮೇಘಗಳನ್ನು ಭೂತಗಳೆಂದು ವರ್ಣಿಸಿ ಹೇಳಲಾಗಿದೆ. ಅಷ್ಟೇಯಲ್ಲದೆ **"ಮೇಘವೊಂದು ಭೂತ"** ಅನ್ನುವ ಪಾಠವನ್ನು ಕುರಿತು ಮತ್ತು **"ರೋಗವೊಂದು ಭೂತ"** ಎಂಬ ವಿಷಯವನ್ನು ಕುರಿತು ನಾವು ಹೇಳಿದ ಉಪನ್ಯಾಸಗಳು ಕೂಡಾ ಇವೆ. ಮೇಘಗಳು ಆಕಾಶದಲ್ಲಿ ಇರುತ್ತಾ, ಯಾರೂ ಊಹಿಸಲಾರದ ವಿಧವಾಗಿ, ಯಾರಿಗೂ ತಿಳಿಯದ ರಹಸ್ಯ ಕಾರ್ಯಗಳನ್ನು ಪ್ರವರ್ತಿಸುತ್ತಿವೆಯೆಂದು, ಮೇಘಗಳು ವಾಸ್ತವವಾಗಿ ಭೂತಗಳ ಗುಂಪಿಗೆ ಸೇರಿರುವವು. ಭೂತಗಳಾದ ಮೇಘಗಳೆ ಭೂಮಿಮೇಲೆ ರೋಗಕ್ರಿಮಿಗಳಾಗಿ ರೂಪವನ್ನು ಬದಲಾಯಿಸಿಕೊಂಡು ರೋಗಗಳ ರೂಪದಲ್ಲಿ ಪ್ರಜೆಗಳಲ್ಲಿ ವ್ಯಾಪಿಸಿ ಪಾಪ ಪರಿಪಾಲನೆ ಮಾಡುತ್ತಿವೆಯೆಂದು ಹೇಳಿದ್ದೇವೆ.

ಪ್ರಕೃತಿ ಕಾಣಿಸುವ ಮತ್ತು ಕಾಣಿಸದ ಪ್ರಪಂಚವಾಗಿ ಇದೆ. ವಿಶ್ವದಲ್ಲಿ ನಡೆಯುತ್ತಿರುವ ಒಟ್ಟಾರೆ ಕೆಲಸಗಳೆಲ್ಲವನ್ನು ಪ್ರಕೃತಿ ಮಾಡುತ್ತಿದೆ. ದೇವರು (ಪರಮಾತ್ಮ) ಯಾವ ಚಿಕ್ಕ ಕಾರ್ಯವನ್ನು ಕೂಡಾ ಮಾಡುತ್ತಿಲ್ಲ. ಮುಖ್ಯವಾದ ದೇವರ ಧರ್ಮದ ಪ್ರಕಾರ ದೇವರು ರೂಪ, ನಾಮ, ಕ್ರಿಯಾರಹಿತನು. ವಿವರವಾಗಿ ಎಲ್ಲರಿಗೂ ಅರ್ಥವಾಗುವಂತೆ ಹೇಳಿದರೆ ದೇವರಿಗೆ ಹೆಸರಿಲ್ಲ, ಹೆಸರಿರುವವನು ದೇವರಲ್ಲ. ದೇವರಿಗೆ ರೂಪವಿಲ್ಲ, ರೂಪ ಇರುವವನು ದೇವರಲ್ಲ. ಹಾಗೆಯೇ

ದೇವರಿಗೆ ಕೆಲಸವಿಲ್ಲ, ಕೆಲಸಮಾಡುವವನು ದೇವರಲ್ಲ, ಈ ಧರ್ಮದ ಪ್ರಕಾರ ದೇವರು ಎನ್ನುವವನು ಹೇಗಿರುತ್ತಾನೊ, ಯಾವ ಹೆಸರಿನಿಂದಿರುತ್ತಾನೊ, ಏನು ಮಾಡುತ್ತಿರುತ್ತಾನೊ ಯಾರಿಗೂ ತಿಳಿಯದು. ಹೇಗಿರುತ್ತಾನೊ ಎಂಬ ಪ್ರಶ್ನೆಗೆ ಯಾವ ವಿಧವಾಗಿ ಇರುತ್ತಾನೊ ರೂಪವಿಲ್ಲದ ಆತನು ಯಾರಿಗೂ ತಿಳಿಯದು. ಯಾವ ಹೆಸರಿನಿಂದಿರುತ್ತಾನೊ ಎಂಬ ಪ್ರಶ್ನೆಗೆ ಆತನಿಗೆ ಹೆಸರಿಲ್ಲ ಎಂಬ ಸೂತ್ರದ ಪ್ರಕಾರ ಯಾವ ಹೆಸರಿನಿಂದ ಕರೆಯಲ್ಪಡುವವನು ಅಲ್ಲ. ಆದ್ದರಿಂದ ಹೆಸರನ್ನನುಸರಿಸಿ ಗುರ್ತಿಸಲಾರೆವು. ಹಾಗೆಯೇ ಏನು ಮಾಡುತ್ತಿರುತ್ತಾನೊ ಎಂಬ ಪ್ರಶ್ನೆಗೆ, ಆತನಿಗೆ ಕೆಲಸವೇ ಇಲ್ಲ ಎಂಬ ಸೂತ್ರದ ಪ್ರಕಾರ ಯಾವ ಕೆಲಸವನ್ನು ಮಾಡದಿರುವವನು ದೇವರು. ಆದ್ದರಿಂದ ಕೆಲಸವನ್ನು ನೋಡಬೇಕಾದ ಅಗತ್ಯವಿಲ್ಲ. ಕೆಲಸದ ಮೂಖಾಂತರ ಆತನು ತಿಳಿಯುವುದಿಲ್ಲ. ಈ ವಿಧವಾಗಿ ಗುರ್ತಿಸುವುದಕ್ಕೆ ಅವಕಾಶವಿರುವ ಆಕಾರವಾಗಲಿ, ಹೆಸರಾಗಲಿ, ಕೆಲಸವಾಗಲಿ ಇಲ್ಲದವನನ್ನು ಯಾರೂ ಗುರ್ತಿಸುವುದಕ್ಕೆ ಸಾಧ್ಯವಿಲ್ಲ. ಇದೆಲ್ಲವೂ ಬ್ರಹ್ಮವಿದ್ಯಾ ಶಾಸ್ತ್ರಬದ್ಧವಾಗಿ ದೇವರ ವಾಸ್ತವಿಕತೆ ಎಂದು ತಿಳಿಯುತ್ತಿದೆ. ಆದರೆ ಇಲ್ಲಿ ದೇವರನ್ನು ಕುರಿತು ಮತ್ತೊಂದು ಮುಖ್ಯವಾದ ವಿಷಯವನ್ನು ಹೇಳಿದರೆ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯಯೋಗವೆಂಬ ಅಧ್ಯಾಯದಲ್ಲಿ 19ನೆ ಶ್ಲೋಕದಲ್ಲಿ ಭಗವಂತನ ವೇಷದಲ್ಲಿರುವ ದೇವರು ಹೀಗೆ ಹೇಳುತ್ತಿದ್ದಾನೆ.

**19ನೆ ಶ್ಲೋ: ತಪಾಮ್ಯಹ ಮಹಂ ವರ್ಷಂ ನಿಗೃಹ್ಣಾ ಮ್ಯುತ್ಸೃಜಾಮಿಚ,**
**ಅಮೃತಂ ಚೈವ ಮೃತ್ಯುಶ್ಚ ಸದಸ ಚ್ಚಾಹ ಮರ್ಜುನ.**

**ಭಾವನೆ :–** "ನಾನು ತಪಿಸುವಂತೆ ಮಾಡುತ್ತಿದ್ದೇನೆ. ನಾನೇ ಭೂಮಿಮೇಲೆ ಜಲಗಳನ್ನು ಸ್ವೀಕರಿಸಿ ಪುನಃ ಮಳೆಯರೂಪದಲ್ಲಿ ಬಿಡುತ್ತೇನೆ. ಸಕಲ ಜೀವರಾಶಿಗಳಿಗು ಮೃತ್ಯುವು ನಾನೇ. ಅಮೃತವಾದ ಆರೋಗ್ಯವು ನಾನೇ. ಸತ್ತು ನಾನೇ, ಅಸತ್ತು ನಾನೇ."

ಮೇಲಿನ ಶ್ಲೋಕವೊಂದರ ಭಾವವನ್ನು ನೋಡಿದರೆ ಸ್ವತಃವಾಗಿ ಭಗವಂತನಾದ ದೇವರೇ "ಭೂಮಿಮೇಲೆ ಬಿಸಿಗೆ ಮನುಷ್ಯರನ್ನು ತಪಿಸುವಂತೆ

ನಾನೇ ಮಾಡುತ್ತಿದ್ದೇನೆ ಅಂದಿದ್ದಾನೆ. ಅಷ್ಟೇಯಲ್ಲದೆ ಭೂಮಿಮೇಲಿರುವ ನೀರನ್ನು ತೆಗೆದುಕೊಂಡು, ನನ್ನಹತ್ತಿರ ಇಟ್ಟುಕೊಂಡು ನನಗೆ ತೋಚಿದಾಗ ಆ ನೀರನ್ನು ಮಳೆಯ ರೂಪದಲ್ಲಿ ಭೂಮಿಮೇಲೆ ಬಿಡುತ್ತಿದ್ದೇನೆ. ಸಕಲ ಜೀವಿಗಳಿಗೆ ಸಾವಿಗೆ ಕಾರಣವಾದ ರೋಗವು ನಾನೇ, ಹಾಗೆಯೇ ಆರೋಗ್ಯಕ್ಕೆ ಕಾರಣವಾದ ಅಮೃತವು ನಾನೇ. ಅಷ್ಟೇಯಲ್ಲದೆ ಎಲ್ಲರಲ್ಲಿರುವ ಸತ್ತು ಆದ ಆತ್ಮವು ನಾನೇ ಮತ್ತು ಅಸತ್ತಾದ ಪ್ರಕೃತಿ ನಾನೇ" ಎಂದು ಹೇಳಿದ್ದಾನೆ. ಈಗ ಇಲ್ಲಿ ಹೇಳಿರುವುದು ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ. ಮೇಲೆ ಹೇಳಿದ ದೇವರು ರೂಪ, ನಾಮ, ಕ್ರಿಯಾರಹಿತನು ಎಂಬಮಾತು ದೇವರ ಮುಖ್ಯವಾದ ಧರ್ಮಗಳಲ್ಲಿನ ವಿಷಯ. ದೇವರ ಧರ್ಮ ಕೂಡಾ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನದೆ. ಶಾಸ್ತ್ರ ಎಂದಿಗೂ ಸತ್ಯವಾಗಿರುತ್ತದೆ. ಆದರೆ ಇಲ್ಲಿ ಶಾಸ್ತ್ರದಲ್ಲಿನ ಮಾತುಗಳೆ ಒಂದಕ್ಕೊಂದು ಪರಸ್ಪರ ವಿರುದ್ಧವಾಗಿ ಇವೆ. ಈ ವಾಕ್ಯಗಳು ಇರುವುದನ್ನನುಸರಿಸಿ ನೋಡಿದರೆ ಅದರಲ್ಲಿ ಒಂದು ಸತ್ಯವಾದರೆ ಮತ್ತೊಂದು ಅಸತ್ಯವಾಗಿರಬೇಕು. ಕೆಲಸ ಮಾಡುವವನು ದೇವರಲ್ಲ ಎಂಬುದು ದೇವರ ಧರ್ಮವಾದರೆ, ನಾನೇ ಭೂಮಿಮೇಲೆ ಜಲವನ್ನು ಸ್ವೀಕರಿಸಿ ಪುನಃ ಮಳೆಯರೂಪದಲ್ಲಿ ಸುರಿಸುತ್ತಿದ್ದೇನೆ ಅಂದಾಗ ದೇವರು ಮಳೆಯನ್ನು ಬಿಡುವ ಕೆಲಸವನ್ನು ಮಾಡುತ್ತಿದ್ದಾನೆಂದು ತಿಳಿಯುತ್ತಿದೆ. ಒಂದುಕಡೆ ಮಾಡುವುದಿಲ್ಲ ಅನ್ನುತ್ತಾನೆ, ಮತ್ತೊಂದುಕಡೆ ನಾನೇ ಮಾಡುತ್ತಿದ್ದೇನೆ ಅನ್ನುತ್ತಾನೆ. ಇದರಲ್ಲಿ ಯಾವುದೊ ಒಂದು ಅಸತ್ಯವಾಗುವುದಕ್ಕೆ ಅವಕಾಶ ಇದೆ. **"ಅಸತ್ಯವಾದುದು ಏನಾದರೂ ಶಾಸ್ತ್ರವಲ್ಲ"** ಅನ್ನುವ ಸೂತ್ರದ ಪ್ರಕಾರ ಈ ಎರಡು ಮಾತುಗಳಲ್ಲಿ ಒಂದನ್ನು ಖಂಡಿಸಬೇಕಾಗಿದೆ. ಆದರೆ ಇಲ್ಲಿ ಎರಡುಮಾತುಗಳನ್ನು ಖಂಡಿಸುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ! ಅರ್ಥ ಮಾಡಿಕೊಂಡರೆ ಎರಡೂ ಶಾಸ್ತ್ರಬದ್ಧವಾದ ಮಾತುಗಳೇ ಆಗುತ್ತಿವೆ.

ವಾಸ್ತವವಾಗಿ ದೇವರು ಯಾವ ಕೆಲಸವನ್ನು ಮಾಡುತ್ತಿಲ್ಲ. ಆತನು ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಇದ್ದಾನೆ. ದೇವರು ಯಾವ ಕೆಲಸವನ್ನು ಮಾಡದಿದ್ದರೂ ತನ್ನ ಕೆಳಗಿರುವವರಿಂದ ಕೆಲಸವನ್ನು ಮಾಡಿಸುವುದರಿಂದ

ಆ ಕೆಲಸವನ್ನು ತಾನೇ ಮಾಡಿದಂತಾಗುತ್ತಿದೆ. ದೇವರು ಸೃಷ್ಠಿಆದಿಯಲ್ಲಿಯೇ ತನ್ನಕೆಳಗೆ ಕೆಲಸ ಮಾಡುವವರನ್ನು ಎಷ್ಟೋಜನರನ್ನು ಇಟ್ಟುಕೊಂಡಿದ್ದಾನೆ. ಹಾಗೆಯೇ ದೇವರ ನೇತೃತ್ವದಲ್ಲಿ ದೇವರ ಕೆಲಸವನ್ನು ಮಾಡುವವರೆಲ್ಲರನ್ನು ದೇವರ ಪರಿಪಾಲನೆಯಲ್ಲಿರುವವರಾಗಿ ಲೆಕ್ಕಿಸಬಹುದು. ದೇವರ ಕೆಲಸವನ್ನು ಮಾಡುವುದಕ್ಕೆ ಮೊದಲು ನಿರ್ಣಯಿಸಲ್ಪಟ್ಟಿರುವುದು ಪ್ರಕೃತಿ. ಪ್ರಕೃತಿ ತನ್ನೊಂದಿಗೆ ಕೆಲಸಮಾಡುವುದಕ್ಕೆ ಸ್ವಲ್ಪ ಸಮೂಹವನ್ನು ತಯಾರು ಮಾಡಿಕೊಂಡಿದೆ. ಹಾಗೆ ತಯಾರಾದ ಸಮೂಹದಲ್ಲಿ ಮಹಾಭೂತಗಳಾಗಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಅನ್ನುವ ಐದು ಭಾಗಗಳಾಗಿ ಪ್ರಕೃತಿ ವಿಭಾಗವಾಗಿರುವಾಗ, ನಂತರ ಭೂತಗಳು, ಉಪಭೂತಗಳು, ಗ್ರಹಗಳು, ಉಪಗ್ರಹಗಳು ಕೆಲವು ಕೋಟಿ ಸಂಖ್ಯೆಗಳಲ್ಲಿ ತಯಾರಾಗಿವೆ. ಇವೆಲ್ಲವೂ ದೇವರು ಸೃಷ್ಟಿಸಿದ ಜೀವಸಮುದಾಯ ವನ್ನು ಪಾಲಿಸುವುದಕ್ಕೆ ನಿರ್ಣಯಿಸಲ್ಪಟ್ಟಿವೆಯೆಂದು ಹೇಳಬಹುದು. ಈ ವಿಧವಾಗಿ ದೇವರ ರಾಜ್ಯವಾದ ವಿಶ್ವದಲ್ಲಿ ಪಾಲಿಸುವವರು, ಪಾಲಿಸಲ್ಪಡುವವರು ಎಂಬ ಎರಡು ಭಾಗಗಳು ತಯಾರಾಗಿವೆ. ಪ್ರಜೆಗಳು, ಪ್ರಭುತ್ವ ಎಂದು ನಮ್ಮ ದೇಶದಲ್ಲಿ ಹೇಗೆ ಇವೆಯೊ, ಹಾಗೆಯೇ ವಿಶ್ವ ರಾಜ್ಯದಲ್ಲಿ ಕೂಡಾ ಕರ್ಮಜೀವಿಗಳು, ಕರ್ಮಾತೀತ ಜೀವಿಗಳು ಎಂದು ಎರಡು ವಿಧಗಳಾಗಿ ಇದ್ದಾರೆ. ಕರ್ಮ ಜೀವಿಗಳಾದವರು ಕ್ರಿಮಿ, ಕೀಟಕ, ಪಶು, ಪಕ್ಷಿ, ಮೃಗ, ಮರ್ಕಟ, ಮಾನವ ಜಾತಿಗಳಾಗಿವೆಯೆಂದು, ಕರ್ಮಾತೀತವಾದವರು ಮಹಾಭೂತ, ಭೂತ, ಉಪಭೂತ, ಗ್ರಹ, ಉಪಗ್ರಹಗಳಾಗಿ ಇವೆಯೆಂದು ಹೇಳಬಹುದು. ಕರ್ಮಾತೀತವಾದ ಭೂತಗಳು ಗ್ರಹಗಳು ಪಾಲನ ಯಂತ್ರಾಂಗವನ್ನು ನಡೆಸುತ್ತಿರುವಾಗ, ಕರ್ಮಕ್ಕೆ ಆಧೀನದಲ್ಲಿರುವ ಜೀವರಾಶಿಗಳೆಲ್ಲ ಪಾಲನ ಯಂತ್ರಾಂಗದಲ್ಲಿ ಸಿಕ್ಕಿಕೊಂಡು ಪಾಲಿಸಲ್ಪಡುತ್ತಿವೆಯೆಂದು ಹೇಳಬಹುದು.

ಸಕಲ ಜೀವರಾಶಿಗಳ ಶರೀರಗಳಲ್ಲಿ ಆತ್ಮ ಇದ್ದಂತೆ ಮಹಾಭೂತ ಗಳಿಂದ ಮೊದಲುಗೊಂಡು ಭೂತಗಳು, ಉಪಭೂತಗಳವರೆಗೂ ಗ್ರಹಗಳಿಂದ ಮೊದಲಾಗಿ ಉಪಗ್ರಹಗಳವರೆಗೂ ಅವುಗಳ ಆಕಾರಗಳಲ್ಲಿ ಕೂಡಾ ಆತ್ಮವಿದೆ. ಕರ್ಮಾಧೀನ ಸಕಲ ಜೀವರಾಶಿಗಳ ಶರೀರಗಳಲ್ಲಿ ಆತ್ಮ ಅವುಗಳ ಶರೀರಕ್ಕೆ

ಶಕ್ತಿಕೊಡುವುದೆ ಅಲ್ಲದೆ ಕರ್ಮವನ್ನು ಕ್ರಮವಾಗಿ ಜಾರಿ ಮಾಡುತ್ತಿದೆ. ಕರ್ಮಾತೀತ ಭೂತಗಳಲ್ಲಿ, ಗ್ರಹಗಳಲ್ಲಿ ಆತ್ಮ ಇದ್ದರೂ ಅವುಗಳಿಗೆ ಆತ್ಮ ಶಕ್ತಿಕೊಡುವುದಾಗಿ ಮಾತ್ರವೇ ಇದೆ. ಭೂತಗಳಿಗು, ಗ್ರಹಗಳಿಗು, ಕರ್ಮವಿಲ್ಲ, ಆದ್ದರಿಂದ ಅವುಗಳನ್ನು ಅನುಭವಿಸುವಂತೆ ಮಾಡುವ ಅಗತ್ಯವು ಆತ್ಮಗೆ ಇಲ್ಲ. ಕರ್ಮಾಧೀನ ಜೀವರಾಶಿಗಳಲ್ಲಿ ಆತ್ಮ ಕೆಲಸಮಾಡುವುದಕ್ಕೆ ಶಕ್ತಿಕೊಡುವುದೂ ಮತ್ತು ಕರ್ಮವನ್ನು ಅನುಭವಿಸುವಂತೆ ಮಾಡುವುದೂ ಎಂಬ ಎರಡು ಕೆಲಸಗಳು ಮಾಡುತ್ತಿರುವಾಗ, ಕರ್ಮವಿಲ್ಲದ ಭೂತಗಳ ಗ್ರಹಗಳಲ್ಲಿರುವ ಆತ್ಮ ಅವರಿಗೆ ಶಕ್ತಿಕೊಡುವುದೆಂಬ ಒಂದು ಕೆಲಸವನ್ನು ಮಾತ್ರ ಮಾಡುತ್ತಿದೆ. ಈಗ ನೀವು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಅಗ್ನಿಗೆ ಧೂಪವು ಅಂಟಿಕೊಂಡಿರುವಂತೆ, ಕಾರ್ಯಕ್ಕೆ ಕರ್ಮ ಅಂಟಿಕೊಂಡಿರುತ್ತದೆಯೆಂದು ಮೊದಲೇ ಹೇಳಿಕೊಂಡಿದ್ದೇವೆ ಅಲ್ಲವೆ! ಕರ್ಮ ಸಿದ್ಧಾಂತದ ಪ್ರಕಾರ ಯಾವ ಕಾರ್ಯವನ್ನು ಮಾಡಿದರೂ, ಅದರಲ್ಲಿ ಫಲಿತವಾಗಿ ಕರ್ಮಬರುತ್ತದೆಯೆಂದು ನೀವೇ ಹೇಳಿದ್ದೀರಾ ಅಲ್ಲವೆ! ನೀವು ಹೇಳಿದ ಕರ್ಮಸಿದ್ಧಾಂತದ ಪ್ರಕಾರ, ಮನುಷ್ಯರು ಕೆಲಸ ಮಾಡಿದಾಗ ಕರ್ಮಬರುವುದು ನಡೆಯುತ್ತಿದೆ ಅಲ್ಲವೆ! ಅದೇ ಭೂತಗಳು ಗ್ರಹಗಳು ಅವರಪಾಲನೆಯಲ್ಲಿ ಎಷ್ಟೋ ಕಾರ್ಯಗಳು ಅವರು ಮಾಡುತ್ತಿರುವಾಗ, ಅವರ ಕಾರ್ಯಗಳಿಗೆ ಕರ್ಮ ಏಕೆ ಬರಲಿಲ್ಲ? ಅವರು ಏಕೆ ಕರ್ಮಬದ್ದರು ಆಗಲಿಲ್ಲ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ.

ನಮ್ಮ ಪ್ರಭುತ್ವದಲ್ಲಿ ಕೂಡಾ ನಾವು ಪರಿಪಾಲಿಸಲ್ಪಡುತ್ತಿರುವಾಗ ದೇಶರಕ್ಷಣೆಗೋಸ್ಕರ ಸೈನ್ಯ ಕೂಡಾ ಇದೆ ಅಲ್ಲವೆ! ಸೈನ್ಯದಲ್ಲಿ ಅವರ ವಿಧಿಗಳಲ್ಲಿ ಶತ್ರುಗಳಾಗಿ ಲೆಕ್ಕಿಸಲ್ಪಡುವವರನ್ನು ಎಷ್ಟುಜನರನ್ನು ಸಾಯಿಸಿದರೂ ಅವರು ಅಪರಾಧಿಗಳಾಗಿ ಲೆಕ್ಕಿಸಲ್ಪಡುವುದಿಲ್ಲ. ಅದೇ ವಿಧವಾಗಿ ದೈವಧರ್ಮಗಳಿಗೆ ರಕ್ಷಣೆ ಕಲ್ಪಿಸುತ್ತಾ ಪಾಲಿಸುವ ಪಾಲಕರಾದ ಭೂತಗಳಿಗು, ಗ್ರಹಗಳಿಗು ಕಾರ್ಯ ಇದೆ ಆದರೆ, ಅದನ್ನು ಅಂಟಿಕೊಂಡು ಕರ್ಮ ಇರುವುದಿಲ್ಲ. ಆದ್ದರಿಂದ ಅವರಿಗೆ ಪಾಪಪುಣ್ಯವೆಂಬ ಕರ್ಮಗಳು ಬರುವುದಿಲ್ಲ. ಅವರು ಎಂದಿಗೂ ಕರ್ಮಾತೀತರೇ. ಅವರ ಸ್ವಾರ್ಥಕ್ಕೆ ಅಲ್ಲದೆ ದೇವರ ಕಾರ್ಯದಲ್ಲಿ ಭಾಗಸ್ಥರಾಗಿ

ಕೆಲಸವನ್ನು ಮಾಡುವ ಗ್ರಹಗಳಿಗು ಭೂತಗಳಿಗು ಕರ್ಮವಿಲ್ಲ. ಆದ್ದರಿಂದ ಅವರು ಅನುಭವಿಸುವುದಂತೂ ಏನು ಇರುವುದಿಲ್ಲ. ಭೂತಗಳಿಗು, ಗ್ರಹಗಳಿಗು ಕರ್ಮವನ್ನು ಅಂಟುಗಟ್ಟುವ ಕೆಲಸವನ್ನು ಆತ್ಮ ಮಾಡುತ್ತಿಲ್ಲ. ಅವರಲ್ಲಿ ಆತ್ಮ ಶಕ್ತಿಯನ್ನು ಕೊಡುವ ಕೆಲಸವನ್ನು ಮಾತ್ರ ಮಾಡುತ್ತಿದೆ. ಭೂತಗಳಲ್ಲಿ ಮಹಾಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಲ್ಲರಿಗೂ ತಿಳಿಯುವಂತೆ ಇವೆ. ಇವು ಎಲ್ಲವನ್ನು ಸೇರಿಸಿದರೆ ಪ್ರಕೃತಿ ಎನ್ನುತ್ತಿದ್ದೇವೆ. ದೇವರಿಗೆ ಸೇವಕಿಯಂತೆ ಸತಿಯಾಗಿರುವ ಪ್ರಕತಿ, ತಾನು ಮತ್ತೆಕೆಲವು ಭೂತಗಳನ್ನು, ಗ್ರಹಗಳನ್ನು ವಿನಿಯೋಗಿಸಿಕೊಂಡು ದೇವರು ಮಾಡಬೇಕಾದ ಕೆಲಸವೆಲ್ಲವನ್ನು ಮಾಡುತ್ತಿದೆ. ದೇವರು ಸೃಷ್ಟಿಸಿ ನಿಯಮಿಸಿರುವುದು ಪ್ರಕೃತಿಯಾದರೆ, ಪ್ರಕೃತಿ ದೇವರ ನೇತೃತ್ವದಲ್ಲಿ ದೇವರ ಕಾರ್ಯಗಳೆಲ್ಲವನ್ನು ಮಾಡುತ್ತಿದೆ. ಯಾವ ಕೆಲಸವನ್ನಾದರೂ ಯಜಮಾನ ಮಾಡದಿದ್ದರೂ, ಆತನ ಕೆಳಗೆ ಸೇವಕರು ಕೆಲಸ ಮಾಡಿದರೂ, ಕೊನೆಗೆ ಆ ಕೆಲಸವನ್ನು ಯಜಮಾನ ಮಾಡಿದಂತೆ ಲೆಕ್ಕಿಸಲ್ಪಡುತ್ತದೆ. ಒಂದು ಕೆಲಸವನ್ನು ಕಾಂಟ್ರಾಕ್ಟರ್ ಎಂಬ ವ್ಯಕ್ತಿ ಮಾಡದಿದ್ದರೂ, ಆತನು ನಿಯಮಿಸಿದ ಕೆಲಸದ ಮನುಷ್ಯರು ಮಾಡಿದರೂ, ಕೊನೆಗದು ಆ ಕಾಂಟ್ರಾಕ್ಟರ್ ಮಾಡಿದಂತೆ ಲೆಕ್ಕಿಸಲ್ಪಡುತ್ತದೆ. ಅದೇ ವಿಧವಾಗಿ ದೇವರು ಯಾವ ಕಾರ್ಯವನ್ನು ಮಾಡದಿದ್ದರೂ, ದೇವರು ಸೃಷ್ಟಿಸಿ ನಿಯಮಿಸಿದ ಪ್ರಕೃತಿ ಮತ್ತು ಅದರ ಸಮೂಹ ಭೂತಗಳು, ಗ್ರಹಗಳು ಮಾಡಿದರೂ, ಆ ಕೆಲಸವೆಲ್ಲವನ್ನು ಕೊನೆಗೆ ದೇವರು ಮಾಡಿದಂತೆ ಲೆಕ್ಕಿಸಲ್ಪಡುತ್ತಿದೆ. ಆದ್ದರಿಂದ ದೇವರು ಸ್ವತಃವಾಗಿ ಮಾಡದ ಕೆಲಸವನ್ನು ಕೂಡಾ ನಾನೇ ಮಾಡಿದ್ದೇನೆಂದು ಹೇಳುವುದು ನಡೆದಿದೆಯೆಂದು ಅರ್ಥ ಮಾಡಿಕೊಳ್ಳಬೇಕು. ಆದ್ದರಿಂದ ಶಾಸ್ತ್ರಬದ್ಧವಾಗಿ ದೇವರು ಏನು ಮಾಡದವನೇ ಎಂದು ಹೇಳಬಹುದು. ಹಾಗೆ ಎಲ್ಲವನ್ನೂ ಮಾಡುವವನೆಂದೂ ಕೂಡಾ ಹೇಳಬಹುದು. ಕೊನೆಗೆ ಯಾರಿಗೂ ಯಾವಕಡೆ ಅಂತ್ಯೆಸಿಗದವನೆಂದು ಕೂಡಾ ಹೇಳಬಹುದು.

ಈಗ ಮುಖ್ಯವಾಗಿ ನಾವು ಹೇಳಿಕೊಳ್ಳುವ ವಿಷಯವೇನೆಂದರೇ! ದೇವರು ಎಲ್ಲಾ ಕಾರ್ಯಗಳು ನಾನೇ ಮಾಡುತ್ತೇನೆಂದು ಗೀತೆಯಲ್ಲಿ ರಾಜವಿದ್ಯಾ

ರಾಜಗುಹ್ಯ ಯೋಗವೆಂಬ 19ನೆ ಶ್ಲೋಕದಲ್ಲಿ ಹೇಳುವುದು ಶಾಸ್ತ್ರವಿರುದ್ಧವಾಗಿ ಕಾಣಿಸಿದರೂ ಆ ಮಾತು ಕೊನೆಗೆ ಸತ್ಯವೇ ಆಗುತ್ತಿದೆ. ಹಾಗೆಯೇ ನಾನು ಏನು ಮಾಡಲಿಲ್ಲ ಎಲ್ಲಾ ಪ್ರಕೃತಿಯೇ ಮಾಡುತ್ತಿದೆಯೆಂದು ಭಗವದ್ಗೀತೆ ವಿಜ್ಞಾನಯೋಗದಲ್ಲಿ ಆರನೆ (6)ನೆ ಶ್ಲೋಕದಲ್ಲಿ ಹೇಳುವುದು ನಡೆದಿದೆ.

**6. ಶ್ಲೋ : ಏತದ್ಯೋನೀನಿ ಭೂತಾನಿ ಸರ್ವಾಣಿ ತ್ಯುಪಧಾರಯ!**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ ॥**

**ಭಾವನೆ :** "ಸರ್ವ ಜೀವರಾಶಿಗಳಿಗು ಜನ್ಮಗಳನ್ನು ನನ್ನ ಸತಿಯಾದ ಪ್ರಕೃತಿಯೇ ಮಾಡುತ್ತಿರುತ್ತದೆ. ನಾನು ಏನು ಮಾಡದೆ ಸರ್ವಜೀವಿಗಳ ಸಾವಿಗು ಮತ್ತು ಹುಟ್ಟುವಿಕೆಗು ಕಾರಣವಾಗಿದ್ದೇನೆ."

ಈ ಶ್ಲೋಕದಲ್ಲಿ ಹೇಳಿದ ಭಾವನೆ ಪ್ರಕಾರ ಜೀವಿಗಳು ಹುಟ್ಟಿದಾಗಿನಿಂದ ಮೊದಲು ಮರಣಿಸುವರೆಗೂ ಚಿಕ್ಕದೊಡ್ಡ ಕೆಲಸಗಳನ್ನು, ಹಿಂಸೆ ಅಹಿಂಸೆ ಕಾರ್ಯಗಳನ್ನು, ಸುಖದುಃಖ ಪರಿಸ್ಥಿತಿಗಳನ್ನು ವಿನೋದ ಮತ್ತು ವಿಷಾದಗಳಿಗೆ ಸಮಸ್ತ ಎಲ್ಲವುಗಳಿಗೂ ಕಾರಣ ದೇವರಾದರೆ ಆತನು ಏನು ಮಾಡದಂತೆ ಆತನ ಕಡೆಯಿಂದ ಎಲ್ಲಾ ಕಾರ್ಯಗಳನ್ನು ಕಾಣಿಸುವ ಕಾಣಿಸದ ಪ್ರಕೃತಿ ಗಳಾಗಿರುವ ಚೇತನಾ ಅಚೇತನಾ ಪ್ರಕೃತಿಯೇ ಮಾಡುತ್ತಿದೆ. ಎಲ್ಲಾ ನಾನೇ ಮಾಡುತ್ತಿದ್ದೇನೆಂದು ರಾಜವಿದ್ಯಾ ರಾಜಗುಹ್ಯಯೋಗದಲ್ಲಿ 19ನೆ ಶ್ಲೋಕದಲ್ಲಿ ಹೇಳಿದ ಮಾತಿಗೆ ವಿರುದ್ಧವಾಗಿ ಇಲ್ಲಿ ವಿಜ್ಞಾನಯೋಗ 9ನೆ ಶ್ಲೋಕ ಕಾಣಿಸಿದರೂ ವಿವರಿಸಿ ತಿಳಿದುಕೊಂಡರೆ ಎರಡು ಮಾತುಗಳು ಶಾಸ್ತ್ರಬದ್ಧವಾದವುಗಳೇ ಎಂದು ತಿಳಿಯುತ್ತಿದೆ. ಮೇಲ್ನೋಟಕ್ಕೆ ಎರಡೂ ಎರಡು ವಿಧಗಳ ಅಶಾಸ್ತ್ರೀಯವಾಗಿ ಕಾಣಿಸಿದರೂ, ಜ್ಞಾನದೃಷ್ಟಿಯಿಂದ ನೋಡಿದರೆ ಎರಡೂ ಶಾಸ್ತ್ರಬದ್ಧವಾದ ವಚನಗಳೇ ಎಂದು ತಿಳಿಯುತ್ತಿದೆ. ಎಷ್ಟೊ ಶಾಸ್ತ್ರಬದ್ಧವಾಗಿರುವ ದೇವರನ್ನು ನಾವು ಶಾಸ್ತ್ರತಜ್ಞರು ಅನ್ನುವವರು ಕೂಡಾ ತಿಳಿಯದಂತೆ ಹೋಗುವುದಕ್ಕೆ, ದೇವರ ಜ್ಞಾನ ಅವರಿಗೆ ಅರ್ಥವಾಗದಂತೆ ಹೋಗುವುದಕ್ಕೆ, ಕಾರಣ ಮಾಯೆ ಎಂದು ಹೇಳಿದ್ದೇವೆ. ಮಾಯೆ ಎನ್ನುವುದು ಪ್ರಕೃತಿಗೆ ಮಾರುರೂಪದಂತಿದೆ.

ಪ್ರಕೃತಿಯಿಂದ ತಯಾರು ಮಾಡಲ್ಪಟ್ಟ ಗುಣಗಳೆ ಮಾಯರೂಪವಾಗಿ ಪ್ರತಿ ಮನುಷ್ಯನಲ್ಲಿಯೂ ಇವೆ. ಶರೀರದಲ್ಲಿನ ಮಾಯೆ ದೇವರನ್ನು ಹೇಗೆ ತಿಳಿಯದಂತೆ ಮಾಡುತ್ತಿದೆಯೋ ನಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಹೊರಗೆ 'ಮಾಯ' ಎಂಬ ಪದ ಇದೆಯೆಂದು ಹೇಳಿದ್ದೇವೆ. 'ಮಾಯ'ಮು ಎಂಬುದು ಸತ್ಯವಾ ಅಸತ್ಯವಾ ಎಂಬುದೇ ನಮಗೆ ಮುಖ್ಯವಾದ ಪ್ರಶ್ನೆ. ಅದಕ್ಕೆ ಉತ್ತರ ಅರ್ಥವಾಗುವುದಕ್ಕೆ ಪ್ರಕೃತಿಯೆಲ್ಲವನ್ನು ಬಿಡಿಸಿ ಹೇಳಿಕೊಳ್ಳಬೇಕಾಗಿ ಬಂದಿದೆ.

ಪ್ರಕೃತಿಯನ್ನು ವಿಭಜಿಸಿ ಹೇಳಿಕೊಂಡರೆ ಅದು ಭೂತಗಳು, ಗ್ರಹಗಳಾಗಿ ವಿಭಜಿಸಲ್ಪಟ್ಟಿದೆಯೆಂದು ತಿಳಿದುಕೊಂಡಿದ್ದೇವೆ. ಭೂತಗಳಲ್ಲಿ, ಮಹಾಭೂತಗಳು, ಭೂತಗಳು, ಸ್ವಲ್ಪಭೂತಗಳು ಇಲ್ಲವೆ ಉಪ ಭೂತಗಳೆಂದು ಮೂರು ಭಾಗಗಳಾಗಿ ಇವೆಯೆಂದು ಕೂಡಾ ಹೇಳಿಕೊಂಡಿದ್ದೇವೆ. ಅದರಲ್ಲಿ ಭೂತಗಳು ಎಂದು ಹೆಸರುವಾಸಿಯಾದ ಮೇಘಗಳನ್ನು ಕುರಿತು ನಾಲ್ಕು ವರ್ಷಗಳ ಕೆಳಗೆ ನಾವು ಬರೆದ **"ದೆವ್ವಗಳ–ಭೂತಗಳ ಯಥಾರ್ಥ ಸಂಘಟನೆಗಳು"** ಎಂಬ ಗ್ರಂಥದಲ್ಲಿ ಸ್ವಲ್ಪಮಟ್ಟಿಗೆ ಬರೆದಿದ್ದೇವೆ. ಆಗ ಮೇಘಗಳು ಯಾವ ಪ್ರಾಣಿಯನ್ನಾದರೂ, ಯಾವ ವಸ್ತುವನ್ನಾದರೂ, ಎಷ್ಟು ದೊಡ್ಡದಾದರೂ, ಎಷ್ಟು ಭಾರ ಇರುವುದಾದರೂ, ಪ್ರಾಣವಿರುವುದನ್ನು, ಪ್ರಾಣ ಇಲ್ಲದಿರುವುದನ್ನು ಯಾವುದನ್ನಾದರೂ ಭೂಮಿಮೇಲಿಂದ ಮೇಲಕ್ಕೆ ಆಕಾಶದೊಳಗೆ ತೆಗೆದುಕೊಂಡು ಹೋಗುತ್ತದೆಂದು ಹೇಳಿದ್ದೇವೆ. ಹಾಗೆ ತೆಗೆದುಕೊಂಡುಹೋದ ಏನನ್ನಾದರೂ ಪುನಃ ಭೂಮಿಮೇಲಕ್ಕೆ, ತನ್ನ ಇಷ್ಟ ಬಂದಾಗ, ತನಗಿಷ್ಟಬಂದಕಡೆ ಬಿಡುತ್ತದೆಂದು ಕೂಡಾ ಹೇಳಿದ್ದೇವೆ. ಭೂಮಿಮೇಲಿಂದ ಆಕಾಶದೊಳಗೆ ತೆಗೆದುಕೊಂಡು ಹೋಗುವಾಗಾಗಲಿ, ಆಕಾಶದಿಂದ ಭೂಮಿಮೇಲಕ್ಕೆ ತಂದು ಬಿಡುವಾಗಾಗಲಿ, ತೆಗೆದುಕೊಂಡು ಹೋಗಿರುವುದಕ್ಕೆ ಎಂಥಹ ತೊಂದರೆಯಾಗದಂತೆ ಬಿಡುತ್ತದೆಂದು ಕೂಡಾ ಹೇಳಿದ್ದೇವೆ. ಆಕಾಶದಿಂದ ಮೇಘ ಒಂದು ಮಂಜುಗಡ್ಡೆಯನ್ನು ಕೆಳಕ್ಕೆ ಬಿಟ್ಟಾಗ ಅದು ಒಡೆದುಹೋಗದಂತೆ, ಇರುವುದು ಇದ್ದಂತೆ ಭೂಮಿಮೇಲಕ್ಕೆ ಸೇರುವಂತೆ ಮಾಡುತ್ತದೆ. ಅದೇ ಒಂದು ಜೀವರಾಶಿಯಾದ ದೊಡ್ಡಕಪ್ಪೆಯನ್ನಾ

ಗಲಿ, ದೊಡ್ಡಮೀನನ್ನಾಗಲಿ ಭೂಮಿಮೇಲಕ್ಕೆ ಬಿಡುವಾಗ ಕೂಡಾ ಅವುಗಳಿಗೆ ಯಾವ ಹಾನಿ ಉಂಟಾಗದಂತೆ ಕೆಳಗೆಬಿದ್ದಂತೆ ಕೂಡಾ ತಿಳಿಯದಹಾಗೆ ಬಿಡುತ್ತದೆ. ಅಷ್ಟೇಯಲ್ಲದೆ ನೀರಿನಲ್ಲಿರುವ ಮೊಸಳೆಯನ್ನು ಮೇಘವು ಮೇಲಕ್ಕೆ ತೆಗೆದುಕೊಂಡು ಹೋದಾಗ, ಆ ಮೊಸಳೆಯನ್ನು ಪುನಃ ಭೂಮಿಮೇಲಿರುವ ಬೇರೆ ಖಂಡಕ್ಕೆ ಸೇರಿಸುವುದಕ್ಕೆ ಸಮುದ್ರವೆಲ್ಲವನ್ನು ದಾಟಿ ಹೋಗುವುದಕ್ಕೆ ಹತ್ತುದಿನಗಳ ಕಾಲ ಹಿಡಿದರೂ, ತಿಂಗಳ ಕಾಲಹಿಡಿದರೂ, ಅಲ್ಲಿಯವರೆಗೂ ತನ್ನಲ್ಲಿ ಇಟ್ಟುಕೊಂಡ ಮೊಸಳೆಗೆ ಹಸಿವಿನ ಬಾಧೆ ಉಂಟಾಗದಂತಿರುವುದಕ್ಕೆ ಮೇಘವು ಎಚ್ಚರವ ಹಿಸುತ್ತದೆ. ಒಂದು ಮೊಸಳೆ ಕೂಡಾ ಇಲ್ಲದ ಪ್ರಾಂತವನ್ನು ಗುರುತಿಸಿ, ಅಲ್ಲಿಯೂ ಕೂಡಾ ಮೊಸಳೆಗಳು ಇರುವಂತೆ ತಾನು ಹೊತ್ತುಕೊಂಡು ಹೋಗಿರುವ ಮೊಸಳೆಯನ್ನು ಇಲ್ಲವೆ ಮೊಸಳೆಗಳನ್ನು ಬಿಡುತ್ತಿದೆ. ಭೂಮಿಮೇಲೆ ಕಾಣಿಸುವ ಮೇಘಗಳು ಯಾರಿಗೂ ತಿಳಿಯದಂತೆ, ತಿಳಿಯುವುದಕ್ಕೆ ಅವಕಾಶವೇ ಇಲ್ಲದಂತೆ ಎಷ್ಟೋ ತತಂಗವನ್ನು ನಡೆಸುತ್ತಿವೆ.

ಸ್ಥೂಲವಾಗಿ ಕಾಣಿಸುವ ವಸ್ತುಗಳನ್ನಾಗಲಿ, ಪ್ರಾಣಿಗಳನ್ನಾಗಲಿ ಮೇಘವು ತೆಗೆದುಕೊಂಡು ಹೋಗುವಾಗ, ಸ್ಥೂಲವಾಗಿರುವ ಏನನ್ನಾದರೂ ಮೇಘವು ಮಾಯ ಮಾಡುತ್ತಿದೆ. ಕಾಣಿಸುವುದನ್ನು ಕಾಣಿಸದಂತೆ ಮಾಡಿ ತನ್ನಲ್ಲಿ ಇಟ್ಟುಕೊಳ್ಳುತ್ತಿದೆ. ಮಾಯ ಎಂದರೆ ಇರುವುದನ್ನು ಇದ್ದಂತೆ ಕಾಣಿಸದಂತೆ ಮಾಡುವುದೆಂದು ಅರ್ಥ. ಅಲ್ಲಿಯವರೆಗೂ ಕಾಣಿಸುತ್ತಿರುವ ವಸ್ತುವಾಗಲಿ, ಪ್ರಾಣಿಯಾಗಲಿ ಅದು ಇದ್ದರೂ ಕಾಣಿಸದಂತೆ ಹೋಗುವುದನ್ನೆ ಮಾಯ ವಾಗಿಹೋಗುವುದೆಂದು ಹೇಳಬಹುದು. ಉದಾಹರಣೆಗೆ 18 ಅಡಿಗಳ ಮೊಸಳೆಯನ್ನು ಮೇಘವು ತೆಗೆದುಕೊಂಡು ಹೋಗಬೇಕೆಂದುಕೊಂಡಾಗ, ಮೊಸುಳೆ ದೊಡ್ಡನೀರಿನ ಹೊಂಡ (ಕೊಳ) ಇದ್ದರೆ, ಆ ನೀರಿನ ಹೊಂಡದ ಮೇಲಕ್ಕೆ ಮೇಘ ಬಂದು ಹತ್ತಿಯ ಎಳೆ ಬಿಡಿಬಿಡಿಯಾದಂತೆ ಚಿಕ್ಕ ಎಳೆಗಳಾಗಿ ಬಿಡಿಬಿಡಿಯಾಗಿ, ಒಂದಕ್ಕೊಂದು ಸುತ್ತಿಕೊಳ್ಳುತ್ತಾ ಒಂದು ಧಾರೆಯಾಗಿ ಏರ್ಪಟ್ಟು, ಆ ಧಾರೆ ನೀರಿನ ಹೊಂಡದ ಉಪರಿತಳದ ಮೇಲಕ್ಕೆ ಸೇರುತ್ತದೆ.

**ಸಾಕ್ಷಿ ಜಾತೀಯಂ / ಅಂತರ್ಜಾತೀಯಂ**
21/06/2013




(ಸಮುದ್ರದ ಮೇಲೆ ಟೋರ್ನಡೋ ಸೃಷ್ಟಿಸಿದ ಬೀಭತ್ಸ ಕಾರಣವಾಗಿ ಏರ್ಪಟ್ಟ ಜಲಸ್ತಂಭ (ವಾಟರ್ ಸ್ಪಾಟ್) ಇದು. ಬುಧವಾರ ಅಮೆರಿಕಾದಲ್ಲಿನ ಲೂಸಿಯಾನಾ ರಾಷ್ಟ್ರಂದಲ್ಲಿನ ಗ್ರಾಂಡ್ ಇಸ್ಲೆ ಪಟ್ಟಣ ಸಮೀಪದಲ್ಲಿನ ಸಮುದ್ರ ತೀರದಲ್ಲಿ ಕಾಣಿಸಿದ ಈ ಅಪರೂಪವಾದ ದೃಶ್ಯವನ್ನು ಸ್ಥಾನಿಕ ಕಂಪನಿ ಯಜಮಾನ ತನ್ನ ಕೆಮೆರಾದಲ್ಲಿ ಸೆರೆಹಿಡಿದಿದ್ದಾರೆ. )

ಹಾಗೆ ಮೇಘವೊಂದರ ಅಂಚು ನೀರಿನ ಹೊಂಡವನ್ನು ಸೇರಿದ ನಂತರ ಹೊಂಡದಲ್ಲಿನ ಸ್ವಲ್ಪ ನೀರನ್ನು, ಆ ನೀರಿನೊಂದಿಗೆ ಸಹ ಮೊಸಳೆಯನ್ನು ಕೂಡಾ ತನ್ನ ಧಾರೆಯೊಳಗೆ ತೆಗೆದುಕೊಳ್ಳುತ್ತದೆ. ಆಗ ಮೇಘ ತೆಗೆದುಕೊಂಡ ನೀರಾಗಲಿ, ಮೊಸುಳೆಯನ್ನಾಗಲಿ ಅಲ್ಲಿಯವರೆಗೂ ಕಾಣಿಸುತ್ತಿದ್ದರೂ ಮೇಘವು ತಾಕಿದ ನಂತರ ಎಷ್ಟುಮಾತ್ರ ಕಾಣಿಸದಂತೆ ಅದೃಶ್ಯವಾಗಿ ಹೋಗುತ್ತದೆ. ಅದೃಶ್ಯ

ಎಂದರೆ ಕಾಣಿಸುವುದು ಕಾಣಿಸದಂತೆ ಹೋಗುವುದೇ ಆದರೆ ಪೂರ್ತಿ ಇಲ್ಲದಂತೆ ಹೋಗಿದೆಯೆಂದು ಅಲ್ಲ. ಅಲ್ಲಿಯವರೆಗೂ ಹೊಂಡದಲ್ಲಿರುವ ಮೊಸಳೆ, ನೀರು ಎರಡೂ ಮೇಘದಲ್ಲಿ ಯಥಾತಥವಾಗಿ ಸೇರಿಹೋಗಿವೆ. ಆಗ ಮೊಸಳೆಯ ಪರಿಮಾಣ. ನೀರಿನ ಪರಿಮಾಣ ಎರಡೂ ನೀರಿನ ಹೊಳೆಯಲ್ಲಿ ಕಡಿಮೆಯಾಗುತ್ತದೆ. ಹೊಂಡದಲ್ಲಿ ಕಡಿಮೆಯಾದ ನೀರಾಗಲಿ, ಮೊಸಳೆಯಾಗಲಿ ಎರಡೂ ಮೇಘದಲ್ಲಿ ಸುರಕ್ಷಿತವಾಗಿ ಸೇರಿದ ನಂತರ ಮೇಘವೊಂದರ ಧಾರೆ ಪುನಃ ಮೇಲಕ್ಕೆ ಹೋಗಿ ಮೇಘದಲ್ಲಿ ಬೆರೆತುಹೋಗುತ್ತದೆ.

ಈ ವಿಧವಾಗಿ ನಡೆಯುವ ವಿಧಾನವನ್ನು ದೃಶ್ಯರೂಪದಲ್ಲಿ ಚಿತ್ರಪಟ (x) ದಲ್ಲಿ ನೋಡಬಹುದು. ಈ ದಿನ ಭೂಮಿಮೇಲೆ ಸುರಿಯುವ ಮಳೆ ನೀರೆಲ್ಲವು ಮೇಘಗಳು ಸಮುದ್ರದಿಂದ ತೆಗೆದುಕೊಂಡಿರುವವೆಯೆಂದು ತಿಳಿಯಬೇಕು. ರಾಟೆಯಲ್ಲಿ ಹತ್ತಿಯಿಂದ ನೂಲನ್ನು ತೆಗೆಯುವಾಗ, ರಾಟೆ ತಿರುಗುತ್ತಿರುವಾಗ ಹತ್ತಿಯಿಂದ ನೂಲಿನದಾರ ಹತ್ತಿಯ ಎಳೆಗಳು ಸೇರಿ ಸುತ್ತಿಕೊಳ್ಳುತ್ತಾ ದಾರ ಏರ್ಪಟ್ಟಂತೆ, ಮೇಲೆ ಹತ್ತಿಯಂತೆ ಕಾಣಿಸುವ ಮೇಘದಿಂದ ದಾರದಂತೆ ಕೆಳಕ್ಕೆ ಮೇಘವೊಂದರ ಧಾರೆ ಏರ್ಪಡುವುದರಿಂದ, ಆ ಮೇಘಗಳನ್ನು ಹತ್ತಿಎಳೆಯ ಮೇಘಗಳು ಎಂದು ಹೇಳಬಹುದು. ಅಂತಹ ಮೇಘಗಳನ್ನು ಸುಳಿಮೇಘಗಳೆಂದು ಕೂಡಾ ಹೇಳಬಹುದು. ಭೂತ ರೂಪವನ್ನು ಬದಲಿಸಿ ಕೊಳ್ಳುತ್ತದೆಂದು ಹೇಳಿದ್ದೇವೆ. ಮೇಘ ಭೂತವಾಗಿರುವುದರಿಂದ ಮೇಘವು ಸುಡಿಮೇಘವಾಗಿ ಸ್ವಲ್ಪಸಮಯ ಕಾಣಿಸಿ ನಂತರ ಕಾಣಿಸದಂತೆ ಹೋಗುತ್ತದೆ. ಚಿತ್ರಪಟ (x) ನಲ್ಲಿ ನೋಡಿದ ಹತ್ತಿಎಳೆಯಂತಹ ಮೇಘಗಳು ನೀರನ್ನಾಗಲಿ, ನೀರಿನಲ್ಲಿನ ಜೀವರಾಶಿಗಳನ್ನಾಗಲಿ ತೆಗೆದುಕೊಳ್ಳುತ್ತದೆ. ಅಂತಹ ದೃಶ್ಯಗಳು ಸಮುದ್ರದಲ್ಲಿ ಬೆರ್ಮುಡಾ ಟ್ರಯಾಂಗಲ್ ಏರಿಯಾದಲ್ಲಿ ನಿತ್ಯವೂ ಕಾಣಿಸುತ್ತಿರುತ್ತದೆ. ಭೂಭಾಗದ ಮೇಲೆ ಸುರಿಯುವ ಮಳೆ ನೀರಿನ ಮೂರರಷ್ಟು ತ್ರೈತಾಕಾರ ಸಮುದ್ರ ಆವರಣದಲ್ಲಿ (ಬೆರ್ಮುಡಾ ಟ್ರಯಾಂಗಲ್ ಏರಿಯಾದಲ್ಲಿ) ಮೇಘಗಳು ತೆಗೆದುಕೊಂಡಿರುವುದೇ ಎಂದು ತಿಳಿಯಬೇಕು. ಸಮುದ್ರದಲ್ಲಿ

ದೃಶ್ಯರೂಪದಲ್ಲಿ ಕಾಣಿಸುತ್ತಿರುವ ನೀರು ಹತ್ತಿಎಳೆಯಂತಹ ಮೇಘ (ಸುಳಿಮೇಘ) ದೊಳಗೆ ಸೇರುವಾಗ, ನೀರು ಅದೃಶ್ಯವಾಗಿ ಮೇಘದಲ್ಲಿ ನಿಂತುಹೋಗುತ್ತಿದೆ. ಕೆಲವು ಕೋಟಿ ಟನ್ನುಗಳ ಭಾರವಿರುವ ನೀರನ್ನು ಮೇಘಗಳು ಅದೃಶ್ಯರೂಪವಾಗಿ ತನ್ನಲ್ಲಿ ಸೇರಿಸಿಕೊಂಡು ಹೋಗುತ್ತಿವೆ. ಅದೃಶ್ಯರೂಪವಾಗಿ ತನ್ನಲ್ಲಿ ಇಟ್ಟುಕೊಂಡ ನೀರನ್ನು ಪುನಃ ದೃಶ್ಯರೂಪದಲ್ಲಿ ಮಳೆಯಾಗಿ ಮೇಘವು ಸುರಿಸುತ್ತಿದೆ. ಮೇಘಗಳು ನೀರನ್ನು ತೆಗೆದುಕೊಳ್ಳುವುದೂ, ಪುನಃ ಬಿಡುವುದೂ, ಸರ್ವಸಾಧಾರಣವಾಗಿ ಪ್ರತಿವರ್ಷ ನಡೆಯುತ್ತಲೇ ಇದೆ. ಎಷ್ಟೋ ವಸ್ತುಗಳನ್ನು, ಮೀನುಗಳನ್ನು, ಕಪ್ಪೆಗಳನ್ನು, ನೀರನ್ನು ಮೇಘ ಮಾಯ ಮಾಡುತ್ತಿದೆ. ಇಂದು ಮಾಯ ಮಾಡುವುದೆಂಬುದು ಅಸತ್ಯವೆಂದು ಅನ್ನುವವರು ಮೇಘದಲ್ಲಿ ಕಾಣಿಸದ ಇಷ್ಟು ನೀರು ಎಲ್ಲಿಂದ ಬಂದಿವೆಯೆಂದು ಹೇಳುತ್ತಾರಾ? ಮಳೆಯಲ್ಲಿ ಮೀನುಗಳು, ಕಪ್ಪೆಗಳು, ಹಾವುಗಳು ಆಗಾಗ ಬೀಳುವುದು ನೋಡುತ್ತಲೇ ಇದ್ದೇವೆ. ಅವು ಕಾಣಿಸದಂತೆ ಮೇಲೆ ಮೇಘದಲ್ಲಿ ಹೇಗೆ ಇವೆಯೊ ಹೇಳುತ್ತೀರಾ? ದೃಶ್ಯವಾಗಿರು ವುದನ್ನು ಅದೃಶ್ಯವಾಗಿ ಮಾರ್ಪಡಿಸುವುದಾಗಲಿ, ಅದೃಶ್ಯವಾಗಿರುವುದನ್ನು ದೃಶ್ಯವಾಗಿ ಮಾರ್ಪಡಿಸುವುದಾಗಲಿ ನಮ್ಮ ಮುಂದೆಯೇ ಮೇಘಗಳು ಮಾಡುತ್ತಿವೆ. ಸಮುದ್ರದಲ್ಲಿ ಮಾಯವಾದ ವಸ್ತುವಾಗಲಿ, ನೀರಾಗಲಿ ಎಲ್ಲಿವೆಯೊ? ಎಷ್ಟು ಕಾಲ ಇವೆಯೋ ಯಾರಾದರೂ ಹೇಳುತ್ತಾರಾ? ಹೇಳಲಾರೆವು. ಮಾಯೆಯನ್ನು ಕುರಿತು ತಿಳಿಯಬೇಕೆಂದರೆ ಮೇಘಗಳ ಹತ್ತಿರ ಪ್ರತ್ಯಕ್ಷವಾಗಿ ನೋಡಬಹುದು. ಮಾಯೆಯನ್ನು ಕುರಿತು ತಿಳಿಯಬೇಕೆಂದರೆ ಶರೀರದಲ್ಲಿ ನೋಡಿಕೊ, ನೋಡಿಕೊಳ್ಳುವುದು ಬರದಿದ್ದರೇ, ನೋಡುವ ಜ್ಞಾನವನ್ನು ಕಲಿತುಕೊ, ಹಾಗೆಯೆ ಮಾಯದ ಬಗ್ಗೆ ತಿಳಿಯಬೇಕೆಂದರೆ ಮೇಘದಲ್ಲಿ ನೋಡಿಕೊ. ಇದೆಲ್ಲಾ ಏನೊ ಕಾಗೆ ಗುಬ್ಬಚ್ಚಿ ಕಥೆಯೆಂದು ಅಂದುಕೊಳ್ಳಬೇಡಿ. ನಾವು ಇಲ್ಲಿಯವರೆಗೂ ಹೇಳಿರುವುದು ನೂರಕ್ಕೆ ನೂರರಷ್ಟು ಸತ್ಯವಾದುದು, ಯಥಾರ್ಥವಾಗಿ ನಡೆಯುತ್ತಿರುವುದು. ಇಲ್ಲಿಯವರೆಗೂ ಮನುಷ್ಯರು ಎಷ್ಟೊ ವಿಜ್ಞಾನಿಗಳೆಂದು ಕೊಂಡರೂ, ಇನ್ನೂ ನಮಗೆ ತಿಳಿಯದ ದೊಡ್ಡ ವಿಜ್ಞಾನ ಒಂದಿದೆಯೆಂದು, ಅದರ ಪ್ರಕಾರವಾದರೇನೆ ಮನುಷ್ಯ ಏನನ್ನಾದರೂ ಸಂಪೂರ್ಣವಾಗಿ

ತಿಳಿಯುತ್ತಾನೆಂದು ಹೇಳುತ್ತಿದ್ದೇವೆ. ಆದರೆ ಮನುಷ್ಯ ಸ್ವಲ್ಪಮಟ್ಟಿನ ವಿಜ್ಞಾನವನ್ನು ತಿಳಿದಷ್ಟು ಮಾತ್ರಕ್ಕೆ, ನನಗೆ ಎಲ್ಲಾ ತಿಳಿದಿದೆಯೆಂದು ಭ್ರಮೆಪಟ್ಟು ನಾನು ತಿಳಿಯಬೇಕಾಗಿರುವುದು ಏನುಯಿಲ್ಲವೆಂಬ ಅಭಿಪ್ರಾಯದಿಂದ ಹದ್ದನ್ನು ಏರ್ಪಡಿಸಿಕೊಂಡು, ಅದರಲ್ಲಿಯೇ ಇದ್ದು ಹೋಗುತ್ತಿದ್ದಾನೆ. ಅಂತಹವರಿಗೆ ಸ್ವಲ್ಪ ಕಣ್ತೆರೆಸುವುದಕ್ಕೆ ನನ್ನ ಪರಿಶೋಧನೆಯಲ್ಲಿ ತಿಳಿಯಲ್ಪಟ್ಟ ದೈವಸಂಬಂಧ ಸತ್ಯಗಳನ್ನು ನಿಮಗೆ ತಿಳಿಸುವುದು ನಡೆದಿದೆ. ಇಲ್ಲಿಗೆ ಈ ವಿಷಯವನ್ನು ಮುಗಿಸಿ ಈ ಗ್ರಂಥದ ಮೊದಲಿನಲ್ಲಿ 71ನೆ ಪೇಜಿನಲ್ಲಿ ಮಧ್ಯದಲ್ಲಿ ನಿಲ್ಲಿಸಿದ ಪ್ರಶ್ನೆಗೆ ಉತ್ತರವನ್ನು ಪೂರ್ತಿಯಾಗಿ ಬರೆಯಬೇಕೆಂದುಕೊಂಡಿದ್ದೇವೆ. ಆದ್ದರಿಂದ ಅಲ್ಲಿ ಬಿಟ್ಟಿರುವ ವಿಷಯಗಳನ್ನು ಕುರಿತು ಹೇಳಿಕೊಳ್ಳೋಣ.

ಅಲ್ಲಿ ಖುರಾನ್ ಗ್ರಂಥದಲ್ಲಿನ ಎರಡನೆ (2) ಸುರಾದಲ್ಲಿ ನೂರ ಹದಿನೇಳನೆ (117) ಆಯತ್‌ನಲ್ಲಿ "ಭೂಮಿ ಆಕಾಶಗಳನ್ನು ಪ್ರಥಮವಾಗಿ ಸೃಷ್ಟಿಸಿದವನು ಆತನೇ (ದೇವರು), ಆತನು ಯಾವ ಕೆಲಸವನ್ನಾದರೂ ಮಾಡಲು ಸಂಕಲ್ಪಿಸಿಕೊಂಡಾಗ ಆ ಕೆಲಸ ಮುಗಿದುಹೋಗಲಿ ಎಂದು ಅಂದರೆ ಸಾಕು, ಅದು ಮುಗಿದುಹೋಗುತ್ತದೆ." ಎಂದು ಇದೆ ಅಲ್ಲವೆ! ಅದಕ್ಕೆ ವಿರುದ್ಧವಾಗಿ 32ನೆ ಸುರಾ 4ನೆ ಆಯತ್‌ನಲ್ಲಿ ದೇವರು ಸಮಸ್ತವನ್ನು ಆರು ದಿನಗಳಲ್ಲಿ ಸೃಷ್ಟಿಸಿ ನಂತರ ಸಿಂಹಾಸನವನ್ನು ಅಧಿಷ್ಟಿಸಿದ್ದಾನೆಂದು ಹೇಳುವುದು ಶಾಸ್ತ್ರವಿರುದ್ದ ಅಲ್ಲವೇ ಎನ್ನುವುದು ಸಮಸ್ಯೆ. ಪರಸ್ಪರ ವಿರುದ್ಧವಾಗಿರುವ ಈ ಎರಡು ಮಾತುಗಳನ್ನು ಹೇಗೆ ವಿವರಿಸಿಕೊಳ್ಳಬೇಕು ಎಂದು ಪ್ರಶ್ನೆ ಬಂದಿದೆ. ಅದಕ್ಕೆ ಈಗ ಸಮಾಧಾನ ಹೇಳಿಕೊಳ್ಳೋಣ. 32ನೆ ಸುರಾದಲ್ಲಿ 4ನೆ ವಾಕ್ಯವನ್ನು ಮತ್ತೊಂದುಬಾರಿ ಪರಿಶೀಲಿಸೋಣ. "ದೇವರೇ ಆಕಾಶಗಳನ್ನು ಭೂಮಿಯನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು ಆರು ದಿನಗಳಲ್ಲಿ ಸೃಷ್ಟಿಸಿದ್ದಾನೆ. ಆ ನಂತರ ಸಿಂಹಾಸನವನ್ನು ಅಧಿಷ್ಠಿಸಿದ್ದಾನೆ. ಆತನು ಹೊರತು ನಿಮಗೆ ಯಾವ ಸಹಾಯಕನೂ ಮತ್ತ್ಯಾವ ಸಿಫಾರಸು ಮಾಡುವವನೂ ಇಲ್ಲ. ಆದರೂ ನೀವು ಆತನ ಹಿತಬೋಧನೆಯನ್ನು ಗ್ರಹಿಸುವುದಿಲ್ಲವೇನು?" ಎಂದು ಇದೆ.

2–117ರಲ್ಲಿ ಇರುವ ವಾಕ್ಯದಲ್ಲಿ ಕಷ್ಟವಾದ ಪದಗಳು ಇಲ್ಲ, ದೇವರು ಏನಾದರೂ ಮುಗಿದುಹೋಗಲಿ ಎಂದರೆ ಆಗಿಹೋಗುತ್ತದೆಂದು, ಆತನ ಯಾವ ಕೆಲಸ ಮಾಡಬೇಕಾದ ಅವಶ್ಯವಿಲ್ಲವೆಂದು ಸುಲಭವಾಗಿ ಅರ್ಥವಾಗಿದೆ. ಇನ್ನುಹೋದರೆ 32–4ರಲ್ಲಿ ಕೂಡಾ ಇರುವ ವಾಕ್ಯವೆಲ್ಲಾ ಸುಲಭವಾಗಿ ಅರ್ಥವಾಗುವಂತೆ ಇದೆ. ದೇವರು ಸಮಸ್ತವನ್ನು ಆರು ದಿನಗಳಲ್ಲಿ ಸೃಷ್ಟಿಸಿದ್ದಾನೆಂದು ನಂತರ ಸಿಂಹಾಸನದ ಮೇಲೆ ಕುಳಿತುಕೊಂಡಿದ್ದಾನೆಂದು ಇದೆ. ಇದು ಈ 4ನೆ ವಾಕ್ಯದಲ್ಲಿ ಅರ್ಧಮಾತ್ರವೇ. ಈ ಅರ್ಧ ವಾಕ್ಯ 2–117ರಲ್ಲಿ ಹೇಳಿದ ಮಾತಿಗೆ ಪೂರ್ತಿ ವಿರುದ್ಧವಾಗಿ ಇದೆ ಆದರೂ ಇವುಗಳಲ್ಲಿ ಅರ್ಥವಾಗದ ಪದಗಳು ಯಾವು ಇಲ್ಲ. ನಂತರ ಅದೇ ವಾಕ್ಯದಲ್ಲಿ ಮೊದಲು ಹೇಳಿದ ವಾಕ್ಯಕ್ಕೆ ಸಂಬಂಧವಾಗದ, ಅನುಕರಣೆಯಾಗಲಿ ಇಲ್ಲದಂತೆ, ವಿಷಯವೆಲ್ಲವನ್ನು ಬದಲಾಯಿಸಿ ಆತನು ಹೊರತು ನಿಮಗೆ ಸಹಾಯ ಮಾಡುವವನಾಗಲಿ, ಕನಿಷ್ಟ ಸಿಫಾರಸು ಮಾಡುವವನಾಗಲಿ (ಸಪೋರ್ಟಾಗಿ ಮಾತನಾಡುವವನಾಗಲಿ) ಆತನು ಹೊರತು ಯಾರೂ ಇಲ್ಲವೆಂದು ಹೇಳುವುದಾಗಿದೆ. ಮಧ್ಯದಲ್ಲಿ ಈ ಮಾತನ್ನು ಏಕೆ ಹೇಳಿದ್ದಾರೊ ಬಹಳಜನರಿಗೆ ಅರ್ಥವಾಗಲಿಲ್ಲ. ಅಲ್ಲಿ ಆ ಮಾತು ಅಸಂದರ್ಭವೇ ಎಂದು ಎನಿಸುತ್ತದೆ. ಆದರೆ ಆ ಮಾತು ಹೇಳಿರುವುದು ಸಾಮಾನ್ಯವಾದವನು ಅಲ್ಲ. ಖಗೋಳದಲ್ಲಿ ದೊಡ್ಡಜ್ಞಾನಿಯಾದ ಜಿಬ್ರಯೇಲ್. ಅಲ್ಲಿ ಅದೇ ವಾಕ್ಯದಲ್ಲಿ ಮೊದಲ ಮಾತಿಗು ಹಿಂದಿನ ಮಾತಿಗು ಯಾವ ಅನುಬಂಧವಾಗಲಿ, ಸಂದರ್ಭವಾಗಲಿ ಇಲ್ಲವೇ ಇಲ್ಲ. ಅಷ್ಟೇಯಲ್ಲದೆ ಅದೇ ಗ್ರಂಥದಲ್ಲಿ 2–117 ವಾಕ್ಯಕ್ಕು 32–4ನೆ ವಾಕ್ಯಕ್ಕು ಯಾವ ಸಂಬಂಧ ಇಲ್ಲದೆಯಿದ್ದು ಒಂದಕ್ಕೊಂದು ವಿರುದ್ಧ ಭಾವನೆಯನ್ನು ಪ್ರಕಟಿಸಿವೆ. ಈ ವಿಷಯ ಎರಡು ವಾಕ್ಯಗಳನ್ನು ಓದಿದ ಪ್ರತಿಯೊಬ್ಬರಿಗು ಅರ್ಥವಾಗುತ್ತದೆ. ಆದರೆ 32–4ರಲ್ಲಿ ಎಂತಹವರಿಗೂ ಕೂಡಾ ಅರ್ಥವಾಗದ ವಿಷಯ ಮತ್ತೊಂದು ಇದೆ. ಅದೇನೆಂದರೆ! ನಿಮಗೆ ಸಹಾಯ ಮಡುವವನು, ಸಿಫಾರಸನ್ನು ಮಾಡುವವನು ಆತನು ಹೊರತು ಯಾರೂ ಇಲ್ಲವೆಂದು ಹೇಳಿದ ನಂತರವಾದರೂ "ಆತನ ಹಿತಬೋಧನೆಯನ್ನು ನೀವು ಏಕೆ ಗ್ರಹಿಸಲಾರದೆ

ಇದ್ದೀರೆಂದು" ಹೇಳುವುದು ಅರ್ಥವಾಗದ ವಿಷಯ ಮತ್ತು ಆಶ್ಚರ್ಯಪಡಬೇಕಾದ ವಿಷಯವಾಗಿದೆ. 32–4ರಲ್ಲಿ ಆಕಾಶಗಳು ಮೊದಲುಗೊಂಡು ಭೂಮಿವರೆಗೂ ಸಮಸ್ತವನ್ನು ದೇವರು ಆರು ದಿನಗಳಲ್ಲಿ ಸೃಷ್ಟಿಸಿದ್ದಾನೆ, ನಂತರ ಏಳನೆ ದಿನದಲ್ಲಿ ಸಿಂಹಾಸನವನ್ನು ಅಧಿಷ್ಟಿಸಿದ್ದಾನೆ ಎಂದು ಅಂದುಕೊಳ್ಳುವುದು ತಪ್ಪಾಯೆಂದು ಅಂದುಕೊಂಡರೆ ಅದು ಆತನು ಹೇಳಿದ ವಿಷಯವೇ ಅಲ್ಲವೆ! ಅದರಲ್ಲಿ ತಪ್ಪಾಗಿ ಗ್ರಹಿಸಿಕೊಳ್ಳುವುದು ಏನಿರುತ್ತದೆ. ಒಂದುವೇಳೆ ನಮಗೆ ಸಹಾಯ ಮಾಡುವವರು ನಾನು ಹೊರತು ಯಾರೂ ಇಲ್ಲವೆಂದು ಹೇಳಿದ್ದಾರೆ. ವಾಸ್ತವವಾಗಿ ಆತನು ಯಾರೋ ನಮಗೆ ತಿಳಿಯದು. ನಮಗೆ ಕಾಣಿಸುವಂತೆ ತಿಳಿಯುವಂತೆ ಒಬ್ಬ ಮನುಷ್ಯನಿಗೆ ಅವನ ತಾಯಿತಂದೆಯೊ, ಅಣ್ಣತಮ್ಮಂದಿರೊ, ಕೊನೆಗೆ ಪ್ರಾಣಸ್ನೇಹಿತರೊ ಯಾರೊ ಒಬ್ಬರು ಯಾವಾಗಲೋ ಒಂದುಸಮಯದಲ್ಲಿ ಸಹಾಯವಾಗುತ್ತಿರುತ್ತಾರೆ ಅಲ್ಲವೆ! ಕಾಣಿಸುವವರನ್ನು ಬಿಟ್ಟು ಕಾಣಿಸದ ದೇವರನ್ನು ಸಹಾಯವಾಗಿದ್ದಾರೆಂದು ಹೇಗೆ ಹೇಳಬೇಕು. ಒಬ್ಬನಿಗೆ ಆಪತ್ತಿನಲ್ಲಿ ಆತನ ತಾಯಿ ಪೂರ್ತಿಯಾಗಿ ಸಹಾಯವಾಗಿ ಆ ಆಪತ್ತಿನಿಂದ ಹೊರಬೀಳುವಂತೆ ಮಾಡಿರುವುದು ತನ್ನ ತಾಯಿಯೆಂದು ತಿಳಿದರೂ, ಮೇಲಿನ ವಾಕ್ಯವನ್ನು ಅನುಸರಿಸಿ ದೇವರು ಹೊರತು ಯಾರೂ ಸಹಾಯ ಮಾಡಲಿಲ್ಲವೆಂದರೆ ಆತನು ಪೂರ್ತಿ ಅಸತ್ಯ ಹೇಳಿದಂತೆ ಆಗುತ್ತದೆ. ಆತನ ತಾಯಿಕೂಡಾ ಆ ವಿಷಯವನ್ನು ನೋಡಿ ತಾನು ಎಷ್ಟೊ ಸಹಾಯ ಮಾಡಿದಾಗ, ತನ್ನ ಮಗ ನಾನು ಸಹಾಯ ಮಾಡಲಿಲ್ಲವೆಂದು ಹೇಳುವುದು ಅನ್ಯಾಯ ಅಲ್ಲವಾ ಎಂದು ಕೇಳಬಹುದು. ನಾವು ಈ ವಾಕ್ಯವನ್ನು ಎಲ್ಲಿಯಾದರೂ ತಪ್ಪಾಗಿ ಅರ್ಥಮಾಡಿಕೊಂಡಿದ್ದೇವಾ ಎಂದು ಆಲೋಚಿಸುವುದಕ್ಕೆ ಅವಕಾಶ ಇಲ್ಲದಂತೆ, ನಿಮಗೆ ಈ ವಿಷಯವೇ ಅರ್ಥವಾಗಲಿಲ್ಲ ಅನ್ನುವಂತೆ **"ಆತನ ಹಿತಬೋಧನೆ ಯನ್ನು ನೀವು ಏಕೆ ಗ್ರಹಿಸಲಾರದೆ ಇದ್ದೀರಾ"** ಎಂದು ಜಿಬ್ರಯೇಲ್ ಹೇಳುವುದು ನಡೆದಿದೆ.

ಜಿಬ್ರಯೇಲ್ 32–4ರಲ್ಲಿ ಕೊನೆಯದಾಗಿ ಹೇಳಿದ ಮಾತಿನಿಂದ ಈ ವಾಕ್ಯಕ್ಕೆ ಪೂರ್ತಿ ವಿರುದ್ಧವಾಗಿರುವ 2–117ರಲ್ಲಿ ವಿಷಯವನ್ನು ನಾವು

ಗ್ರಹಿಸಲಾರದೆ ಹೋಗಿದ್ದೇವಾ! ಇಲ್ಲವೆ ಇಲ್ಲಿ 32-4 ರಲ್ಲಿರುವ ವಾಕ್ಯದಲ್ಲಿನ ವಿಷಯವನ್ನು ಗ್ರಹಿಸಲಾರದೆಹೋಗಿದ್ದೇವಾ! ಎಂದು ಸಂದಿಗ್ಧದಲ್ಲಿ ಬೀಳಬೇಕಾದ ಪರಿಸ್ಥಿತಿ ಏರ್ಪಟ್ಟಿದೆ. ಇವೆಲ್ಲಾ ನಮಗೆ ಚೆನ್ನಾಗಿ ಅರ್ಥವಾದಂತೆ ಇವೆಯಾದ್ದರಿಂದ ಖುರಾನ್‌ನಲ್ಲಿ ತಪ್ಪಾಗಿ ಬರೆದಿದ್ದಾರೆ ಎಂದು ಪ್ರಶ್ನೆ ಕೂಡಾ ಬರುತ್ತದೆ. ಇವುಗಳೆಲ್ಲವನ್ನು ಪರಿಶೀಲಿಸಿದರೆ 32-4 ರಲ್ಲಿಯೇ ಅಲ್ಲದೆ ಖುರಾನ್ ಗ್ರಂಥದಲ್ಲಿ ನಮಗೆ ಅರ್ಥವಾಗದ ವಿಷಯಗಳು ಎಲ್ಲಿಯಾದರೆ ಇವೆಯೋ ಅಲ್ಲಿಯೆಲ್ಲಾ ನಿವೇಕೆ ತಪ್ಪಾಗಿ ಅರ್ಥಮಾಡಿಕೊಂಡಿದ್ದಾರೆಂದು ಎಚ್ಚರಿಸುತ್ತಾ, ನೀವೇಕೆ ಸತ್ಯದಿಂದ ದೂರವಾಗಿ ಹೋಗುತ್ತಿದ್ದೀರೆಂದೊ, ಇಲ್ಲವೆ ನೀವೇಕೆ ಹಿತಬೋಧನೆಯನ್ನು ಗ್ರಹಿಸಲಾರದೆ ಇದ್ದೀರೆಂದೊ ಹೇಳುವುದು ನಡೆದಿದೆ. ಮನುಷ್ಯರು ಗ್ರಂಥದಲ್ಲಿನ ವಿಷಯವನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಮುಖ್ಯವಾದ ಸಮಾಚಾರವಿರುವ ಕಡೆಯೆಲ್ಲಾ ದೇವರು ಎಚ್ಚರಿಸಿದಂತೆ ಹೇಳುವುದು ನಡೆದಿದೆ. ಇಲ್ಲಿ 2-117ನೆ ವಾಕ್ಯಕ್ಕಿಂತ 32-4ನೆ ವಾಕ್ಯ ಹೆಚ್ಚು ಸಾರಾಂಶದಿಂದ ಕೂಡಿಕೊಂಡಿರುವುದಾಗಿದೆ. ಈ ವಾಕ್ಯವನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವುದಕ್ಕೆ ಕೂಡಾ ಅವಕಾಶ ಇದೆ. ಆದ್ದರಿಂದ ಜಿಬ್ರಯೇಲ್ ಮೂಲಕ ದೇವರೆ ಎಚ್ಚರಿಸುತ್ತಾ ಸರಿಯಾಗಿ ಅರ್ಥಮಾಡಿಕೊಳ್ಳಿರೆಂದು ಹೇಳಿದಂತೆ ಇದೆ. ಆದ್ದರಿಂದ ವಾಕ್ಯದಲ್ಲಿ ಏನು ಲೋಪವಿಲ್ಲ, ಇರುವ ಲೋಪವೆಲ್ಲಾ ನಮ್ಮಲ್ಲಿಯೇ ಎಂದು ತಿಳಿದುಹೋಗುತ್ತಿದೆ. ನಮ್ಮಲ್ಲಿ ಲೋಪವನ್ನು ಸರಿಮಾಡಿಕೊಂಡು 32-4 ವಾಕ್ಯವನ್ನು ಅರ್ಥಮಾಡಿ ಕೊಂಡರೆ 2-117ನೆ ವಾಕ್ಯಕ್ಕೆ ಇದರಲ್ಲಿ ವಿರುದ್ಧತೆ ಏನು ಇಲ್ಲವೆಂದು ತಿಳಿಯುತ್ತಿದೆ. ನಮಗೆ ಸಹಾಯ ಮಾಡುವವನು ಯಾರೊ ಸ್ಪಷ್ಟವಾಗಿ ತಿಳಿಯುತ್ತಿದೆ.

2-117ನೆ ವಾಕ್ಯದಲ್ಲಿ ಕಷ್ಟವಾದ ಪದಗಳು ಇಲ್ಲ, ಅರ್ಥವಾಗದಿರುವುದು ಏನುಯಿಲ್ಲ. ದೇವರ ಧರ್ಮದ ಪ್ರಕಾರ ಆತನು ಏನನ್ನು ಕಾರ್ಯವಾಗಿ ಮಾಡುವುದಿಲ್ಲ ಎಂದು ನಾವು ಭಗವದ್ಗೀತೆ ವಿಜ್ಞಾನಯೋಗದಲ್ಲಿ ಕೂಡಾ ಹೇಳಿಕೊಂಡಿದ್ದೇವೆ. ವಿಜ್ಞಾನಯೋಗದಲ್ಲಿ ಆರನೆ (6) ಶ್ಲೋಕದಲ್ಲಿಯೂ, ಹಾಗೆ ವಿಭೂತಿಯೋಗದಲ್ಲಿ ಆರನೆ ಶ್ಲೋಕದಲ್ಲಿಯೂ ಹೇಳಿದ ಭಾವನೆಯನ್ನೇ

ಜಿಬ್ರಯೇಲ್ ದೂತ ಖುರಾನ್ 2ನೆ ಸುರಾದಲ್ಲಿ 117ನೆ ಆಯತ್‌ನಲ್ಲಿ ಹೇಳಿದ್ದಾನೆ. ಈ ವಾಕ್ಯದಲ್ಲಿ ಎಂತಹ ಗೂಢಾರ್ಥವು ಇಲ್ಲ. ಎಲ್ಲರಿಗೂ ಅರ್ಥವಾಗುವಂತೆ ದೇವರು ಕೆಲಸ ಮಾಡುವವನು ಅಲ್ಲವೆಂದು ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಹೇಳಲ್ಪಟ್ಟಿದೆ. ಇನ್ನು ಖುರಾನ್ ಗ್ರಂಥದಲ್ಲಿ 32ನೆ ಸುರಾದಲ್ಲಿ 4ನೆ ಆಯತ್‌ನಲ್ಲಿ ಹೇಳಿದ ವಾಕ್ಯ ಮೂರು ಭಾಗಗಳಾಗಿ ಇದೆ. ಮೂರು ಭಾಗಗಳಾಗಿ ಇರುವುದಲ್ಲದೆ, ಮೂರು ಭಾಗಗಳ ವಾಕ್ಯಗಳು ಮೂರು ಗೂಢಾರ್ಥಗಳಿಂದ ಕೂಡಿಕೊಂಡಿವೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ನಿಪುಣರಾದವರಿಗೆ ಸಹಿತ ಸುಲಭವಾಗಿ ಅರ್ಥವಾಗದಷ್ಟು ಗೂಢಾರ್ಥವಾಗಿ ಇರುವುದರಿಂದ, ಆ ವಾಕ್ಯದಲ್ಲಿನ ಒಂದು ಭಾಗ ಕೂಡಾ ಯಾರಿಗೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಇಂತಹ ವಾಕ್ಯಗಳಿಂದ ಮುಂದಕ್ಕೆ ಹೋಗುತ್ತಾ ಹೋಗುತ್ತಾ ಕಗ್ಗಂಟು ಸಮಸ್ಯೆಗಳು ಬಂದು ಏನು ಅರ್ಥವಾಗದ ಸ್ಥಿತಿ ಏರ್ಪಡುತ್ತದೆಂದು ಗ್ರಹಿಸಿದ ಕೆಲವರು ಮುಸ್ಲಿಮ್ ಬೋಧಕರು, ಅಂತಹ ವಾಕ್ಯಗಳನ್ನು ಹೇಳಿಕೊಳ್ಳಬಾರದೆಂದು ನಿಯಮವನ್ನು ಇಟ್ಟುಕೊಂಡಿದ್ದಾರೆ. ಇಂತಹ ಸೂಕ್ಷ್ಮಜ್ಞಾನ ಇರುವ ವಾಕ್ಯಗಳು ಎಲ್ಲಿದ್ದರೂ ಅವುಗಳಿಗೆ **"ಮುತಷಭೀಹಾತ್"** ವಾಕ್ಯಗಳೆಂದು ಹೆಸರಿಟ್ಟು ಅವುಗಳನ್ನು ಬಿಟ್ಟುಹಾಕಿದ್ದಾರೆ. ವಾಸ್ತವವಾಗಿ ಅವು ಗೂಢಾರ್ಥವಿರುವ ವಾಕ್ಯಗಳೇ ಆಗಿರುವುದರಿಂದ, ಅವುಗಳ ವಿವರ ಮನುಷ್ಯರಿಗೆ ತಿಳಿಯದೆಂದು ದೇವರು ಕೂಡಾ ಹೇಳಿದ್ದಾನೆ. ಖುರ್‌ಆನ್ 3ನೆ ಸುರಾದಲ್ಲಿ 7ನೆ ಆಯತ್‌ನಲ್ಲಿ ಜಿಬ್ರಯೇಲ್ ದೂತ ಸೂಕ್ಷ್ಮಜ್ಞಾನ ಇರುವ ವಾಕ್ಯಗಳ ವಿವರ ದೇವರಿಗೆ ಹೊರೆತು ಯಾವ ಮನುಷ್ಯನಿಗೂ ತಿಳಿಯದೆಂದು ಹೇಳುವುದಲ್ಲದೆ ಅವುಗಳನ್ನು (ದೇವರೆ ವಿವರಿಸಿ ಹೇಳಿದಾಗ) ಬುದ್ಧಿ ಇರುವವರು ಗ್ರಹಿಸಿಕೊಳ್ಳುತ್ತಾರೆಂದು ಕೂಡಾ ಅದೇ ವಾಕ್ಯದಲ್ಲಿ ಹೇಳಿದ್ದಾನೆ. ಆದರೆ ದೇವರೊಂದರ ವಿಧಾನವನ್ನು ಪೂರ್ತಿಯಾಗಿ ತಿಳಿಯದ ಮುಸ್ಲಿಮ್‌ರಿಗೆ ದೇವರು ಹೇಗೆ ಬಂದು ಹೇಳುತ್ತಾನೊ ತಿಳಿಯದಿರುವುದರಿಂದ, ದೇವರು ಮನುಷ್ಯನಂತೆ ಅಲ್ಲದೆ ಭಗವಂತನಾಗಿ (ಅವಧೂತನಾಗಿ) ಬರುತ್ತಾನೆಂದು ತಿಳಿಯಲಾರದೆ ಹೋಗಿದ್ದಾರೆ. ಭವಿಷ್ಯತ್ತಿನಲ್ಲಿ ದೇವರು ದೂತನಾಗಿ ಬಂದು ಯಾವ ಮನುಷ್ಯನಿಗು ತಿಳಿಯದ ಖುರ್‌ಆನಲ್ಲಿನ ಜ್ಞಾನವನ್ನು ಹೇಳಿದರೂ

ಮುಸ್ಲಿಮ್‌ರು ಆತನು ಹೇಳಿದ ಜ್ಞಾನವನ್ನು ಕೇಳುವಂತ್ತಿಲ್ಲ. ಏಕೆ ನಂಬಲಾರ ದಿದ್ದಾರೆಂದರೇ ದೇವರು ಹೇಗೆ ಬಂದು ಹೇಳುತ್ತಾನೊ ಅವರಿಗೆ ತಿಳಿಯದು, ಆದ್ದರಿಂದ ಅವರು ನಂಬುವ ಸ್ಥಿತಿಯಲ್ಲಾಗಲಿ, ಕೇಳುವ ಸ್ಥಿತಿಯಲ್ಲಾಗಲಿ ಇಲ್ಲ. ಆದರೆ 3ನೆ ಸುರಾ 7ನೆ ಆಯತ್‌ನಲ್ಲಿ ಬುದ್ಧಿ ಶ್ರದ್ಧೆ ಇರುವವರು. ನನ್ನ ಬೋಧನೆಗಳನ್ನು ಗ್ರಹಿಸುತ್ತಾರೆ ಎಂದು ದೇವರಂದಂತೆ, ದೇವರು ಹೇಗೆ ಬಂದು ಹೇಳಿದರೂ ಆತನು ವಿವರಿಸಿದ ಜ್ಞಾನವನ್ನು ತಿಳಿದುಕೊಳ್ಳುವವರು ಎಲ್ಲಿಯಾದರೂ, ಯಾವ ಮತದಲ್ಲಾದರೂ ಇರಬಹುದು. ಯಾವ ಮತಸ್ಥನಾದರೂ ದೇವರು ತಿಳಿಸಿದ ವಿವರವನ್ನು ಗ್ರಹಿಸಿಕೊಳ್ಳಬಹುದು. ಆದರೆ ಇದು ಖುರ್‌ಆನ್ ಜ್ಞಾನವೆಂದು ಇತರ ಮತಸ್ಥನು ಕೂಡಾ ಅಸೂಯಪಡದೆ ತಿಳಿದುಕೊಳ್ಳುತ್ತಾನೆ. 3–7ರಲ್ಲಿರುವ ವಾಕ್ಯದಲ್ಲಿ ಬುದ್ಧಿಶ್ರದ್ಧೆ ಇರುವವನು ಗ್ರಹಿಸಿಕೊಳ್ಳುತ್ತಾನೆ ಎಂದು ಬರೆದಿರುವಾಗ. ಗ್ರಹಿಸಿಕೊಳ್ಳುವುದಕ್ಕೆ ಹೇಳುವವನು ಇರಬೇಕು ಅಲ್ಲವೆ! ಎಂಬ ಯೋಚನೆಯನ್ನು ಮುಸ್ಲಿಮ್‌ರು ಮರೆತುಹೋಗಿದ್ದಾರೆ. ಕೇಳುವವನು ಇದ್ದಾನೆ ಎಂದರೆ ಹೇಳುವವನು ಇರಬೇಕು ಅಲ್ಲವೆ! ಬೋಧಿಸುವವನು ಇದ್ದರೆ ಅವನು ಯಾರಾಗಿದ್ದರೂ ಕೇಳುವವನು ಗ್ರಹಿಸಿಕೊಳ್ಳ ಬಹುದು. ಮೊದಲಿಗೆ ಕೇಳುವುದೇ ಇಲ್ಲದಿದ್ದರೆ ಹೇಳುವವನು ಹೇಗೆ ತಿಳಿಯಲ್ಪಡುತ್ತಾನೆ? ಏಳನೆ ವಾಕ್ಯದಲ್ಲಿ ದೇವರಿಗೆ ಹೊರತು ಯಾವ ಮನುಷ್ಯನಿಗು ಅಸಲಾದ ಸೂಕ್ಷ್ಮಜ್ಞಾನ ತಿಳಿಯದು ಎಂದಿದ್ದಾನೆ ಆದರೆ ನಾನು ಹೇಳುವುದಿಲ್ಲ ಎಂದು ಹೇಳಿದ್ದಾನಾ? ಯಾರಿಗೂ ತಿಳಿಯದಿರುವುದು ಶ್ರದ್ಧೆ ಬುದ್ಧಿ ಇರುವವನಿಗೆ ತಿಳಿಯಬೇಕೆಂದರೆ ದೇವರು ಹೇಳಿದರೇನೆ ತಾನೆ ತಿಳಿಯುವುದು ಎಂದು ಊಹಿಸಲಾರದೆ ಹೋಗಿದ್ದಾರೆ. ಈ ವಿಷಯವನ್ನು ಕೆಲವರು ಮುಸ್ಮಿಮ್‌ರತ್ತಿರ ನಾವು ಕೇಳಿದರೆ ಅವರು ಹೀಗೆ ಅಂದಿದ್ದಾರೆ.

**ಮುಸ್ಲಿಮ್ :–** ಖುರ್‌ಆನ್ ಗ್ರಂಥದಲ್ಲಿ 42ನೆ ಸುರಾದಲ್ಲಿ 51ನೆ ಆಯತ್‌ನ್ನು ನೋಡಿರಿ. ಅಲ್ಲಿ **"ಅಲ್ಲಾಹ್ (ದೇವರು) ಯಾವ ಮಾನವನೊಂದಿಗೂ ಮುಖಾಮುಖಿ ಮಾತನಾಡುವುದಿಲ್ಲ"** ಎಂದು ಇದೆ ಅಲ್ಲವೆ! ಅಂತಹದರಲ್ಲಿ

ದೇವರು ಯಾವ ಮನುಷ್ಯರಿಗೂ ಕೂಡಾ ಹೇಳುವುದಿಲ್ಲವೆಂದಲ್ಲವೇ ಅರ್ಥ. ಈ ವಾಕ್ಯದಲ್ಲಿ ದೇವರೆ ಸ್ವತಃವಾಗಿ ನಾನು ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ ಅಂದಾಗ ನೀವು ಆತನ ಮಾತನ್ನು ಅಲ್ಲವೆಂದು ದೇವರು ನಾನು ಹೇಳುವುದಿಲ್ಲವೆಂದು ಹೇಳಿದ್ದಾನಾ? ಎಂದು ಕೇಳುತ್ತಿದ್ದೀರಿ. ನಾನು ಮಾತನಾಡುವುದಿಲ್ಲ ಎಂದರೆ ನಾನು ಹೇಳುವುದಿಲ್ಲ ಎಂದಲ್ಲವೇ ಅರ್ಥ, ಈ ಮಾತಿಗೆ ನಿವೇನು ಹೇಳುತ್ತೀರಾ.

**ನಾವು :–** "ನಾನು ಯಾರೊಂದಿಗೂ ನೇರವಾಗಿ ಮಾತನಾಡುವುದಿಲ್ಲ", ಇಲ್ಲವೆ "ನಾನು ಸ್ವತಃವಾಗಿ ಯಾರೊಂದಿಗೂ ಮಾತನಾಡುವುದಿಲ್ಲ" ಎಂದು 42–51ರಲ್ಲಿ ಹೇಳಿದ ವಾಕ್ಯವನ್ನು ನಾನು ದೇವರ ವಾಕ್ಯವಾಗಿ ಒಪ್ಪಿಕೊಳ್ಳುತ್ತಿದ್ದೇನೆ. ಆದರೆ ಇಲ್ಲಿ ಕೂಡಾ ಆತನು ಹೇಳಿದ ಸೂಕ್ಷ್ಮಜ್ಞಾನ ನಿಮಗೆ ಅರ್ಥವಾಗಲಿಲ್ಲ ವೆಂದು ಹೇಳುತ್ತಿದ್ದೇನೆ. ನಾನು ಸ್ವತಃವಾಗಿ ಮಾತನಾಡುವುದಿಲ್ಲ ಎಂದಿದ್ದಾನಾಗಲಿ ಪರೋಕ್ಷವಾಗಿ ಹೇಳುವುದಿಲ್ಲ ಎಂದಿದ್ದಾನಾ, ನಾನು ನಾನಲ್ಲದೆ ಬೇರೆಯಾಗಿದ್ದು ಹೇಳುವುದಿಲ್ಲಾ ಎಂದಿದ್ದಾನಾ? ಅದೇ ವಾಕ್ಯದಲ್ಲಿಯೇ ಆತನು ತನ್ನ ಜ್ಞಾನವನ್ನು ಮೂರು ವಿಧಗಳಾಗಿ ಮನುಷ್ಯರಿಗೆ ತಿಳಿಸುತ್ತೇನೆಂದು ಹೇಳಿದ್ದಾನೆ ಅಲ್ಲವೆ! ಅದರಲ್ಲಿ ಒಂದು ವಾಣಿ (ವಹಿ) ಮೂಲಕ ಎಂದು ಹೇಳಿದ್ದಾನೆ. ಎರಡು ತೆರೆಹಿಂದಿನಿಂದ ಹೇಳಿದ್ದಾನೆ. ಮೂರು ದೂತನನ್ನು ಕಳಿಸುವುದರ ಮೂಲಕ ಎಂದು ಕೂಡಾ ಹೇಳಿದ್ದಾನೆ. ಇಲ್ಲಿ ಹೇಳಿದ ಈ ವಾಕ್ಯದಲ್ಲಿ ಮೂರನೆ ಪದ್ಧತಿಯಾದ ದೂತನು ಕಳಿಸುವುದು ಇದೆ ಅಲ್ಲವೆ! ದೇವರಹತ್ತಿರದಿಂದ ಬಂದಿರುವ ದೂತ ಹೇಗೆ ಬಂದರೂ, ಯಾವಾಗ ಬಂದರೂ ಮನುಷ್ಯನಾಗಿಯೇ ಬರುತ್ತಾನೆ ಅಲ್ಲವೆ! ಮನುಷ್ಯನಾಗಿ ಬಂದವನು ಆತನ ಜ್ಞಾನ ಹೇಳುವವ ನಾಗಿರುತ್ತಾನೆ ಅಲ್ಲವೆ! ಅಂತಹದರಲ್ಲಿ ಮನುಷ್ಯ ಹೇಳಿರುವುದನ್ನು ಕೇಳಿ ಮನುಷ್ಯರು ಗ್ರಹಿಸಿಕೊಳ್ಳಬೇಕಾಗಿದ್ದೇ ಅಲ್ಲವೆ! ಆಗ ದೇವರು ಮನುಷ್ಯನ ಮೂಲಕ ಪರೋಕ್ಷವಾಗಿ ತನ್ನ ಜ್ಞಾನವನ್ನು ಮನುಷ್ಯರಿಗೆ ತಿಳಿಸಿದಂತೆಯೆ ಅಲ್ಲವೆ! ಈ ವಿಧಾನವನ್ನು ಯಾರೂ ಅಲ್ಲವೆಂಬುದಕ್ಕೆ ಸಾಧ್ಯವಿಲ್ಲ ಅಲ್ಲವೆ! ಯಾರಾದರೂ ಮನುಷ್ಯ ಹೇಳಿದ ಜ್ಞಾನವನ್ನು ನಾನು ಒಪ್ಪಿಕೊಳ್ಳುವುದಿಲ್ಲ ಎಂದರೆ, ಆ ಮಾತು

ಖುರ್‌ಆನ್ ಗ್ರಂಥದಲ್ಲಿನ 42ನೆ ಸುರಾ 51 ಆಯತ್ ಅನ್ನು ಒಪ್ಪಿಕೊಳ್ಳುವುದಿಲ್ಲ ಎನ್ನುವಂತಾಗುತ್ತದೆ. ಆದ್ದರಿಂದ ಮನುಷ್ಯರೆಲ್ಲರೂ ಹೇಳುವ ಜ್ಞಾನವನ್ನು ಕೇಳಿರೆಂದು ಹೇಳುತ್ತಿಲ್ಲ. ದೇವರು ಮನುಷ್ಯನಾಗಿ ಕಳುಹಿಸಿದ ಅವನ ಜ್ಞಾನವನ್ನು ಕೇಳಿ ದೇವರು ಹೇಳಿದ ಗೂಢಾರ್ಥಗಳಿರುವ ವಿವರವನ್ನು ತಿಳಿದುಕೊಳ್ಳಿರೆಂದು ಹೇಳುತ್ತಿದ್ದೇನೆ.

**ಮುಸ್ಲಿಮ್ :–** ದೇವರು ತನ್ನ ದೂತನನ್ನು ಮನುಷ್ಯನಾಗಿ ಕಳಿಸುತ್ತೇನೆಂದು ಹೇಳಿದ್ದಾನೆ ಆದರೆ, ಬಂದಿರುವ ದೂತ ಜಿಬ್ರಯೇಲ್ ಎಂದು ತಿಳಿದುಹೋಗಿದೆ ಅಲ್ಲವೆ! ಆತನು ಮನುಷ್ಯನಲ್ಲ ಅಲ್ಲವೆ! ದೇವದೂತ ಅಲ್ಲವೆ! ಅಂತಹದರಲ್ಲಿ ಮನುಷ್ಯನನ್ನು ದೂತಯೆಂದು ಏಕೆ ನಂಬಬೇಕು?

**ನಾವು :–** ದೇವರು ತನ್ನ ಜ್ಞಾನವನ್ನು ಮೂರು ವಿಧಗಳಲ್ಲಿ ಭೂಮಿಮೇಲೆ ಮನುಷ್ಯರಿಗೆ ಬೋಧಿಸುತ್ತೇನೆಂದು ಅಥವಾ ತಿಳಿಸುತ್ತೇನೆಂದು, ಖುರ್‌ಆನ್ ಗ್ರಂಥದಲ್ಲಿ 42ನೆ ಸುರಾ 51ನೆ ಆಯತ್‌ನಲ್ಲಿ ಹೇಳಿದ್ದಾನೆಂದು ನಾನಾಗಲಿ, ನೀವಾಗಲಿ ಎಲ್ಲರೂ ಒಪ್ಪಿಕೊಳ್ಳುತ್ತಿದ್ದೇವೆ. ದೇವರು ಹೇಳಿದ ಮೂರು ವಿಧಾನಗಳಲ್ಲಿ ಮೂರನೆ ವಿಧಾನದಲ್ಲಿ "ಒಬ್ಬ ದೂತನನ್ನು ಕಳುಹಿಸುವುದರ ಮೂಲಕ" ಎಂದು ಅಂದಿದ್ದಾನೆ. ದೂತ ಎನ್ನುತ್ತಲೇ ಎಲ್ಲರಿಗೂ ದೇವತದೂತನಾದ ಜಿಬ್ರಯೇಲ್ ಜ್ಞಾಪಕ ಬರುತ್ತಾನೆ. ಸರೇ ನಿಮ್ಮ ಮಾತಿನ ಪ್ರಕಾರವೇ ದೂತ ಅನ್ನುತ್ತಲೇ ಜಿಬ್ರಯೇಲ್ ಎಂದು ಅಂದುಕೊಳ್ಳುವುದಕ್ಕೆ ಕೆಲವು ಪ್ರಶ್ನೆಗಳು ಅಡ್ಡಬರುತ್ತಿವೆ. ನನಗೆ ಬಂದಿರುವ ಪ್ರಶ್ನೆಗಳನ್ನು ಕೇಳುತ್ತೇನೆ ಉತ್ತರವನ್ನು ಹೇಳಿರಿ. ಜಿಬ್ರಯೇಲ್‌ನನ್ನು ದೇವದೂತ ಎಂದು ನಾವು ಕರೆದರೂ, ಆತನು ದೇವರು ಕಳಿಸಿದರೆ ಬಂದವನಾ? ಇಲ್ಲವೆ ಮೊದಲಿನಿಂದ ಇಲ್ಲಿಯೇ ಇರುವವನಾ? ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ರೂಪದಿಂದ ಕಾಣಿಸುತ್ತಾ ಮಾತನಾಡಿದ್ದಾನಾ? ಇಲ್ಲವೆ ಆಕಾರ ಇಲ್ಲದಂತೆ ಮಾತನಾಡಿದ್ದಾನಾ? ನಾನು ದೇವರ ಹತ್ತಿರದಿಂದ ಬಂದಿರುವ ದೂತನೆಂದಾಗಲಿ, ದೇವರು ಕಳಿಸಿದರೆಬಂದ ದೂತನೆಂದಾಗಲಿ ಹೇಳಿದ್ದಾನಾ? ಇವುಗಳಿಗೆ ತಿಳಿದ ಸಮಾಚಾರವನ್ನು ಹೇಳಿರಿ.

**ಮುಸ್ಲಿಮ್ :–** ಜಿಬ್ರಯೇಲ್ ದೇವದೂತಯೆಂದು ನಮಗೆ ತಿಳಿದಿದೆಯಾಗಲಿ, ಆತನು ಆಗ ದೇವರು ಕಳಿಸಿದಾಗ ಬಂದವನೆಂದೇ ನಂಬುತ್ತಿದ್ದೇವೆ. ಅಷ್ಟೇಯಾಗಲಿ ಆತನು ಮೊದಲಿನಿಂದ ಇಲ್ಲಿಯೇ ಇದ್ದಾನೆಂಬ ವಿಷಯ ನಮಗೆ ತಿಳಿಯದು. ಜಿಬ್ರಯೇಲ್ ದೂತ ಪ್ರವಕ್ತರಿಗೆ ಕಾಣಿಸಿಯೆ ಮಾತನಾಡಿದ್ದಾನೆ ಎಂದು ಅಂದುಕೊಳ್ಳುತ್ತಿದ್ದೇವೆ. ಜಿಬ್ರಯೇಲ್ ದೇವರ ದೂತ ಎಂದು ತಿಳಿದಿದೆ ಅಷ್ಟೇಯಾಗಲಿ, ಆತನು ನಾನು ದೇವರು ಕಳುಹಿಸಿದರೆ ಬಂದಿರುವ ದೂತನೆಂದು ಎಲ್ಲೂ ಪ್ರತ್ಯೇಕವಾಗಿ ಹೇಳಿದಂತಿಲ್ಲ.

**ನಾವು :–** ಸರೇ ನಾನು ಕೇಳಿದ ಮೂರು ಪ್ರಶ್ನೆಗಳಿಗೆ ನೀವು ನಿಮಗೆ ತಿಳಿದ ಉತ್ತರವನ್ನು ಹೇಳಿದ್ದೀರಾ. ಅದಕ್ಕೆ ಸಂತೋಷ. ಏಕೆಂದರೆ ಮುಸ್ಲಿಮ್‌ರಲ್ಲಿ ಈ ದಿನ ಜಿಬ್ರಯೇಲ್‌ನನ್ನು ಕುರಿತು ನಮಗೆ ತಿಳಿದಷ್ಟು ಕೂಡಾ ಬಹಳಜನರಿಗೆ ತಿಳಿಯದು. ಕೆಲವರಿಗೆ ಜಿಬ್ರಯೇಲ್ ಎಂದರೆ ಯಾರೊ ಕೂಡಾ ತಿಳಿಯದು. ಅವರಿಗೆ ಮುಹಮ್ಮದ್ ಪ್ರವಕ್ತರು ಮಾತ್ರ ತಿಳಿದಿದೆ. ಪ್ರವಕ್ತರೇ ಖುರಾನ್ ಹೇಳಿದ್ದಾರೆಂದು ಮಾತ್ರ ಅವರಿಗೆ ತಿಳಿದಿದೆ. ಖುರ್‌ಆನ್‌ನಲ್ಲಿನ ವಿಷಯಗಳು ಕೂಡ ಸರಿಯಾಗಿ ಅವರಿಗೆ ತಿಳಿಯದು. ಇಂತಹ ಸಮಯದಲ್ಲಿ ನೀವು ಉಳಿದವರಿಗಿಂತ ಸ್ವಲ್ಪ ಹೆಚ್ಚಾಗಿ ತಿಳಿದವರಾಗಿರುವುದಕ್ಕೆ ನಮಗೆ ಸಂತೋಷ. ಈಗ ನೀವು ಹೇಳಿದ ಉತ್ತರಗಳಲ್ಲಿ ಮೊದಲ ಉತ್ತರಕ್ಕೆ ನಮ್ಮ ಮಾತು ಏನೆಂದರೆ! ನೀವು ಜಿಬ್ರಯೇಲ್ ದೇವರು ಕಳುಹಿಸಿದರೆ ಬಂದವರೆಂದು ನಂಬುತ್ತಿದ್ದೇವೆ ಎಂದಿದ್ದೀರಿ ಆದರೆ ಸತ್ಯವೇನೆಂದರೆ! ಜಿಬ್ರಯೇಲ್ ಸೃಷ್ಠಿ ಆದಿಯಲ್ಲಿಯೇ ಭೂಮಿಮೇಲೆ ದೇವರಿಂದ ಸೃಷ್ಟಿಸಲ್ಪಟ್ಟು ದೇವರ ಪಾಲನೆಯಲ್ಲಿ ಭಾಗದಲ್ಲಿ ಒಂದು ಗ್ರಹವಾಗಿದ್ದಾನೆ. ಎರಡನೆ ಪ್ರಶ್ನೆಗೆ ಉತ್ತರವಾಗಿ ಜಿಬ್ರಯೇಲ್ ಪ್ರವಕ್ತರಿಗೆ ಕಾಣಿಸಿ ಮಾತನಾಡಿದ್ದಾನೆಂದು ಅಂದುಕೊಳ್ಳುತ್ತೇವೆ ಎಂದಿದ್ದಾರೆ. ಅದಕ್ಕೆ ನನ್ನ ಮಾತು ಹೀಗಿದೆ. ಜಿಬ್ರಯೇಲ್ ಮುಹಮ್ಮದ್ ಪ್ರವಕ್ತನಿಗೆ ಕಾಣಿಸದಂತೆ ಮಾತನಾಡಿದ್ದಾರೆ. ಆದ್ದರಿಂದ ಮುಹಮ್ಮದ್ ಪ್ರವಕ್ತರು ಮೊದಲು ಬಯಪಟ್ಟಿದ್ದಾನೆ. ಮೊದಲನೆದಿನ ಆತನು ಬಯಪಟ್ಟಿರುವುದಕ್ಕೆ ಪ್ರವಕ್ತರಿಗೆ ಚಳಿ ಜ್ವರ ಕೂಡಾ

ಬಂದಿದೆ. ಇನ್ನೂ ಮೂರನೆ ಪ್ರಶ್ನೆಗೆ ಉತ್ತರವಾಗಿ ಜಿಬ್ರಯೇಲ್ ದೇವರ ದೂತ ಎಂದು ತಿಳಿದಿದೆಯಾಗಲಿ ದೇವರು ಕಳಿಸಿದರೆ ಬಂದವನೆಂದು ಎಲ್ಲಿಯೂ ಓದಲಿಲ್ಲವೆಂದು ಹೇಳಿದ್ದೀರಿ. ನಿಮಗೆ ತಿಳಿದಿರುವುದು ನೀವು ಹೇಳಿದ್ದೀರಾ. ಆದರೆ ಅದಕ್ಕೆ ನಾನೇನು ಹೇಳುತ್ತೇನೆಂದರೆ! ಜಿಬ್ರಯೇಲ್‌ನನ್ನು ದೇವರ ದೂತ ಎಂದು ಹೇಳುವುದರಲ್ಲಿ ತಪ್ಪಿಲ್ಲ ಆದರೆ, ಆತನು ದೇವರು ಕಳಿಸಿದರೆ ಬಂದವನಲ್ಲ. ದೇವರ ವಿಷಯಗಳನ್ನು ಹೇಳುವವರನ್ನು ದೂತ ಎಂದಾಗಲಿ, ದೇವದೂತ ಎಂದಾಗಲಿ ಅನ್ನುವುದರಲ್ಲಿ ತಪ್ಪಿಲ್ಲ. ಆದರೆ ದೇವರು ಪ್ರತ್ಯೇಕವಾಗಿ ತನ್ನ ಜ್ಞಾನವನ್ನು ಹೇಳುವುದಕ್ಕೋಸ್ಕರ ಕಳಿಸಿದವನು ನಿಜವಾದ ದೇವದೂತನಾಗುತ್ತಾನೆ. ಪ್ರವಕ್ತ ಎಂದು ದೇವರ ಜ್ಞಾನವನ್ನು ಹೇಳುವವರನ್ನು ಅನ್ನಬಹುದು. ಆದರೆ ಆಗ ಕಳಿಸಲ್ಪಟ್ಟವನು ದೂತನಾಗುತ್ತಾನೆ. ಉಳಿದವನು ಪ್ರವಕ್ತ ಆಗುತ್ತಾನೆ.

**ಮುಸ್ಲಿಮ್‌ರು :–** ಹೇಗಾದರೇನು ಜಿಬ್ರಯೇಲ್ ದೇವದೂತ ಎಂದು ನೀವು ಕೂಡಾ ಹೇಳುತ್ತೀದ್ದೀರಾ ಅಲ್ಲವೆ! ಆತನು ಅಲ್ಲಾಹ್ ಜ್ಞಾನವನ್ನೇ ಹೇಳಿದ್ದಾನೆಅಲ್ಲವೆ! **ನಾನು :–** ಜಿಬ್ರಯೇಲ್‌ರನ್ನು ದೂತ ಎನ್ನುವುದರಲ್ಲಿ ತಪ್ಪಿಲ್ಲ. ಆತನು ದೇವರ ಜ್ಞಾನವನ್ನೇ ಹೇಳಿದ್ದಾನೆ ಅನ್ನುವುದರಲ್ಲಿ ತಪ್ಪಿಲ್ಲ. ಆತನು ಕಾಣಿಸಿ ಹೇಳಿದ್ದಾನೆಂದರೆ ತಪ್ಪಾಗುತ್ತದೆ. ದೇವರು ತನ್ನ ಬೋಧನೆಯನ್ನು ಮೂರು ವಿಧಗಳು ಭೂಮಿಮೇಲೆ ಬೋಧಿಸುತ್ತೇನೆ ಎಂದಿದ್ದಾನೆ ಅಲ್ಲವೆ! ಅದರಲ್ಲಿ ಎರಡನೆ ವಿಧಾನದಲ್ಲಿ "ತೆರೆ ಮರೆಯಿಂದ" ಎಂದು ಇದೆ ಅಲ್ಲವೆ! ಆ ಎರಡನೆ ವಿಧಾನದ ಪ್ರಕಾರ ಜಿಬ್ರಯೇಲ್‌ರು ಯಾರಿಗೂ ಕಾಣಿಸದಂತೆ ತೆರೆಮರೆಯಿಂದ ಬೋಧಿಸಿದ್ದಾನೆ. ಇದ್ದು ಕಾಣಿಸದಂತೆ ಹೋಗುವುದನ್ನು ತೆರೆ ಹಿಂದಿನಿಂದ ಎಂದು ಅನ್ನುವುದು ನಡೆದಿದೆ. ಜಿಬ್ರಯೇಲ್ ದೂತ ಎರಡನೆ ವಿಧಾನದ ಪ್ರಕಾರ ದೇವರ ಜ್ಞಾನವನ್ನು ಹೇಳಿದ್ದಾನೆ. ಇನ್ನು ಮೂರನೆ ವಿಧಾನದ ಪ್ರಕಾರ ಕಾಣಿಸಿ ಬೋಧಿಸುವವನು, ದೇವರಿಂದ ಕಳಿಸಲ್ಪಟ್ಟವನು ಎಂದು ತಿಳಿದುಹೋಗಿದೆ. ಹಾಗಾದರೂ ಕಾಣಿಸಿ ಬೋಧಿಸುವವನು ಮನುಷ್ಯನಾಗಿ ಬರುತ್ತಾನೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ.

**ಮುಸ್ಲಿಮ್ :–** 32 ಸುರಾ, 4ನೆ ಆಯತ್‌ನಲ್ಲಿನ ವಾಕ್ಯದಲ್ಲಿ ಮೂರನೆ ಭಾಗವು ನಾವು ಸರಿಯಾಗಿ ಗ್ರಹಿಸಲಾರದೆಹೋಗಿದ್ದೇವೆ ಎನ್ನುವುದು ಅರ್ಥವಾಗಿದೆ. ಆದ್ದರಿಂದ ಖುರ್‌ಆನ್ ಮಾತು ಸತ್ಯವಾಗಿ ನಿರೂಪಿಸಲ್ಪಟ್ಟಿದೆ. ಆದರೆ ಎರಡನೆ ಭಾಗದಲ್ಲಿನ ದೇವರು ಹೊರತು ನಿಮಗೆ ಸಹಾಯ ಮಾಡುವವನಾಗಲಿ, ಸಿಫಾರಸ್ ಮಾಡುವವನಾಗಲಿ ಇಲ್ಲವೆಂದು ಹೇಳುವುದಾಗಿದೆ. ನಮಗೆ ದೇವರು (ಆತನು) ಯಾರೊ ತಿಳಿಯದು ಆತನು ನಮಗೆ ಸಹಾಯ ಹೇಗೆ ಮಾಡುತ್ತಿದ್ದಾನೆ. ನಾನು ಹೊರತು ಎಂದು ಗಟ್ಟಿಯಾಗಿ ಹೇಳಿದ್ದಾನೆ ಅಲ್ಲವೆ! ಇದು ನಮಗೆ ಅರ್ಥವಾಗಲಿಲ್ಲ, ನೀವೇ ಇದರ ಬಗ್ಗೆ ಹೇಳಿರಿ.

**ನಾವು :–** ಅಯ್ಯಾ ನೀವು ಮುಸ್ಲಿಮ್‌ರು, ನಾನು ಹಿಂದೂವು ಖುರ್‌ಆನ್ ವಿಷಯ ನನಗಿಂತ ನಿಮಗೇ ಚೆನ್ನಾಗಿ ತಿಳಿದಿರಬೇಕು. ಅಂತಹದ್ದು ನೀವು ಕೇಳುವುದು ನಾವು ಹೇಳುವುದು ಚೆನ್ನಾಗಿರುವುದಿಲ್ಲ. ನಾನು ಕೂಡಾ ಪೂರ್ತಿ ತಿಳಿದವನಲ್ಲ. ಒಂದುವೇಳೆ ನಾನು ಈಗ ಹೇಳಿದರೂ, ನಾನು ಹೇಳಿದ ಜ್ಞಾನ ಸತ್ಯ ವಾಗಬಹುದು ಇಲ್ಲವೆ ಅಸತ್ಯವಾಗಬಹುದು. ನಾನು ಹೇಳುವುದು ಸತ್ಯವೆಂದು ನಾನು ಹೇಳುತ್ತಿಲ್ಲ. ಆದ್ದರಿಂದ ನಾನು ಹೇಳಿದ ಜ್ಞಾನ ಸತ್ಯವಾದರೆ ಅದನ್ನು ನೀವು ಸ್ವೀಕರಿಸಿರಿ ಇಲ್ಲದಿದ್ದರೆ ಬಿಟ್ಟುಬಿಡಿ. ನೀನು ಹುಟ್ಟಿದಾಗ ನಿನಗೆ ಜೊತೆಯಾಗಿ ಯಾರೂ ಬರಲಿಲ್ಲ. ಹಾಗೆಯೇ ಮರಣಿಸುವಾಗ ಕೂಡಾ ನೀನು ಒಬ್ಬನೇ ಹೋಗಬೇಕಾಗಿರುತ್ತದೆ. ಆಗಲು ಕೂಡಾ ಹೊರಗಿನ ಪ್ರಪಂಚದಲ್ಲಿನ ನಿನ್ನನ್ನು ಪ್ರೀತಿಸುವವರು ಯಾರೂ ನಿನ್ನಹಿಂದೆ ಬರುವುದಿಲ್ಲ. ಇದರಿಂದ ಹೊರಗಿನ ಪ್ರಪಂಚದಲ್ಲಿನ ಮನುಷ್ಯರು ಯಾರು ನಿನಗೆ ಸಂಬಂಧ ಇಲ್ಲವೆಂದು ತಿಳಿಯುತ್ತಿದೆ. ಹೊರಗಿನ ಸಂಬಂಧ ತಾತ್ಕಾಲಿಕವಾದುದೆಯಾಗಲಿ ಶಾಶ್ವತವಾದುದಲ್ಲ. ನಿನಗೆ ಒಂದು ರೋಗ ಬಂದು ಬಾಧೆ ಪಡುತ್ತಿದ್ದರೆ ನಿನ್ನ ಪಕ್ಕದಲ್ಲಿರುವವರು ನಿನ್ನ ಬಾಧೆಯನ್ನು ಸ್ವಲ್ಪವಾದರೂ ತೆಗೆದುಕೊಂಡು ನಿನಗೆ ಸಹಕರಿಸಲಾರರು. ಸಹಾಯ ಹೊರಗೆ ಮಾಡುವುದು ಅಲ್ಲ. ಹೊರಗೆ ಇತರರು ಮಾಡುವ ಸಹಾಯ ಜೀವಿಗೆ ಸಂಬಂಧಪಡುವುದಿಲ್ಲ. ಜೀವಿಯ ವ್ಯಥೆಯನ್ನು ತೀರಿಸಲಾರದು. ಜೀವಿಯ

ನೋವನ್ನು ತೀರಿಸುವ ಸಹಕಾರ ಹೊರಗಿನ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ. ತಾಯಿ, ತಂದೆ, ಅಣ್ಣತಮ್ಮಂದಿರು, ಅಕ್ಕತಂಗಿಯರು ಯಾರಾದರಾಗಲಿ ನಿನಗೆ ಹಣಕೊಟ್ಟು ಆಪತ್ತಿನ ಸಮಯದಲ್ಲಿ ಸಹಾಯವಾದರೆ ಅದು ಆದರಣೆ ಆಗುತ್ತದೆ. ನಿನ್ನನ್ನು ತಾಯಿಯಾಗಲಿ, ತಂದೆಯಾಗಲಿ, ಅಣ್ಣನಾಗಲಿ, ತಮ್ಮನಾಗಲಿ ಯಾರಾದರೂ ಆದರಿಸಬಹುದು. ಆದರೆ ಸಹಾಯ ಮಾಡಲಾರರು. ಈಗ ನಿಮಗೆ ಒಂದು ಪ್ರಶ್ನೆಬಂದು ಅದನ್ನು ಕೇಳಬಹುದು. ಅದೇನೆಂದರೆ! ಬಾಲವನ್ನು ಮುದುರಿ ಊಸರವಳ್ಳಿ ಆದಂತೆ, ನೀವು ಜ್ಞಾನವನ್ನು ಮಾತನಾಡುವುದರಲ್ಲಿ ಮುದುರಿಹೋಗಿ ಪದಗಳಿಗೆ ಭಾವನೆಯನ್ನೆ ಬದಲಾಯಿಸಿ ಹೇಳುತ್ತಿದ್ದೀರೆ ಎಂದು ಕೇಳಬಹುದು. ಒಬ್ಬನಿಗೆ ಹಣಕೊಟ್ಟು ಅವನಿಗೆ ಉಪಯೋಗಪಟ್ಟರೆ ಅದು ಸಹಾಯ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಆಪತ್ತಿನಲ್ಲಿರುವವನಿಗೆ ಹಣ ಕೊಟ್ಟರೂ, ಬಾಕೀ ಇರುವವನಿಗೆ ಹಣಕೊಟ್ಟರೂ ಅವನನ್ನು ಆಧರಿಸಿದಂತಾಗುತ್ತದೆ. ಆಪತ್ತಿನಲ್ಲಿಯೇ ಯಾರಾದರೂ ಹೊರಗಿನವರು ಆದರಿಸುವುದಾಗಲಿ, ಸಹಾಯವಾಗುವುದಾಗಲಿ, ಸಹಕರಿಸುವುದಾಗಲಿ ನಡೆಯುವುದಿಲ್ಲ. ಸಹಾಯ ಎಂದರೂ ಸಹಕಾರ ಎಂದರೂ ಅದಕ್ಕೆ ನಾವು ಹೋಲಿಸಿಕೊಂಡ ಅರ್ಥ ಇಲ್ಲ, ಅಲ್ಲ. ದೇವರ ಲೆಕ್ಕದಲ್ಲಿ ಅರ್ಥ ಬೇರೆಯಿದೆ. ಆಲೋಚಿಸಿದರೆ ನಾವು ಕೂಡಾ ಅದರ ಅರ್ಥದಲ್ಲಿ ಅಪಾರ್ಥ ಮಾಡಿಕೊಂಡಿದ್ದೇವೆಂದು ತಿಳಿಯಬಲ್ಲದು. ಖುರಾನ್ ವಾಕ್ಯದಲ್ಲಿ **"ನಿಮಗೆ ಆತನು ಹೊರತು ಸಹಾಯ ಮಾಡುವವರು ಯಾರೂ ಇಲ್ಲ"** ಎಂದು ಹೇಳಿದ ನಂತರ **"ಆತನ ಹಿತಬೋಧನೆಯನ್ನು ಏಕೆ ಗ್ರಹಿಸಲಾರದಿದ್ದಾರೆಂದು"** ಹೇಳುವುದು ನಡೆದಿದೆ. ಹಾಗೆ ಹೇಳುವುದರಿಂದ ಸಹಾಯ ಎಂಬುದನ್ನು ನೀವು ಏಕೆ ಅರ್ಥ ಮಾಡಿಕೊಳ್ಳದಂತಿದ್ದೀರಾ ಅನ್ನುವಂತಿದೆ. ಆತನ ಹಿತಬೋಧನೆಯನ್ನು ಗ್ರಹಿಸಿದರೆ ಆತನ ಸಹಾಯ ತಿಳಿದುಹೋಗುತ್ತದೆ. ಈಗ ದೇವರ ಹಿತದ ಪ್ರಕಾರ ಸಹಾಯಕ್ಕೆ ವಾಸ್ತವ ಅರ್ಥವನ್ನು ತಿಳಿದುಕೊಳ್ಳೋಣ.

ಬದುಕಿದ ಮನುಷ್ಯನನ್ನು ಆತ್ಮಪರವಾಗಿ ವಿಭಜಿಸಿನೋಡಿದರೆ ಪ್ರಕೃತಿಯಿಂದ ತಯಾರಾದ ಶರೀರವು ಆತ್ಮಕ್ಕೆ ಪರವಾಗಿದೆಯೆಂದು ಹೇಳಬಹುದು.

ಶರೀರ ಮಿನಃ ಮನುಷ್ಯನಲ್ಲಿ ಹೇಳಿಕೊಳ್ಳುವಂತಹದ್ದು ಜೀವಾತ್ಮವೂ, ಅದಕ್ಕೆ ಜೊತೆಯಾಗಿ ಆತ್ಮವು ಇದೆ. ಮೂರನೆಯದು ಪರಮಾತ್ಮ ಎಂಬುದು ಸಾಧಾರಣವಾಗಿ ಇರುವುದು. ಅದು ಬದುಕಿದ ಶರೀರದಲ್ಲಿ ಅಲ್ಲದೆ ಮರಣಿಸಿದ ಶರೀರದಲ್ಲಿ ಕೂಡ ಇದೆ. ಅಷ್ಟೇಯಲ್ಲದೆ ಶರೀರದಲ್ಲಿಯೇ ಅಲ್ಲದೆ ಶರೀರದ ಹೊರಗೆ ಕೂಡಾ ಇದೆ. ಆದ್ದರಿಂದ ಬದುಕಿದ ಶರೀರ ಅಂದಾಗ ಶರೀರಕ್ಕಿಂತ ಬೇರೆಯಾಗಿ, ಆತ್ಮ ಮತ್ತು ಜೀವಾತ್ಮ ಇದೆಯೆಂದು ಹೇಳಬಹುದು. ಆತ್ಮ ಜೀವಾತ್ಮಗಳಿಗೆ ಜೋಡಿ ಆತ್ಮಗಳೆಂದು ಬಿಡಿಸಲಾರದ ಬಂಧವೆಂದು ಹೇಳಲ್ಪಡುತ್ತಿವೆ. ಜೀವಾತ್ಮ ಎಲ್ಲಿ ಇರುತ್ತದೊ ಅಲ್ಲಿ ಆತ್ಮ ತಪ್ಪದೆ ಇರಬೇಕಾಗಿದ್ದೇ. ಆತ್ಮಯಿಲ್ಲದ ಜೀವಾತ್ಮ, ಜೀವಾತ್ಮಯಿಲ್ಲದ ಆತ್ಮ ಯಾವ ಶರೀರದಲ್ಲಿ ಇರುವುದಿಲ್ಲ. ಕರ್ಮಬದ್ಧನು ಜೀವಾತ್ಮವಾಗಿದ್ದು, ಕರ್ಮಬದ್ಧವಾಗಿ ಜಿವಾತ್ಮವನ್ನು ಆತ್ಮ ನಡೆಸುತ್ತಿದೆ. ಈ ಎರಡು ಆತ್ಮಗಳು ಬಿಡಿಸಲಾರದಿರುವವು ಶರೀರದಲ್ಲಿ ಒಂದೇಬಾರಿ ಮರಣವನ್ನು ಹೊಂದುತ್ತಾ, ಒಂದೇಬಾರಿ ಜನ್ಮಿಸುತ್ತಿವೆ. ಎರಡು ಆತ್ಮಗಳು ಒಂದಕ್ಕೊಂದು ಸಹಚರರಾಗಿ ಶರೀರದಲ್ಲಿ ಇವೆ. ಸಹಚರರಾಗಿ ಇರುವುದಲ್ಲದೆ ಆತ್ಮ ಜೀವಾತ್ಮಕ್ಕೆ ಸಹಾಯಕನಾಗಿ ಕೂಡ ಇದೆ. ಜೀವಾತ್ಮ ನಿವಾಸಿಸುವ ಶರೀರಕ್ಕೆ ಶಕ್ತಿಕೊಟ್ಟು ಆತ್ಮವೇ ನಡೆಸುತ್ತಿದೆ. ಯಾವಾಗಾದರೆ ಜೀವಾತ್ಮನಿಗೆ ಇಷ್ಟವಾದರೆ ದೈವಜ್ಞಾನವನ್ನು ಆತ್ಮವೇ ಜೀವಾತ್ಮನಿಗೆ ಬೋಧಿಸುತ್ತಿದೆ. ಜೀವಾತ್ಮಕ್ಕೆ ದೈವಜ್ಞಾನವನ್ನು ಬೋಧಿಸುವುದಲ್ಲದೆ, ದೈವಶಕ್ತಿಯನ್ನು ಜೀವಿಗೆ ಕೈಗೂಡಿಸುತ್ತಿದೆ. ಜೀವಿಯು ತನ್ನ ಆಸಕ್ತಿಯನ್ನು ದೇವರ ಜ್ಞಾನದಕಡೆ ಎಷ್ಟು ಮರಳಿಸಿಕೊಂಡರೆ, ಅಷ್ಟು ದೈವಜ್ಞಾನವನ್ನು ಒದಗಿಸುವುದಲ್ಲದೆ, ಅಷ್ಟರಮಟ್ಟಿಗೆ ದೈವಶಕ್ತಿಯನ್ನು ಆತ್ಮ ಕೈಗೂಡಿಸುತ್ತಿದೆ. ಹಾಗೆ ಜೀವಿಯ ಆಸ್ತಿಯಾಗಿ ಬಂದಿರುವ ದೈವಶಕ್ತಿಯನ್ನು ಉಪಯೋಗಿಸಿ ಜೀವಿಯ ಕರ್ಮವನ್ನು ಸುಟ್ಟುಹಾಕುತ್ತಿದೆ. ಜೀವಿಯು ದೈವಜ್ಞಾನವನ್ನು ತಿಳಿದುಕೊಳ್ಳುತ್ತಾ, ದೇವರಿಗೆ ಇಷ್ಟವಾದವನಾಗಿ ಬದಲಾದರೆ ಅವನ ಕರ್ಮ ಎಲ್ಲವನ್ನು ಸುಟ್ಟುಹಾಕುವುದಲ್ಲದೆ ಜೀವಿಗು ದೇವರಿಗು ಮಧ್ಯವರ್ತಿಯಾಗಿ ಬದಲಾಗಿ ಕೊನೆಗೆ ಜೀವಿಯನ್ನು ದೇವರಲ್ಲಿ ಸೇರಿಸುತ್ತಿದೆ. ಈ ವಿಧವಾಗಿ ಜೀವಿಗೆ ಸಾವು ಬದುಕಿನಲ್ಲಿ ಹಿಂದಿರುತ್ತಾ ಬರುವ ಆತ್ಮ ಜೀವಿಗೆ

ಎಲ್ಲಕಾಲದಲ್ಲಿ ಸಹಾಯಕಾರಿ, ಸಹಚಾರಿ ಮತ್ತು ಸಹಜೀವಿಯಾಗಿ ಇದೆ. ಸಹಾಯಕಾರಿ, ಸಹಚಾರಿ, ಸಹಜೀವಿ ಎಂಬ ಮಾತುಗಳಲ್ಲಿ ಸಹ ಎಂಬ ಶಬ್ದ ಸಾಮಾನ್ಯವಾಗಿದೆ. ಸಹಾಯಕಾರಿ ಎಂದರೆ ತನ್ನೊಂದಿಗೆ ಸಮಾನವಾಗಿ ನೋಡುವವನು ಎಂಬ ಭಾವನೆ. ಸಹಾಯ ಎಂದರೆ ತನ್ನೊಂದಿಗೆ ಸಮಾನವಾಗಿ ಲೆಕ್ಕಿಸುವುದೆಂದು ಅರ್ಥ. ಜೀವಿಗಿಂತ ಆತ್ಮ ಎಷ್ಟೊ ದೊಡ್ಡದಾದರೂ, ಆತ್ಮ ಮಾಡುವ ಕೆಲಸಗಳೆಲ್ಲವನ್ನು ನಾನೇ ಮಾಡುತ್ತಿದ್ದೇನೆಂಬ ಭಾವನೆಯನ್ನು ಜೀವಿಯು ಹೊಂದಿದ್ದರೂ, ಶರೀರದಲ್ಲಿ ನಾನೇ ದೊಡ್ಡವನೆಂದು ಜೀವಿಯು ಹೇಳುತ್ತಿದ್ದರೂ ಪಕ್ಕದಲ್ಲಿಯೇ ಇರುತ್ತಾ ಆತನ ಮೇಲೆ ಯಾವ ಕಕ್ಷೆ ಇಲ್ಲದಂತೆ ಸಮಾನವಾಗಿ ನೋಡುತ್ತಾ ಕಬ್ಬಿಣದಲ್ಲಿ ಅಗ್ನಿ ಬೆರೆತಿರುವಂತೆ ಎಷ್ಟೋ ಸಹನೆಯಿಂದಿರುವ ಆತ್ಮ ಜೀವಿಯೊಂದಿಗೆ ಸಹಜೀವನ ಮಾಡುತ್ತಾ ಸಹಾಯಕಾರಿಯಾಗಿದೆ.

ಆತ್ಮ ತಾನು ಜೀವಿಯಂತೆ ಕೆಲವು ಸಮಯಗಳಲ್ಲಿ ಪ್ರವರ್ತಿಸುತ್ತಾ, ಚಿಕ್ಕ ದೊಡ್ಡ ಅನೇಕ ಕಾರ್ಯಗಳನ್ನು ಮಾಡುತ್ತಾ, ತಾನು ದೊಡ್ಡದಾದ ಆತ್ಮಯೆಂಬ ಮಾತನ್ನು ಬಿಟ್ಟು, ಹೊರಗೆ ಜೀವಿಯಂತೆ ನಟಿಸುವ ಆತ್ಮ ಕೆಲವು ಸಮಯಗಳಲ್ಲಿ ದೇವರ ಪಾತ್ರವನ್ನು ಕೂಡಾ ಪೋಷಿಸುತ್ತಾ, ದೇವರು ಮಾಡಬೇಕಾದ ಕಾರ್ಯಗಳನ್ನು ಮಾಡುತ್ತಿದೆ. ದೇವರು ಯಾವ ಕಾರ್ಯಗಳನ್ನು ಮಾಡದಿದ್ದರೂ ದೇವರಂತೆ ನಟಿಸುವ ಆತ್ಮ ದೇವರು ಮಾಡಬೇಕಾದ ಕಾರ್ಯಗಳನ್ನು ಮಾಡುತ್ತಿದೆ. ಆ ಪದ್ಧತಿಯಲ್ಲಿ ದೇವರು ಹೇಳಬೇಕಾದ ಜ್ಞಾನವನ್ನು ಆತ್ಮವೇ ಹೇಳುತ್ತಿದೆ. ಅಂತಹ ಸಮಯದಲ್ಲಿ ಪರಮಾತ್ಮನಾದ ದೇವರೊಂದಿಗೆ ಸಮಾನವಾಗಿ ಬದಲಾಗಿಹೋಗಿ ದೇವರ ಕಾರ್ಯಗಳನ್ನು ಮಾಡುವ ಆತ್ಮ ಕೆಲವು ಸಮಯಗಳಲ್ಲಿ ಜೀವಿಯು ಅನುಭವಿಸಬೇಕಾದ ಕೆಲಸಗಳನ್ನು ಜೀವಿಗೋಸ್ಕರ ಮಾಡುತ್ತಿದೆ. ಅಷ್ಟೇಯಲ್ಲದೆ ಶರೀರದಲ್ಲಿ ಈಕಡೆ ಜೀವಿಯಾಗಿ ನಟಿಸುವ ಆತ್ಮ, ಆಕಡೆ ದೇವರಾಗಿ ಕೂಡಾ ನಟಿಸುತ್ತಿದೆ. ದೇವರಾಗಿರುವಾಗ ಎಂತಹ ರಹಸ್ಯ ಜ್ಞಾನವಾದರೂ ಸುಲಭವಾಗಿ ಹೇಳುತ್ತಿದೆ. ಈ ವಿಧವಾಗಿ ಶರೀರದಲ್ಲಿ ಎಲ್ಲಾ ವಿಧಗಳ ಕೆಲಸಮಾಡುವ ಆತ್ಮ ನಾನಿದ್ದೇನೆಂದು

ಎಲ್ಲಿಯೂ ಹೊರಬೀಳಲಿಲ್ಲ, ಯಾರಿಗೂ ಆತ್ಮ ಇದೆಯೆಂಬ ವಿಷಯ ಕೂಡಾ ತಿಳಿಯದಂತೆ ಇದೆ. ಆತ್ಮ ಮಾಡುವ ಕೆಲಸಗಳೆಲ್ಲವನ್ನು ಏನು ಮಾಡದ ಜೀವಿಯು ನಾನೇ ಮಾಡಿದ್ದೇನೆಂದು ಹೇಳಿದರೂ ಮೌನವಾಗಿರುವ ಆತ್ಮ ಜೀವಿಯ ಮೇಲೆ ಎಂಥಹ ಅಸೂಯೆ, ಕಕ್ಷೆ ಇಲ್ಲದಂತೆ ಇದೆ. ದೇವರಾಗಿ ಬದಲಾಗಿರುವ ಆತ್ಮ ಯಾವಾಗಲೂ ಜೀವಿಗೆ ಸಹಕಾರಿಯಾಗಿರುವುದರಿಂದ ಖುರ್‌ಆನ್ ಗ್ರಂಥದಲ್ಲಿ 32ನೆ ಸುರಾ 4ನೆ ವಾಕ್ಯದಲ್ಲಿ ಜಿಬ್ರಯೇಲ್ ಆತನು ಹೊರತು ಸಹಾಯ ಮಾಡುವವನಿಲ್ಲ ಎಂದಿದ್ದಾನೆ. ಈಗ ಹೇಳಿರಿ ಆತನೊಂದಿಗೆ ಯಾರಾದರೂ ಸಹಾಯ ಮಾಡುವವನಿದ್ದಾನಾ? ಶರೀರದಲ್ಲಿ ಜೀವಿಯು ದೇವರಲ್ಲಿ ಐಕ್ಯವಾಗುವುದಕ್ಕೆ ಸಿಫಾರಸ್ ಮಾಡುವವನು ಕೂಡಾ ಆತ್ಮವೇ ಆಗಿರುವುದರಿಂದ ಆತನೊಂದಿಗೆ ಸಿಫಾರಸ್ ಮಾಡುವವನಾಗಲಿ, ಆತನೊಂದಿಗೆ ಸಹಾಯ ಮಾಡುವವನಾಗಲಿ ಯಾರೂ ಇಲ್ಲವೆಂದು ಹೇಳಬಹುದು ನೋಡಿದ್ದೀರಾ ಖುರ್‌ಆನ್ ಗ್ರಂಥದಲ್ಲಿನ ಒಂದು ವಾಕ್ಯಕ್ಕೆ ಸೂಕ್ಷ್ಮವಾಗಿ ಎಷ್ಟು ಭಾವನೆ ಇದೆಯೊ!

ಸಹ ಎಂಬ ಎರಡು ಅಕ್ಷಗಳಿಗೂ ವಿಶೇಷ ಅರ್ಥವಿದೆಯೆಂದು, ಆ ಅರ್ಥವನ್ನು ತಿಳಿಯದೆ ನಮಗೆ (ಜೀವಿಗೆ) ಶರೀರದಲ್ಲಿ ಯಾರು ಸಹಾಯ ಮಾಡುತ್ತಿದ್ದಾರೊ, ಯಾರು ಸಿಫಾರಸ್ ಮಾಡುತ್ತಿದ್ದಾರೊ, ತಿಳಿಯದಿರುವುದರಿಂದ ಆತನು ಹೇಳಿರುವುದನ್ನು ಗ್ರಹಿಸುವುದಿಲ್ಲ ಏಕೆ (ಆತನು ಹೇಳಿರುವುದನ್ನು ಆಲೋಚಿಸುವುದಿಲ್ಲ ಏಕೆ) ಎಂದು ಅದೇ ವಾಕ್ಯದ ಕೊನೆಯಲ್ಲಿ ಹೇಳುವುದು ನಡೆದಿದೆ. ಇಲ್ಲಿಯವರೆಗೂ 32ನೆ ಸುರಾ, 4ನೆ ಆಯತ್‌ನಲ್ಲಿನ ವಾಕ್ಯದಲ್ಲಿರುವ ಮೂರು ಭಾಗಗಳಲ್ಲಿ ಕೊನೆಯ ಎರಡು ಮಾತುಗಳಿಗೆ ಭಾವವನ್ನು ಹೇಳಿ ಕೊಂಡಿದ್ದೇವೆ. ಮೊದಲ ಮಾತಾದ ದೇವರ ಸೃಷ್ಟಿ ಆರುದಿನಗಳು ನಡೆದಿದೆಯೆಂದು ಹೇಳಲಾಗಿದೆ. ಆ ವಾಕ್ಯ ಹೀಗೆ ಇದೆ. "ಅಲ್ಲಾಹ್ (ದೇವರೇ) ಆಕಾಶಗಳನ್ನೂ, ಭೂಮಿಯನ್ನು, ಅವುಗಳ ಮಧ್ಯದಲ್ಲಿರುವ ಸಮಸ್ತವನ್ನೂ ಆರುದಿನಗಳಲ್ಲಿ ಸೃಷ್ಟಿಸಿದ್ದಾನೆ. ಆ ನಂತರ ಸಿಂಹಾಸವನ್ನು ಅಧಿಷ್ಟಿಸಿದ್ದಾನೆ (ಅಧಿಕಾರ ಪೀಠವನ್ನು ಅಧಿಷ್ಠಿಸಿದ್ದಾನೆ) ಆತನು ಹೊರತು ನಿಮಗೆ ಯಾವ

ಸಹಾಯಕನೂ, ಮತ್ತ್ಯಾವ ಸಿಫಾರಸನ್ನು ಮಾಡುವವನೂ ಇಲ್ಲ. ಆದರೂ ಆತನು ಹೇಳಿದ ಬೋಧನೆಯನ್ನು ಗ್ರಹಿಸುವುದಿಲ್ಲವೇನು?" ಈ ವಾಕ್ಯ ಒಟ್ಟಾರೆ ಮೊದಲ ಭಾಗದಲ್ಲಿ "ದೇವರು ಆಕಾಶಗಳನ್ನು ಭೂಮಿಯನ್ನು ಅವುಗಳ ಮಧ್ಯದಲ್ಲಿರುವ ಸಮಸ್ತವನ್ನು" ಎಂದು ಇದೆ ಅಲ್ಲವೆ! ನಮಗಾಗಲಿ, ಇನ್ನೂ ಖಗೋಳ ಶಾಸ್ತ್ರಜ್ಞರಿಗಾಗಲಿ, ಪ್ರಪಂಚದಲ್ಲಿ ಇತರರಿಗೆಯಾರಿಗಾಗಲಿ, ಮೇಲೆ ಇರುವುದು ಒಂದು ಆಕಾಶ ಹೊರತು ಎರಡು ಮೂರು ಆಕಾಶಗಳಿರುವಂತೆ ತಿಳಿಯುತ್ತದಾ, ಒಂದಕ್ಕಿಂತ ಹೆಚ್ಚು ಆಕಾಶಗಳಿರುವಂತೆ ಯಾರಾದರೂ ಗುರುತಿಸಲ್ಪಟ್ಟಿದ್ದಾರಾ? ಎಂದು ಪ್ರಶ್ನಿಸಿದರೆ ಯಾರೂ ಹಾಗೆ ಗುರುತಿಸಿದಂತೆ ಹೇಳುವುದಿಲ್ಲ. ಪ್ರಪಂಚದಲ್ಲಿ ಇರುವುದು ಒಂದು ಆಕಾಶವೇ, ತಿಳಿಯಲ್ಪಡುವುದು ಒಂದು ಆಕಾಶವೇ ಆದರೆ ಇಲ್ಲಿ ಖುರ್‌ಆನ್ ಗ್ರಂಥದಲ್ಲಿ ಆಕಾಶಗಳನ್ನು ಎಂದು ಬಹುವಚನದಲ್ಲಿ ಹೇಳುವುದು ಏಕೆಂದು ಪ್ರಶ್ನಿಸಿದರೆ, ಬಹುಶ ಯಾರ ಹತ್ತಿರ ಸಮಾಧಾನ ಇರುವುದಿಲ್ಲ ಅಂದರೆ ಇರುವುದಿಲ್ಲ. ಕೆಳಗೆ ಕಾಣಿಸುವುದು ಒಂದೇ ಭೂಮಿಯಾಗಿದೆ. ಹಾಗೆಯೇ ಮೇಲೆ ಕಾಣಿಸುವುದು ಒಂದೇ ಆಕಾಶವಾಗಿದೆ. ವಿಮಾನದಲ್ಲಾಗಲಿ, ರಾಕೆಟ್‌ನಲ್ಲಾಗಲಿ, ಆಕಾಶ ನೌಕೆಗಳಾದ ಉಪಗ್ರಹ ವಾಹನಗಳಲ್ಲಾಗಲಿ ಎಷ್ಟು ಮೇಲಕ್ಕೆ ಹೋದರೂ, ಒಂದೇ ಆಕಾಶ ಕಾಣಿಸುತ್ತಿದೆ. ಯಾವ ವಿಧವಾಗಿ ನೋಡಿದರೂ ಒಂದಕ್ಕಿಂತ ಮೀರಿದ ಅನೇಕ ಆಕಾಶಗಳು ಇಲ್ಲವೇಯಿಲ್ಲ. ಅಂತಹದರಲ್ಲಿ ದೇವರ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಅದೂ ಮಹಾಜ್ಞಾನಿಯಾದ ಜಿಬ್ರಯೇಲ್ ಹೇಳಿದಮಾತು ಅಸತ್ಯವಾಗಿರುತ್ತದಾ? ಎಂದು ಆಲೋಚಿಸಿದರೆ ಹಾಗೆ ಎಂದಿಗೂ ಅಸತ್ಯ ಇರುವುದಿಲ್ಲವೆಂದು ಜಿಬ್ರಯೇಲ್ ಹೇಳಿರುವುದು ಪೂರ್ತಿ ಸತ್ಯವಾಗಿರುತ್ತದೆ ಯೆಂದು ಹೇಳಬಹುದು.

**ಮುಸ್ಲಿಮ್‌ರು :–** ನಮ್ಮ ಖುರ್‌ಆನ್ ಗ್ರಂಥದಲ್ಲಿ ಹೇಳಿದಂತೆ ಮುಹ್ಕಮಾತ್ (ಸ್ಥೂಲ ಅರ್ಥಗಳಿರುವವು) ಮುತಷಾಭಿಹಾತ್ (ಸೂಕ್ಷ್ಮ ಅರ್ಥಗಳಿರುವವು) ಎಂಬ ಎರಡು ವಿಧಗಳ ವಾಕ್ಯಗಳಲ್ಲಿ ಈ ವಾಕ್ಯವನ್ನು ಕೂಡಾ ಮುತಷಾಭಿಹಾತ್ ಗುಂಪಿಗೆ ಸೇರಿದ ವಾಕ್ಯವಾಗಿ ಲೆಕ್ಕಿಸಬಹುದು ಅಲ್ಲವೆ! ಈ ವಾಕ್ಯಕ್ಕೆ ಸ್ಥೂಲವಾಗಿ

ಯಾವವಿಧವಾಗಿ ಸಮಾಧಾನ ದೊರೆಯುವುದಿಲ್ಲ. ಇದಕ್ಕು ಸಹಾ ಅರ್ಥವನ್ನು ನೀವೆ ಹೇಳಬೇಕು.

**ನಾವು :–** ನಾವು ಖುರ್‌ಆನ್ ಗ್ರಂಥದಲ್ಲಿ ಹೆಚ್ಚಾಗಿ ಮುತಷಾಭಿಹಾತ್ ವಾಕ್ಯಗಳಿವೆಯೆಂದು ಮೊದಲಿನಿಂದ ಹೇಳಿದ್ದೇವೆ. ಮುಸ್ಲಿಮ್‌ರು ಕೆಲವರು ಆ ವಾಕ್ಯಗಳಿಂದ ಕೆಲಸವೇ ಇಲ್ಲ ಅವುಗಳನ್ನು ಬಿಟ್ಟು ಸ್ಥೂಲವಾಗಿರುವ ಮುಷ್ಕಮಾತ್ ವಾಕ್ಯಗಳನ್ನೇ ಹೇಳಿಕೊಳ್ಳಬೇಕೆಂದು ಅಂದುಕೊಳ್ಳುವುದಲ್ಲದೆ, ಖುರ್‌ಆನ್‌ನು ಮೊತ್ತವನ್ನು ಮುಹ್ಕಮಾತ್ ವಾಕ್ಯಗಳಾಗಿಯೇ ಹೇಳುತ್ತಾ ಬಂದಿದ್ದಾರೆ. ಪ್ರತಿ ವಾಕ್ಯಕ್ಕು ಸ್ಥೂಲವಾಗಿ ಅರ್ಥ ಹೇಳುತ್ತಾ ಬಂದಿದ್ದಾರೆ. ಆದ್ದರಿಂದ ದೇವರು ಹೇಳಿದ ಉದ್ದೇಶವಾಗಲಿ, ಭಾವವಾಗಲಿ ಪ್ರಜೆಗಳಿಗು, ಉಳಿದ ಮುಸ್ಲಿಮ್‌ರಿಗೂ ತಿಳಿಯದಂತೆ ಹೋಗಿದೆ. ನಾವು ಎಲ್ಲಿಯಾದರೂ ಸೂಕ್ಷ್ಮವಾಗಿರುವ ವಾಕ್ಯಗಳಿಗು ಸೂಕ್ಷ್ಮವಾದ ವಿವರವನ್ನು ಹೇಳಿದರೆ, ಅದನ್ನು ಅಲ್ಲವೆನ್ನುವವರು ಕೂಡಾ ಇದ್ದಾರೆ. ಆದ್ದರಿಂದ ನಾನು ಕೂಡಾ ಮೊದಲೇ ಹೇಳುತ್ತಿದ್ದೇನೆ. ನನ್ನನ್ನು ವಿಶ್ವಾಶಿಸಿ ನಾನು ಸತ್ಯವನ್ನೇ ಹೇಳುತ್ತೇನೆಂದು ತಿಳಿದವರು ನನ್ನ ಮಾತುಗಳನ್ನು ಕೇಳಿರಿ. ಅಂತಹವರಿಗೋಸ್ಕರವೇ ನನ್ನ ಜ್ಞಾನವಿದೆ. ಉಳಿದವರಿಗೆ ನಾನು ಹೇಳಿರುವುದು ಸತ್ಯವಾಗಬಹುದು ಇಲ್ಲವೆ ಅಸತ್ಯವೂ ಆಗಬಹುದು. ಕುರುಡರಂತೆ ಯಾವುದನ್ನು ನಂಬಬೇಡಿರಿ. ಆಲೋಚಿಸಿ ನೋಡಿ ಆಗ ನಿರ್ಣಯಕ್ಕೆ ಬನ್ನಿರೆಂದು ಹೇಳುತ್ತಿದ್ದೇನೆ. ಖುರ್‌ಆನ್ ಗ್ರಂಥದಲ್ಲಿ ಅಲ್ಲಾಹ್ (ದೇವರು) ಈ ಗ್ರಂಥದಲ್ಲಿ ಮುಹ್ಕಮಾತ್ (ಸ್ಥೂಲ) ಮುತಷಾಭಿಹಾತ್ (ಸೂಕ್ಷ್ಮ) ಜ್ಞಾನ ಇರುವ ವಾಕ್ಯಗಳು ಇವೆಯೆಂದು 3ನೆ ಸುರಾ, 7ನೆ ಆಯತ್‌ನಲ್ಲಿ ಹೇಳಿದ್ದಾನೆ. ಅಲ್ಲಿ ಆತನ ಮಾತುಗಳನ್ನು ಅನುಸರಿಸಿ ಖುರ್‌ಆನ್ ಗ್ರಂಥದಲ್ಲಿನ ಯಾವೊಂದು ವಾಕ್ಯಕ್ಕು ಇಂದಿನ ಬೋಧಕರು ಸೂಕ್ಷ್ಮವಾದ ಭಾವವನ್ನು ತೆಗೆದುಕೊಳ್ಳದೆ, ಎಲ್ಲಾ ವಾಕ್ಯಗಳಿಗು ಸ್ಥೂಲವಾಗಿಯೇ ಭಾವವನ್ನು ಹೇಳುತ್ತಾ ಹೋಗಿದ್ದಾರೆ. ಹಾಗೆ ಹೇಳುವುದರಿಂದ ನಾವು ದೇವರ ಮಾತನ್ನು ಗೌರವಿಸಿದಂತೆ ಆಗುತ್ತದಾ? ಎಂದು ಕೇಳುತ್ತಿದ್ದೇನೆ. ಸೂಕ್ಷ್ಮಭಾವವಿರುವ ವಾಕ್ಯಗಳಿಗೆ ಸೂಕ್ಷ್ಮವಾದ ವಿವರ

ಹೇಳುವುದು ಬೋಧಕರೊಬ್ಬರ ಜವಾಬ್ದಾರಿ. ಅಂತಹದ್ದು ಅವರು ಹೇಳದಿದ್ದರೂ ನಾವು ದೇವರ ಗೌರವಕ್ಕೆ ಹಾನಿ ಉಂಟಾಗದಂತೆ ಸೂಕ್ಷ್ಮ ವಿವರವನ್ನು ಹೇಳಿದರೇ ನಮ್ಮನ್ನು ತಪ್ಪಿಹಿಡಿಯುವವರು ಕೂಡಾ ಇದ್ದಾರೆ.

32ನೆ ಸುರಾ, 4ನೆ ಆಯತ್‌ನಲ್ಲಿ ಇರುವ ಮೂರು ಭಾಗಗಳ ವಾಕ್ಯವು ಪೂರ್ತಿ ಮುತಷಾಭಿಹಾತ್ ಗುಂಪಿಗೆ ಸೇರಿದ ವಾಕ್ಯವಾಗಿರುವುದರಿಂದ, ಯಾರೂ ಇದಕ್ಕೆ ಯಾವ ವಿಧವಾಗಿ ಸ್ಥೂಲ ಭಾವವನ್ನು ಜೋಡಿಸಿ ಹೇಳಲಾರರು. ಸೂಕ್ಷ್ಮ ಭಾವದಿಂದ ವಿವರಣೆಯನ್ನು ಕೊಟ್ಟಾಗಲೇ ಈ ವಾಕ್ಯ ಪ್ರಕಾಶಿಸಲ್ಪಡುತ್ತದೆ. ಆದ್ದರಿಂದ ನನ್ನ ಶಾಯಶಕ್ತಿಯಿಂದ ಈ ವಾಕ್ಯಕ್ಕೆ ಗೂಢಾರ್ಥ ಏನಿದೆಯೊ ಅದನ್ನು ವಿವರಿಸಬೇಕೆಂದುಕೊಂಡಿದ್ದೇನೆ. ಹೊರಗೆ ಪ್ರಪಂಚದಲ್ಲಿ ಒಂದು ಆಕಾಶ ಹೊರತು ಕನಿಷ್ಟ ಎರಡು ಆಕಾಶಗಳು ಇಲ್ಲ. ಆದರೆ ಖುರ್‌ಆನ್ ಗ್ರಂಥದಲ್ಲಿ ಕೆಲವುಕಡೆ ಏಳು ಆಕಾಶಗಳು ಇವೆಯೆಂದು ಅವುಗಳ ಸಂಖ್ಯೆಯನ್ನು ಕೂಡಾ ಹೇಳುವುದು ನಡೆದಿದೆ. ಪ್ರವಕ್ತರು "ಮೇರಾಜ್" ಎಂಬ ಗಗನಯಾತ್ರೆಯಲ್ಲಿ ಏಳು ಆಕಾಶಗಳನ್ನು ನೋಡಿದಂತೆ ಬಹುಶಾ 53ನೆ ಸುರಾದಲ್ಲಿ ಬರೆದಿದ್ದಾರೆ. ಆದರೂ ಅದು ಪೂರ್ತಿ ಖುರ್‌ಆನ್ ವಾಕ್ಯ ಅನ್ನುವುದಕ್ಕಿಂತ ಹಾದೀಸು ವಾಕ್ಯವಾಗಿ ಲೆಕ್ಕಿಸುವುದು ಒಳ್ಳೆಯದು. ಹೇಗಾದರೇನು ಏಳು ಆಕಾಶಗಳೆಂದು ಖುರ್‌ಆನ್‌ನಲ್ಲಿ ಹೇಳಲಾಗಿದೆ. ಏಳು ಆಕಾಶಗಳನ್ನೂ ಕೆಳಗೆ ಭೂಮಿಯನ್ನು ತಯಾರುಮಾಡುವುದಕ್ಕೆ ದೇವರಿಗೆ ಆರು ದಿನಗಳ ಕೆಲಸ, ಏಳನೆ ದಿನ ವಿಶ್ರಾಂತಿ ಆಗಿದೆ. ಇದೆಲ್ಲಾ ಪಕ್ಕಕ್ಕಿಟ್ಟು ಶರೀರದ ಆಳದೊಳಗೆಹೋಗಿ ನೋಡಿದರೆ, ನಮ್ಮ ಶರೀರದಲ್ಲಿ 3,50,000 ನಾಡಿಗಳಲ್ಲಿ ಎಲ್ಲದಕ್ಕಿಂತ ದೊಡ್ಡನಾಡಿಯನ್ನು ಬ್ರಹ್ಮನಾಡಿ ಎಂದೂ, ಬೆನ್ನುಹಾವು (ಬೆನ್ನುಮೂಳೆ) ಇಂಗ್ಲೀಷ್ ಭಾಷೆಯಲ್ಲಿ ಸ್ಪೈನಲ್‌ಕಾರ್ಡು ಎಂದೂ ಅನ್ನುತ್ತಿದ್ದೇವೆ. ಬ್ರಹ್ಮನಾಡಿ ಎಂಬ ನಾಡಿ ಏಳು ನಾಡಿಕೇಂದ್ರಗಳಾಗಿ ವಿಭಜಿಸಲ್ಪಟ್ಟಿದೆಯೆಂದು ಬಹಳಜನರಿಗೆ ತಿಳಿದಿದೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ಬ್ರಹ್ಮನಾಡಿ ಕೆಳಗಿನ ಕೇಂದ್ರಕ್ಕಿಂತ ಕೆಳಗೆ ಭೂಮಿ ಎಂದೂ ಏಳುಕೇಂದ್ರಗಳನ್ನು ಏಳು ಆಕಾಶಗಳೆಂದು ವರ್ಣಿಸುವುದು ನಡೆದಿದೆ. ಏಳು ನಾಡಿಕೇಂದ್ರಗಳಿಂದ ಆತ್ಮ ಶರೀರವೆಲ್ಲಾ ವ್ಯಾಪಿಸಿ ಶರೀರವನ್ನು ನಡೆಸುತ್ತಿದೆ. ಶರೀರದಲ್ಲಿನ ಆತ್ಮ

ಏಳನೆ ಸ್ಥಾನವನ್ನು ಸ್ವಸ್ಥಾನವಾಗಿ ತನ್ನ ಕೇಂದ್ರಸ್ಥಾನವಾಗಿ ಮಾಡಿಕೊಂಡು ಅಲ್ಲಿಂದ ಉಳಿದ ಆರು ಕೇಂದ್ರಗಳ ಮೂಲಕ ಶರೀರವೆಲ್ಲಾ ವ್ಯಾಪಿಸಿ ಸಮಸ್ತ ಕಾರ್ಯಗಳನ್ನು ಮಾಡುತ್ತಿದೆ. ಪ್ರತಿ ಶರೀರದಲ್ಲಿಯೂ ಆತ್ಮ ಆರು ಸ್ಥಾನಗಳಿಂದ ವ್ಯಾಪಿಸಿ ಸಮಸ್ತ ಕಾರ್ಯಗಳನ್ನು ಮಾಡುವಂತೆ ಸಮಸ್ತ ಜೀವರಾಶಿಗಳನ್ನು ದೇವರು ಸೃಷ್ಟಿಸಿದ್ದಾನೆ. ಏಳನೆ ನಾಡಿಕೇಂದ್ರವನ್ನು ಕೇಂದ್ರವಾಗಿ ಮಾಡಿಕೊಂಡು ಆರು ಕೇಂದ್ರಗಳ ಮೂಲಕ ಜೀವಿಗಳೆಲ್ಲರನ್ನು ದೇವರು ನಡೆಸುವುದನ್ನು ಗುರುತು ಮಾಡುವುದಕ್ಕೆ ಇಲ್ಲವೆ ತನ್ನ ನಿರ್ಮಾಣ ಹೀಗಿದೆಯೆಂದು ತಿಳಿಸುವುದಕ್ಕೆ ಖುರ್‌ಆನ್‌ನಲ್ಲಿ ಮೇಲೆ ಏಳು ಆಕಾಶಗಳನ್ನು ಕೆಳಗೆ ಭೂಮಿಯನ್ನು ಮಧ್ಯದಲ್ಲಿ ಸಮಸ್ತವನ್ನು ದೇವರು ಸೃಷ್ಟಿಸಿದ್ದಾನೆಂದು ಗೂಢಾರ್ಥವಾಗಿ ಹೇಳುವುದು ನಡೆದಿದೆ. ಶರೀರದಲ್ಲಿರುವ ಏಳು ನಾಡಿಕೇಂದ್ರಗಳನ್ನು ಏಳು ಆಕಾಶಗಳಾಗಿ ಹೇಳಿಕೊಂಡಾಗಲೇ ಆಯತ್‌ನಲ್ಲಿನ ಜ್ಞಾನ ಅರ್ಥವಾಗುತ್ತದೆ. ಆರು ನಾಡಿಕೇಂದ್ರ ಗಳ ಮೂಲಕ ಶರೀರವೆಲ್ಲಾ ನಡೆಸಲ್ಪಡುತ್ತಿದೆಂದು, ಶರೀರವೆಲ್ಲವನ್ನು ನಡೆಸುವ ಆತ್ಮ ಏಳನೆ ಕೇಂದ್ರವನ್ನು ಸ್ವಸ್ಥಾನವಾಗಿ ತಿಷ್ಟೆ ಹಾಕಿಕೊಂಡಿದೆಯೆಂದು ಹೇಳುವುದಕ್ಕೆ, ದೇವರು ಸೃಷ್ಟಿಯೆಲ್ಲವನ್ನು ಆರು ದಿನಗಳು ತಯಾರುಮಾಡಿ ನಂತರ ವಿಶ್ರಾಂತಿಯಾಗಿ ತನ್ನ ಸಿಂಹಾಸನವನ್ನೇರಿದ್ದಾನೆ ಎಂದು ಹೇಳುವುದು ನಡೆದಿದೆ. ಇದೆಲ್ಲವೂ ಶರೀರದಲ್ಲಿ ದೈವಶಕ್ತಿ ಆತ್ಮಶಕ್ತಿಯಾಗಿ ಬದಲಾಗಿ ಮನುಷ್ಯರನ್ನು ಮತ್ತು ಸಕಲ ಜೀವರಾಶಿಗಳನ್ನು ಹೇಗೆ ನಡೆಸುತ್ತಿದೆಯೋ ತಿಳಿದುಕೊಳ್ಳುವುದಕ್ಕೆ ಜಿಬ್ರಯೇಲ್ ಗೂಢಾರ್ಥವಾಗಿ ಹೇಳಿದ ವಾಕ್ಯ 32ನೆ ಸುರಾದಲ್ಲಿ 4ನೆ ಆಯತ್‌ನಲ್ಲಿದೆಯೆಂದು ಹೇಳಬಹುದು. ಈ ವಿಧವಾಗಿ ಈ ವಾಕ್ಯವು ಸೂಕ್ಷ್ಮ ಜ್ಞಾನದಿಂದ ಹೇಳಲಾಗಿದೆ. ಈ ವಿಧವಾಗಿ ದೇವರು ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವನ್ನು ಬೈಬಲ್, ಖುರಾನ್ ಗ್ರಂಥಗಳಲ್ಲಿ ಕೂಡಾ ಹೇಳಿದ್ದಾನೆಂದು ತಿಳಿಯುತ್ತಿದೆ.

ಕೊನೆಯಲ್ಲಿ ಮೂರು ಮೂಲ ಗ್ರಂಥಗಳ ಹೆಸರುಗಳು ಬಂದಿವೆ, ಆದ್ದರಿಂದ ಮೊದಲೆ ಹೇಳಲಿಲ್ಲ ಅನ್ನದಂತೆ ಒಂದು ವಿಷಯವನ್ನು ಹೇಳುತ್ತೇನೆ

ನೋಡಿರಿ. ಈಗ ಕೊನೆಯಲ್ಲಿ ಹೇಳುವ ವಿಷಯ ಕೂಡಾ ನನ್ನ ಮೇಲೆ ವಿಶ್ವಾಸ ಇರುವವರು ಮಾತ್ರವೇ ಸತ್ಯವೆಂದು ನಂಬಿರಿ, ಇಲ್ಲದಿದ್ದರೆ ಇಲ್ಲ. ನನ್ನಂತೆ ನೀವು ಕೂಡಾ ಜ್ಞಾನಿಗಳು ಆಗಬೇಕೆಂಬ ಉದ್ದೇಶದಿಂದ ಈ ವಿಷಯವನ್ನು ಹೇಳುತ್ತಿದ್ದೇನೆ. ದೇವರು ದೇಶ ಕಾಲ ಸಂದರ್ಭಗಳನ್ನನುಸರಿಸಿ ತನ್ನ ಜ್ಞಾನವನ್ನು ಮೂರು ಗ್ರಂಥಗಳ ರೂಪದಲ್ಲಿ ನಮಗೆ ಒದಗಿಸಿದ್ದಾನೆ. ಎರಡು ಗ್ರಂಥಗಳಲ್ಲಿನ ಜ್ಞಾನ ವಿಷಯಗಳು ದೇವರು ಕಳಿಸಿದ ಇಬ್ಬರು ದೂತರಿಂದ ಹೇಳಲ್ಪಟ್ಟಿರುವವಾಗಿರುವಾಗ, ಒಂದು ಗ್ರಂಥ ಮಾತ್ರ ತೆರೆಹಿಂದಿನಿಂದ ಹೇಳಲಾದ ಗ್ರಂಥವಾಗಿ ಇದೆ. ತೆರೆಹಿಂದಿನಿಂದ ಜಿಬ್ರಯೇಲ್ ಮೂಲಕ ಹೇಳಲಾಗಿರುವುದು ಖುರ್‌ಆನ್ ಗ್ರಂಥವಾಗಿದ್ದು, ದೇವರಿಂದ ಕಳಿಸಲಾದ ದೂತರಾದ ಇಬ್ಬರು ವ್ಯಕ್ತಿಗಳ ಮೂಲಕ ಹೇಳಲಾಗಿರುವವು ಭಗವದ್ಗೀತೆ ಮತ್ತು ಬೈಬಲ್ ಗ್ರಂಥಗಳು, ಈ ಎರಡು ಗ್ರಂಥಗಳಲ್ಲಿ ಭಗವದ್ಗಿತೆ ಮಾತ್ರ ಸೃಷ್ಟ್ಯಾದಿಯಲ್ಲಿಯೇ ವಾಣಿ ಮೂಲಕ ಸೂರ್ಯನಿಗೆ ಹೇಳಲಾಗಿದೆ. ಮೊಟ್ಟಮೊದಲು ಆದಿಯಲ್ಲಿಯೇ ಸೂರ್ಯನಿಗೆ ದೇವರು ವಾಣಿ ಮೂಲಕ ಹೇಳಿದ ಜ್ಞಾನ ಭೂಮಿಮೇಲಕ್ಕೆ ಬಂದಿದೆ. ಹಾಗೆ ಮೊದಲು ಒಂದುಬಾರಿ ಭೂಮಿಮೇಲಕ್ಕೆ ಬಂದಿರುವ ಜ್ಞಾನವನ್ನೆ ಐದುಸಾವಿರ ವರ್ಷಗಳ ಪೂರ್ವದಲ್ಲಿ ಕೃಷ್ಣನು, ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಏಸು, 1400 ವರ್ಷಗಳ ಪೂರ್ವದಲ್ಲಿ ಜಿಬ್ರಯೇಲ್ ಪುನಃ ಹೇಳುವುದು ನಡೆದಿದೆ. ಮೊದಲು ಸೂರ್ಯನಿಗೆ ಹೇಳಿದ ದಿನ ದೇವರ ಜ್ಞಾನ ಗ್ರಂಥರೂಪವಾಗಿ ಬರಲಿಲ್ಲ. ಅದಕ್ಕೆ ಹೆಸರು ಸಹಾ ಇಡಲಿಲ್ಲ. ಹಾಗೆ ಗ್ರಂಥ ರೂಪದಲ್ಲಿ ಇಲ್ಲದ ಜ್ಞಾನ ಸ್ವಲ್ಪಕಾಲ ಚೆನ್ನಾಗಿ ಪ್ರಜೆಗಳಲ್ಲಿ ವ್ಯಾಪಿಸಿದ್ದು, ನಂತರ ಕ್ಷೀಣಿಸಿಹೋಗಿ, ಕೊನೆಗೆ ದೇವರ ಜ್ಞಾನವೇ ಭೂಮಿಮೇಲೆ ಇಲ್ಲದಂತೆ ಹೋಗುವ ಸ್ಥಿತಿಗೆ ಬಂದಿದೆ. ದ್ವಾಪರಯುಗ ಕೊನೆಯಲ್ಲಿ ದೇವರ ಧರ್ಮಗಳು ತಿಳಿಯದಂತೆಹೋಗಿ ಧರ್ಮಗಳಂತಿರುವ ಯಜ್ಞ, ದಾನ, ವೇದ, ತಪಸ್ಸುಗಳು ಪೂರ್ತಿ ಪ್ರಚಾರವಾಗಿಹೋಗಿವೆ. ಯಜ್ಞ, ದಾನ, ವೇದ, ತಪಸ್ಸುಗಳು ಅಧರ್ಮಗಳೆಂದು ತಿಳಿಯದ ಮನುಷ್ಯರು ಅವುಗಳನ್ನೆ ಹೆಚ್ಚಾಗಿ ಆಚರಿಸುವುದನ್ನು ಪ್ರಾರಂಭಮಾಡಿ ಧರ್ಮಗಳನ್ನು ಮರೆತುಹೋಗಿದ್ದಾರೆ. ಆಗ ತನ್ನ ಧರ್ಮಗಳು

ಭೂಮಿಮೇಲೆ ಪೂರ್ತಿ ನಶಿಸಿ ಹೋಗದಂತಿರುವುದಕ್ಕೆ ದೇವರು ಕೃಷ್ಣನು ಎಂಬ ವ್ಯಕ್ತಿಯಿಂದ (ದೂತನಿಂದ) ತನ್ನ ಜ್ಞಾನವನ್ನು ಹೇಳಿಸಿದ್ದಾನೆ. ದೂತ ಆದವನು ಸಾಧಾರಣ ಮನುಷ್ಯನಲ್ಲ. ದೂತನನ್ನು ಜ್ಞಾನದ ಪ್ರಕಾರ ಅರ್ಥದಿಂದ ಭಗವಂತನು ಎಂದು ಹೇಳಬಹುದು. ತಾಯಿಗರ್ಭ (ಭಗ)ದಿಂದ ಹುಟ್ಟಿದವನು ಭಗವಂತನು ಎಂದು ಅರ್ಥ. ಆ ದಿನ ಕೃಷ್ಣನು ದೇವರ ಜ್ಞಾನವನ್ನು ಹೇಳಿದ್ದಾನೆಂದು ಅನ್ನದಂತೆ, ಭಗವಂತನು ಹೇಳಿದ್ದಾನೆಂದು ಎಲ್ಲರಿಗೂ ಅರ್ಥವಾಗುವಂತೆ ದ್ವಾಪರಯುಗದಲ್ಲಿ ಹೇಳಿದ ಜ್ಞಾನಕ್ಕೆ **"ಭಗವದ್ಗೀತೆ"** ಎಂದು ಹೆಸರಿಡುವುದು ನಡೆದಿದೆ. ಭಗವದ್ಗೀತೆ ಎಂದರೆ ಭಗವಂತನು ಹೇಳಿರುವುದೆಂದು ಅರ್ಥ. ಭಗವಂತನು ಎಂದರೆ ದೇವರಿಂದ ಕಳಿಸಲಾದ ದೂತ ಎಂದು ಅರ್ಥ. ದೇವರ ದೂತನಿಂದ ಹೇಳಲಾದ ಜ್ಞಾನವಾದ್ದರಿಂದ ಅದನ್ನು ಭಗವದ್ಗೀತೆ ಅನ್ನುವುದರಲ್ಲಿ ಪೂರ್ತಿ ಅರ್ಥವಿದೆ.

ಭಗವದ್ಗೀತೆಯನ್ನು ಹೇಳಿರುವುದು ಭಾರತದೇಶದಲ್ಲಿ, ಆದ್ದರಿಂದ ಅದು ಭಾರತದೇಶಕ್ಕೇ ಪರಿಮಿತಿ ಆಗಿಹೋಗಿದೆ. ಭಗವದ್ಗೀತೆಯನ್ನು ಹೇಳಿದ ನಂತರ ಮೂರುಸಾವಿರ ವರ್ಷಗಳಿಗೆ ಇಜ್ರಾಯೇಲ್ ದೇಶದಲ್ಲಿ ದೇವರ ಜ್ಞಾನ ಅಗತ್ಯಬಂದಾಗ, ದೇವರು ಏಸು ಅನ್ನುವ ತನ್ನ ದೂತನು ಕಳಿಸಿ ಅಲ್ಲಿ ತನ್ನ ಜ್ಞಾನವನ್ನು ಆತನ ಮೂಲಕ ಹೇಳಿಸಿದ್ದಾನೆ. ಆಗಲೂ ಕೂಡಾ ಸೃಷ್ಟ್ಯಾದಿಯಲ್ಲಿ ವಾಣಿ ಮೂಲಕ ಸೂರ್ಯನಿಗೆ ಹೇಳಿದ ಜ್ಞಾನವನ್ನೆ ಏಸು ಮೂಲಕ ಹೇಳಿಸಿದ್ದಾನೆ. ಅಲ್ಲಿ ಹೇಳಿದ ಜ್ಞಾನ ಬೈಬಲ್ ಎಂಬ ಗ್ರಂಥರೂಪದಲ್ಲಿ ಹೊರಗೆ ಬಂದಿದೆ. ಮೊದಲು ಸೂರ್ಯನಿಗೆ ಹೇಳಿದ ಜ್ಞಾನವೇ ಭಾರತದೇಶದಲ್ಲಿ ಹೇಳಲ್ಪಟ್ಟಿದೆ, ನಂತರ ಇಜ್ರಯೇಲ್ ದೇಶದಲ್ಲಿ ಹೇಳಲಾಗಿದೆ. ಹೇಳಿದ ದೂತರ ಹೆಸರುಗಳು ಕೃಷ್ಣನು, ಏಸು ಎಂದು ಎರಡಾಗಿದ್ದರೂ ಇಬ್ಬರೂ ಹೇಳಿರುವುದು ಒಂದೇ ಜ್ಞಾನವೆ. ಆದರೆ ಭಾರತ ದೇಶದಲ್ಲಿ ಹೇಳಿದಾಗ, ಅದನ್ನು ಕೃಷ್ಣನು ಹೇಳಿರುವುದು ಅನ್ನದಂತೆ, ದೂತ ಹೇಳಿರುವುದು ಎಂಬ ಅರ್ಥಬರುವಂತೆ ಭಗವದ್ಗೀತೆ ಅಂದಿದ್ದೇವೆ. ನಂತರ ಇಜ್ರಯೇಲ್ ದೇಶದಲ್ಲಿ ಹೇಳಿರುವುದು ಕೂಡಾ ದೂತ ಅನ್ನಲ್ಪಡುವವನೆ ಹೇಳಿದ್ದಾನೆ, ಆದ್ದರಿಂದ ಅದನ್ನು ಕೂಡಾ ಅರ್ಥ ಕೆಡದಂತೆ

**ಭಗವದ್ಗೀತೆ ಇಲ್ಲವೆ ದೂತಗೀತ, ದೂತಬೋಧನೆ** ಎಂದು ಹೇಳಬೇಕು. ಆದರೆ ಅದನ್ನು ದೂತ ಹೇಳಿದಂತೆ ಗುರುತು ಇಲ್ಲದಂತೆ ಬೈಬಲ್ ಎಂದು ಹೆಸರು ಇಡುವುದು ನಡೆದಿದೆ. ಆದ್ದರಿಂದ ಇಜ್ರಾಯೇಲ್ ದೇಶದಲ್ಲಿ ಏಸು ಹೇಳಿದ ಜ್ಞಾನವಾಗಿ ಪ್ರಚಾರವಾಗಿದೆಯಾಗಲಿ, ಭಗವಂತನು (ದೂತ) ಹೇಳಿದ ಜ್ಞಾನವಾಗಿ ಪ್ರಚಾರ ಆಗಲಿಲ್ಲ. ಅಷ್ಟೇಯಲ್ಲದೆ ಸೃಷ್ಠಿಆದಿಯಲ್ಲಿ ಸೂರ್ಯನಿಗೆ ವಾಣಿ ಮೂಲಕ ಹೇಳಿದ ಜ್ಞಾನವೇ ಬೈಬಲ್‌ನಲ್ಲಿ ಹೇಳಲಾಗಿದೆಂದು ಯಾರಿಗೂ ತಿಳಿಯದಂತೆ ಹೋಗಿದೆ. ಇದೆಲ್ಲವೂ ದೇವರಿಗೆ ತಿಳಿದೆ ನಡೆದಿದೆ.

ಸೃಷ್ಟ್ಯಾದಿಯಲ್ಲಿ ಆಕಾಶವಾಣಿ ಆ ದಿನ ಸೂರ್ಯನಿಗೆ ಏನು ಹೇಳಿದೆಯೊ ಯಾರಿಗೂ ತಿಳಿಯದು. ಆಗ ಏನು ಹೇಳಿರುವುದು ದ್ವಾಪರ ಯುಗದಲ್ಲಿ ಭಗವದ್ಗೀತೆ ಹೇಳಿದ ನಂತರ ತಿಳಿದಿದೆ. ಭಗವದ್ಗೀತೆಯಲ್ಲಿ ಭಗವಂತನ ಮೂಲಕ ದೇವರು ತನ್ನ ಜ್ಞಾನವನ್ನು ಹೇಳುವಾಗ, ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಮೊದಲ ಶ್ಲೋಕದಲ್ಲಿಯೇ ಈ ಜ್ಞಾನವನ್ನು ಆದಿಯಲ್ಲಿ ಸೂರ್ಯನಿಗೆ ಹೇಳಿದ್ದೆನು ಎಂದು ಆತನೆ ಹೇಳಿದಾಗ, ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವೆಲ್ಲವೂ ಮೊದಲು ವಾಣಿ ಮೂಲಕ ಹೇಳಲಾದ ಜ್ಞಾನವೆಂದು ತಿಳಿದುಹೋಗಿದೆ. ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಇಜ್ರಯೇಲ್ ದೇಶದಲ್ಲಿ ಹೇಳಿದ ಜ್ಞಾನ ಕೂಡಾ ದೂತನ ಮೂಲಕ ಹೇಳಿಸಿರುವುದೆ, ಆದ್ದರಿಂದ ಅದನ್ನು ಕೂಡಾ ಸೃಷ್ಠಿಆದಿಯಲ್ಲಿ ಹೇಳಿದ ಜ್ಞಾನದ ಕೆಳಗೆ ಲೆಕ್ಕಿಸಿಕೊಳ್ಳಬೇಕು. ಭಾರತದೇಶದಲ್ಲಿ ಹೇಳಿದ ಜ್ಞಾನವೇ ಅಲ್ಲಿಯೂ ಕೂಡಾ ಹೇಳಲಾಗಿದೆಯೆಂದು ಅರ್ಥವಾಗುತ್ತಿದೆ. ನಂತರ ಸ್ವಲ್ಪಕಾಲಕ್ಕೆ ಅಂದರೆ ಇಲ್ಲಿಗೆ 1400 ವರ್ಷಗಳ ಹಿಂದೆ ಅರಬ್‌ದೇಶವಾದ ಮಕ್ಕಾ ಮಧೀನಾದಲ್ಲಿ ಪುನಃ ದೇವರ ಜ್ಞಾನ ಹೇಳಲಾಗಿದೆ. ಆದರೆ ಇಲ್ಲಿ ದೇವರಿಂದ ಕಳಿಸಲಾದ ದೂತ (ಭಗವಂತನು) ಹೇಳಲಿಲ್ಲ. ಸೃಷ್ಟ್ಯಾದಿಯಲ್ಲಿ ಸೂರ್ಯನ ಮೂಲಕ ಕೇಳಿದ ಗ್ರಹ (ಮಹಾ ಜ್ಞಾನಿಯಾದ ಜಿಬ್ರಯೇಲ್) ಅನ್ನುವಾತನು ಕಾಣಿಸದಂತೆ ತೆರೆಹಿಂದೆಇದ್ದು ಮುಹಮ್ಮದ್ ಪ್ರವಕ್ತರಿಗೆ ದೇವರ ಜ್ಞಾನವನ್ನು ಹೇಳುವುದು ನಡೆದಿದೆ. ಸೃಷ್ಠಿಆದಿಯಿಂದಿದ್ದ ಜಿಬ್ರಯೇಲ್ ಹೇಳಿರುವುದು ಸೂರ್ಯನ ಮೂಲಕ

ಕೇಳಿರುವುದೇ. ದ್ವಾಪರಯುಗದಲ್ಲಿ ಕಳಿಸಲ್ಪಟ್ಟ ದೂತನಾದ ಕೃಷ್ಣನು ಹೇಳಿರುವುದು ಮೊದಲು ಸೂರ್ಯನಿಗೆ ಹೇಳಿದ ಜ್ಞಾನವೇ. ನಂತರ ಬಂದಿರುವ ದೂತನಾದ ಏಸು ಹೇಳಿರುವುದು ಕೂಡ ಸೂರ್ಯನು ಹೇಳಿದ ಜ್ಞಾನವೇ. ಒಂದುಬಾರಿ ಮೊದಲು ವಾಣಿ ಮೂಲಕ ಹೇಳಿರುವುದು, ಎರಡನೆಬಾರಿ ದೂತನಾದ ಕೃಷ್ಣನ ಮೂಲಕ ಹೇಳಿರುವುದು, ಮೂರನೆಬಾರಿ ಕೂಡಾ ದೂತನಾದ ಏಸು ಮೂಲಕ ಹೇಳಲಾಗಿದೆ, ನಾಲ್ಕನೆಬಾರಿ ತೆರೆಹಿಂದಿನಿಂದ ಕಾಣಿಸದೆ ಮಹಾಜ್ಞಾನಿ ಜಿಬ್ರಯೇಲ್ ಹೇಳಿರುವುದೂ ಒಂದೇ ಜ್ಞಾನವೆಂದು ತಿಳಿದುಹೋಗಿದೆ. ತಾನು ಸ್ವತಃವಾಗಿ ಯಾರೊಂದಿಗೆ ಮಾತನಾಡದೆ ಮೂರು ಮಾರ್ಗಗಳ ಮೂಲಕ ಹೇಳಿಸಿರುವುದು ದೇವರೇಯೆಂದು ತಿಳಿದುಹೋಗಿದೆ. ಖುರ್‌ಆನ್ 42ನೆ ಸುರಾ 51 ಆಯತ್‌ನಲ್ಲಿ ಹೇಳಿದ ವಾಕ್ಯದ ಪ್ರಕಾರ ದೇವರು ಮೂರು ವಿಧಗಳ ತನ್ನ ಜ್ಞಾನವನ್ನು ತಿಳಿಸಿದ್ದಾನೆ. ಮೂರು ವಿಧಗಳಾದ ನಾಲ್ಕು ಬಾರಿ ಹೇಳುವುದು ನಡೆದಿದೆ. ಭೂಮಿಮೇಲೆ ತನ್ನ ಜ್ಞಾನ ಇಲ್ಲದಹಾಗೆ ಹೋದಂತೆಲ್ಲಾ ಈ ಮೂರು ವಿಧಾನಗಳ ಪ್ರಕಾರವೇ ಎಷ್ಟುಬಾರಿಯಾದರೂ ದೇವರು ತಿಳಿಸಬಹುದು. ಪ್ರಸ್ತುತ ನಮ್ಮಮುಂದಿರುವ ಭಗವದ್ಗೀತೆ, ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿನ ದೇವರ ಜ್ಞಾನ ಅರ್ಥವಾಗದಂತೆ ಹೋಗಿ, ಅವುಗಳನ್ನು ಪ್ರಜೆಗಳು ಮೂರು ಮತಗಳಾಗಿ ಸೀಳಿಸಿಕೊಂಡಿದ್ದಾರೆ. ಮೂರು ಗ್ರಂಥಗಳಲ್ಲಿರುವುದು ಒಂದೇ ದೇವರು ಹೇಳಿರುವುದು, ಒಂದೇ ಜ್ಞಾನವಾಗಿ ಇದೆ. ಅದರೂ ಮನುಷ್ಯರು ತಮ್ಮ ಅಜ್ಞಾನದಿಂದ ಭಿನ್ನವಾಗಿ ಅರ್ಥ ಮಾಡಿಕೊಂಡಿದ್ದಾರೆ. ನಮ್ಮ ದೇವರುಬೇರೆ, ನಮ್ಮ ಜ್ಞಾನಬೇರೆ, ನಮ್ಮ ಮತ ಬೇರೆಯೆಂದು, ಬೇರೆಬೇರೆ ಭಾವನೆಗಳನ್ನು ಹೊಂದಿದ್ದಾರೆ. ಅಷ್ಟೇಯಲ್ಲದೆ ಏನು ಅಲ್ಲದ ದೇವರಿಗೆ ಮತವನ್ನು ಅಂಟಗಟ್ಟಿದ್ದಾರೆ. ಇದಕ್ಕಿಂತ ಅಜ್ಞಾನ ಇಲ್ಲವೆಂದು ಎಲ್ಲವನ್ನು ಗಮನಿಸುತ್ತಿರುವ ದೇವರಿಗೆ ತಿಳಿದುಹೋಗಿದೆ. ಭೂಮಿಮೇಲೆ ಮತ್ತೊಂದುಬಾರಿ ದೇವರ ಜ್ಞಾನ ಇದು ಎಂದು ಹೇಳಬೇಕಾದ ಅಗತ್ಯ ಏರ್ಪಟ್ಟಿದೆ. ಇಂತಹ ಸಮಯದಲ್ಲಿ ದೇವರು ದೇವರಾಗಿ (ಸ್ವತಃವಾಗಿ) ಅಲ್ಲದೆ ತನ್ನ ದೂತನ ಮೂಖಾಂತರ ಮತ್ತೊಂದುಬಾರಿ ಜ್ಞಾನವನ್ನು ತಿಳಿಸಬೇಕಾಗಿ ಬಂದಿದೆ.

ಈಗ ದೇವರು ದೂತನನ್ನು ಕಳಿಸಿದರೆ ದ್ವಾಪರಯುಗದಲ್ಲಿ ಕೃಷ್ಣನಾಗಿ ಬಂದಿರುವ ದೂತನನ್ನು ಕಳಿಸುತ್ತಾನಾ, ಇಲ್ಲವೆ ಕಲಿಯುಗದಲ್ಲಿ ಕಳಿಸಿದ ಏಸುವಾಗಿ ಬಂದ ದೂತನನ್ನು ಕಳಿಸುತ್ತಾನಾ? ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ದೂತ ಎಂದಿಗಾದರೂ ಒಬ್ಬನೇ ಇರುತ್ತಾನೆ. ಆತನ ಹತ್ತಿರ ಹೆಚ್ಚುಜನ ದೂತರಿಲ್ಲ. ನಿಜ ಹೇಳಬೇಕೆಂದರೆ ಆತನು (ದೇವರು) ಎಲ್ಲಿದ್ದಾನೊ, ಹೇಗಿದ್ದಾನೊ ಯಾರೂ ಹೇಳದಿರುವಾಗ, ಯಾರಿಗೂ ತಿಳಿಯದಿರುವಾಗ, ಆತನಿಗೆ ದೂತರೆಲ್ಲಿರುತ್ತಾರೆ. ಆ ವಿಷಯ ನಮಗೆ ಬೇಡ ಆದರೆ, ಆತನಹತ್ತಿರದಿಂದ ಯಾವಾಗ ಬಂದರೂ ಒಬ್ಬ ದೂತನೆ ಬರುತ್ತಾನೆ, ಎರಡನೆಯವನು ಬರುವುದಕ್ಕೆ ಅವಕಾಶವೇ ಇಲ್ಲ. ಆ ವಿಷಯ ನನಗೆ ಮಾತ್ರವೇ ತಿಳಿದಿದೆ. ಬರುವ ದೂತ ಎಷ್ಟುಬಾರಿ ಬಂದರೂ ಯಾರೂ ಗುರುತಿಸದಂತೆ ರೂಪ ಬದಲಾಯಿಸಿಕೊಂಡು, ಹೆಸರು ಬದಲಾಯಿಸಿಕೊಂಡು ಬರುತ್ತಾನೆಂದು, ಒಂದುಬಾರಿ ಬಂದಿರುವ ರೂಪದೊಂದಿಗೆ ಎರಡನೆಬಾರಿ ಬರುವುದಿಲ್ಲ. ಆದ್ದರಿಂದ ಬಂದಿರುವ ದೂತನನ್ನು ಯಾರೂ ಗುರುತಿಸುವುದಿಲ್ಲ. ಬಂದಿರುವವನು ಹೇಗೆ ಬಂದರೂ ತಿಳಿಸುವುದು ಮಾತ್ರ ದೇವರ ಜ್ಞಾನವೇ. ಇರುವುದು ಒಂದೇ ದೇವರು, ಬಂದಿರುವುದು ಒಬ್ಬನೇ ದೂತ, ಹೇಳಲ್ಪಡುವುದು ಒಂದೇ ದೇವರ ಜ್ಞಾನ. ಈ ಬಾರಿ ದೇವರ ವಿಷಯವನ್ನು ತಿಳಿಯದಂತೆ ನಾನು ಮುಸ್ಲಿಮ್‌ನು, ನಾನು ಕ್ರೈಸ್ತವನು, ನಾನು ಹಿಂದೂವು ಅಂದುಕೊಳ್ಳುತ್ತಾ ನೀವು ಇದ್ದರೆ, ನಿಮ್ಮ ಕರ್ಮದಲ್ಲಿ ನೀವು ಇರುತ್ತೀರಾ. ಕೈಯೊಳಗೆ ಬಂದ ಅಮೃತವನ್ನು ಜಾರಿಬಿಟ್ಟುಕೊಂಡಂತೆ ಆಗುತ್ತದೆ. ಆದ್ದರಿಂದ ಎಚ್ಚರವಹಿಸಿರಿ.

## *** ಸಮಾಪ್ತ ***

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುಕ್ಕೂ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

---

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯ ಆಗುವುದಿಲ್ಲ,**
**ಸತ್ಯವನ್ನು ಸಾವಿರಜನ ಅಲ್ಲಎಂದರೂ ಅದು ಅಸತ್ಯ ಆಗುವುದಿಲ್ಲ.**

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),
ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381
e-mail id : info@dravidashreshtisangham.org

*www.dravidashreshtisangham.org*

